# ದಿವಾಣಿ ಕಾಯದೆ

ಲೇಖಕ :—

ಮ. ನಾ. ಕಬೀಬ,

ಬಿ. ಎ., ಎಲ್‌ಎಲ್. ಬಿ.

ವಕೀಲ, ಹುಬ್ಬಳ್ಳಿ

ಬೆಲೆ — ೩ ರೂ.

# ದಿವಾಣಿ ಕಾಯದೆ ಪರಿಜ್ಞಾನ

ಲೇಖಕ: —

ಮಹಾದೇವ ಉರ್ಫ ಬಾಜೀರಾವ ನಾರಾಯಣ

ತಬೀಬ ಬಿ. ಎ., ಎಲ್ಎಲ್. ಬಿ.

ವಕೀಲ,

ಹುಬ್ಬಳ್ಳಿ

೧೯೨೯

ಬೆಲೆ: ರೂ ೩.



# ಮುನ್ನುಡಿ

ನಮ್ಮಲ್ಲಿ ಪ್ರಾಚೀನಕಾಲದಲ್ಲಿ ನ್ಯಾಯನಿರ್ಣಯದ ಪದ್ಧತಿಯು ಬಹಳ ಸುಖಕರವಾಗಿತ್ತು. ಆಗ್ಗೆ ಸ್ಥಾನಿಕ ನಿರೀಕ್ಷಣೆಯಿಂದಾಗಲಿ, ಬೀರಬಲ್ಲನಂತೆ ಚಾತುರ್ಯದ ಯುಕ್ತಿಗಳಿಂದಾಗಲಿ, ಇಲ್ಲವೆ ವ್ಯವಹಾರಜ್ಞರಾದ ಊರ ಹಿರಿಯರ ಅಭಿಪ್ರಾಯದಿಂದಾಗಲಿ ವ್ಯಾಜ್ಯಗಳನ್ನು ತೀರಿಸುತ್ತಿದ್ದರು. ಆದರೆ ಈ ಅರ್ವಾಚೀನ " ಸುಧಾರಣೆ " (!) ಯ ಕಾಲದಲ್ಲಿ ಸಾಮಾನ್ಯ ಜನರಲ್ಲಿ ಜ್ಞಾನವು ಬೆಳೆದಂತೆ ಕಪಟವೂ ಅಸತ್ಯವೂ ಹೆಚ್ಚುತ್ತ ನಡಿದದೆ. "ದೇವರ ಆಣೆ" ಮಾಡಿ ಸತ್ಯವೆಂದು ಸುಳ್ಳು ಹೇಳುವದರಲ್ಲಿ ಪಾಪದ ಅಂಜಿಕೆಯಾಗಲಿ, ನಾಚಿಕೆಯಾಗಲಿ, ಹೇಸಿಕೆಯಾಗಲಿ ಅನಿಸುವಷ್ಟು ಮೆತ್ತನ್ನ ಅಂತಃಕರಣವುಳ್ಳ ಜನರ ಸಂಖ್ಯೆಯು ದಿನದಿನಕ್ಕೆ ಕಡಿಮೆಯಾಗುತ್ತ ನಡಿದದೆ. ಅದರಿಂದ ವ್ಯಾಜ್ಯಗಳಲ್ಲಿ ಸತ್ಯವನ್ನು ಕಂಡುಹಿಡಿಯುವದು ಬಹಳ ದುಃಸಾಧ್ಯವಾಗಿದೆ. ಮೇಲಾಗಿ ಬರಬರುತ್ತ ನ್ಯಾಯಾಧೀಶರ ಚಾತುರ್ಯ ಮತ್ತು ನಿಃಪಕ್ಷಪಾತತನದ ಮೇಲೆ ಕಣ್ಣು ಮುಚ್ಚಿ ಸಂಪೂರ್ಣ ನಂಬಿಕೆ ಇಡುವದು ವಿಹಿತವಲ್ಲೆಂದು ಕಂಡುಬಂದದರಿಂದ, ಅವರಿಗೆ ನ್ಯಾಯಕೊಡುವ ಕ್ರಮವನ್ನು ಹಾಕಿಕೊಡಬೇಕಾಯಿತು. ಜನರಲ್ಲಿ ತಿಳುವಳಿಕೆಯು ಬೆಳೆದು ನ್ಯಾಯಾಧೀಶರನ್ನೂ ಮೋಸಮಾಡುವ ಹಂಚಿಕೆಗಳು ಹೆಚ್ಚಾಗುತ್ತ ನಡೆದಂತೆ, ಅವುಗಳನ್ನು ನಿರಾಕರಿಸುವ ಕುರಿತು ನ್ಯಾಯಪದ್ಧತಿಯ ವಿಸ್ತಾರವನ್ನಾದರೂ ಬೆಳಿಸಬೇಕಾಗಿ, " ಎವ್ಹಿಡೆನ್ಸ ಆಕ್ಟ ", " ಪ್ರೊಸೀಜರ ಕೋಡ " ಮೊದಲಾದ ಕಾನೂನುಗಳನ್ನು ವಿಧಿಸಬೇಕಾಯಿತು. ಹಳೇ ವ್ಯಾಜ್ಯಗಳು ನ್ಯಾಯಾಧೀಶರ ಮುಂದೆ ಬರಬಾರದೆಂದು " ಮುದ್ದತಿ ಕಾಯದೆ " ಮಾಡಬೇಕಾಯಿತು. ನ್ಯಾಯಾಶ್ರಯಗಳ ವೆಚ್ಚಕ್ಕಾಗಿ ಬೇಕಾಗುವ ಹಣವನ್ನೆತ್ತುವ ಕುರಿತು " ಸ್ಟಾಂಪು " " ಕೋರ್ಟಫೀ " ಗಳ ಕಾನೂನುಗಳು ಬೇಕಾದವು. ಇದಲ್ಲದೆ ದತ್ತಕ, ಮದುವೆ, ದಾಯ ವಿಭಾಗ, "ವಾರಸಾ", ಮೊದಲಾದವುಗಳ ವಿಷಯದಲ್ಲಿ ಪ್ರಜೆಗಳ ಸನಾತನ ಧರ್ಮಶಾಸ್ತ್ರಗಳಲ್ಲಿ ತಾವು ಕೈಹಾಕಲಿಕ್ಕಿಲ್ಲೆಂದು ಸರಕಾರದವರ ತತ್ವವಿದ್ದರೂ, ಕಾಲಕ್ಕೆ ಮತ್ತು ಪರಿಸ್ಥಿತಿಗೆ ಅನುಸರಿಸಿ ಆ ನಿಯಮಗಳು ಸಹ ದಿನದಿನಕ್ಕೆ ಬದಲಾಗುತ್ತ ನಡಿದವೆ. ಇವೆಲ್ಲವುಗಳ ಸಾಮಾನ್ಯ ಜ್ಞಾನವು ಎಲ್ಲರಿಗೂ ಅವಶ್ಯವಾದದ್ದು. ಮಾಡಿದ ತಪ್ಪು ಕಾಯದೇದ ಅಜ್ಞಾನ ಮೂಲಕ

ವೆಂಬ ಕ್ಷಮ್ಯವಾಗುವದಿಲ್ಲ. ಈಗಿನ ಕಾಲದಲ್ಲಿ ಕಾಯಿದೆ ಅರಿಯದವನಿಗೆ ಮೋಸಮಾಡುವವರು ಬಹಳ. ಆದ್ದರಿಂದ ವಕೀಲರಷ್ಟು ಕಾಯದೆ ಪಾಂಡಿತ್ಯ ವಿಲ್ಲದಿದ್ದರೂ, ಮೋಸ ತಪ್ಪಿಸಲಿಕ್ಕೆ ಬೇಕಾಗುವಷ್ಟು ಸಾಮಾನ್ಯ ಕಾಯದೆ ಜ್ಞಾನ ವಿಲ್ಲದೆ ಇರುವದು ಸುರಕ್ಷಿತವಲ್ಲ. ಇಂಥ ಜ್ಞಾನವನ್ನು ದೊರಕಿಸಲಿಕ್ಕೆ ಇಂಗ್ಲಿಷ ಬಲ್ಲವರಿಗೆ ತಕ್ಕ ಸಾಧನಗಳವೆ. ಆದರೆ ಅನ್ಯರಿಗೋಸ್ಕರ ಸ್ವಭಾಷೆಯಲ್ಲಿ ಬರೆದ ಗ್ರಂಥಗಳು ಕಡಿಮೆ; ಅದರಲ್ಲಿ ಕನ್ನಡದಲ್ಲಂತೂ ತೀರ ಕಡಿಮೆ. ಈ ಕೊರತೆಯನ್ನು ಹೋಗಲಾಡಿಸುವ ಕೆಲಸವನ್ನು ಕೈಕೊಂಡದ್ದಕ್ಕೆ ಶ್ರೀಯುತ ಮ. ನಾ. ತಬೀಬ ವಕೀಲರು ಅಭಿನಂದನಕ್ಕೆ ಪಾತ್ರರಾಗಿದ್ದಾರೆ. ಅವರು ಶ್ರಮಬಟ್ಟು ಬರೆದ "**ದಿವಾಣಿ ಕಾಯದೆ ಪರಿಜ್ಞಾನ**"ವೆಂಬ ಕನ್ನಡ ಪುಸ್ತಕವು ಈ ಮಾರ್ಗದ ಲ್ಲಿಯ ಮೊದಲನೇ ಹೆಜ್ಜೆಯು. ಅದರಲ್ಲಿ ಅವರು ದಿವಾಣಿ ಕಚೇರಿಗೆ ಸಂಬಂಧಿಸಿ ರುವ ಬಹುತರ ಎಲ್ಲ ಮಾತುಗಳನ್ನು ಸರಿಯಾಗಿ ಕೂಡಹಾಕಿದ್ದಾರೆ. ಇದರಲ್ಲಿ ಜನ ರಿಗೆ ಬೇಕಾಗುವ ದತ್ತಕದ ಕಾಯದೆ, ನೋಂದಣಿ ಕಾಯದೆ, ಮುದ್ದತಿ ಕಾಯದೆ, ನಾದಾರಿ ಕಾಯದೆ, ವತ್ತಿಪತ್ರ, ದಾನಪತ್ರ, ಮೃತ್ಯುಪತ್ರ, ಬಾಡಿಗೆಪತ್ರ, ಸಾಲಂ ಪತ್ರ ಮೊದಲಾದವುಗಳನ್ನು ಬರಿಯುವ ರೀತಿ. ಮುಂತಾದ ಅನೇಕ ವಿಷಯಗಳು ಸಂಕ್ಷೇಪದಿಂದ ಹೇಳಲ್ಪಟ್ಟದ್ದು, ಕೋರ್ಟಿನಲ್ಲಿ ಕೆಲಸ ನಡಿಸುವ ದುರ್ಬೋಧ್ಯ ವಾದ ರೀತಿಯು ವಿಸ್ತೃತವಾಗಿಯೂ ಸುಗಮವಾಗಿಯೂ ವಿವರಿಸಲ್ಪಟ್ಟದ್ದರಿಂದ, ಈ ಪುಸ್ತಕವು ಕಚೇರಿಯಲ್ಲಿಯ ಕಾರಕೂನರಿಗೆ ಮತ್ತು ವಕೀಲರ ಕಾರಕೂ ನರಿಗೆ ವಿಶೇಷವಾಗಿ ಉಪಯೋಗದ್ದಾದ ಕೈಪಿಡಿಯಾಗಿದೆ. ಅವರಿಗೆ ಆಗಾಗ್ಗೆ ಬೇಕಾಗುವ ಎಲ್ಲ ತರದ ನಮೂನೆಗಳು ಸರಿಯಾಗಿ ತೋರಿಸಲ್ಪಟ್ಟದ್ದರಿಂದ ಅವ ರಿಗೆ ಈ ಪುಸ್ತಕವು ನಿತ್ಯದ ಉಪಯೋಗಕ್ಕಾಗಿ ಅವಶ್ಯವಾಗಿ ಸಂಗ್ರಾಹ್ಯವಾಗಿದೆ. ಇದರಲ್ಲಿ ಕಂಡುಬರುವ ಎಷ್ಟೋ ಶಬ್ದಗಳು ಅಚ್ಚಗನ್ನಡವಿಲ್ಲದಿದ್ದರೂ ಪ್ರಚಾರ ದಲ್ಲಿಯವಿದ್ದದರಿಂದ ತಿಳಿಯಲಿಕ್ಕೆ ಸುಲಭವಾಗಿವೆ. ಆದರೂ ಕ್ರಮದಿಂದ ಅವು ಗಳನ್ನು ತೆಗೆದುಹಾಕಿ ಅಚ್ಚಗನ್ನಡ ಶಬ್ದಗಳನ್ನೇ ಪ್ರಚಾರದಲ್ಲಿ ತರುವದು ಇಷ್ಟ ವದೆ. ಮಾದರಿಗಾಗಿ ಕೊಟ್ಟ ನಮೂನೆಗಳಲ್ಲಿ ಶುದ್ಧ ಶಬ್ದಗಳೇ ಇದ್ದಲ್ಲಿ, ಸ್ವಲ್ಪ ದಿವಸಗಳಲ್ಲಿ ಅವೇ ಪ್ರಚಾರದಲ್ಲಿ ಬರುವವು. ಈ ಪುಸ್ತಕದಲ್ಲಿ ವಿಶೇಷವಾದ ಸಂಗತಿಯೆಂದರೆ ಭಿನ್ನ ಭಿನ್ನ ವಿಷಯಗಳು ಸುವ್ಯವಸ್ಥಿತವಾಗಿ ತಕ್ಕ ಸ್ಥಳಗಳಲ್ಲಿ ಸಾಮಾನ್ಯರಿಗೆ ಸಹ ತಿಳಿಯುವಂತೆ ಹೇಳಲ್ಪಟ್ಟಿವೆ. ಇದರಿಂದ ಹೊಸದಾಗಿ

ಕಾಯದೆ ಕಲಿಯುವವರಿಗೆ ಸಹ ಇದನ್ನು ಓದಲಿಕ್ಕೆ ಬೇಸರ ಬರುವಂತಿಲ್ಲ. ಇಂತಹ ಉಪಯುಕ್ತವಾದ ಮತ್ತು ಪರಿಶ್ರಮದಿಂದ ಬರೆದ ಈ ಪುಸ್ತಕಕ್ಕೆ ಕನ್ನಡಿಗರು ಆಶ್ರಯಕೊಟ್ಟು, ಇದರಲ್ಲಿ ಬಾರದೆ ಉಳಿದ ವಿಷಯಗಳ ಬಗ್ಗೆ ಬೇರೆ ಗ್ರಂಥಗಳನ್ನು ಬರೆದು ಅಚ್ಚುಹಾಕಿಸಲಿಕ್ಕೆ ಶ್ರೀಯುತ ತಬೀಬ ಇವರಿಗೆ ಹುರಿದುಂಬಿಸುವರೆಂದು ನಂಬುವ.

**ಧಾರವಾಡ**<br>
೧೬-೯-೧೯೨೯

**ನಾ. ಸ್ವಾ. ಲೋಕೂರ,**<br>
ಡಿಸ್ಟ್ರಿಕ್ಟ ಜಜ್ಜ.

---

# ಪ್ರಸ್ತಾವನೆ



ಪ್ರತಿಯೊಬ್ಬ ಮನುಷ್ಯನಿಗೆ ಅಥವಾ ಪ್ರತಿಯೊಬ್ಬ ನಾಗರೀಕನಿಗೆ ಕಾಯುದೆಯ ಜ್ಞಾನ ಇದೆಂದು ಕಾಯದೆಯು ಅನುಮಾನವು. ತನಗೆ ಕಾಯುದೆಯ ಜ್ಞಾನ ಇದ್ದಿಲ್ಲ ಅಥವಾ ಇಲ್ಲ ಎಂದು ಯಾವನಾದರೂ ಒಬ್ಬನು ತಕರಾರು ಮಾಡಿದರೆ ಅದನ್ನು ನಡಿಯಲಾಗದು. ಅಂದ ಮೇಲೆ ತನಗೆ ಕಾಯುದೆಯ ಜ್ಞಾನ ಇದ್ದಿಲ್ಲ ಅಥವಾ ಇಲ್ಲ ಎಂದು ಅಪೇಕ್ಷಿಸುವದು ನಿರರ್ಥಕವು. ಹೀಗಿದ್ದು ಎಷ್ಟೋ ಜನರು ಕಾಯದೆಯು ಅರಿಯದವರು. ಇದಲ್ಲದೆ ಪ್ರತಿವರ್ಷ ಇಲ್ಲವೆ ಪ್ರತಿ ತಿಂಗಳ ಪ್ರಾಂತಿಕ ಕೌನ್ಸಿಲಗಳಲ್ಲಿ ಹಾಗೂ ವರಿಷ್ಠ ಕೌನ್ಸಿಲಗಳಲ್ಲಿ ಹೊಸ ಹೊಸ ಕಾನೂನುಗಳು ಪಾಸಾಗುವವು. ಇವುಗಳ ತಿಳವಳಿಕೆ ಪ್ರತಿಯೊಬ್ಬ ನಾಗರೀಕನಿಗೆ ಆಗುವದು ಅಶಕ್ಯವಾದಂಥ ಮಾತು. ಕಾಯದೆ ಪಂಡಿತರಾದ ವಕೀಲರಿಗೆ ಸಹ ಹೊಸ ಹೊಸ ಕಾನೂನುಗಳ ತಿಳವಳಿಕೆ ಆಗಿಂದಾಗ್ಗೆ ಅಥವಾ ಅವುಗಳನ್ನು ಪಾಸಾದ ಸ್ವಲ್ಪ ವೇಳೆಯಲ್ಲಿ ಆಗಬೇಕಾದರೆ ಬಹು ಕಷ್ಟ. ಈ ಪರಿಸ್ಥಿತಿಯಲ್ಲಿ ಸಾಮಾನ್ಯ ಜನರಿಗೆ ಅವುಗಳ ತಿಳವಳಿಕೆ ಆಗುವದು ಹೇಗೆ? ಆದರೂ ಮಹತ್ವದ ಕಾನೂನುಗಳ ಪರಿಚಯವು ಎಲ್ಲ ಜನರಿಗೆ ಇರುವದು ಅವಶ್ಯವಾದ ಸಂಗತಿಯು. ಈ ತರದ ಪರಿಚಯಮಾಡಿಗೊಡುವಂಥ ವಿಸ್ತೃತವಾದ ಗ್ರಂಥಗಳು ಕನ್ನಡ ನುಡಿಯಲ್ಲಿ ಇಲ್ಲೆಂದು ವಿಧಾನ ಮಾಡಿದರೆ ಅದು ವಸ್ತುಸ್ಥಿತಿಯ ವಿಪರ್ಯಾಸ ಮಾಡಿದಂತೆ ಆಗಲಿಕ್ಕಿಲ್ಲೆಂದು ನಾನು ಹೇಳುವೆನು.

ಸಾಮಾನ್ಯ ಜನರಿಗೆ ತಿಳಿಯುವಂತೆ ಮಹತ್ವದ ದಿವಾಣಿ ಕಾನೂನುಗಳ ವಿವೇಚನವನ್ನು ಈ ಪುಸ್ತಕದಲ್ಲಿ ನಾನು ಮಾಡಿದ್ದೇನೆ. ಬರೇ ಕಾನೂನೊಳಗಿನ ಕಲಮುಗಳನ್ನು ಕೊಟ್ಟರೆ ಆದುದರಿಂದ ಸಾಮಾನ್ಯ ಜನರಿಗೆ ಅವುಗಳ ಬೋಧವಾಗುವದು ಬಹು ಕಷ್ಟ. ಇದಲ್ಲದೆ ಕಾಯದೆಯ ನಿಜವಾದ ತತ್ವವನ್ನು ತಿಳಿಯುವದು ಅಶಕ್ಯ. ಕಾರಣಾ ಸಾರಾಂಶರೂಪದಿಂದ ಸದರೀ ಕಾನೂನುಗಳ ವಿವೇಚನವನ್ನು ಆದಷ್ಟು ವಿಶದವಾಗಿಯೂ ಸುಲಭವಾಗಿಯೂ ಈ ಪುಸ್ತಕದಲ್ಲಿ ಮಾಡಿದ್ದೇನೆ; ಮತ್ತು ಅಲ್ಲಲ್ಲಿ ಕಾಯದೆಯ ಮೂಲತತ್ವಗಳನ್ನು ಹೇಳಿದ್ದೇನೆ. ಈ ಪುಸ್ತಕದ ಅಭ್ಯಾಸದಿಂದ ವ್ಯವಹಾರಕ್ಕೆ ಅವಶ್ಯವಾದ ದಿವಾಣಿ ಕಾಯದೆಯ

ಪರಿಚಯವು ಪ್ರತಿಯೊಬ್ಬರಿಗೆ ಆಗುವದೆಂದು ನನ್ನ ನಂಬಿಕೆ. ವ್ಯವಹಾರಸ್ಥರಿಗೆ, ವ್ಯಾಪಾರಿ ಜನರಿಗೆ, ಒಕ್ಕಲಿಗರಿಗೆ, ವಕೀಲರ ಕಾರಕೂನರಿಗೆ ಹಾಗೂ ವಕೀಲರಿಗೆ ಸಹ ಈ ಪುಸ್ತಕದ ಒಳ್ಳೇ ಉಪಯೋಗವಾಗುವದೆಂದು ನಾನು ಖಾತ್ರಿಯಿಂದ ಹೇಳುವೆನು.

ಈ ಪುಸ್ತಕದಲ್ಲಿ ದೋಷಗಳು ಇವೆಂಬುದು ನಾನು ಅರಿಯೆನು. ಆದರೆಅವುಗಳನ್ನು ದುರ್ಲಕ್ಷಿಸಬೇಕೆಂದು ಮತ್ತು ಈ ಪುಸ್ತಕದಲ್ಲಿಯ ಗುಣಗಳನ್ನು ಸ್ವೀಕರಿಸಬೇಕೆಂದು ನನ್ನ ಸವಿನಯ ಪ್ರಾರ್ಥನೆ ಅದೆ. ಇದರಲ್ಲಿಯ ದೋಷಗಳನ್ನು ನನ್ನ ನಜರಿಗೆ ತಂದರೆ ಮುಂದಿನ ಆವೃತ್ತಿಯಲ್ಲಿ ಅವುಗಳನ್ನು ತಿದ್ದುವೆನು,

ಈ ಪುಸ್ತಕವನ್ನು ರಚಿಸುವದಕ್ಕೆ ಕೆಳಗೆ ವಿವರಿಸಿದ ಗ್ರಂಥಗಳ ಬಹಳೇ ಉಪಯೋಗವಾಯಿತು. ಅವು ಯಾವವೆಂದರೆ— ಮಿ॥ ಡಿ. ಎಫ್. ಮುಲ್ಲಾ ಸಾಹೇಬರ "ಸಿವಿಲ ಪ್ರೊಸೀಜರ ಕೋಡ" ಮೇಲಿನ ಭಾಷ್ಯವು; ಮಿ॥ ಮೋಘಾ ಇವರ "ಲಾ ಆಫ್ ಪ್ಲೀಡಿಂಗ" ಮತ್ತು ವಿವಿಧ ಕಾನೂನುಗಳ ಕನ್ನಡ ಭಾಷಾಂತರಗಳು. ಈ ಎಲ್ಲ ಗ್ರಂಥಕಾರರಿಗೆ ನಾನು ಋಣಿಯಾಗಿರುತ್ತೇನೆ.

**ಶ್ರೀಯುತ ನಾ. ಸ್ವಾ. ಲೋಕೂರ ಡಿಸ್ಟ್ರಿಕ್ಟ ಜಜ್ಜ; ಧಾರವಾಡ,** ಇವರು ಸಹೃದಯ ಅಂತಃಕರಣದಿಂದ ಹಾಗೂ ಒಳ್ಳೇ ಪ್ರೇಮದಿಂದ ಈ ಪುಸ್ತಕಕ್ಕೆ ಮುನ್ನುಡಿ ಬರೆದು ಕೊಡಲಿಕ್ಕೆ ಒಪ್ಪಿಕೊಂಡು ಅದರಂತೆ ಬರೆದು ಕೊಟ್ಟರು. ಅವರ ಉಪಕಾರವನ್ನು ಹೇಗೆ ಸ್ಮರಿಸಬೇಕೆಂಬುವದು ನಾನು ಅರಿಯದವನು. ಆದರೆ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸ್ವಲ್ಪೇ.

ಕರ್ನಾಟಕ ಪ್ರಿಂಟಿಂಗ ವರ್ಕ್ಸ ಇದರ ಮಾಲಕರಾದ ಶ್ರೀಯುತ ಬಳವಂತರಾವ ಜಠಾರ ಮತ್ತು ಅದರ ಮ್ಯಾನೇಜರರಾದ ಶ್ರೀಯುತ ಮಾಧವರಾವ ಜೋಶಿ ಇವರು ಒಳ್ಳೇ ಕಾಳಜಿಯಿಂದ ಮತ್ತು ದಕ್ಷತೆಯಿಂದ ಈ ಪುಸ್ತಕದ ಕೆಲಸವನ್ನು ಬೇಗನೆ ಮಾಡಿಕೊಟ್ಟದ್ದಕ್ಕೆ ಅವರ ಉಪಕಾರವನ್ನು ಸ್ಮರಿಸುತ್ತೇನೆ.

| | |
|---|---|
| ಹುಬ್ಬಳ್ಳಿ | ಮಹಾದೇವ ನಾರಾಯಣ ತಬೀಬ |
| ತಾ. ೧೮-೯-೧೯೨೯ | ವಕೀಲ. |

# ಅನುಕ್ರಮಣಿಕೆ



## ೧ನೆಯ ಭಾಗ

# ೨ನೆಯ ಭಾಗ

| ಪ್ರಕರಣ | ವಿಷಯ | ಪುಟ |
|---|---|---|

| ಪ್ರಕರಣ | ವಿಷಯ | ಪುಟ |
| --- | --- | --- |
| ೫೬. | ಭೂಮಿಯನ್ನು ತೋಯಿಸುವ ಬಗ್ಗೆ ನೀರು ಉಪಯೋಗಿಸುವ ಹಕ್ಕಿಗೆ ಹರತಕು ಮಾಡಿದ ಬಾಬತು | ೨೨೩ |
| ೫೭. | ದ್ವೇಷದಿಂದ ಫಿರ್ಯಾದಿಯನ್ನು ನಡೆಯಿಸಿದ ಬಾಬತು | ೨೨೪ |
| ೫೮. | ಮೋಸದಿಂದ ಮಾಲು ಖರೀದಿ ಮಾಡುವವನ ಮೇಲೆಯೂ ಆ ಮೋಸವನ್ನು ಅರಿತು ಅವನ ಕಡೆಯಿಂದ ತಬದಿಲು ಮಾಡಿ ತೆಗೆದುಕೊಂಡವನ ಮೇಲೆಯೂ | ೨೨೬ |
| ೫೯. | ತಪ್ಪಾದ ಕಾರಣದಿಂದ ಕರಾರು ರದ್ದು ಮಾಡುವದನ್ನು ಕುರಿತು | ೨೨೭ |
| ೬೦. | ಕೇಡು ಮಾಡಬಾರದೆಂಬುದಾಗಿ ತಾಕೀದು ಪಡೆಯುವದಕ್ಕಾಗಿ | ೨೨೮ |
| ೬೧. | ಉಪದ್ರವ ಮಾಡಬಾರದೆಂಬುದಾಗಿ ತಾಕೀದು ಪಡೆಯುವ ಬಾಬತು | ೨೨೮ |
| ೬೨. | ಸಾರ್ವಜನಿಕ ಪೀಡನೆಯು | ೨೨೯ |
| ೬೩. | ಅಂತರವಾದದ ದಾವೆ | ೨೩೦ |
| ೬೪. | ಒತ್ತೆಯನ್ನು ಬಿಡಿಸಿಕೊಳ್ಳುವ ಹಕ್ಕು ಮುಣಗಿಸುವದು ಯಾ ವಿಕ್ರಯವು. | ೨೩೨ |
| ೬೫. | ಒತ್ತೆ ಬಿಡಿಸಿಕೊಳ್ಳುವ ಹಕ್ಕು ಮುಣಿಗಿಸುವದು ಯಾ ವಿಕ್ರಯವು | ೨೩೩ |
| ೬೬. | ಒತ್ತೆ ಬಿಡಿಸುವದು | ೨೩೫ |
| ೬೭. | ವಿಶಿಷ್ಟ ರೀತಿಯಿಂದ ಕರಾರು ಕಡೆಗಾಣಿಸುವದು | ೨೩೬ |
| ೭೮. | ವಿಶಿಷ್ಟ ರೀತಿಯಿಂದ ಕರಾರು ಕಡೆಗಾಣಿಸುವದು | ೨೩೭ |
| ೬೯. | ಪಾಲುಗಾರಿಗೆ | ೨೩೮ |
| ೭೦. | ರೇಲ್ವೆಯಲ್ಲಿ ದುರ್ಲಕ್ಷದ ಮೂಲಕವಾಗಿ ಆದ ಕೇಡಿನ ಬಾಬತು | ೨೩೮ |
| ೭೧. | ಅಜಾಗರೂಕತೆಯಿಂದ ವಾಹನಗಳನ್ನು ನಡೆಯಿಸಿದ ಮೂಲಕವಾಗಿ ಆದ ಕೇಡಿನ ಬಾಬತು. | ೨೪೦ |

| ಪ್ರಕರಣ | ವಿಷಯ | ಪುಟ |
|---|---|---|
| ೨. | **ಕೈಫಿಯತಿಗಳ ನಮೂನೆಗಳು** | ೨೫೮–೨೬೯ |

| ಪ್ರಕರಣ | ವಿಷಯ | ಪೃಷ್ಠ |
|---|---|---|

| ಪ್ರಕರಣ | ವಿಷಯ | ಪುಟ |
|---|---|---|



---

## ೩ನೆಯ ಭಾಗ

# ೧ನೆಯ ಪ್ರಕರಣ

## ದಾವೇಗಳನ್ನು ಮಾಡೋಣ

ಪ್ರತಿಯೊಂದು ದಾವೇಯನ್ನು ಅಸಲ ಅರ್ಜಿಯನ್ನು ಹಾಜರ ಪಡಿಸಿ ಅಥವಾ ವಿಧಿಸಬಹುದಾದಂಥ ಇತರ ರೀತಿಯಾಗಿ ಮಾಡಬೇಕು. ಮುಖ್ಯವಾಗಿ ಅಥವಾ ಸಾಧಾರಣತಃ ಅಸಲ ಅರ್ಜಿಯನ್ನು ಹಾಜರ ಪಡಿಸಿ ಪ್ರತಿಯೊಂದು ದಾವೇಯನ್ನು ಮಾಡಬೇಕು. ಪ್ರತಿಯೊಂದು ದಾವೇಯನ್ನು ಕೋರ್ಟಿನಲ್ಲಿ ಅಥವಾ ಕೋರ್ಟಿನಿಂದಾ ಈ ಬಗ್ಗೆ ನೇಮಿಸಲ್ಪಟ್ಟಂಥ ಅಮಲದಾರನ ಮುಂದೆ ಅಸಲ ಅರ್ಜಿಯನ್ನು ಹಾಜರ ಮಾಡಿ ಪ್ರಾರಂಭಿಸತಕ್ಕದ್ದು. ಅಸಲ ಅರ್ಜಿಯನ್ನು ಸ್ವತಃ ವಾದಿ ಅಥವಾ ವಾದಿ ವಕೀಲರು ಅಥವಾ ಮಾನ್ಯವಾದಂಥ ಗುಮಾಸ್ತನು ಕೋರ್ಟಿನಲ್ಲಿ ಹಾಜರ ಮಾಡಬಹುದು.

**ಕೋರ್ಟಿಗೆ ಯಾವ ಸ್ವರೂಪದ ದಾವೇಗಳನ್ನು ಇನಸಾಫ ಮಾಡಲಿಕ್ಕೆ ಅಧಿಕಾರ ಉಂಟು?** ದಾವೇಗಳಲ್ಲಿ ಎರಡು ಭೇದಗಳುಂಟು. ಒಂದು ದಿವಾಣಿ ಸ್ವರೂಪದ್ದು ಎರಡನೇದು ದಿವಾಣಿಸ್ವರೂಪ ಇಲ್ಲದಂಥ ದಾವೇಗಳೂ. ಮನಾಯಿ ಮಾಡದೆ ಇದ್ದ ದಿವಾಣಿಸ್ವರೂಪವುಳ್ಳ ಎಲ್ಲ ದಾವೇಗಳ ಇನಸಾಫ ಮಾಡುವ ಅಧಿಕಾರ ಕೋರ್ಟಿಗೆ ಅದೆ.

ದಿವಾಣಿಸ್ವರೂಪ ಇಲ್ಲದಂಥಾ ದಾವೇಗಳ ಇನಸಾಫ ಮಾಡುವ ಅಧಿಕಾರ ಕೋರ್ಟಿಗೆ ಇಲ್ಲಾ.

ಯಾವ ದಾವೇಗಳು ದಿವಾಣಿ ಸ್ವರೂಪವವು ಇರುವವು? ಯಾವದಾದರು ದಾವೇಯಲ್ಲಿ ಮುಖ್ಯವಾದ ಯಾ ಬರೆ ಜ್ಯಾತಿಯ ಸಮ್ಮಂಧ ಯಾ ಧರ್ಮಾಚರಣ ಸಮ್ಮಂಧ ಯಾ ಧರ್ಮಕಾರ್ಯ ಸಮ್ಮಂಧ ವಿವಾದ ಅಥವಾ ವಿವಾದಗಳು ಉಂಟು, ಆ ದಾವೇ ದಿವಾಣಿಸ್ವರೂಪದ್ದು ಆಗುವದಿಲ್ಲಾ.

**ಉ**—ಜ್ಯಾತಿಪಂಚರು ಇಂಥವರಿಗೆ ಊಟಕ್ಕೆ ಕರಿಯಬಾರದು ಅಂತಾ ತಮ್ಮ ಪಂಚಾಯತಿಯಲ್ಲಿ ನಿರ್ಣಯಮಾಡಿದರೆ ಆ ನಿರ್ಣಯ ರದ್ದಪಡಿಸುವಸರ ದಲೆಯಿಂದಾ ಕೋರ್ಟಿನಲ್ಲಿ ದಾವೇ ಮಾಡಲಿಕ್ಕೆ ಬರಲಾರದು.

ಯಾವದಾದರು ದಾವೇದಲ್ಲಿ ಗೌಣವಾದ ವಿವಾದ ಜ್ಯಾತಿಯು ಸಮ್ಮಂಧಿ ಯಾ ಧರ್ಮಾಚರಣ ಸಮ್ಮಂಧಿ ಯಾ ಧರ್ಮಕಾರ್ಯ ಸಮ್ಮಂಧಿ ಇದ್ದು ಮುಖ್ಯವಾದ ವಿವಾದ ದಿವಾಣಿ ಹಕ್ಕಿನ ಸಮ್ಮಂಧಿ ಇದ್ದರೆ ಮತ್ತು ಮೆಲ್ಕಂಡ ಗವಣವಾದ ವಿವಾದದ ನಿರ್ಣಯ ಮಾಡಿದವಿನಹಾ ಮುಖ್ಯವಾದ ದಿವಾಣಿ ಹಕ್ಕಿನ ನಿರ್ಣಯು ಆಗುವಂತೆ ಇಲ್ಲದೆ ಇದ್ದರೆ ಕೋರ್ಟಿಗೆ ಈ ಪ್ರಸಕ್ತಿಯಲ್ಲಿ ಗೌಣವಾದ ವಿವಾದದ ಇನಸಾಫ ಮಾಡುವ ಅಧಿಕಾರ ಉಂಟು. ಈ ಸ್ವರೂಪದ ದಾವೇಯು ದಿವಾಣಿ ಸ್ವರೂಪದ ದಾವೇ ಆಗುವದು. ಈ ತರಹದ ದಾವೇಯಲ್ಲಿ ಕೋರ್ಟಿಗೆ ಗೌಣವಾದಂಥ ಜ್ಯಾತಿ ಸಮ್ಮಂಧಿ ಅಥವಾ ಧರ್ಮಾಚರಣದ ಸಮ್ಮಂಧಿ ವಾದದ ಚವಕಶಿ ಮಾಡಲಿಕ್ಕೆ ಮತ್ತು ಇನಸಾಪ ಮಾಡಲಿಕ್ಕೆ ಬರುವದು.

**ಉ**— ಮಹಮ್ಮದೀ ಧರ್ಮಶಾಸ್ತ್ರದ ಪ್ರಕಾರಾ ಕಾಜಿಗೆ ಸಿಗತಕ್ಕ ಬಾಬಿನ ಸಮ್ಮಂಧಿ ಇನಸಾಫ ಮಾಡುವ ಅಧಿಕಾರ ಕೋರ್ಟಿಗೆ ಅದೆ.

ಅಥವಾ ಹಿಂದು ಧರ್ಮಶ್ಯಾಸ್ತ್ರದ ಪ್ರಕಾರಾ ಜೋಯಿಸರಿಗೆ ಶಿಗತಕ್ಕ ಬಾಬಿನ ಸಮ್ಮಂಧಿ ಇನಸಾಫ ಮಾಡುವ ಅಧಿಕಾರ ಕೋರ್ಟಿಗೆ ಅದೆ.

ಸದರಿ ದಾವೇಗಳಲ್ಲಿ ಚವಕಶಿ ಮಾಡುವಾಗ್ಯೆ (೧) ಧರ್ಮಶ್ಯಾಸ್ತ್ರದ್ದು ಅಥವಾ ಧರ್ಮಾಚರಣದ್ದು ವಿಚ್ಯಾರ ಮಾಡುವದು ಅವಶ್ಯಕತೆ ಉಂಟು. (೨) ಕಾಜೀಗೆ ಅಥವಾ ಜ್ಯೋಯಿಸಿಗೆ ಶಿಗತಕ್ಕ ಹಕ್ಕಿನ ಸಮ್ಮಂಧಿ ವಿಚ್ಯಾರಮಾಡುವದು ಅವಶ್ಯಕತೆ ಉಂಟು. ಇದರಲ್ಲಿ ೧ನೇ ಪ್ರಶ್ನವು ಗೌಣಸ್ವರೂಪದ್ದು ಇರುವದು. ೨ನೇ ಪ್ರಶ್ನೆಯು ಮುಖ್ಯ ಸ್ವರೂಪದ್ದು ಇರುವದು. ಇವರಲ್ಲಿ ೧ನೇ ಪ್ರಶ್ನಯು ಅಂದರೆ ಗೌಣವಾದ ಪ್ರಶ್ನಯು ವಿಚ್ಯಾರ ಆಗದ ವಿನಹಾ ೨ ನೇ ಪ್ರಶ್ನ ಸಮ್ಮಂಧಿ ಇನಸಾಪ ಮಾಡಲಿಕ್ಕೆ ಬರುವಂತೆ ಇಲ್ಲಾ. ಕಾರಣಾ ಈ ತರಹದ ಪ್ರಸಕ್ತಿಯಲ್ಲಿ ಕೋರ್ಟಿಗೆ ಧರ್ಮಾಚರಣ ಸಮ್ಮಂಧಿ ವಗೈರೆ ಚವಕಶಿ ಮಾಡಲಿಕ್ಕೆ ಅಧಿಕಾರ ಉಂಟು.

---

# ೨ನೆಯ ಪ್ರಕರಣ

**ಪ್ಲಿಡಿಂಗ್ಸನಲ್ಲಿ ಅಂದರೆ ಅಸಲ ಅರ್ಜಿ ಯಾ ಲೇಖಿ ಕೈಫಿಯತ್ತಿನಲ್ಲಿ ಯಾವ ಸಂಗತಿಗಳನ್ನು ಅವಶ್ಯವಾಗಿ ಕಾಣಿಸಬೇಕು?–** ಹಿಂದೆ ಹೇಳಿದಂತೆ ಪ್ರತಿಯೊಂದು ದಾವೇಯನ್ನು ಅಸಲ ಅರ್ಜಿ ಕೊರ್ಟಿನಲ್ಲಿ ಹಾಜರಪಡಿಸಿ ಮಾಡಬೇಕು. ತನಗೆ ಭಾದ್ಯತೆಯುಂಟೆಂದು ಅಥವಾ ನ್ಯಾಯಾಶ್ರಯವನ್ನು ಊಂಟೆಂದು ವಾದಿಸುವಂಥ ಪ್ರತಿಯೊಬ್ಬ ಮನುಷ್ಯನು ಯಾವ ಮನುಷ್ಯನ ಯಾ ಮನುಷ್ಯರ ವಿರುದ್ಧವಾಗಿ ಬಾದ್ಧತೆಯು ಅಥವಾ ನ್ಯಾಯಾಶ್ರಯವನ್ನುಂಟೆಂದು ಅಂಬುವನು ಅವನ ಮೇಲೆ ಅಥವಾ ಅವರ ಮೇಲೆ ದಾವೆಯು ಮಾಡಬಹುದು. ಅದು ಅಸಲ ಅರ್ಜಿಯ ಮುಖಾಂತರವಾಗಿ ಮಾಡತಕ್ಕದ್ದು. ದಾವೆ ಮಾಡುವನಿಗೆ ವಾದಿ ಅಂತಾ ಸಂಬೋಧಿಸಿರುವರು ಮತ್ತು ಯಾರ ವಿರುದ್ಧವಾಗಿ ದಾವೆಯು ಮಾಡಿರುತ್ತದೆ ಅವರಿಗೆ ಪ್ರತಿವಾದಿ ಅಂತಾ ಸಂಬೋಧಿಸುವರು. ವಾದಿಯು ಹಾಜರ ಮಾಡಿದ ಅಸಲ ಅರ್ಜಿಗೆ ಪ್ರತಿವಾದಿಯು ಲೇಖಿಯಿಂದ ಜಬಾಬ ಯಾ. ತಕರಾರ ಕೊಟ್ಟರೆ ಅದಕ್ಕೆ ಕೈಫಿಯತ್ತು ಅನ್ನುವರು. ಅಸಲ ಅರ್ಜಿ ಅಥವಾ ಲೇಖಿ ಕೈಫಿಯತ್ತು ಇವರಿಗೆ "ಪ್ಲೀಡಿಂಗ್" ಅಂತಾ ಅನ್ನುವರು. ಅಥವಾ "ಪ್ಲೀಡಿಂಗ್" ಎಂಬುವದರ ಅರ್ಥವೂ ಅಸಲ ಅರ್ಜಿ ಅಥವಾ ಲೇಖಿ ಕೈಫಿಯತ್ತು ಎಂದಾಗುವದು. (ಆ. ೬ ರು. ೧)

ಅಸಲ ಅರ್ಜಿ ಅಥವಾ ಕೈಫಿಯತ್ತು ಯಾವ ಪ್ರಕಾರದಿಂದ ಅಥವಾ ಯಾವ ರೀತಿಯಿಂದ ಬರೆಯಬೇಕು. ಎಂಬವ ಬಗ್ಗೆ ಕೆಲವು ಮಹತ್ವದ ನಿಯಮಗಳು ಉಂಟು. ಸದರಿ ನಿಯಮಗಳಿಗೆ ಅನುಸರಸಿ ಅಸಲ ಅರ್ಜಿ ಯಾ ಕೈಫಿಯತ್ತು ಪ್ರತಿಯೊಬ್ಬರು ಬರೆಯಬೇಕು. ಎನೂ ಪ್ರಯೋಜನವಿಲ್ಲದೆ ಸದರಿ ನಿಯಮಗಳು ಮಾಡಿದ್ದು ಇರೋದಿಲ್ಲಾ. ಆದರೆ ಸದರಿ ನಿಯಮಗಳು ಮಾಡುವ ಪ್ರಯೋಜನ ಯಾ ಉದ್ದೇಶ ಏನು ? ವಾದಿಯು ಯಾವ ಸಂಗತಿಗಳ ಮೇಲೆ ಆಧಾರಿಸಿ ಕೋರ್ಟಿನಿಂದ ತನಗೆ ನ್ಯಾಯಾಶ್ರಯವನ್ನು ಬೇಡುವನೋ ಅವುಗಳನ್ನು ಸ್ಪಷ್ಟವಾಗಿ ಅಸಲ ಅರ್ಜಿಯಲ್ಲಿ ಕಂಡರೆ ಯಾವ ಸಂಗತಿಗಳ ಮೇಲೆ ವಾದಿಯು ಆಧಾರಿಸುತ್ತಾನೊ ಮತ್ತು ಆ ಆಧಾರವ ಮೇಲಿಂದ ಯಾವ ನ್ಯಾಯಾಶ್ರಯವನ್ನು ಬೇಡು

ತ್ತಾನೊ ಎಂಬುವದು ಕೋರ್ಟಿಗೆ ಸ್ಪಷ್ಟವಾಗಿ ತಿಳಿಯುವದು. ಮತ್ತು ಪ್ರಸಂಗ ಬಿದ್ದಲ್ಲಿ ಆ ಪ್ರಕಾರಾ ನ್ಯಾಯಾಶ್ರಯವನ್ನು ವಾದಿಗೆ ಕೊಡಲಿಕ್ಕೆ ಕೋರ್ಟಿಗೆ ಸುಲಭ ವಾಗುವದು, ಅಥವಾ ಕೋರ್ಟಿಗೆ ಯೋಗ್ಯ ಕಂಡಂತೆ ನ್ಯಾಯಾಶ್ರಮವನ್ನು ವಾದಿಗೆ ಕೊಡುವದಕ್ಕೆ ಸುಲಭವಾಗುವದು. ಪ್ರತಿವಾದಿಗೆ ಅಥವಾ ಪ್ರತಿಪಕ್ಷ ಮಾಡುವ ನಿಗೆ ಸಹಾ ವಾದಿಯ ಅಂಬೋಣ ಸ್ಪಷ್ಟವಾಗಿ ತಿಳಿಯುವದು. ವಾದಿಯು ಅಸಲ ಅರ್ಜಿಯಿಂದ ವಾದಿಯ ಅಂಬೋಣ ಪ್ರದಿವಾದಿಗೆ ಸ್ಪಷ್ಟವಾಗಿ ತಿಳಿದರೆ ಅದಕ್ಕೆ ಪ್ರತಿವಾದಿಗೆ ತಕರಾರ ಕೊಡುವದಾಗಿದ್ದರೆ ಹಾಗೆ ಮಾಡಲಿಕ್ಕೆ ಸುಲಭವಾಗು ವದು. ಪ್ರತಿವಾದಿಯೂ ಸಹಾ ಯಾವ ಸಂಗತಿಗಳ ಮೇಲೆ ಆಧಾರಿಸು ವನೊ ಅವುಗಳನ್ನಷ್ಟೆ ತನ್ನ ಲೇಖಿ ಕೈಫಿಯತ್ತಿನಲ್ಲಿ ಬರೆಯಬೇಕು. ಅಂದರೆ ಸದರೀ ನಿಯಮುಗಳಿಗೆ ಅನುಸರಿಸಿ ಕೈಫಿಯತ್ತು ಬರೆಯಬೇಕು. ಅಸಲ ಅರ್ಜಿ ಮತ್ತು ಕೈಫಿಯತ್ತು ಸದರಿ ನಿಯಮುಗಳಿಗೆ ಅನುಸರಿ ಬರದರೆ ಕೋರ್ಟಿಗೆ ವಾದಿಯು ಮತ್ತು ಪ್ರತಿವಾದಿಯ ನಡುವೆ ಏನು ತಕರಾರ ಅದೆ ಎಂಬುವದು ಸ್ಪಷ್ಟವಾಗುವದು. ಹೀಗೆ ಎಲ್ಲ ತಕರಾರಗಳು ಸ್ಪಷ್ಟವಾದಲ್ಲಿ ಉಭಯ ಪಕ್ಷಕಾರ ರಿಗೆ ಯೋಗ್ಯವಾದ ನ್ಯಾಯಾಶ್ರಯವನ್ನು ಕೊಡಲಿಕ್ಕೆ ಕೋರ್ಟಿಗೆ ಸುಲಭವಾಗು ವದು. ಈ ಉದ್ದೇಶದಿಂದಲೆ ಕೆಳಗೆ ಬರೆದ ನಿಯಮುಗಳು ಮಾಡಿರುತ್ತವೆ. ಅವುಗ ಳನ್ನು ಚನ್ನಾಗಿ ತಿಳಕೊಂಡು, ಒಳ್ಳೆ ಲಕ್ಷದಲ್ಲಿ ಇಟ್ಟು ಅವುಗಳಿಗೆ ಅನುಸರಿಸಿ ಅಸಲ ಅರ್ಜಿ ಯಾ ಕೈಫಿಯತ್ತು ಬರೆಯಲಿಕ್ಕೆ ಪ್ರತಿಯೊಬ್ಬರು ಪ್ರಯತ್ನವನ್ನು ಮಾಡಬೇಕು.

ಅಸಲ ಅರ್ಜಿ ಅಥವಾ ಕೈಫಿಯತ್ತು ಬರೆಯುವವರ ಬಗ್ಗೆ ಕೆಳಗೆ ಬರದಂತೆ ಬಹಳ ಮಹತ್ವದ ನಿಯಮುಗಳು ಇವೆ. ಅವುಗಳ ಮಹತ್ವವನ್ನು ಎಷ್ಟು ಹೇಳಿ ದರು ಸ್ವಲ್ಪೆ ಇದೆ ಕಾರಣ ಅವುಗಳನ್ನು ಒಳ್ಳೆ ಲಕ್ಷದಲ್ಲಿ ಇಡತಕ್ಕದ್ದು.

ಪ್ರತಿಯೊಂದು ಅಸಲ ಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ—

(೧) ಸಂಗತಿಗಳನ್ನು ಬರೆಯಬೇಕು ಹೊರ್ತಾಗಿ ಕಾಯದೆಯು ಬರೆಯ ಬಾರದು.

(೨) ಮಹತ್ವದ ಸಂಗತಿಗಳನ್ನಷ್ಟೆ ಬರೆಯಬೇಕು ಹೊರ್ತಾಗಿ ಇತರ ಸಂಗತಿಗಳನ್ನು ಬರೆಯಬಾರದು.

(೩) ಯಾವ ಸಂಗತಿಗಳ ಮೇಲೆ ಪಕ್ಷಕಾರನು ತನ್ನ ಹಕ್ಕಿನ ಅಥವಾ ಉತ್ತರ ಪಕ್ಷದ ಬಗ್ಗೆ ಆಧಾರಿಸುತ್ತಾನೋ ಅವುಗಳನ್ನಷ್ಟೆ ಬರೆಯಬೇಕು; ಹೊರ್ತಾಗಿ ಅವುಗಳನ್ನು ಯಾವ ಸಂಗತಿಗಳ ಮೇಲಿಂದ ಸಾಬೀತು ಮಾಡುವನೋ ಆ ಪುರಾವೇದ ಸಂಗತಿಗಳನ್ನು ಬರೆಯಬಾರದು. ಮತ್ತು,

(೪) ಸಂಗತಿಗಳನ್ನು ಸಂಕ್ಷಿಪ್ತವಾಗಿ ಬರೆಯಬೇಕು ಮತ್ತು ಹಾಗೆ ಸ್ಪಷ್ಟವಾಗಿ ಮತ್ತು ನಿಶ್ಚಿತವಾಗಿ ಬರೆಯಬೇಕು.

ಸದರಿ ನಿಯಮಗಳನ್ನು ಬಹಳೆ ಮಹತ್ವ ಇರೋದರಿಂದ ಅವುಗಳ ವಿವೇಚನವನ್ನು ವಿಶದವಾಗಿ ಮಾಡೋಣ.

(೧) ಪ್ರತಿಯೊಂದು ಅಸಲ ಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಸಂಗತಿಗಳನ್ನು ಬರೆಯಬೇಕು ಹೊರ್ತಾಗಿ ಕಾಯದೆಯ ಸಂಗತಿಗಳು ಬರೆಯಬಾರದು. ಅಸಲ ಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಕಾಯದೆಯು ಅಥವಾ ಕಾಯದೆಯ ಸಿದ್ಧಾಂತಗಳು ಬರೆಯಬಾರದು. ಕಾಯದೆಯು ಅಥವಾ ಕಾಯದೆಯ ಸಿದ್ಧಾಂತಗಳ ಸಂಬಂಧಿ ಕೋರ್ಟಿನವರು ತಾವಾಗಿ ವಿಚಾರ ಮಾಡುವರು ಮತ್ತು ಅದರ ಬಗ್ಗೆ ಯೋಗ್ಯವಾದಂಥ ನಿರ್ಣಯ ಕೊಡುವರು. ಇಷ್ಟೆ ಅಲ್ಲಾ ಹಾಗೆ ಮಾಡುವದು ಅವರ ಕರ್ತವ್ಯವಿದೆ. ಕಾಯದೆ ಏನು ಇದೆ ಎಂಬುವದು ಪಕ್ಷಕಾರನು ಹೇಳಲಿಕ್ಕೆ ಏನೂ ಕಾರಣವಿಲ್ಲ. ಪಕ್ಷಕಾರನು ಯಾವ ಸಂಗತಿಗಳ ಮೇಲಿಂದ ತನಗೆ ಬಾಧ್ಯತೆಯುಂಟೆಂದು ವಾದಿಸುವನೊ ಆ ಸಂಗತಿಗಳನ್ನು ಕೋರ್ಟಿನ ಮುಂದೆ ಇಟ್ಟರೆ ಸಾಕು. ಅವುಗಳ ಮೇಲಿಂದ ಕಾಯದೆಯು ಯಾವ ಸಿದ್ಧಾಂತ ಹೊರಡುವದು ಎಂಬದನ್ನು ಕೋರ್ಟಿನವರು ವಿಚಾರ ಮಾಡುವರು. ಮತ್ತು ನಿರ್ಣಯ ಕೊಡುವರು. ಒಟ್ಟಿಗೆ ಪಕ್ಷಕಾರನು ತನ್ನ ಹಕ್ಕಿನ ಬಗ್ಗೆ ಯಾ ಉತ್ತರ ಪಕ್ಷದ ಬಗ್ಗೆ ಯಾವ ಸಂಗತಿಗಳ ಮೇಲೆ ಆಧರಿಸುವನೊ ಅವುಗಳನ್ನಷ್ಟೆ ಬರೆದರೆ ಸಾಕು.

"ಮೃತನಿಗೆ ವಾದಿಯು ವಾರಸದಾರನು ಇರುತ್ತಾನೆ" ಅಂತಾ ಬರೆಯುವ ಪದ್ಧತಿಯು ಕಂಡುಬರುತ್ತದೆ. ಆದರೆ ಇದು ಕಾಯದೆಯ ಅನುಮಾನವು, ಕಾರಣಾ ಅದು ಬರೆಯಬಾರದು. ಯಾವ ಸಂಗತಿಗಳ ಮೂಲಕಾ ವಾದಿಯು ಮೃತನ ವಾರಸದಾರನು ಆಗುತ್ತಾನೆ. ಅಂದರೆ ಅವರವರ ಆಪ್ತತ್ವ ಹ್ಯಾಗೆ ಇದೆ ಎಂಬ ಸಂಗತಿಗಳನ್ನು ಬರೆಯಬೇಕು. ಆ ಸಂಗತಿಗಳ ಮೇಲಿಂದ ಕೋರ್ಟಿನವರು

ವಾದಿಯು ವಾರಸದಾರನು ಇದ್ದಾನೊ ಯಾ ಇಲ್ಲಾ ಎಂಬದನ್ನು ಠರಾಯಿಸು ವರು. "ಮೃತನಿಗೆ ವಾದಿಯು ಅವಿಭಕ್ತ ತನ್ಮ್ಮನಾಗಬೇಕು. ಮೃತನು ಮತ್ತು ವಾದಿಯ ಅವಿಭಕ್ತ ಹಿಂದು ಕುಟುಂಬದ ದಾಯಾದಿಗಳು ಇದ್ದರು ಮತ್ತು ಹೀಗೆ ಅವಿಭಕ್ತತನದಲ್ಲಿ ಇರತಾ ವಾದಿಯ ಅಣ್ಣನಾದ... ... ಮೃತಪಟ್ಟನು. ಮೃತ ನಿಗೆ ವಾದಿಯ ಹೊರ್ತಾಗಿ ಸಮೀಪದ ಆಪ್ತರು ಯಾರೂ ಇಲ್ಲಾ" ಈ ಮೊದಲಾದ ಸಂಗತಿಗಳ ಮೇಲಿಂದ ವಾದಿಯು ಮೃತನ ವಾರಸದಾರನು ಇರುತ್ತಾನೆಂದು ಕೋರ್ಟಿನವರು ಠರಾಯಿಸುವರು. ವಾರಸದಾರನು ಇದ್ದಾನೆ ಅಂತಾ ವಾದಿಯು ಬರೆಯಲಿಕ್ಕೆ ಕಾರಣವಿಲ್ಲ.

"ವಾದಿಯು ಬೇಡಿದ ಹಣ ಯಾ ರಕಮು ಪ್ರತಿವಾದಿಯು ವಾದಿಗೆ ಕೊಡ ಲಿಕ್ಕೆ ಬದ್ಧನಿರುತ್ತಾನೆ" ಅಂತಾ ಬರೆಯುವದು ಸಹಾ ತಪ್ಪು. ಯಾವ ಸಂಗತಿಗಳ ಮೂಲಕಾ ಪ್ರತಿವಾದಿಯು ಹಣಾ ಕೊಡಲಿಕ್ಕೆ ಬದ್ಧನಾಗುವನು ಆ ಸಂಗತಿಗಳನ್ನು ಬರೆಯಬೇಕು. "ಪ್ರತಿವಾದಿಯು ವಾದಿಯ ಬಳಿಯಲ್ಲಿ ೧೦೦ ರೂಪಾಯಿ ಕೈಗಡಾ ಇಸಕೊಂಡಿದ್ದನು; ಅಥವಾ ಪ್ರತಿವಾದಿಯು ವಾದಿಯ ಅಂಗಡಿಯಲ್ಲಿ ೧೦೦ ರೂಪಾಯಿಗಳ ಮಾಲು ಖರೀದಿ ತಕ್ಕೊಂಡನು, ಅಥವಾ ಪ್ರತಿವಾದಿಯು ವಾದಿಯ ಬಳಿಯಲ್ಲಿ ೧೦೦ ರುಪಾಯಿ ಸಾಲವಾಗಿ ತಕ್ಕೊಂಡು ಕರ್ಜಕತಿಬೆಯ ಬರಕೊಟ್ಟನು ಮತ್ತು ಸದರಿ ರೂಪಾಯಿ ಕೊಟ್ಟಿಲ್ಲಾ" ಅಂತಾ ವಗೈರೆ ಬರೆಯಬೇಕು. ಈ ಸಂಗ ತಿಗಳ ಮೂಲಕಾ ವಾದಿಯು ಬೇಡಿದ ಹಣಾ ಪ್ರತಿವಾದಿಯು ಕೊಡಲಿಕ್ಕೆ ಬದ್ಧ ನಾಗುವನೆಂದು ಕೋರ್ಟಿನವರು ಠರಾಯಿಸುವರು.

ಅ ಎಂಬುವನು ಬರಕೊಟ್ಟ ಖರೀದಿ ಪತ್ರದ ಮೇಲಿಂದ ವಾದಿಗೆ ದಾವೇದ ಆಸ್ತಿಯ ಬಾಬತ್ತು ಮಾಲ್ಕಿಹಕ್ಕ ಪ್ರಾಪ್ತವಾಗಿರುತ್ತದೆ. ಇಂತಿಷ್ಟೆ ಬರೆಯುವದು ತಪ್ಪು. ದಾವೇದ ಆಸ್ತಿಗೆ ಅ ಎಂಬುವನು ಮಾಲಿಕನಿದ್ದನು ಮತ್ತು ಸದರಿ ಅವನು ಸದರಿ ಆಸ್ತಿಯು ಸಂಬಂಧಿ ವಾದಿಗೆ ಅಥವಾ ವಾದಿಯ ಹೆಸರಲೆ ತಾ॥ ೧೦-೯-೧೯೨೭ನೇ ಇಸ್ವಿ ದಿವಸಾ ಖರೀದಿಪತ್ರ ಬರಕೊಟ್ಟು ನೋಂದಾಯಿಸಿ ಕೊಟ್ಟನು ಅಂತಾ ಬರೆಯಬೇಕು.

ಮಹಮ್ಮದಿ ಧರ್ಮಶಾಸ್ತ್ರದ ಅನುಯಾಯಿಗಳಾದವರ ಪೈಕಿ ಯಾರಾದರು ಯಾರಾದವರಿಗೆ ಯಾವದಾದರ ತನ್ನ ಆಸ್ತಿಯು ಬಕ್ಷೀಸಕೊಟ್ಟರೆ ಅವನು ಬಕ್ಷೀಸ

ಕೊಟ್ಟಾನೆ ಅಂತಾ ಅಷ್ಟೇ ಬರದರೆ ಸಾಕಾಗುವದಿಲ್ಲಾ. ಬಕ್ಷೀಸ ಕೊಟ್ಟವನು ಬಕ್ಷೀಸ ಹ್ಯಾಗೆ ಕೊಟ್ಟನು, ಬಕ್ಷೀಸ ಗ್ರಹಣಮಾಡುವನು ಅಥವಾ ತಕ್ಕೊಳ್ಳುವನು ಹ್ಯಾಗೆ ಗ್ರಹಣಮಾಡಿದನು ಅಥವಾ ತಕ್ಕೊಂಡನು ಮತ್ತು ಬಕ್ಷೀಸ ಕೊಟ್ಟ ಆಸ್ತಿಯ ಕಬಜಾ ಹ್ಯಾಗೆ ಕೊಟ್ಟಿತು ಎಂಬ ಎಲ್ಲಾ ಸಂಗತಿಗಳನ್ನು ಸ್ಪಷ್ಟವಾಗಿ ಬರೆಯಬೇಕು. "ಅ ಎಂಬುವನು ತನ್ನ ಮಾಲ್ಕಿವುಳ್ಳ ದಾವೆಯ ಆಸ್ತಿಯು ತಾರೀಖು ೨೨-೭-೧೯೨೮ನೇ ಇಶ್ವಿದಿವಸಾ ವಾದಿಗೆ ಬಕ್ಷೀಸಕೊಟ್ಟು ಸದರಿ ಆಸ್ತಿಯು ಅದೇದಿವಸಾ ವಾದಿಯ ಕಬಜಾ ಮಾಡಿದನು ಮತ್ತು ಅದೇದಿವಸಾ ವಾದಿಯು ಸದರಿ ಬಕ್ಷೀಸು ಸ್ವೀಕರಿಸಿದನು" ಅಂತಾ ಬರೆಯಬೇಕು.

"ಪ್ರತಿವಾದಿಯು ಸದರಿ ಕೃತ್ಯಗಳನ್ನು ಗೈರಹಕ್ಕಿನಿಂದ, ಬೇಕಾಯದೆಶೀರ ರೀತಿಯಿಂದ ಮತ್ತು ಅಯೋಗ್ಯವಾಗಿ ಮಾಡಿರುತ್ತಾನೆ" ಅಂತಾ ಅಷ್ಟೆ ಬರೆಯುವ ಪದ್ಧತಿಯು ಕಂಡಬರುತ್ತದೆ. ಆದರೆ ಇಷ್ಟೆ ಬರದರೆ ಸಾಕಾಗುವದಿಲ್ಲ. ಮತ್ತು ಅದರಿಂದ ಪಕ್ಷಕಾರನಿಗೆ ಏನು ಫಾಯದೆ ಆಗುವಂತೆ ಇಲ್ಲಾ. ಕಾರಣಾ ಸದರಿ ಕೃತ್ಯಗಳು ಯಾವ ಸಂಗತಿಗಳ ಮೂಲಕಾ ಗೈರಹಕ್ಕಿನ, ಬೇಕಾಯದೆಶೀರ ಯಾ ಅಯೋಗ್ಯ ಇರುವದೊ ಆ ಸಂಗತಿಗಳನ್ನು ಬರೆಯಬೇಕು.

ಇದರಂತೆ ಪ್ರತಿವಾದಿಯು ತನ್ನ ಕೈಫಿಯತ್ತಿನಲ್ಲಿ—

"ವಾದಿಯು ಬೇಡಿದ ಹಣಾ ಕೊಡಲಿಕ್ಕೆ ಪ್ರತಿವಾದಿಯು ಬದ್ಧನು ಇರುವದಿಲ್ಲಾ." ಅಥವಾ—

"ಪ್ರತಿವಾದಿಯ ವಿರುದ್ಧ ವಾದಿಯು ಯಾವದೂ ನ್ಯಾಯಾಶ್ರಯವನ್ನು ದೊರಿಯುವಂತೆ ಇಲ್ಲಾ" ಅಂತಾ ವಗೈರೆ ಬರೆಯುವದು ತಪ್ಪು. ಇವು ಕಾಯದೆಯ ನಿಷ್ಕರ್ಷಗಳಾದವು. ಪ್ರತಿವಾದಿಯು ಬದ್ಧನಿದ್ದಾನೊ ಯಾ ಇಲ್ಲಾ ಎಂಬುವದು ಕೋರ್ಟನವರು ಠರಾಯಿಸುವರು; ಅದು ಪ್ರತಿವಾದಿಯು ಹೇಳುವದು ಕಾರಣವಿಲ್ಲ. ಮತ್ತು ಅದು ಪ್ರತಿವಾದಿಯು ಹೇಳ್ಕಿಮೇಲೆ ಅವಲಂಬಿಸಿರುವದಿಲ್ಲ. ಯಾವ ಸಂಗತಿಗಳ ಮೂಲಕಾ ಪ್ರತಿವಾದಿಯು ಬದ್ಧನಿರೋದಿಲ್ಲಾ ಅಂತಾ ಪ್ರತಿಪಕ್ಷಮಾಡುವನು ಆ ಸಂಗತಿಗಳನ್ನು ಬರೆಯುವದು ಅವಶ್ಯವಿದೆ. ಅಥವಾ ಯಾವಸಂಗತಿಗಳ ಆಧಾರದಮೇಲಿಂದ ಪ್ರತಿವಾದಿಯು ಬದ್ಧನಿಲ್ಲಾ ಅಂತಾಕೋರ್ಟನವರು ಠರಾಯಿಸಬೇಕೆಂದು ಪ್ರತಿವಾದಿಯು ಅನ್ನುವನು. ಆ ಸಂಗತಿಗಳನ್ನು

ಬರೆಯಬೇಕು. ಆದರೆ ಬರೆ ಪ್ರತಿವಾದಿಯು ಬದ್ಧನಿಲ್ಲಾ ಅಂತಾವಗೈರೆ ಬರದರೆ ಸಾಕಾಗುವದಿಲ್ಲ. “ವಾದಿ ಬಳಿಯಲ್ಲಿ ೧೦೦ ರೂಪಾಯಿ ಅಥವಾ ಅದರ ಪೈಕಿ ಯಾವ ಭಾಗವೂ ಪ್ರತಿವಾದಿಯು ಇಸಕೊಂಡಿಲ್ಲಾ.” “ವಾದಿಯು ಅಂಗಡಿಯಲ್ಲಿ ೧೦೦ ರೂಪಾಯಿಗಳ ಅಥವಾ ಅದರಗಿಂತ ಕಮ್ಮಿ ರೂಪಾಯಿಗಳ ಅಥವಾ ಯಾವದು ಮಾಲು ಪ್ರತಿವಾದಿಯು ತಕ್ಕೊಂಡಿಲ್ಲಾ.” ವಾದಿ ಬಳಿಯಲ್ಲಿ ಸಾಲ ವಾಗಿ ಅಥವಾ ಇತರ ಯಾವದೇ ಕಾರಣದಶಿಂದ ೧೦೦ ರೂಪಾಯಿ ಅಥವಾ ಅದರ ಪೈಕಿ ಯಾವಭಾಗವೂ ಪ್ರತಿವಾದಿಯು ತಕ್ಕೊಂಡಿಲ್ಲಾ ಮತ್ತು ಅದರ ಬಗ್ಗೆ ಅಥವಾ ಇತರಯಾವದೆ ಕಾರಣದ ಬಗ್ಗೆ ಪ್ರತಿವಾದಿಯು ಕರ್ಜಕತಿಬೆಯು ಎಂದು ಬರಕೊಟ್ಟಿಲ್ಲಾ.” ಈ ಪ್ರಕಾರಾ ಪ್ರತಿವಾದಿಯು ಬದ್ಧನಿಲ್ಲ ಅಂತಾ ತೋರ ಸುವ ಎಲ್ಲ ಸಂಗತಿಗಳನ್ನು ಬರೆಯಬೇಕು. “ವಾದಿ ದಾವೆ ಕಾಯದೆಯಿಂದ ನಡಿಯಲಾರದು” ಅಂತಾ ಬರೆಯುವದು ಸಹಾ ತಪ್ಪು. ಯಾವ ಸಂಗತಿಗಳ ಮೂಲಕಾ ಅದು ಕಾಯದೆಯಿಂದ ನಡಿಯುವದಿಲ್ಲಾ ಆ ಸಂಗತಿಗಳನ್ನು ಬರೆಯ ಬೇಕು.

(೨) ಪ್ರತಿಯೊಂದು ಅಸಲ ಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಮಹ ತ್ವದ ಸಂಗತಿಗಳನ್ನಷ್ಟೆ ಬರೆಯಬೇಕು. ಹೊರ್ತಾಗಿ ಇತರ ಸಂಗತಿಗಳನ್ನು ಬರೆಯಬಾರದು—ವಾದಿಯು ತನ್ನ ಹಕ್ಕಿನದಶಿಂದ ಮತ್ತು ಪ್ರತಿವಾದಿಯು ತನ್ನ ಉತ್ತರ ಪಕ್ಷದದಶಿಂದ (೧) ಯಾವ ಯಾವ ಮಹತ್ವದ ಸಂಗತಿಗಳ ಮೇಲೆ ಆಧರಿಸುತ್ತಾನೋ ಅವುಗಳನ್ನೆಲ್ಲಾ ಅಸಲಅರ್ಜಿ ಯಾ ಕೈಫಿಯತ್ತಿನಲ್ಲಿ ಬರೆಯ ಬೇಕು. (೨) ಸದರಿ ಮಹತ್ವದ ಸಂಗತಿಗಳನ್ನಷ್ಟೇ ಬರೆಯಬೇಕು. ಮತ್ತು (೩) ಮಹತ್ವವಿಲ್ಲದ ಸಂಗತಿಗಳನ್ನು ಬರೆಯಬಾರದು. ಮಹತ್ವದ ಸಂಗತಿಗಳು ಯಾವವು? ಎಂಬ ಪ್ರಶ್ನೆಯ ವಿವೇಚನಮಾಡುವದು ಅವಶ್ಯವಿದೆ. ವಾದಿಗೆ ತನ್ನ ಹಕ್ಕಿನಬಗ್ಗೆ ಮತ್ತು ಪ್ರತಿವಾದಿಗೆ ತನ್ನ ಉತ್ತರಪಕ್ಷದ ಬಗ್ಗೆ ಯಾವ ಯಾವ ಸಂಗತಿಗಳನ್ನು ಸಾಬೀತ ಮಾಡುವದು ಅಗತ್ಯವಿದೆ ಆ ಎಲ್ಲಾ ಸಂಗತಿಗಳನ್ನು ಮಹತ್ವದ ಸಂಗತಿಗಳು ಇರುವವೂ ಮತ್ತು ವಾದಿಗೆ ತನ್ನ ಹಕ್ಕಿನ ಬಗ್ಗೆ ಮತ್ತು ಮತ್ತು ಪ್ರತಿವಾದಿಗೆ ತನ್ನ ಉತ್ತರ ಪಕ್ಷದ ಬಗ್ಗೆ ಯಾವ ಯಾವ ಸಂಗತಿಗಳನ್ನು ಸಾಬೀತ ಮಾಡುವದು ಅಗತ್ಯವಿಲ್ಲ ಆ ಎಲ್ಲ ಸಂಗತಿಗಳನ್ನು ಗೈರಮಹತ್ವದ ಅಥವಾ ಮಹತ್ವವಿಲ್ಲದ ಸಂಗತಿಗಳು ಇರುವವು. ಅಂದಮೇಲೆ ಯಾವ ಮಹ

ತ್ವದ ಸಂಗತಿಗಳು ಇರುವವು ಮತ್ತು ಯಾವ ಮಹತ್ವವಿಲ್ಲದ್ದು ಇರುವವು ಎಂಬುವದು ಪ್ರತಿಯೊಂದು ದಾವೆಯ ಸ್ವರೂಪದ ಮೇಲೆ ಅಥವಾ ವಾದಿಯು ಬೇಡುವ ನ್ಯಾಯಾಶ್ರಯದ ಮೇಲೆ ಅಥವಾ ಪ್ರತಿವಾದಿಯು ಮಾಡುವ ಉತ್ತರ ಪಕ್ಷದ ಮೇಲೆ ಅವಲಂಬಿಸಿರುವದು. ಅಸಲ ಅರ್ಜಿಯು ಬರೆಯುವ ಮೊದಲು ದಾವೆಯ ಸಂಬಂಧಿ ಎಲ್ಲ ಸಂಗತಿಗಳು ಮನಸಿನಲ್ಲಿ ತಂದು ಅವುಗಳ ಪೈಕಿ ಯಾವ ಸಂಗತಿಗಳು ಸಾಬೀತ ಮಾಡಿದ್ದಲ್ಲಿ ವಾದಿಗೆ ಅವನು ಬೇಡುವಂಥ ನ್ಯಾಯಾಶ್ರಯ ವನ್ನು ಶಿಗುವದು ಎಂಬುವ ಬಗ್ಗೆ ಚೆನ್ನಾಗಿ ವಿಚಾರಮಾಡಬೇಕು. ಮತ್ತು ಅವುಗಳನ್ನಷ್ಟೇ ಬರೆಯಬೇಕು. ವಾದಿಗೆ ದಾವೆಯಲ್ಲಿ ನ್ಯಾಯಾಶ್ರಯವನ್ನು ದೊರಯಲಿಕ್ಕೆ ಎಲ್ಲ ಸಂಗತಿಗಳ ಪೈಕಿ ಈ ಸಂಗತಿ ಸಾಬೀತು ಮಾಡಬೇಕಾಗುವ ದೇನು ? ಅಂತಾ ತಮಗೆ ಪ್ರಶ್ನೆಮಾಡಬೇಕು. ಅದಕ್ಕೆ ಹೌದು ಅಂತಾ ಉತ್ತರಾ ಬಂದರೆ ಅದು ಅಸಲ ಅರ್ಜಿಯಲ್ಲಿ ಕಾಣಿಸಬೇಕು. ಇಲ್ಲದಿದ್ದರೆ ಅದು ಅಸಲ ಅರ್ಜಿಯಲ್ಲಿ ಕಾಣಿಸಬಾರದು. ದಾವೆಯ ಎಲ್ಲ ಸಂಗತಿಗಳ ಪೈಕಿ ಈ ಸಂಗತಿ ಸಾಬೀತ ಮಾಡದಿದ್ದರೆ ವಾದಿಗೆ ಅವನು ಬೇಡುವ ನ್ಯಾಯಾಶ್ರಯವನ್ನು ದೊರಿ ಯುವದೇನು ? ಎಂಬ ಪ್ರಶ್ನ ತಮಗೆ ಮಾಡಬೇಕು. ಮತ್ತು ಅದಕ್ಕೆ ಹೌದು ಅಂತಾ ಉತ್ತರಾ ಬಂದರೆ ಆ ಸಂಗತಿಯನ್ನು ಬರೆಯಬಾರದು. ಇಲ್ಲದಿದ್ದರೆ ಬರೆಯ ಬೇಕು. ಉತ್ತರ ಪಕ್ಷವೂ ಮಾಡುವ ಮೊದಲು ಅಥವಾ ಕೈಫಿಯತ್ತು ಬರೆಯುವ ಮೊದಲು ಸಹಾ ಎಲ್ಲ ಸಂಗತಿಗಳು ಮನಿಸಿನಲ್ಲಿ ತಂದು ಇವೆ ಮುಂತಾದ ಪ್ರಶ್ನೆ ಗಳು ಮಾಡಿ ಮಹತ್ವದ ಯಾ ಮಹತ್ವವಿಲ್ಲದ ಸಂಗತಿಗಳನ್ನು ನಿರ್ಣಯಿಸಬೇಕು ಮತ್ತು ಅವುಗಳನ್ನಷ್ಟೇ ಬರೆಯಬೇಕು. ಯಾವದಾದರೊಂದು ಸಂಗತಿಯು ಮಹತ್ವದ ಇದೆಯೋ ಇಲ್ಲಾ ಎಂಬ ಬಗ್ಗೆ ಸಂಶಯವಿದ್ದಲ್ಲಿ ಆ ಸಂಗತಿಯು ಬರೆಯದೆ ಇರೋದರಗಿಂತ ಬರೆಯುವದು ಚಲೋ ಮಾರ್ಗವು.

ಮಹತ್ವವಿಲ್ಲಂಥ ಎಷ್ಟೋ ಸಂಗತಿಗಳನ್ನು ಅಸಲ ಅರ್ಜಿಯಲ್ಲಿಯೂ ಕೈಫಿಯತ್ತಿನಲ್ಲಿ ಬರೆಯುವ ಪದ್ಧತಿಯು ಕಂಡು ಬರುತ್ತದೆ. ಅವುಗಳ ಪೈಕಿ ಕೆಳಗೆ ಕೆಲವು ಕೊಟ್ಟಿರುತ್ತವೆ.

೧. ಬೇಡಿದಾಗ ಹಣಾ ವಾಪಸ ಕೊಡತಕ್ಕಂಥಾ ಕತಿಬೆಯ ಯಾ ಪ್ರಾಮಿಸರಿ ನೋಟಿನ ಆಧಾರದ ಮೇಲೆ ದಾವೆಯು ಮಾಡಿದ್ದರೆ ಆ ದಾವೆಯು

ಅಸಲ ಅರ್ಜಿಯಲ್ಲಿ 'ಹಣಾ ಬೇಡಿತು. ಆದರೆ ಪ್ರತಿವಾದಿಯು ಕೊಡಲಿಕ್ಕೆ ಇನ ಕಾರ ಮಾಡಿದನು' ಅಥವಾ 'ಎಷ್ಟಾವರ್ತಿ ಹಣಾ ಬೇಡಿದರು ಪ್ರತಿವಾದಿಯು ಕೊಡವಲ್ಲನು' ಅಂತಾ ವಗೈರೆ ಬರೆಯುವದೇನೂ ಕಾರಣವಿಲ್ಲ. ಇಂಥ ಪ್ರಸಕ್ತಿ ಯಲ್ಲಿ ಹಣಾ ಬೇಡದೆ ವಾಪಸಕೊಡುವ ಜಬಾಬದಾರಿ ಪ್ರತಿವಾದಿಯ ಮೇಲೆ ಕಾಯದೆಯಿಂದ ಇದೆ ಈ ತರಹದ ದಾವೆಯಲ್ಲಿ ದಾವೆಮಾಡುವ ಮೊದಲು ಹಣಾ ವಾಪಸ ಬೇಡುವದು ಅವಶ್ಯವಿದೆ. ಹೀಗೇನು ಇಲ್ಲಾ. ಹಣಾ ಬೇಡದೇ ದಾವೆಯು ಮಾಡಲಿಕ್ಕೆ ಬರುವದು. ಮತ್ತು ನ್ಯಾಯಾಶ್ರಯುವನ್ನು ದೊರೆಯು ಬಹುದು. ಕಾರಣ ಹಣಾ ಬೇಡಿತು ವಗೈರೆ ಸಂಗತಿಗಳನ್ನು ಬರೆಯುವದು ತಪ್ಪು.

(೯) ಗೈರಹಕ್ಕಿನಿಂದ ಯಾವನಾದರು ವಾದಿಯ ಮಾಲ್ಕಿಯುಳ್ಳ ಯಾವ ದಾದರೊಂದು ಆಸ್ತಿಯ ಕಬಜಾ ಪಡಕೊಂಡಿದ್ದರೆ ಸದರಿ ಆಸ್ತಿಯ ಕಬಜಾ ಬೇಡುವ ದಾವೆಯಲ್ಲಿ "ಸದರಿ ಅವನಿಗೆ ಕಬಜಾ ಬಿಡಲಿಕ್ಕೆ ಹೇಳಿತು. ಯಾ ನೋಟೀಸು ಮಾಡಿತು ಆದರೆ ಅವನು ಕಬಜಾ ಕೊಡವಲ್ಲನು" ಅಂತಾ ವಗೈರೆ ಸಂಗತಿ ಬರೆಯುವದು ಎನೂ ಕಾರಣವಿಲ್ಲ. ಸದರಿ ಆಸ್ತಿಯ ವಹಿವಾಟ ಮಾಡಲಿಕ್ಕೆ ಸದರಿ ಅವನಿಗೆ ಹಕ್ಕವಿಲ್ಲದಿದ್ದರೆ ಮತ್ತು ಅದರ ಕಬಜಾ ಪಡಕೊಳ್ಳ ಲಿಕ್ಕೆ ಮತ್ತು ವಹಿವಾಟ ಮಾಡಲಿಕ್ಕೆ ವಾದಿಗೆ ಹಕ್ಕವಿದ್ದರೆ ಸದರಿ ಆಸ್ತಿಯ ಕಬಜಾವಾದಿಗೆ ಬಿಡಲಿಕ್ಕೆ ಸದರಿ ಅವನು ಯಾವಾಗಲು ಜವಾಬದಾರನು ಇರು ತ್ತಾನೆ. ಸದರಿ ಜಬಾಬದಾರಿಯನ್ನು ಕಬಜಾ ಬಿಡಲಿಕ್ಕೆ ಹೇಳಿದ ಯಾ ನೋಟೀಸ ಮಾಡಿದ ಸಂಗತಿಯ ಮೇಲೆ ಅವಲಂಬಿಸಿರುವದಿಲ್ಲಾ. ಅದು ಮೇಲೆ ಹೇಳಿವಂತೆ ವಾದಿಯ ಹಕ್ಕಿನ ಮೇಲೆ ಮತ್ತು ಪ್ರತಿವಾದಿಯ ಹಕ್ಕವಿಲ್ಲದ ಸಂಗತಿಗಳಮೇಲೆ ಅವಲಂಬಿಸಿರುವದು.

(೩) ಕೊಟ್ಟ ಸಾಲವನ್ನು ವಸೂಲ ಮಾಡುವ ಬಗ್ಗೆ ಮಾಡಿದ ದಾವೆಯಲ್ಲಿ

(ಅ) 'ಪ್ರತಿವಾದಿಯು ಬಹಳೆ ಹೇಳಿಕೊಂಡದ್ದರಿಂದ ಪ್ರತಿವಾದಿಗೆ ಹಣಾ ಕೊಟ್ಟಿತು' ಅಥವಾ—

(ಬ) "ಪ್ರತಿವಾದಿಯು ಪ್ರಾಮಾಣಿಕನು ಇದ್ದನು ಅಂತಾ ವಾದಿ ನಂಬಿಗೆ ಇತ್ತು. ಕಾರಣಾ ವಾದಿ ಅವನಿಗೆ ಹಣಾ ಕೊಟ್ಟನು" ಅಥವಾ—

(ಕ) 'ತನ್ನ ಪ್ರಾಮಾಣಿಕತನದ ಬಗ್ಗೆ ಪ್ರತಿವಾದಿಯು ವಾದಿಯ ಸಮ ಜೂತಿ ಮಾಡಿದ್ದರಿಂದ ವಾದಿಯು ಹಣಾ ಕೊಟ್ಟನು' ಅಥವಾ—

(ಡ) 'ಪ್ರತಿವಾದಿಯು ದಾರನು ಇದ್ದ ಬಗ್ಗೆ ಯಾ ಪ್ರಾಮಾಣಿಕನು ಇದ್ದ ಬಗ್ಗೆ ಪ್ರತಿವಾದಿಯ ಸ್ನೇಹಿತರು ವಾದಿಯ ಸಮಜೂತ ಮಾಡಿದ್ದರಿಂದಾ ವಾದಿಯು ಪ್ರತಿಪಾದಿಗೆ ಹಣಾ ಕೊಟ್ಟನು.' ಅಥವಾ—

(ಇ) "ದಾವೇದ ಹಣಾ ಕೊಡಲಿಕ್ಕೆ ಪ್ರತಿವಾದಿಯು ಸಮರ್ಥನಿದ್ದು ಕೊಡವಲ್ಲನು" ಅಂತಾ ವಗೈರೆ ಬರೆಯುಬಾರದು.

(೪) (ಅ) "ಪ್ರತಿವಾದಿಯ ದ್ವೇಷಿಕ ಜನರ ಚಿತಾವಣಿ ಮೇಲಿಂದ ವಾದಿ ಯು ಸದರಿ ದಾವೆಯು ಮಾಡಿರುತ್ತಾನೆ" ಅಥವಾ—

(ಬ) ಪ್ರತಿವಾದಿಗೆ ಬುಧ್ಯಾಪೂರ್ವಕವಾಗಿ ತ್ರಾಸ ಕೊಡುವ ಇರಾದೆ ಯಿಂದ ವಾದಿಯು ಸದರಿ ದಾವೆ ಮಾಡಿರುತ್ತಾನೆ" ಅಂತಾ ವಗೈರೆ ಕೈಫಿಯತಿ ನಲ್ಲಿ ಬರೆಯುವದು ತಪ್ಪು ಕಾರಣಾ ಹಾಗೆ ಬರೆಯಬಾರದು.

ಅದರಂತೆ "ಪ್ರತಿವಾದಿಯ ವಿನಂತಿ ಏನಂದರೆ:—ವಾದಿ ದಾವೆ ರದ್ದಪಡಸಿ ಪ್ರತಿವಾದಿಯ ಖರ್ಚ ಕೊಡಸಬೇಕು" ಅಂತಾ ಬೇಡುವದು ಸಹಾ ತಪ್ಪು. ಕೋರ್ಟ ಖರ್ಚ ಕೊಡಸುವದು ಯಾ ಇಲ್ಲಾ ಎಂಬದನ್ನು ಕೋರ್ಟಿನ ಅಖ ತ್ಯಾರಿಯಲ್ಲಿ ಇರುವದು ಅದರ ಬಗ್ಗೆ ಯಾ ಅಪರ ವಿರುದ್ಧ ಮಾಗಣಿ ಮಾಡು ವದು ಕಾರಣವಿಲ್ಲ. ಕೋರ್ಟಿನ ಯದುರಿಗೆ ತಂದ ಸಂಗತಿ ಮೇಲಿಂದ ವಾದಿ ದಾವೆ ರದ್ದ ಆಗುವದು ಯಾ ಇಲ್ಲಾ ಎಂಬದನ್ನು ಕೋರ್ಟಿನವರು ನಿರ್ಣಯಿಸು ವರು. ಇದು ಕಾಯದೆಯ ಪ್ರಶ್ನೆ ಇರುವದು. ಕಾರಣಾ ಮೇಲ್ಕಂಡ ಸಂಗತಿ ಕೈಫಿಯತ್ತಿನಲ್ಲಿ ಬರೆಯಬಾರದು.

ಯಾವದಾದರು ದಸ್ತೈವಜಿನೊಳಗಿನ ಮಜಕೂರು ಮಹತ್ವದ್ದಾಗಿದ್ದಲ್ಲಿ ಯಾವದಾದರು ಅಸಲ ಅರ್ಜಿಯಲ್ಲಿ ಯಾ ಕೈಫಿಯತ್ತಿನಲ್ಲಿ ಅದರ ಪರಿಣಾಮವನ್ನು ಆದಷ್ಟು ಸಂಕ್ಷಿಪ್ತವಾಗಿ ಹೇಳಿದರೆ ಸಾಕಾಗಿರುವದು. ಆ ದಸ್ತೈವಜಿನೊಳಗಿನ ಸಂಗತಿಗಳನ್ನು ಅಥವಾ ಅದರ ಪೈಕಿ ಯಾವದಾದರು ಭಾಗವನ್ನು ಪೂರ್ಣವಾಗಿ ಬರೆಯುವದು ಕಾರಣವಿಲ್ಲಾ. ಆದರೆ ಸದರಿ ದಸ್ತೈವಜಿನೊಳಗೆ ಉಪಯೋಗಿ

ಸಲ್ಪಟ್ಟ ಶಬ್ದಗಳೇ ಅಥವಾ ಅದರ ಯಾವದಾದರು ಭಾಗವೇ ಮಹತ್ವದವುಳ್ಳಾಗಿ ರುವದರಲ್ಲಿ ಆ ಶಬ್ದಗಳು ಅಥವಾ ಆ ಭಾಗವೂ ಪೂರ್ಣವಾಗಿ ಬರೆಯಬೇಕು. (ಆ. ೬. ರು. ೯).

**ಉ**—ವಾದಿಯು ಖರೀದಿ ಪತ್ರದ ಆಧಾರ ಮೇಲಿಂದ ಹಕ್ಕವನ್ನು ಪಡ ಕೊಳ್ಳುವದರ ದಶಿಂದಾ ದಾವೆಯನ್ನು ಮಾಡಿದ್ದರೆ ಆ ದಾವೆಯಲ್ಲಿ "ಅ ಎಂಬುವನು ದಾವೆಯ ಆಸ್ತಿಯು ವಾದಿಗೆ ತಾರೀಖು ೧೯-೪-೧೯೨೭ನೇ ಇಶ್ವಿ ದಿವಸಾ ಖರೀದಿ ಕೊಟ್ಟನು" ಅಂತಾ ಬರದರೆ ಸಾಕಾಗುವದು. ಆದರೆ ಆ ಖರೆದಿ ಪತ್ರದೊಳಗಿನ ವಾದಿಗೆ ಖರೀದಿ ಕೊಟ್ಟಂಥ ಶಬ್ದಗಳು ಬರೆಯುವದು ಕಾರಣವಿಲ್ಲ. ಆದರೆ "ಸದರಿ ಖರೀದಿಪತ್ರದಿಂದ ವಾದಿಗೆ ದಾವೆಯ ಆಸ್ತಿಯ ಸಂಬಂಧಿ ಹಕ್ಕ ಅಥವಾ ಮಾಲ್ಕಿಹಕ್ಕ ಪ್ರಾಪ್ತವಾಗಿರುತ್ತದೆ" ಅಂತಾ ಬರೆಯುವದು ತಪ್ಪು. ಇದ ರಲ್ಲಿ ಖರೀದಿಪತ್ರದ ಪರಿಣಾಮವನ್ನು ಕಂಡಿಲ್ಲಾ. ದಸ್ತೈವಜಿನ ಪರಿಣಾಮವನ್ನು ಕಾಣಿಸುವದು ಅಗತ್ಯವಿದೆ.

ಲುಕ್ಸಾನಿಗಾಗಿ ದಾವೆಯನ್ನು ಮಾಡುವದಾಗಿದ್ದರೆ ಆ ದಾವೆಯಲ್ಲಿ ಯಾವ ಸಂಗತಿಗಳ ಮೂಲಕವಾಗಿ ವಿಶೇಷ ಲುಕ್ಸಾನಿಯು ಆಗಿರುತ್ತದೆಯೋ ಆ ಸಂಗತಿ ಗಳನ್ನು ಬರೆಯಬೇಕು ಏನು? ಹೌದು ಬರೆಯಬೇಕು. ಲುಕ್ಸಾನಿಗಳಲ್ಲಿ ಎರಡು ಭೇದ ಉಂಟು. ಒಂದು ಸಾಮಾನ್ಯ ಲುಕ್ಸಾನಿಯು ಮತ್ತು ಎರಡನೆದ್ದು ವಿಶೇಷ ಲುಕ್ಸಾನಿಯು. ಸಾಮಾನ್ಯ ಲುಕ್ಸಾನ ಹ್ಯಾಗೆ ಆಗಿದೆ ಎಂಬುವದು ಸಾಬೀತು ಮಾಡಲಿಕ್ಕೆ ಕಾರಣವಿಲ್ಲ ಅದರ ಬಗ್ಗೆ ಕಾಯದೆಯಿಂದ ಅನುಮಾನ ಮಾಡಲಾದಿತು. ಅದರ ಬಗ್ಗೆ ಪುರಾವೆ ಕೊಡಲಿಕ್ಕೆ ಜರೂರಿ ಇಲ್ಲಾ. ಉ: ಪ್ರತಿವಾದಿಯು ಗೈರಹ ಕ್ಕಿನಿಂದ ಕಬಜಾ ಪಡಕೊಂಡರೆ, ಅಥವಾ ಬೇಅಬ್ರು ಮಾಡಿದ್ದರೆ ಅದರಿಂದ ಲುಕ್ಸಾ ನಿಯು ಆಗಿದೆ ಅಂತಾ ಕಾಯದೆಯಿಂದ ಅನುಮಾನ ಮಾಡಲಾಗುವದು ಮತ್ತು ಕೊಡಸಲಾಗುವದು. ಗೈರಹಕ್ಕಿನಿಂದ ಕಬಜಾ ಪಡಕೊಂಡಿದ್ದರಿಂದ ಅಥವಾ ಬೇಅಬ್ರು ಮಾಡಿದ್ದರಿಂದ ಲುಕ್ಸಾನು ಆಗಿದೆ ಅಂತಾ ಹೇಳುವದು ಕಾರಣ ವಿಲ್ಲ.

ವಿಶೇಷ ಲುಕಸಾನಿಯು ಆಗಿದ್ದರೆ ಅದು ಸಾಬೀತು ಮಾಡಬೇಕಾಗುವದು ಕಾರಣಾ ಅದರ ಬಗ್ಗೆ ಎಲ್ಲ ಸಂಗತಿಗಳನ್ನು ಬರೆಯಬೇಕು ಅಂದರೆ ಆಯಾ ಸಂಗ

ತಿಗಳ ಮೂಲಕಾ ವಿಶೇಷ ಲುಕಸಾನಿಯು ಆಗಿದೆ ಆ ಸಂಗತಿಗಳನ್ನು ಬರೆಯು ಬೇಕು. ಊ:—ಅ. ಎಂಬುವನು ಬ. ಎಂಬುವಳ ಕೂಡಾ ಲಗ್ನ ಮಾಡಲಿಕ್ಕೆ ಕರಾರ ಮಾಡಿದ್ದನು ಮತ್ತು ಆ ತಿಳವಳಿಕಿ ಮೇಲಿಂದ ಅ ಈತನು ಬ ಇವಳ ಕೂಡಾ ಸಂಗ ಮಾಡಹತ್ತಿದನು ಮತ್ತು ಅದರಿಂದ ಬ ಇವಳಿಗೆ ಅ ಇವನ ಗರ ಮೀಯ ವ್ಯಥಾ ಹತ್ತಿತು. ಮುಂದೆ ಅ. ಈತನು ಬ. ಇವಳ ಕೂಡಾ ಲಗ್ನಾ ಮಾಡಲಿಕ್ಕೆ ಇನಕಾರ ಮಾಡಿದ್ದನು. ಕರಾರ ಪ್ರಕಾರಾ ಲಗ್ನಾ ಮಾಡದೆ ಇದ್ದ ದರಿಂದ ಬ. ಇವನಿಗೆ ಸಾಮಾನ್ಯ ಲುಕಸಾನವಾಗಿದೆ ಮತ್ತು ಅ ಈತನು ಬ ಇವಳ ಕೂಡಾ ಸಂಗಮಾಡಿದ್ದರಿಂದ ಆಕೆಗೆ ಗರಮೀಯ ವ್ಯಥಾ ಹತ್ತಿತು. ಅದರಿಂದ ವಿಶೇಷ ಲುಕಸಾನಿಯು ಆಯಿತು. ಈ ವಿಶೇಷ ಲುಕಸಾನಿಯು ಬೇಡುವದಾಗಿದ್ದರೆ ಅದು ಹ್ಯಾಗೆ ಆಗಿದೆ ಎಂಬ ಸಂಗತಿಗಳನ್ನು ಬರೆಯಬೇಕಾಗುವದು ಮತ್ತು ಅವುಗ ಳನ್ನು ಸಾಬೀತು ಮಾಡಬೇಕಾಗುವದು.

ಅಸಲಅರ್ಜಿಯಲ್ಲಿ ಯಾ ಕೈಫಿಯತ್ತಿನಲ್ಲಿ ಮಹತ್ವದ ಸಂಗತಿಗಳನ್ನಷ್ಟೆ ಬರೆ ಯಬೇಕು ಹೊರ್ತಾಗಿ ಇತರ ಸಂಗತಿಗಳನ್ನು ಬರೆಯಬಾರದು ಎಂಬ ನಿಯಮಿಗೆ ಕೆಳಗೆ ಬರೆದ ಅಪವಾದವುಂಟು.

(೧) ದಾವೆಯನ್ನು ನಡೆಯಿಸುವ ಪಕ್ಷಕಾರನು ಯಾವದಾದರು ಮಿಥ್ಯಾ ಭಾಷಣ, ಕಪಟ, ವಿಶ್ವಾಸಘಾತ, ಬುದ್ಧಿಪೂರ್ವಕವಾಗಿ ತಪ್ಪೋಣ ಅಥವಾ ಅಯೋಗ್ಯ ಪ್ರೇರಣೆ ಇವುಗಳ ಮೇಲೆ ಆದರಿಸುತ್ತಿರುವ ಎಲ್ಲಾ ಸಂಗತಿಗಳಲ್ಲಿ ಪೂರ್ಣ ತಪಶೀಲುಗಳನ್ನು ಹೇಳಿರತಕ್ಕದ್ದು. (ಆ ೬. ರು ೪)

ಯಾವದಾದರೊಂದು ದಾವೆಯಲ್ಲಿ ಪ್ರತಿವಾದಿಯು ಕಪಟದಿಂದ ಅಥವಾ ಮಿಥ್ಯಾಭಾಷಣ ಮಾಡಿ ಅಥವಾ ಸುಳ್ಳು ಸಮಜೂತು ಕೊಟ್ಟು ಯಾವದೆ ಕೃತ್ಯ ವನ್ನು ಮಾಡಿರುತ್ತಾನೆಂದು ವಾದಿಯ ಅಂಬೋಣವಿದ್ದಲ್ಲಿ ವಾದಿಯು ತನ್ನ ಅಸಲ ಅರ್ಜಿ ಆ ಕಪಟದ ಅಥವಾ ಆ ಮಿಥ್ಯಾ ಭಾಷಣದ ಅಥವಾ ಆ ಸುಳ್ಳ ಸಮಜೂ ತಿಯ ಎಲ್ಲಾ ತಪಶೀಲುಗಳನ್ನು ಬರೆಯಬೇಕು. ಬರೇ "ಪ್ರತಿವಾದಿಯು ಕಪಟ ದಿಂದ ಅಥವಾ ಮಿಥ್ಯಾ ಭಾಷಣ ಮಾಡಿ ವಾದಿ ಕಡಿಂದ ಖರೀದಿ ಪತ್ರಾ ಬರಿಸಿ ಕೊಂಡನು" ಅಂತಾ ಬರವರೆ ಸಾಕಾಗುವದಿಲ್ಲ. ಆವರೆ ಕಪಟ ಹ್ಯಾಗೆ ಮಾಡಿ ದನು ಅಥವಾ ಮಿಥ್ಯಾಭಾಷಣ ಏನು ಮಾಡಿದನು ಎಂಬ ಬಗ್ಗೆ ಎಲ್ಲಾ ತಪಶೀಲು

ಗಳನ್ನು ಹೇಳಬೇಕು. ಇದರಂತೆ ವಿಶ್ವಾಸಘಾತದ ಬಗ್ಗೆ, ಅಥವಾ ಪ್ರೇರಣೆಯ ವಗ್ಯೆರೇದ ಬಗ್ಗೆ ಎಲ್ಲಾ ತಪಶೀಲುಗಳನ್ನು ಕೊಡಬೇಕು. ಆದರೆ ಅವುಗಳನ್ನು ಯಾ ಸಂಗತಿಗಳಿಂದ ಸಾಬೀತು ಮಾಡತಕ್ಕದ್ದು ಅವುಗಳನ್ನು ಹೇಳುವದು ಕಾರಣವಿಲ್ಲ. ಅಂದರೆ ಪುರಾವೇದ ತಪಶೀಲುಗಳನ್ನು ಕೊಡಬಾರದು.

ಯಾವನಾದರು ಪಕ್ಷಕಾರನು ಬೇಕಾಗುವಷ್ಟು ತಪಶೀಲು ಕೊಡದೇಯಿದ್ದರೆ ಅವನಿಗೆ ಹೆಚ್ಚಿನ ತಪಶೀಲು ಕೊಡಲಿಕ್ಕೆ ಹಚ್ಚುವದರದಶಿಂದಾ ಕೋರ್ಟಿಗೆ ಅರ್ಜಿ ಮಾಡಬೇಕು ಆ ಮೇಲೆ ಕೋರ್ಟಿನವರು ಯೋಗ್ಯ ತಪಶೀಲು ಕೊಡಲಿಕ್ಕೆ ಹೇಳುವರು. ಹಕ್ಕಿನ ಅಥವಾ ಉತ್ತರ ಪಕ್ಷದ ಸ್ವರೂಪದ ಹೆಚ್ಚಿನ ಮತ್ತು ಹೆಚ್ಚು ಒಳ್ಳೆಯ ಕೈಫಿಯತ್ತನ್ನು ಅಥವಾ ಅಸಲಅರ್ಜಿಯಲ್ಲಿ ಯಾ ಕೈಫಿಯತ್ತಿನಲ್ಲಿ ಹೇಳಿದ ಯಾವದಾದರು ಸಂಗತಿಯ ಹೆಚ್ಚಿನ ಮತ್ತು ಹೆಚ್ಚು ಒಳ್ಳೆ ತಪಶೀಲನ್ನು ಎಲ್ಲಾ ಸಂಗತಿಗಳಲ್ಲಿಯು ಕೊಡುವಂತೆ ಹುಕುಮ ಮಾಡಬಹುದು.

(೨) ವಾದಿಸಬೇಕೆಂದು ಉದ್ದೇಶಿಸಿರುವ ಯಾವನಾದರು ಮುಂದಾಗಿ ನೆರವೇರಿಸಲ್ಪಡತಕ್ಕ ಶರತಿನ ನೆರವೇರಸೋಣ ಅಥವಾ ಸಂಭವಿಸೋಣವೂ ಇದ್ದಲ್ಲಿ ಆ ಶರತನ್ನು ವಾದಿಯು ಅಥವಾ ಪ್ರತಿವಾದಿಯು, ಹ್ಯಾಗೆ ಇರುವದೋ ಹಾಗೆ, ತನ್ನ ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಸ್ಪಷ್ಟವಾಗಿ ನಿರ್ದಿಷ್ಟಗೊಳಿಸಿರತಕ್ಕದ್ದು; ಮತ್ತು ಇದಕ್ಕೆ ಒಳಪಟ್ಟು ವಾದಿಯು ಅಥವಾ ಪ್ರತಿವಾದಿಯು ದಾವೆಗೆ ಅಗತ್ಯವಿರುವ ಮುಂದಾಗಿ ನಡೆಯಿಸಲ್ಪಡಬೇಕಾದ ಎಲ್ಲಾ ಕೆಲಸಗಳು ಮಾಡಲ್ಪಟ್ಟಿವೆ ಅಥವಾ ಸಂಭವಿಸಬೇಕಾದ ಸಂಗತಿಗಳು ಸಂಬವಿಸಿರುತ್ತದೆಂಬದನ್ನು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಹೇಳಿರತಕ್ಕದ್ದು.

ಉ:—ಅ. ಎಂಬುವನು ಬ. ಎಂಬುವನ ಬಗ್ಗೆ ೨೫೦೦೦ ರುಪಾಯಿಗಳಿಗೆ ಒಂದು ಸಿನೇಮಾ ಥಿಯೇಟರವನ್ನು ಕಟ್ಟಿಸಿಕೊಡಲಿಕ್ಕೆ ಕರಾರ ಮಾಡಿದನು. ಸದರಿ ಥಿಯೇಟರವನ್ನು ಚಲೊ ಇದ್ದ ಬಗ್ಗೆ ಸರಕಾರಿ ಇಂಜಿನೀಯರನ ಕಡಿಂದ ಅ. ಎಂಬವನು ಸರಟಿಫಿಕೇಟ ಪಡಕೊಂಡ ನಂತರಾ ಮಾತ್ರ ಮೇಲ್ಕಂಡ ರೂಪಾಯಿಗಳನ್ನು ತಗೋಬೇಕು ಅಂತಾ ಆ ಉಭಯತರ ನಡುವೆ ಕರಾರ ಆಗಿತ್ತು. ಅ ಈತನು ಮೇಲೆ ಹೇಳಿದಂತೆ ಸರಟಿಫಿಕೇಟ ಪಡಕೊಂಡ ವಿನಾ ಅವನಿಗೆ ಮೇಲ್ಕಂಡ ರಕಮು ವಸೂಲಮಾಡಲಿಕ್ಕೆ ಬರುವಂತೆ ಇಲ್ಲಾ. ದಾವೆಯು ಮಾಡಲಿಕ್ಕೆ ಮೇಲೆ

ಹೇಳಿದಂತೆ ಸರಟಿಫಿಕೇಟ ಪಡಕೊಳ್ಳುವದು ಮುಂದಾಗಿ ನೆರವೇರಿಸಲ್ಪಡಬೇಕಾದ ಶರತು ಇರುತ್ತದೆ. ಅ. ಈತನು ತನ್ನ ಅಸಲಅರ್ಜಿಯಲ್ಲಿ ಸದರಿ ಸರಟಿಫಿಕೇಟ ಪಡಕೊಂಡಾನೆ. ಅಂತಾ ಹೇಳುವ ಕಾರಣವಿಲ್ಲ. ಆದರೆ ಬ. ಈತನ ಅ. ಈತನು ಮೇಲ್ಕಂಡ ಶರತಿನ ಪ್ರಕಾರಾ ಸರಟಿಫಿಕೇಟ ಪಡಕೊಂಡಿಲ್ಲಾ ಎಂಬ ತಕರಾರು ಇದ್ದರೆ ಅದು ಅವನು ಅಂದರೆ ಬ ಈತನು ತನ್ನ ಕೈಫಿಯತ್ತಿನಲ್ಲಿ ಸ್ಪಷ್ಟವಾಗಿ ನಿರ್ದಿಷ್ಟಗೊಳಿಸಿರತಕ್ಕದ್ದು.

(೩) ಇಬ್ಬರು ಪಕ್ಷಕಾರರೊಳಗೆ ಯಾವ ಪಕ್ಷಕಾರನಾದರು; ಕಾಯದೆಯು ಅವನಿಗೆ ಅನುಕೂಲವಾಗಿ ಅನುಮಾನಿಸತಕ್ಕ ಅಥವಾ ಅವನು ಸಾಬೀತುಮಾಡುವ ಭಾರವೂ ಇನ್ನೊಂದು ಪಕ್ಷದವರ ಮೇಲಿರತಕ್ಕ ವಸ್ತುಸ್ಥಿತಿಯ ಯಾವದೇ ಸಂಗತಿಯನ್ನು, ಅದನ್ನು ಮೊದಲು ಸ್ಪಷ್ಟವಾಗಿ ನಾಕಾರು ಸಿದ್ಧ ಸಂಗತಿಯಲ್ಲಿ (ಉದಾಹರಣಾರ್ಥವಾಗಿ ವಾದಿಯು ಬಿಲ್ಲಿನ ಮೇಲೆ ಮಾತ್ರ ಹಕ್ಕಿನ ಮುಖ್ಯ ಆಧಾರವಾಗಿ ದಾವೆಯನ್ನು ಮಾಡಿದ್ದು, ಪ್ರತಿಫಲದ ಬಗ್ಗೆ ಮಾಡದಿದ್ದಲ್ಲಿ ಬಿಲ್ ಆಫ ಎಕ್ಸಬೇಂಡಿನ ಪ್ರತಿಫಲದ ಬಗ್ಗೆ) ಹೊರ್ತಾಗಿ, ಯಾವದೇ ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಹೇಳುವ ಅಗತ್ಯವಿಲ್ಲ. (ಆ. ೬ ರೂಲ ೧೩)

**ಕಾಯದೆಯ ಸಂಬಂಧವಾದ ಅನುಮಾನಗಳು**:—ಪ್ರಾಮಿಸರಿನೋಟಿನ ಆಧಾರ ಮೇಲೆ ಮಾತ್ರ ದಾವೆಯನ್ನು ಮಾಡಬೇಕಾಗಿದ್ದಲ್ಲಿ ಆ ದಾವೆಯಲ್ಲಿ ಇಂತಿಷ್ಟು ರಕಮು ಕೊಟ್ಟು ಪ್ರಾಮಿಸರಿನೋಟು ಬರಿಸಿಕೊಂಡಿತ್ತು ಅಂತಾ ಬರೆಯುವದು ಕಾರಣವಿಲ್ಲ. ಕಾಯದೆಯಿಂದ ಪ್ರಾಮಿಸರಿನೋಟಿನ ಬಗ್ಗೆ ರಕಮು ಕೊಟ್ಟಿರುತ್ತದೆ. ಅಂತಾ ಅನುಮಾನಮಾಡಲಾಗುವದು ಕಾರಣಾ ಪ್ರಾಮಿಸರಿನೋಟಿನ ಬಾಬತ್ತು ರಕಂ ಕೊಟ್ಟಿರುತ್ತದೆ ಅಂತಾ ಬರೆಯುವ ಅಗತ್ಯವಿಲ್ಲಾ.

(೪) ದಾವೆಯ ಕಾರಣವನ್ನು ತಿಳಿಯಲಿಕ್ಕೆ ಪ್ರಾಸ್ತಾವಿಕ ಹಕಿಕತ್ತು ಬರಿಯಬೇಕು. ಪಕ್ಷಕಾರರ ವಂಶಾವಳಿಯು, ಅವರು ಮಾಡುವ ವ್ಯವಹಾರವನ್ನು ವಗೈರೆ ವಿಶದವಾಗಿ ಬರದರೆ ದಾವೆಯ ಕಾರಣದ ಬೋಧನೆ ಚನ್ನಾಗಿ ಆಗುವದು. ನಿಜವಾಗಿ ನೋಡಿದರೆ ಸದರಿ ಸಂಗತಿಗಳು ಮಹತ್ವದವೂ ಇಲ್ಲಾ. ದಾವೆಯ ಕಾರಣಾ ಸಾಬೀತು ಮಾಡಲಿಕ್ಕೆ ಈ ಸಂಗತಿಗಳ ಏನೂ ಉಪಯೋಗವಿಲ್ಲ. ಆದರೆ ದಾವೆಯ ಕಾರಣದ ಚನ್ನಾಗಿ ಬೋಧನೆ ಆಗುವ ಬಗ್ಗೆ ಸದರಿ ಸಂಗತಿಗಳನ್ನು ಬರೆಯಬೇಕು.

ಪ್ರತಿಯೊಂದು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಮಹತ್ವದ ಸಂಗತಿಗಳನ್ನಷ್ಟೆ ಬರೆಯಬೇಕು. ಮಹತ್ವದ ಸಂಗತಿಯು ಯಾವದು ಎಂಬುವದು ಹ್ಯಾಗೆ ಠರಾಯಿಸಬೇಕು ಎಂಬ ಬಗ್ಗೆ ಸಹಾ ಹಿಂದಕ್ಕೆ ಹೇಳಿರುತ್ತೇವೆ. ಆದರೆ ಯಾವದಾದರೊಂದು ಸಂಗತಿಯು ಮಹತ್ವದ್ದು ಇದೆ ಯಾ ಇಲ್ಲಾ ಎಂಬ ಬಗ್ಗೆ ಸಂಶಯುಪಿದ್ದಲ್ಲಿ ಆ ಸಂಗತಿಯು ಬರಿಯದೆ ಇರೋದರಗಿಂತ ಬರೆಯುವದು ಚಲೋ ಮಾರ್ಗವು. ಬರಿಯದೆ ಇದ್ದ ಸಂಗತಿಯು ಮುಂದೆ ಮಹತ್ವವುಳ್ಳದ್ದು ಅಂತಾ ಕಂಡರೆ ಕೋರ್ಟಿನ ಪರವಾನಗಿ ಹೊರತು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಆ ಸಂಗತಿಯು ಶೇರಸಲಿಕ್ಕೆ ಬರಲಾರದು; ಮತ್ತು ಬರಿಯದೆ ಇದ್ದ ಸಂಗತಿ ಬಗ್ಗೆ ಪುರಾವೆ ಕೊಡಲಿಕ್ಕೆ ಬರಲಾರದು. ಬರಿಯದೆ ಇದ್ದ ಸಂಗತಿಯು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಶೇರಸಬೇಕಾಗಿದ್ದಲ್ಲಿ ಆ ಬಗ್ಗೆ ಕೋರ್ಟಿನವರ ಪರವಾನಗಿ ಪಡಕೊಂಡು ಅಸಲಅರ್ಜಿ ಅಥವಾ ಕೈಫಿಯತ್ತು ದುರಸ್ತ ಮಾಡಬೇಕು. ಹೀಗೆ ಅಸಲಅರ್ಜಿ ಅಥವಾ ಕೈಫಿಯತ್ತು ದುರುಸ್ತ ಮಾಡಲಿಕ್ಕೆ ಪರವಾನಗಿ ಕೊಡುವದು ಕೋರ್ಟಿನ ಅಖತ್ಯಾರಿಯಲ್ಲಿ ಇದೆ ಕಾರಣಾ ಕೋರ್ಟಿನವರು ಪರವಾನಗಿ ಕೊಡುವರು. ಯಾ ಇಲ್ಲಾ ಎಂಬುವದು ನಿಶ್ಚಿತ ಮಾತು ಅಲ್ಲಾ. ಇಷ್ಟೆ ಅಲ್ಲಾ ಯಾವದೊಂದು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಸುಧಾರಣಿ ರೂಪದಿಂದ ಹೊರತಾಗಿ, ಅದನ್ನು ಪ್ರತಿಪಾದಿಸತಕ್ಕ ಪಕ್ಷಕಾರನ ಹಿಂದಿನ ಅಸಲಅರ್ಜಿಗೆ ಅಥವಾ ಕೈಫಿಯತ್ತಿಗೆ ಅಸಂಬದ್ಧವಾಗತಕ್ಕ ಯಾವದಾದರು ಹಕ್ಕಿನ ಹೊಸ ಮುದ್ದೆಯನ್ನು ತೆಗೆಯಲಾಗದು. ಅಥವಾ ವಸ್ತುಸ್ಥಿತಿ ಸಂಬಂಧವಾದ ಅಂಬೋಣವಿರಲಾಗದು. (ಆ ೬ ರೂ ೭). ಕಾರಣಾ ಯಾವದಾದರೊಂದು ಸಂಗತಿಯು ಮಹತ್ವದ್ದು ಇದೆ ಯಾ ಇಲ್ಲಾ ಎಂಬ ಬಗ್ಗೆ ಸಂಶಯವಿದ್ದ ಪಕ್ಷಕ್ಕೆ ಅದನ್ನು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಬರೆಯುವದು ಚಲೊ.

ದಾವೆಯು ಸದ್ಯಸ್ಥಿತಿಗೆ ಅವಶ್ಯವಾದ ಮಹತ್ವದ ಸಂಗತಿಗಳನ್ನಷ್ಟೆ ಕೊಡಬೇಕು. ಪ್ರತಿವಾದಿಯು ಏನು ತಕರಾರ ಮಾಡುವನೊ ಅದು ಮನಸಿನಲ್ಲಿ ಕಲ್ಪಿಸಿ ಅದರ ಜಬಾಬಕ್ಕಾಗಿ ಯಾವದೇ ಸಂಗತಿಗಳನ್ನು ಬರೆಯಬಾರದು. ದಸ್ತೈವಿಜಿನ ಮೇಲಿನ ದಾವೆಯಲ್ಲಿ ದಸ್ತೈವಿಜವನ್ನು ಬರೆಕೊಡುವ ಮುಂದೆ ಪ್ರತಿವಾದಿಯ ಪೂರ್ಣವಯಸ್ಕನು ಇದ್ದನು ಅಥವಾ ಅಪ್ರಾಯಸ್ಥನು ಇದ್ದಿದ್ದಿಲ್ಲಾ ಅಥವಾ

ಹುಚ್ಚನು ಅಯುದುರ್ಬಲಮನಸಿನವನು ಇದ್ದಿದ್ದಿಲ್ಲ ಅಂತಾ ವಗೈರೆ ಬರೆಯು ವದು ತಪ್ಪು ಇರುತ್ತದೆ. ಪ್ರತಿವಾದಿಯು ಅಪ್ರಾಪ್ತವಯಸ್ಥನು ವಗೈರೆ ಇದ್ದರೆ ಆ ಪ್ರಕಾರ ಅವನು ತನ್ನ ಕೈಫಿಯತ್ತಿನಲ್ಲಿ ತಕರಾರು ಮಾಡುವನು ಮತ್ತು ಸದರಿ ಸಂಗತಿ ಸಾಬೀತು ಮಾಡುವ ಜವಾಬದಾರಿ ಅವನ ಮೇಲೆ ಇರುತ್ತದೆ. ಕಾರಣ ಪ್ರತಿವಾದಿಯು ಈ ಪ್ರಕಾರ ತಕರಾರ ಮಾಡಬಹುದು ಅಂತಾ ಮನಸ್ಸಿನಲ್ಲಿ ಕಲ್ಪಿಸಿ ಅದರ ಜವಾಬಕ್ಕಾಗಿ ಸಂಗತಿಗಳನ್ನು ವಾದಿಯು ತನ್ನ ಅಸಲಅರ್ಜಿ ಯಲ್ಲಿ ಬರೆಯಬಾರದು. ದಾವೆಯು ದಾಖಲಮಾಡುವಾಗ್ಗೆ ಮೇಲಿನಂತೆ ಪ್ರತಿ ವಾದಿಯು ಆ ದಾವೆಯಲ್ಲಿ ತಕರಾರು ಮಾಡುವದು ಶಕ್ಯವಿಲ್ಲ. ಕಾರಣ ದಾವೆಯ ಸದ್ಯಸ್ಥಿತಿಗೆ ಆ ತಕರಾರಿಗೆ ಜವಾಬಕ್ಕಾಗಿ ಸಂಗತಿಗಳನ್ನು ಬರೆಯುವದು ಕಾರ ಣವಿಲ್ಲ.

ಯಾವದಾದರು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಕರಾರು ಇರುವದಾಗಿ ಅಂಬೋಣವಿದ್ದಲ್ಲಿ ಪ್ರತಿಪಕ್ಷಕಾರನಿಂದ ಅದನ್ನು ಬರೇ ನಾಕರಿಸಲ್ಪ ಟ್ಟಲ್ಲಿ, ಅಂಬೋಣವಿರುವ ಸ್ಪಷ್ಟವಾದ ಕರಾರಿನ ವಸ್ತುಸ್ಥಿತಿಯನ್ನು ಅಥವಾ ಅದನ್ನು ಯಾವ ವಸ್ತುಸ್ಥಿತಿಯ ಸಂಗತಿಗಳ ಮೇಲಿಂದ ಗ್ರಹಿತಹಿಡಿಯಬಹುದೋ ಅವನ್ನು ಮಾತ್ರ ನಾಕರಿಸಿದ್ದಾಗಿ ಆ ನಾಕರಿಸೋಣದ ಅರ್ಥ ಮಾಡತಕ್ಕದ್ದು. ಮತ್ತು ಅಂಥ ಕರಾರಿನ ಕಾಯಿದೇಶೀರುತನದ ಅಥವಾ ಕಾಯಿದೆಯ ದೃಷ್ಟಿಯಿಂದ ಪೂರ್ಣವಾಗಿರೋಣದ ಕುರಿತು ನಾಕರಿಸೋಣವೆಂದು ಅರ್ಥ ಮಾಡಲಾಗದು. (ಆ. ೬ ರೂಲ ೮).

**ಉ :—ಅ** ಎಂಬುವವನಕೂಡ **ಬ** ಎಂಬವವನು ಮಾಡಿದ ಯಾವದೊಂದು ಕರಾರಿನ ಆಧಾರದ ಮೇಲೆ **ಅ** ಈತನು **ಬ** ಈತನ ವಿರುದ್ಧ ದಾವೆಯನ್ನು ಮಾಡು ತ್ತಾನೆ. ಆ ದಾವೆಯಲ್ಲಿ **ಬ** ಈತನು ತನ್ನ ಕೈಫಿಯತ್ತಿನಲ್ಲಿ ಬರೇ ಕರಾರು ನಾಕ ರಿಸಿದರೆ ಸದರಿ ಕರಾರು ಉಭಯತರ ನಡುವೆ ಆಗಿಲ್ಲ ಅಂತಾ ಎಣಿಸಲಾಗು ವದು ಹೊರತು ಸದರಿ ಕರಾರು ರದ್ದ ಮಾಡಲು ಯಾ ಬೇಕಾಯಿದೇಶೀರ ಇದೆ ಅಂತಾ ಎಣಿಸಲಾಗದು. **ಅ** ಈತನು ಕರಾರು ಸಾಬೀತು ಮಾಡಿದಲ್ಲಿ ಅವನು ನ್ಯಾಯಾಶ್ರಯವನ್ನು ಪಡಕೊಳ್ಳುವನು ಮತ್ತು ದಾವೆಯ ಚವಕಶಿ ಕಾಲಕ್ಕೆ **ಬ** ಈತನಿಗೆ ಕರಾರು ರದ್ದಬಾತಲ್ಲ ಇದೆ ಅಥವಾ ಬೇಕಾಯಿದೇಶೀರ ಇದೆ ಎಂಬ

ಬಗ್ಗೆ ತಕರಾರು ಮಾಡಲಿಕ್ಕೆ ಮತ್ತು ಆ ಬಗ್ಗೆ ಪುರಾವೆ ಕೊಡಲಿಕ್ಕೆ ಬರಲಾರದು. ಯಾವದಾದರೊಂದು ಕರಾರು ರದ್ದ ಬಾತಲ್ಲ ಅದೆ ಯಾ ಬೇಕಾಯಿ ಸೀರ ಅದೆ ಎಂಬ ಬಗ್ಗೆ ತಕರಾರು ಇದ್ದರೆ ಹಾಗೆ ಸ್ಪಷ್ಟವಾಗಿ ತಕರಾರು ಮಾಡಬೇಕು. ಆದರೆ ಬರೆ ಕರಾರು ನಾಕರಿಸಬಾರದು.

ಎಲ್ಲಿ ಯಾವನಾದರು ಮನುಷ್ಯನ ದ್ವೇಷ, ಮೋಸಮಾಡಬೇಕೆಂಬ ಉದ್ದೇಶ, ತಿಳುವಳಿಕೆ ಅಥವಾ ಮನಸ್ಸಿನ ಇತರ ಭಾವವನ್ನು ಕುರಿತು ಅಂಬೋಣ ವಿರುವದು ಮಹತ್ವದ್ದಾಗಿದೆಯೋ ಅಲ್ಲಿ ಅದನ್ನು ಯಾವ ವಿದ್ಯಮಾನಗಳ ಮೇಲಿಂದ ಅನುಮಾನಗೊಳಿಸತಕದ್ದೋ ಆ ವಿದ್ಯಮಾನಗಳನ್ನು ಕೊಡದೆ ವಸ್ತು ಸ್ಥಿತಿಯಾಗಿ ಅದನ್ನು ಹೇಳಿದರೆ ಸಾಕಾಗುವದು. (ಆ. ೬ ರೂಲ ೧೦)

ಪಕ್ಷಕಾರನ ಯಾವದಾದರೊಂದು ದಾವೆಯಲ್ಲಿ ದ್ವೇಷ, ಮೋಸ ಮಾಡಬೇಕೆಂಬ ಉದ್ದೇಶ, ತಿಳುವಳಿಕೆ ವಗೈರೆ ಸಂಗತಿಗಳನ್ನು ಮಹತ್ವದಾಗಿದ್ದಲ್ಲಿ ಆ ಸಂಗತಿಗಳನ್ನು ಬರದರೆ ಸಾಕಾಗುವದು. ಆದರೆ ಸದರಿ ಸಂಗತಿಗಳನ್ನು ಯಾವ ಸಂಗತಿಗಳಿಂದ ಅನುಮಾನಿಸತಕ್ಕದ್ದು ಆ ಅನುಮಾನಿಸತಕ್ಕಂಥ ಸಂಗತಿಗಳನ್ನು ಬರೆಯಬಾರದು.

ದ್ವೇಷದಿಂದ ಫಿರ್ಯಾದಿಯನ್ನು ನಡೆಯಿಸದ ಬಾಬತ್ತು ಪ್ರತಿಫಲವನ್ನು ಬೇಡುವ ಬಗ್ಗೆ ಮಾಡಿದ ದಾವೆಯಲ್ಲಿ ಪ್ರತಿವಾದಿಯು ದ್ವೇಷ ಬುದ್ಧಿಯಿಂದ ಸದರ ಫಿರ್ಯಾದಿಯನ್ನು ಮಾಡಿದನು ಅಂತಾ ಹೇಳಿದರೆ ಸಾಕಾಗುವದು. ಪ್ರತಿವಾದಿಯು ಕಳೆದ ಸಾಲಿನಲ್ಲಿ ಮೂರು ನಾಲ್ಕು ಸಾರೆ ವಾದಿಯ ಕೂಡಾ ತಂಟೆ ಮಾಡಿದನು. ಮತ್ತು ಎರಡುಸಾರೆ ಪ್ರತಿವಾದಿಯು ವಾದಿಯ ವಿರುದ್ಧ ಸಾಕ್ಷಿ ಹೇಳಿದನು ಮತ್ತು ಪ್ರತಿವಾದಿಯು ವಾದಿಗೆ ಬಾಳುವೆ ಮಾಡಗೊಡುವದಿಲ್ಲ ಅಂತಾ ಧಮಕಿ ತೋರಿಸಿದನು ವಗೈರೆ ಸಂಗತಿಗಳನ್ನು ಅಸಲಅರ್ಜಿಯಲ್ಲಿ ಬರೆಯಬಾರದು. ಈ ಸಂಗತಿಗಳಮೇಲಿಂದ ವಾದಿ ಪ್ರತಿವಾದೇರ ನಡುವೆ ದ್ವೇಷವಿದೆ ಎಂಬ ಅನುಮಾನ ಮಾಡಲಿಕ್ಕೆ ಬರುವದು ನಿಜವೆ. ಆದರೆ ಅನುಮಾನಿಸದಂಥ ಇವೆ ಮುಂತಾದ ಸಂಗತಿಗಳು ಅಸಲಅರ್ಜಿಯಲ್ಲಿ ಕಾಣಿಸುವದು ಯೋಗ್ಯವಲ್ಲಾ. ಪ್ರತಿವಾದಿಯು ದ್ವೇಷದಿಂದ ಸದರಿ ಕೃತ್ಯವನ್ನು ಮಾಡಿರುತ್ತಾನೆ ಅಂತಾ ಬರದರೆ ಸಾಕಾಗುವದು.

ಪ್ರತಿವಾದಿಯು ನಾಯಿ ವಾದಿಗೆ ಕಡದದ್ದರಿಂದ ಆ ಬಗ್ಗೆ ಪ್ರತಿಫಲವನ್ನು ಬೇಡುವ ಬಗ್ಗೆ ಮಾಡಿದ ದಾವೆಯಲ್ಲಿ ವಾದಿಯು ತನ್ನ ಅಸಲಅರ್ಜಿಯಲ್ಲಿ "ಸದರಿ

ನಾಯಿಯು ಕಿಡಿಗೇಡಿ ಮತ್ತು ಕೆಟ್ಟ ಸ್ವಭಾವುಳ್ಳದ್ದು ಇತ್ತು ಎಂಬ ತಿಳುವಳಿಕೆ ಪ್ರತಿವಾದಿಗೆ ಇತ್ತು" ಅಂತಾ ಬರೆದರೆ ಸಾಕು. ಪ್ರತಿವಾದಿಯ ಸಮಕ್ಷಮಾ ಮೂರು ನಾಲ್ಕು ಸಾರೆ ಮಂದಿಗೆ ಕಡಿಯಿತು. ಮತ್ತು ಸದರಿ ನಾಯಿಯು ಕೆಟ್ಟ ಇದ್ದ ಬಗ್ಗೆ ವಾದಿಯು ಮತ್ತು ಎರಡನೆ ಜನರು ಪ್ರತಿವಾದಿಗೆ ಎಷ್ಟೋ ಸಾರೆ ಹೇಳಿದರು ಎಂಬ ಪ್ರತಿವಾದಿಗೆ ತಿಳಿವಳಿಕೆ ಹ್ಯಾಗೆ ಆಯಿತು ಎಂಬ ಬಗ್ಗೆ ಹಕೀಕತ್ತು ಅಸಲ ಅರ್ಜಿಯಲ್ಲಿ ಹೇಳುವದು ಕಾರಣವಿಲ್ಲ. ಪ್ರತಿವಾದಿಗೆ ತಿಳಿವಳಿಕೆ ಇತ್ತು ಅಂತಾ ಹೇಳಿದರೆ ಸಾಕಾಗುವದು. ಅವನಿಗೆ ತಿಳುವಳಿಕೆ ಹ್ಯಾಗೆ ಪ್ರಾಪ್ತವಾಯಿತು ಎಂಬುವದು ಹೇಳುವದು ಅಗತ್ಯವಿಲ್ಲ.

(೩) **ವಸ್ತುಸ್ಥಿತಿಯು ಆದರೆ ಪುರಾವೆ ಅಲ್ಲಾ** :—ಯಾವ ಸಂಗತಿಗಳ ಮೇಲೆ ಪಕ್ಷಕಾರನು ತನ್ನ ಹಕ್ಕಿನ ಅಥವಾ ಉತ್ತರಪಕ್ಷದ ಬಗ್ಗೆ ಆಧರಿಸುತ್ತಾನೋ ಅವುಗಳನ್ನಷ್ಟೆ ಬರೆಯಬೇಕು; ಹೊರ್ತಾಗಿ ಅವುಗಳನ್ನು ಯಾವ ಸಂಗತಿಗಳ ಮೇಲಿಂದ ಸಾಬೀತು ಮಾಡುವನೋ ಆ ಪುರಾವೇದ ಸಂಗತಿಗಳನ್ನು ಬರೆಯಬಾರದು.

**ಉ** :—**ಅ** ಎಂಬುವವನು **ಬ** ಎಂಬುವವನಿಗೆ ೧೦೦ ರೂಪಾಯಿಗಳನ್ನು ಒಂದು ತಿಂಗಳಲ್ಲಿ ತಿರುಗಿ ಕೊಡುವ ಕರಾರಿನಿಂದ ಕೊಟ್ಟನು. ಸದರಿ ಕರಾರು ಮತ್ತು ವ್ಯವಹಾರವೂ **ಕ** ಮತ್ತು **ಡ** ಎಂಬುವವರ ಸಮಕ್ಷಮಾ ಘಡಾಯಿಸಿತು. ಕರಾರ ಪ್ರಕಾರ **ಬ** ಈತನು ಏನು ರೂಪಾಯಿ ಕೊಟ್ಟಿಲ್ಲಾ. ಇದರಲ್ಲಿ ವಾದಿಯು ತನ್ನ ಹಕ್ಕಿನ ಬಗ್ಗೆ ಆಧರಿಸುವಂಥ ಸಂಗತಿಗಳು ಯಾವವು? ಮತ್ತು ಆ ಹಕ್ಕನ್ನು ಸಾಬೀತು ಮಾಡುವಂಥ ಸಂಗತಿಗಳು ಯಾವವು ಎಂಬ ಪ್ರಶ್ನಗಳ ಜವಾಬನ್ನು ಕೆಳಗಿನಂತೆ ಇವೆ. ಜವಾಬನ್ನು ಕೊಡುವ ಮೊದಲು ಸದರಿ ಸಂಗತಿಗಳ ಪೃಥಃಕ್ಕರಣ ಕೆಳಗಿನಂತೆ ಮಾಡೋಣ.

೧. **ಅ** ಈತನು **ಬ** ಈತನಿಗೆ ೧೦೦ ರೂಪಾಯಿ ಕೊಟ್ಟನು;

೨. **ಬ** ಈತನು ಸದರಿ ರೂಪಾಯಿಗಳನ್ನು ಒಂದು ತಿಂಗಳಲ್ಲಿ ತಿರುಗಿ ಕೊಡಲಿಕ್ಕೆ ಕರಾರು ಮಾಡಿದನು;

೩. **ಬ** ಈತನು ಕರಾರಿನ ಪ್ರಕಾರ ಸದರಿ ರೂಪಾಯಿಗಳನ್ನು **ಅ** ಈತನಿಗೆ ಕೊಟ್ಟಿಲ್ಲಾ;

೪. ಸದರಿ ಕರಾರು ಮತ್ತು ವ್ಯವಹಾರವೂ **ಕ** ಮತ್ತು **ಡ** ಇವರ ಸಮಕ್ಷಮಾ ಘಡಾಯಿಸಿತು.

ಇದರಲ್ಲಿ ೧–೨ ಮತ್ತು ೩ನೇ ಕಲಮಿನಲ್ಲಿ ಕಾಣಸಿದ ಸಂಗತಿಗಳು ದಾವೆಯ ಕಾರಣ ಆಗಿರುವವು. ಕಾರಣ ಅವುಗಳು ಮಹತ್ವದ ಸಂಗತಿಗಳಿರುವವು. ವಾದಿಯು ತನ್ನ ಹಕ್ಕಿನ ಬಗ್ಗೆ ಆಧರಿಸುವಂಥ ಈ ಸಂಗತಿಗಳಿರುವವು. ಅಂದರೆ ಈ ಸಂಗತಿಗಳ ಮೂಲಕಾ ವಾದಿಗೆ ಪ್ರತಿವಾದಿಯ ವಿರುದ್ಧ ದಾವೆಯು ಮಾಡುವ ಹಕ್ಕು ಪ್ರಾಪ್ತನಾಯಿತು. ೪ನೇ ಕಲಮಿನಲ್ಲಿ ಕಂಡ ಸಂಗತಿಯು ಮೇಲೆ ಮೂರು ಕಲಮಿನಲ್ಲಿ ಹೇಳಿದ ಸಂಗತಿಗಳಿಂದ ವಾದಿಗೆ ಪ್ರಾಪ್ತವಾದ ಹಕ್ಕನ್ನು ಸಾಬೀತು ಮಾಡತಕ್ಕಂಥ ಸಂಗತಿಯು ಇರುತ್ತದೆ. ೪ನೇ ಕಲಮಿನಲ್ಲಿ ಕಂಡ ಸಂಗತಿಯಿಂದ ವಾದಿಗೆ ಪ್ರತಿವಾದಿಯ ವಿರುದ್ಧ ಯಾವದೂ ಹಕ್ಕು ಪ್ರಾಪ್ತವಾಗಿಲ್ಲಾ. ವಾದಿಗೆ ಮೇಲೆ ಹೇಳಿದ ಮೂರು ಕಲಮಿನಲ್ಲಿ ಹೇಳಿದ ಸಂಗತಿಗಳಿಂದ ಪ್ರಾಪ್ತವಾದ ಹಕ್ಕನ್ನು ಸಾಬೀತು ಮಾಡಲಿಕ್ಕೆ ಮಾತ್ರ ಅದರ ಉಪಯೋಗ ಆಗುವದು. ಅಂದಮೇಲೆ ಅಸಲಅರ್ಜಿಯಲ್ಲಿ ಮೇಲ್ಕಂಡ ಮೂರು ಕಲಮಿನಲ್ಲಿ ಹೇಳಿದ ಸಂಗತಿಗಳನ್ನಷ್ಟೇ ಬರೆಯಬೇಕು ಹೊರ್ತಾಗಿ ಈ ಸಂಗತಿಗಳನ್ನು ಸಾಬೀತು ಮಾಡತಕ್ಕಂಥ ೪ನೇ ಕಲಮಿನಲ್ಲಿ ಕಾಣಿಸಿದ ಸಂಗತಿಯನ್ನು ಬರೆಯಬಾರದು.

**ಅ** ಎಂಬುವವನು ತಾರೀಖು ೧೧–೪–೧೯೨೧ನೇ ದಿವಸ ೧೦೦ ವಿಲಾಯತಿ ಹತ್ತಿಯ ಅಂಡಗಿಗಳನ್ನು **ಬ** ಎಂಬುವನಿಗೆ ಖರೀದಿಕೊಡಲಿಕ್ಕೆ ಕರಾರು ಮಾಡಿದ್ದನು. **ಅ** ಈತನು ಸದರಿ ತಾರೀಖಿನ ದಿವಸ ವಿಲಾಯತಿಯ ಹತ್ತಿಯ ಅಂಡಗಿಗಳನ್ನು ಕೊಡದೆ ಜವಾರಿ ಹತ್ತಿಯ ಅಂಡಗಿಗಳನ್ನು ಖರೀದಿ ಕೊಟ್ಟನು. **ಬ** ಈತನಿಗೆ ಮುಂದೆ ಈ ಸಂಗತಿಯು ತಿಳಿಯಿತು. ಇದರಿಂದ ತನಗೆ ಆದ ಲುಕ್ಸಾನಿ ಭರಪಾಯಿ ಮಾಡಿಸುವ ಬಗ್ಗೆ ಮಾಡತಕ್ಕದಾವೆಯಲ್ಲಿ "**ಅ** ಈತನು ವಿಲಾಯತಿ ಹತ್ತಿಯು ಕೊಡಲಿಕ್ಕೆ ಕರಾರು ಮಾಡಿ ಜವಾರಿ ಹತ್ತಿಯನ್ನು ಕೊಟ್ಟನು" ಅಂತಾ ಹೇಳಬೇಕು. ಆದರೆ ಮೇಲ್ಕಂಡ ತಾರೀಖಿನ ದಿವಸ **ಅ** ಈತನ ವಖಾರದಲ್ಲಿ ವಿಲಾಯತಿ ಹತ್ತಿಯು ಇದ್ದಿದ್ದಿಲ್ಲಾ; ಒಂದುನೂರು ಜವಾರಿಹತ್ತಿಯು ಅಂಡಗಿಗಳನ್ನು **ಅ** ಈತನು ಒಬ್ಬ ವೀರಭದ್ರಪ್ಪಾ ನೀಲಿ ಎಂಬವರ ಅಂಗಡಿಯಲ್ಲಿ

ಖರೀದಿ ಮಾಡಿದನು; ಮತ್ತು ಆವೇ ಅಂಡಗಿಗಳನ್ನು ವಾದಿಗೆ ಕೊಟ್ಟನು ಅಂತಾ ವಗೈರೆ ಅಸಲಅರ್ಜಿಯಲ್ಲಿ ಹೇಳುವ ಕಾರಣವಿಲ್ಲ. ಇವು ಪುರಾವೇದ ಸಂಗತಿಗಳು ಇರುತ್ತವೆ.

ದಾವೆಯು ಆಸ್ತಿಗೆ ತಾನು ಮಾಲಕನು ಇದ್ದ ಬಗ್ಗೆ ಡಿಕ್ಲೇರೇಶನ ಪಡಕೊಳ್ಳುವ ಬಗ್ಗೆ ಅ ಎಂಬುವನು ದಾವೆಯನ್ನು ಮಾಡುತ್ತಾನೆ. ಸದರಿ ದಾವೆಯಲ್ಲಿ ಯಾವ ಸಂಗತಿಗಳ ಆಧಾರ ಮೇಲಿಂದ ಅ ಈತನು ಸದರಿ ನ್ಯಾಯಾಶ್ರಯವನ್ನು ಬೇಡುವನೋ ಆ ಸಂಗತಿಗಳನ್ನು ಬರೆಯಬೇಕು. ಉದಾಹರಣಾರ್ಥ "ವಾದಿಯು ಮೃತನ ದತ್ತಕ ಮಗನಾಗಬೇಕು;" "ಅಥವಾ ಮೃತನ ಖಾಸ ಅವಿಭಕ್ತ ಅಣ್ಣನಾಗಬೇಕು" ವಗೈರೆ ಸಂಗತಿಗಳನ್ನು ಬರೆಯಬೇಕು. ಆದರೆ "ದಾವೆಯ ಆಸ್ತಿಯು ಮುನಸಿಪಾಲಟಿಯಲ್ಲಿ ವಾದಿ ಹೆಸರಲೆ ಇದೆ;" "ದಾವೆಯ ಅಸ್ತಿಯ ಬಾಬತ್ತು ಮುನಸಿಪಾಲಟಿ ಕರಗಳನ್ನು ವಾದಿಯು ಕೊಡುತ್ತಾ ಬಂದಿರುತ್ತಾನೆ;" "ದಾವೆಯ ಆಸ್ತಿಯ ಸಿಟಿಸರ್ವೆದಲ್ಲಿ ವಾದಿ ಹೆಸರಲೆ ಅದೆ" ಮತ್ತು "ದಾವೆಯ ಆಸ್ತಿಯು ಸಿಟಿಸರ್ವೆಯಲ್ಲಿ ತನ್ನ ಹೆಸರಲೆ ದಾಖಲು ಆಗಬೇಕೆಂದು ಪ್ರತಿವಾದಿಯು ಅರ್ಜಿ ಮಾಡಿದನು. ಆದರೆ ಅದು ರದ್ದ ಆಗಿ ಅಲ್ಲಿ ವಾದಿಯ ಹೆಸರು ಕಾಯಮ ಮಾಡಲ್ಪಟ್ಟಿದೆ" ಅಂತಾ ವಗೈರೆ ಸಂಗತಿಗಳನ್ನು ಪುರಾವೇದ ಸಂಗತಿಗಳಿರುವದರಿಂದ ಅವುಗಳನ್ನು ಬರೆಯಬಾರದು.

ಕಬೂಲ ಮಾಡಿದ ಬಗ್ಗೆ ಸಂಗತಿಗಳು ಸಹಾ ಪುರಾವೇದ ಸಂಗತಿಗಳು ಇರುತ್ತವೆ. ಕಾರಣಾ ಅವುಗಳನ್ನು ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಬರೆಯಬಾರದು. ಉ:- ಅ ಎಂಬುವವನು ಬ ಎಂಬುವವನ ಮೇಲೆ ೧೦೦ ರೂಪಾಯಿಗಳ ದಸ್ತೈವಿಜಿನ ಆಧಾರದಮೇಲಿಂದ ದಾವೆಯನ್ನು ಮಾಡುತ್ತಾನೆ. ಮತ್ತು ಆ ದಾವೆಯಲ್ಲಿ ೧೦೦ ರೂಪಾಯಿ ಬೇಡುತ್ತಾನೆ. ಸದರಿ ರೂಪಾಯಿಗಳ ಪೈಕಿ ೮೦ ರೂಪಾಯಿ ಮುಟ್ಟಿಸಿರುತ್ತದೆಂದು ಬ ಈತನು ಉತ್ತರಪಕ್ಷವನ್ನು ಮಾಡುತ್ತಾನೆ. ಸದರಿ ಪ್ರಸಕ್ತಿಯಲ್ಲಿ "ದಾವೆಯ ರೂಪಾಯಿಗಳ ಪೈಕಿ ಪ್ರತಿವಾದಿಯು ೮೦ ರೂಪಾಯಿಗಳನ್ನು ಮುಟ್ಟಿಸಿರುತ್ತಾನೆ" ಅಂತಾ ಹೇಳಿದರೆ ಸಾಕಾಗುವದು. ಆದರೆ "ಬ ಈತನು ಪ್ರತಿವಾದಿಕಡಿಂದ ತನಗೆ ೮೦ ರೂಪಾಯಿಗಳು ಮುಟ್ಟಿರುತ್ತವೆ ಅಂತಾ ತಾರೀಖು ೧೬-೪-೧೯೨೮ನೇ ಇಸ್ವಿದಿವಸ ಕ, ಡ ಮತ್ತು ಇ ಎಂಬ ಪಂಚರ ಸಮಕ್ಷಮಾ ಕಬೂಲು ಮಾಡಿದನು" ಅಂತಾ ಸಂಗತಿಯನ್ನು ಹೇಳಬಾರದು.

(೪) ಸಂಗತಿಗಳನ್ನು ಸಂಕ್ಷಿಪ್ತವಾಗಿ ಬರೆಯಬೇಕು. ಮತ್ತು ಹಾಗೆ ಸ್ಪಷ್ಟವಾಗಿ ಮತ್ತು ನಿಶ್ಚಿತವಾಗಿ ಬರೆಯಬೇಕು.

ಸಂಗತಿಗಳನ್ನು ಸಂಕ್ಷಿಪ್ತವಾಗಿ ಬರೆಯಬೇಕಾದರೆ ಅವಶ್ಯವಿಲ್ಲದ, ಮಹತ್ವವಿಲ್ಲದ ಸಂಗತಿಗಳನ್ನು ಬರೆಯಬಾರದು. ಅಸಲಅರ್ಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ (೧) ಕಾಯದೆಯ, (೨) ಪುರಾವೆಯ, (೩) ಮುಂದಾಗಿ ನೆರವೇರಿಸಲ್ಪಡಬೇಕಾದ ಶರ್ತಿನ ವಗೈರೆ ಸಂಗತಿಗಳನ್ನು ಬರೆಯಬಾರದು. ಅಸಲಅರ್ಜಿಗೆ ಮತ್ತು ಕೈಫಿಯತ್ತಿಗೆ ಅವಶ್ಯವಿದ್ದ ಸಂಗತಿಗಳನ್ನು ಅಗತ್ಯವಿದ್ದಾಗ ಪ್ಯಾರಾಗ್ರಾಫುಗಳಾಗಿ ವಿಭಾಗಿಸಬೇಕು. ಮತ್ತು ಅವಕ್ಕೆ ಅನುಕ್ರಮ ನಂಬರುಗಳನ್ನು ಕೊಟ್ಟಿರಬೇಕು. ತಾರೀಖುಗಳನ್ನು, ರಕಮುಗಳನ್ನು ಮತ್ತು ನಂಬರುಗಳನ್ನು ಅಂಕೆಗಳಿಂದ ಕೊಟ್ಟಿರತಕ್ಕದ್ದು.

ದಾವೆಯು ಸ್ಥಾವರ ಮಿಳಕತ್ತಿನ ವಿಷಯವಾಗಿದ್ದಲ್ಲಿ, ಅದರ ಗೊತ್ತು ಹಚ್ಚುವದಕ್ಕೆ ಸಾಕಾಗುವಷ್ಟು ಅದರ ವರ್ಣನೆಯನ್ನು ಮತ್ತು ಆ ಮಿಳಕತ್ತು ಚತುಃಸೀಮೆಯಮೇಲಿಂದ ಯಾ ಜಮಾಬಂದಿಯ ಯಾ ಪೈಮಾಷಿಯ ಕಾಗದ ಪತ್ರಗಳೊಳಗಿನ ನಂಬರುಗಳ ಮೇಲಿಂದ ಗೊತ್ತುಹತ್ತುವಂತೆ ಇದ್ದರೆ, ಸದರಿ (೧) ಚತುಃಸೀಮೆ ಯಾ (೨) ನಂಬರುಗಳನ್ನು ಅಸಲಅರ್ಜಿಯಲ್ಲಿ ಬರೆದಿರಬೇಕು.

# ೩ನೆಯ ಪ್ರಕರಣ.



## ಅಸಲರ್ಜಿಗೆ ಅವಶ್ಯವಾದ ಸಂಗತಿಗಳೂ-ಅಸಲರ್ಜಿಯಲ್ಲಿ ಕೆಳಗೆ ವಿವರಿಸಿದ ತಪಶೀಲುಗಳು ಇರತಕ್ಕದ್ದು

(ಅ) ದಾವೆಯು ಮಾಡಲ್ಪಡುವ ಕೋರ್ಟಿನ ಹೆಸರು.

(ಬ) ವಾದಿಯ ಹೆಸರು; ವರ್ಣನೆ ಮತ್ತು ಇರುವ ಸ್ಥಳ.

(ಕ) ಪ್ರತಿವಾದಿಯ ಹೆಸರು ವರ್ಣನೆ ಮತ್ತು ಇರುವ ಸ್ಥಳ ತಿಳಿಯಬಹುದಾದಮಟ್ಟಿಗೆ.

(ಡ) ವಾದಿಯು ಅಥವಾ ಪ್ರತಿವಾದಿಯು ಅಲ್ಪವಯಸ್ಸಿನವನು ಅಥವಾ ಅಸ್ವಸ್ಥ ಮನಸ್ಸಿನವನಾಗಿದ್ದರೆ ಆಬಗ್ಗೆ ಕೈಫಿಯತ್ತು.

(ಇ) ಫಿರ್ಯಾದಿಗೆ ಕಾರಣಗಳನ್ನು ಉಂಟುಮಾಡಿದಂಥ ಸಂಗತಿಗಳ ವಿವರಾ, ಮತ್ತು ಯಾವಾಗ ಆ ಕಾರಣ ಉಂಟಾಯಿತು ಎಂಬುವದು.

(ಫ) ಕೋರ್ಟಿಗೆ ಹುಕುಮತ್ತು ಇರುವದಾಗಿ ತೋರಿಸುವ ಸಂಗತಿಗಳು.

(ಗ) ವಾದಿಯು ಬೇಡುವ ನ್ಯಾಯಾಶ್ರಯವು.

(ಹ) ವಾದಿಯು ಕೊಡಕೊಳ್ಳತಕ್ಕ ಹಣದ ವಜಾಬಾಕಿಯನ್ನು ಮಾಡದಿದ್ದರೆ ಯಾ ತನ್ನ ಬದ್ಧತೆಯ ಕೆಲವು ಭಾಗವನ್ನು ಬಿಟ್ಟಿದ್ದರೆ ಹಾಗೆ ವಜಾಮಾಡಿದ ರಕಮು ಯಾ ಬಿಟ್ಟ ರಕಮು ಮತ್ತು—

(ಆಯ) ಹುಕುಮತ್ತಿನ ಮತ್ತು ಕೋರ್ಟ ಫೀ ಕಾರಣಗಳಬಗ್ಗೆ ದಾವೇಯ ವಿಷಯದ ಕಿಮ್ಮತ್ತಿನ ತಕ್ತೆ; ಆ ಸಂಗತಿಯಲ್ಲಿ ಸಾಧ್ಯವಿರುವ ಮಟ್ಟಿಗೆ.

ಈ ಎಲ್ಲ ಸಂಗತಿಗಳು ತಪ್ಪದೆ ಪ್ರತಿವಂದು ಅಸಲ ಅರ್ಜಿಯಲ್ಲಿ ಇರತಕ್ಕವು. ಇವರ ಪೈಕಿ ಪ್ರತಿವಂದು ತಪಶೀಲುಗಳ ಹೆಚ್ಚಿಗೆ ವಿಚಾರ ಆಗುವದು

ಅವಶ್ಯವಿರುವದು. ಕಾರಣ ಅನುಕ್ರಮವಾಗಿ ಪ್ರತಿಯೊಂದು ತಪಶೀಲದ ವಿಚಾರ ಮಾಡೋಣ.

(ಅ) ವಾದಿಯು ಮಾಡಬೇಕಾದ ಕೋರ್ಟಿನ ಹೆಸರು—ದಾವೆಯನ್ನು ಯಾವ ಕೋರ್ಟಿನಲ್ಲಿ ಹಾಜರಮಾಡತಕ್ಕದ್ದು ? ಪ್ರತಿಯೊಂದು ದಾವೆಯನ್ನು ಅದರ ಚವಕಶಿಯನ್ನು ಮಾಡುವಂಥ ಎಲ್ಲಕ್ಕೂ ಕೆಳಗಿನ ದರ್ಜೆಯ ಕೋರ್ಟಿನಲ್ಲಿ ಮಾಡತಕ್ಕದ್ದು. ಮುಂಬೈಇಲಾಖೆಯಲ್ಲಿ ಮೂರು ದರ್ಜೆಗಳ ದಿವಾಣಿಕೋರ್ಟು ಗಳು ಇರುತ್ತವೆ ಅದರ ವಿವರಾ—

(೧) ಡಿಸ್ಟ್ರಿಕ್ಟ ಕೋರ್ಟ ಎಲ್ಲಕ್ಕೂ ಹೆಚ್ಚಿನ ದರ್ಜೆಯದ್ದು.

(೨) ೧ನೇ ವರ್ಗ ಸಬಜಜ್ಜ ಕೋರ್ಟ ಡಿಸ್ಟ್ರಿಕ್ಟ ಕೋರ್ಟಿನಕಿಂತ ಕಮ್ಮಿ ದರ್ಜೆಯದ್ದು.

(೩) ೨ನೇ ವರ್ಗ ಸಬಜಜ್ಜ ಕೋರ್ಟು ಮೇಲ್ಕಂಡ ಎರಡು ಕೋರ್ಟುಗಳ ಕಿಂತ ಕಮ್ಮಿ ದರ್ಜೆಯದ್ದು.

ಯಾವದೇ ರಕಮಿನ ದಾವೇ ಇದ್ದರೂ ಅದರ ಚವಕಶಿಮಾಡುವ ಅಧಿಕಾರವು ಡಿಸ್ಟ್ರಿಕ್ಟ ಕೋರ್ಟಿಗೆ ಅಥವಾ ೧ನೇ ವರ್ಗ ಸಬಜಜ್ಜ ಕೋರ್ಟಿಗೆ ಉಂಟು. ಆದರೆ ಮೇಲ್ಕಂಡ ನೇಮಗಳಿಗೆ ಅನುಸರಿಸಿ ಕೆಳಗಿನ ದರ್ಜೆಯ ಕೋರ್ಟಿನಲ್ಲಿ ಅಂದರೆ— ೧ನೇ ಅಥವಾ ೨ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ದಾವೇ ಹಾಜರಮಾಡತಕ್ಕದ್ದು. ಆದರೆ ೨ನೇ ವರ್ಗ ಸಬಜಜ್ಜ ಕೋರ್ಟಿಗೆ ೫೦೦೦ ರೂಪಾಯಿಗಳ ಕಿಮ್ಮತ್ತಿನ ಅಥವಾ ಅದರಕಿಂತ ಕಮ್ಮಿ ಕಿಮ್ಮತ್ತಿನ ದಾವೆಗಳ ಚವಕಶಿಮಾಡುವ ಅಧಿಕಾರ ಉಂಟು. ೫೦೦೦ ರೂಪಾಯಿಗಳಕಿಂತ ಹೆಚ್ಚಿನ ಕಿಮ್ಮತ್ತಿನ ದಾವೆಗಳ ಚವಕಶಿ ಮಾಡುವ ಅಧಿಕಾರ ೨ನೇ ವರ್ಗ ಸಬಜಜ್ಜ ಕೋರ್ಟಿಗೆ ಇಲ್ಲಾ. ಆ ದಾವೆ ೧ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ಹಾಜರಮಾಡಬೇಕು. ೫೦೦೦ ರೂಪಾಯಿ ಗಳಕಿಂತಾ ಕಮ್ಮಿ ಕಿಮ್ಮತ್ತಿನ ದಾವೆ ಚವಕಶಿಮಾಡುವ ಅಧಿಕಾರವುಳ್ಳಂಥ ಎಲ್ಲಕ್ಕೂ ಕೆಳಗಿನ ಕೋರ್ಟಿನಲ್ಲಿ ಅಂದರೆ—೨ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ಹಾಜರಮಾಡತಕ್ಕದ್ದು. ಅದರ ಬಗ್ಗೆ ಕೋರ್ಟಿನ ಹೆಸರು ಕೆಳಗೆ ಬರೆದಂತೆ ಬರಿಯಬೇಕು. ೫೦೦೦ ರೂಪಾಯಿಗಳಕ್ಕಿಂತ ಕೆಳಗಿನ ಕಿಮ್ಮತ್ತಿನ ದಾವೇ ದಾಖಲು

ಮಾಡುವದಿದ್ದರೆ "ಹುಬ್ಬಳ್ಳಿ ೨ನೇ ವರ್ಗ ಸಬಜಜ್ಜ ಕೋರ್ಟಿಗೆ" ಈ ರೀತಿ ಬರೆಯಬೇಕು. ಇದರಕಿಂತ ಹೆಚ್ಚಿನ ಕಿಮ್ಮತ್ತಿನ ದಾವೇ ಇದ್ದರೆ "ಧಾರವಾಡ ೧ನೇ ವರ್ಗ ಸಬಜಜ್ಜ ಕೋರ್ಟಿಗೆ" ಈ ರೀತಿ ಬರಿಯಬೇಕು.

ಸ್ಥಾವರ ಆಸ್ತಿ ಸಂಬಂಧಿ ದಾವೆ ಮಾಡುವದಿದ್ದರೆ ಮೇಲ್ಕಂಡ ಹಣದ ಶರ್ತುಗಳ ವಳಗಾಗಿ ಯಾವ ಕೋರ್ಟಿನ ಹದ್ದಿಯಲ್ಲಿ ಸ್ಥಾವರ ಆಸ್ತಿ ಇರುವದು ಆ ಕೋರ್ಟಿನಲ್ಲಿ ದಾವೆ ದಾಖಲಮಾಡಲಿಕ್ಕೆ ಬರುವದು. ಬೇರೆ ಬೇರೆ ಕೋರ್ಟುಗಳ ಅಧಿಕಾರದ ಹದ್ದಿಯಲ್ಲಿ ಅದೇ ಸ್ಥಾವರ ಆಸ್ತಿಯಿದ್ದರೆ ಸದರಿ ಕೋರ್ಟುಗಳ ಪೈಕಿ ಯಾವದಾದರೊಂದು ಕೋರ್ಟಿನಲ್ಲಿ ದಾವೆ ದಾಖಲಮಾಡಬೇಕು.

ಯಾವದಾದರೊಂದು ಕಾಯಿದೆಯಿಂದ ಗೊತ್ತುಮಾಡಲ್ಪಟ್ಟ ಹಣದ ಸಂಬಂಧದ ಯಾ ಬೇರೆತರದ ಅವಧಿಗಳೊಳಗಾಗಿ—

(ಅ) ಭಾಡಗಿಯ ಗೇಣಿಯ ಅಥವಾ ಉತ್ಪನ್ನಸಹಿತವಾಗಿ ಅಥವಾ ಹೊರ್ತಾಗಿ ಸ್ಥಾವರ ಆಸ್ತಿಯನ್ನು ತಿರುಗಿ ಬೇಡುವದರ ಸಲುವಾಗಿ–

(ಬ) ಸ್ಥಾವರ ಆಸ್ತಿಯನ್ನು ಹಂಚಿಕೊಳ್ಳುವದರ ಸಲುವಾಗಿ–

(ಕ) ಭತ್ತೆ ಇಟ್ಟ ಅಥವಾ ಭಾರಕ್ಕೆ ಒಳಪಡಿಸಿದ ಸ್ಥಾವರ ಆಸ್ತಿಯ ಬಾಬತಿನಲ್ಲಿ ಅಂಥ ಆಸ್ತಿಯನ್ನು (೧) ಬಿಡಿಸಿಕೊಳ್ಳಲಾಗದಹಾಗೆ ಮಾಡುವದರ ಸಲುವಾಗಿ (೨) ಮಾರುವದರ ಸಲುವಾಗಿ ಯಾ (೩) ಬಿಡಿಸಿಕೊಳ್ಳುವದರ ಸಲುವಾಗಿ.

(ಡ) ಸ್ಥಾವರ ಆಸ್ತಿಗೆ ಯಾ ಆಸ್ತಿಯಲ್ಲಿ ಇರುವ ಬೇರೆ ಯಾವದೊಂದು ಹಕ್ಕನ್ನಾಗಲಿ ಸ್ವಾರ್ಥ ಸಂಬಂಧವನ್ನಾಗಲಿ ನಿಶ್ಚಯಿಸಿಕೊಳ್ಳುವದರ ಸಲುವಾಗಿ.

(ಇ) ಸ್ಥಾವರ ಆಸ್ತಿಗೆ ಮಾಡಿದ ಅಪಾಯಕ್ಕಾಗಿ ಪ್ರತಿಫಲವನ್ನು ಬೇಡುವದರ ಸಲುವಾಗಿ.

(ಫ) ಪ್ರತ್ಯಕ್ಷವಾಗಿ ಹಿಡಿದ ಅಥವಾ ಜಪ್ತುಮಾಡಿದ ಜಂಗಮ ಆಸ್ತಿಯನ್ನು ತಿರುಗಿ ಬೇಡುವದರ ಸಲುವಾಗಿ.

ಮಾಡತಕ್ಕ ದಾವೆಗಳನ್ನು ಯಾವ ಕೋರ್ಟಿನ ಅಧಿಕಾರದ ಹದ್ದಿನೊಳಗೆ ಆ ಆಸ್ತಿಯು ಇರುತ್ತದೆಯೋ ಆ ಕೋರ್ಟಿನಲ್ಲಿ ಮಾಡಬೇಕು. ಆದರೆ ವಿಧಿ

ಸಲ್ಪಡುವದೇನಂದರೆ—ಪ್ರತಿವಾದಿಯ ಸ್ವಾಧೀನದಲ್ಲಿ ಯಾ ಅವನ ತರ್ಫೆಯಿಂದ ಬೇರೊಬ್ಬನ ಸ್ವಾಧೀನದಲ್ಲಿ ಇರುವಂಥ ಸ್ಥಾವರ ಆಸ್ತಿ ಸಂಬಂಧದಿಂದ ನ್ಯಾಯಾಶ್ರಯವನ್ನು ಯಾ ಆ ಮಾಲಿಗೆ ಮಾಡಲ್ಪಟ್ಟ ಅನ್ಯಾಯಕ್ಕಾಗಿ ಪ್ರತಿಫಲವನ್ನು ಪಡಿಯುವದರ ಸಲುವಾಗಿ ದಾವೆಯನ್ನು ಮಾಡಬೇಕಾದರೆ ವಾದಿಯು ಬೇಡುವಂಥ ವಿಷಯವನ್ನು ಪ್ರತಿವಾದಿಯು ತೀರಿಸಿ ಕೋರ್ಟಿನ ಹುಕುಮಿನಂತೆ ನಡಿಯಲಾಗಿ ಸಂಪೂರ್ಣವಾಗಿ ಪಡಿಯಬಹುದಾಗಿದ್ದರೆ (೧) ಆ ಆಸ್ತಿಯು ಇರುವ ಸ್ಥಳದಲ್ಲಿ ಅಧಿಕಾರ ನಡಿಸುವಂಥ ಕೋರ್ಟಿನಲ್ಲಿ ಅಥವಾ (೨) ಪ್ರತಿವಾದಿಯು ವಾಸಮಾಡುವಂಥ ಸ್ಥಳವು ಯಾವ ಕೋರ್ಟಿನ ಅಧಿಕಾರದಲ್ಲಿರುವದೋ ಆ ಕೋರ್ಟಿನಲ್ಲಿ ಮಾಡಬೇಕು. ಅಂದರೆ ಇದರಲ್ಲಿ ಕೆಳಗೆ ಬರೆದ ಪ್ರಕಾರ ಎರಡು ಶರ್ತುಗಳು ಕಂಡುಬರುತ್ತವೆ—

(೧) ಆಸ್ತಿಯು ಪ್ರತಿವಾದಿಯ ಸ್ವಾಧೀನದಲ್ಲಿ ಯಾ ಅವನ ತರ್ಫೆಯಿಂದ ಬೇರೊಬ್ಬನ ಸ್ವಾಧೀನದಲ್ಲಿ ಇರಬೇಕು. ಮತ್ತು—

(೨) ವಾದಿಯು ಬೇಡುವಂಥ ವಿಷಯವನ್ನು ಪ್ರತಿವಾದಿಯ ಕಡಿಯಿಂದಾ ಸಂಪೂರ್ಣವಾಗಿ ಕೋರ್ಟಿನಿಂದಾ ಪಡಿಯಬಹುದಾಗಿರಬೇಕು. ಈ ಎರಡು ಶರ್ತುಗಳು ಹಾಜರ ಇದ್ದ ಪಕ್ಷಕ್ಕೆ ಮಾತ್ರ ಆಸ್ತಿ ಇರುವ ಸ್ಥಳದಲ್ಲಿ ಅಧಿಕಾರ ನಡಿಸುವಂಥ ಕೋರ್ಟಿನಲ್ಲಿ ಅಥವಾ ಪ್ರತಿವಾದಿಯು ವಾಸಮಾಡುವಂಥ ಸ್ಥಳದಲ್ಲಿ ಅಧಿಕಾರ ನಡಿಸುವಂಥ ಕೋರ್ಟಿನಲ್ಲಿ ದಾವೆಯನ್ನು ಮಾಡಬಹುದು.

**ವಿವರಣೆ**—ವಾಸಮಾಡುವ ಸ್ಥಳವೆಂದರೆ ತಥ್ಯವಾಗಿ ಮತ್ತು ಸ್ವೇಚ್ಛೆಯಿಂದ ವಾಸಿಸುವಂಥ ಯಾ ಉದ್ಯೋಗ ನಡಿಸುವಂಥ ಯಾ ಲಾಭಕ್ಕೋಸ್ಕರವಾಗಿ ಸ್ವಂತ ಕೆಲಸಮಾಡುವಂಥ ಸ್ಥಳ.

**ವಿವರಣೆ**—ಈ ಕಲಮಿನಲ್ಲಿ ಆಸ್ತಿಯೆಂಬ ಶಬ್ದಕ್ಕೆ ಬ್ರಿಟಿಶ ಹಿಂದುಸ್ತಾನದಲ್ಲಿ ಇರುವಂಥ ಆಸ್ತಿಯೆಂಬ ಅರ್ಥವುಂಟು.

ಜಂಗಮ ಮಾಲಿಗಾಗಲಿ ಯಾ ಮನುಷ್ಯವ್ಯಕ್ತಿಗಾಗಲಿ ಮಾಡಲ್ಪಟ್ಟ ಅಪಾಯಕ್ಕಾಗಿ ಪ್ರತಿಫಲವನ್ನು ಬೇಡುವದಾಗಿದ್ದರೆ ಆ ದಾವೆ ಎಲ್ಲಿ ಮಾಡಬೇಕು?

(ಅ) ಮೇಲ್ಕಂಡಂತೆ ಅಪಾಯವಾದ ಸ್ಥಳವು ಮತ್ತು ಪ್ರತಿವಾದಿಯು ವಾಸಮಾಡುತ್ತಿದ್ದ ಸ್ಥಳವು ಒಂದೇ ಕೋರ್ಟಿನ ಅಧಿಕಾರದ ಹದ್ದಿನಲ್ಲಿ ಇದ್ದರೆ ಆ ಕೋರ್ಟಿನಲ್ಲಿ ದಾವೆ ಮಾಡುವದು ನಿಜವದೆ.

(ಬ) ಮೇಲ್ಕಂಡಂತೆ ಅಪಾಯವಾದ ಸ್ಥಳವು ಒಂದು ಕೋರ್ಟಿನ ಹದ್ದಿಯಲ್ಲಿ ಇದ್ದು ಅದೇ ಸ್ಥಳದಲ್ಲಿ ಪ್ರತಿವಾದಿಯು ವಾಸಮಾಡದೆ ಮತ್ತೊಂದು ಎರಡನೇ ಕೋರ್ಟಿನ ಅಧಿಕಾರದ ಹದ್ದಿನೊಳಗೆ ವಾಸಮಾಡುತ್ತಿದ್ದರೆ ಈ ಎರಡು ಕೋರ್ಟುಗಳ ಪೈಕಿ ವಾದಿಯು ತನ್ನ ಇಚ್ಛೆಯಂತೆ ಯಾವದಾದರೂ ಒಂದು ಕೋರ್ಟಿನಲ್ಲಿ ದಾವೆ ಮಾಡಬಹುದು.

ಉ—**ಅ** ಎಂಬವನು ಬೆಳಗಾಂವಿಯಲ್ಲಿ ವಾಸಿಸುವನಾಗಿ **ಬ** ಎಂಬವನನ್ನು ಧಾರವಾಡದಲ್ಲಿ ಬಡಿಯುತ್ತಾನೆ. **ಬ** ಎಂಬವನು ಬೆಳಗಾಂವಿಯಲ್ಲಿ ಆಗಲಿ ಅಥವಾ ಧಾರವಾಡದಲ್ಲಿ ಆಗಲಿ **ಅ** ಎಂಬವನ ಮೇಲೆ ದಾವೆಯನ್ನು ಮಾಡಬಹುದು.

(ಬ) **ಅ** ಎಂಬವನು ಬೆಳಗಾಂವಿಯಲ್ಲಿ ವಾಸಿಸುವನಾಗಿ **ಬ** ಎಂಬವನಿಗೆ ಅಪಮಾನವಾಗುವಂಥ ಲೇಖವನ್ನು ಧಾರವಾಡದಲ್ಲಿ ಪ್ರಸಿದ್ಧಿಸುತ್ತಾನೆ. **ಬ** ಎಂಬವನು ಬೆಳಗಾಂವಿಯಲ್ಲಿ ಅಥವಾ ಧಾರವಾಡದಲ್ಲಿ **ಅ** ಎಂಬವನ ಮೇಲೆ ದಾವೆ ಮಾಡಬಹುದು.

ಮೇಲಿನ ಶರ್ತುಗಳೊಳಗಾಗಿ ಪ್ರತಿಯೊಂದು ಬಗೆಯ ದಾವೆಯು ಕೆಳಗೆ ವಿವರಿಸಿದ ಯಾವದೊಂದು ಸ್ಥಳದಲ್ಲಿ ಮಾಡಲ್ಪಡತಕ್ಕದ್ದು. ಅದರ ವಿವರಾ —

೧. ಒಬ್ಬನೇ ಪ್ರತಿವಾದಿ ಇದ್ದು ಅವನು ದಾವೆಯು ಆರಂಭವಾದ ಸಮಯದಲ್ಲಿ ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಅವನು ವಾಸಮಾಡುವನೊ ಆ ಕೋರ್ಟಿನಲ್ಲಿ ಮಾಡಬೇಕು.

೨. ಒಬ್ಬನಿಗಿಂತಲು ಹೆಚ್ಚಿಗೆ ಪ್ರತಿವಾದೇರು ಇದ್ದರೆ—

(ಅ) ಎಲ್ಲ ಪ್ರತಿವಾದೇರು ದಾವೆಯು ಆರಂಭವಾದ ಸಮಯವಲ್ಲಿ ಒಂದು ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ವಾಸಮಾಡುತ್ತಿದ್ದರೆ ಆ ಕೋರ್ಟಿನಲ್ಲಿ ದಾವೇ ದಾಖಲ ಮಾಡಬೇಕು.

(ಬ) ಪ್ರತಿವಾದೇರು ದಾವೇಯು ಆರಂಭವಾದ ಸಮಯದಲ್ಲಿ ಒಂದೇ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ವಾಸಮಾಡದೆ ಬೇರೆ ಬೇರೆ ಕೋರ್ಟಿನ ಹದ್ದುಗಳಲ್ಲಿ ವಾಸಮಾಡುತ್ತಿದ್ದರೆ (ಗ) ಸದರ ಪ್ರತಿವಾದೇರ ಪೈಕಿ ಯಾವನಾದರು ಒಬ್ಬನು ಯಾವ ಕೋರ್ಟಿನ ಅಧಿಕಾರದ ಹದ್ದಿನಲ್ಲಿ ವಾಸಮಾಡುವನೋ ಆ ಕೋರ್ಟಿನಲ್ಲಿ ದಾವೆ ಮಾಡಬೇಕು. ಆದರೆ ಈ ಪ್ರಸಕ್ತಿಯಲ್ಲಿ ವಿಧಿಸಲ್ಪಡುವದೇನಂದರೆ—ಇಂಥ ಬಾಬತಿನಲ್ಲಿ ಆ ಕೋರ್ಟಿನ ಅಪ್ಪಣೆಯನ್ನು ಪಡಕೋಬೇಕು. ಅಪ್ಪಣೆ ಪಡಕೊಳ್ಳದೆ ದಾವೇಮಾಡಿದರೆ ದಾವೆಮಾಡಿದ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಅಥವಾ ಹದ್ದುಗಳಲ್ಲಿ ವಾಸಮಾಡದೆ ಇದ್ದಂಥ ಪ್ರತಿವಾದೇರು ಈ ಪ್ರಕಾರ ದಾವೆ ಮಾಡುವದಕ್ಕೆ ತಕರಾರು ಮಾಡಿದರೆ ಅವರ ತಕರಾರು ನಡಿಯುವದು. ಮೇಲಿನ ಪ್ರಕಾರ ಕೋರ್ಟಿನ ಅಪ್ಪಣೆಯಿಲ್ಲದೆ ದಾವೆ ದಾಖಲಮಾಡಿದರೆ ಆ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ವಾಸಮಾಡದೆ ಇದ್ದಂಥ ಪ್ರತಿವಾದೇರು ಈ ಪ್ರಕಾರ ದಾವೆ ಮಾಡುವದಕ್ಕೆ ತಕರಾರು ಮಾಡಬಾರದು. ಅಂದರೆ ಈ ಪ್ರಕಾರ ಮಾಡಿದ ದಾವೇ ನಡಿಯುವದು.

೩. ದಾವೆ ಕಾರಣವು ಪೂರ್ಣವಾಗಿ ಯಾ ಅಂಶತಃ ಯಾವ ಕೋರ್ಟಿನ ಅಧಿಕಾರದ ಸ್ಥಳದಲ್ಲಿ ಹುಟ್ಟಿರುತ್ತದೊ ಆ ಕೋರ್ಟಿನಲ್ಲಿ ದಾವೆ ಮಾಡಬೇಕು.

**ವಿವರಣೆ ೧**—ಒಬ್ಬ ಮನುಷ್ಯನು ವಂದು ಸ್ಥಳದಲ್ಲಿ ಕಾಯಮ ಮನೆಯನ್ನು ಮಾಡಿ ಮತ್ತೊಂದು ಸ್ಥಳದಲ್ಲಿ ಕೆಲಸದ ಪೂರ್ತೆ ಬಿಡಾರ ಮಾಡಿಕೊಂಡು ಇದ್ದಲ್ಲಿ ಆ ಮನುಷ್ಯನು ಆ ಎರಡು ಸ್ಥಳಗಳಲ್ಲಿ ವಾಸಮಾಡುತ್ತಾನೆಂದೆಣಿಸಲ್ಪಡುವನು.

**ವಿವರಣೆ ೨**—ಯಾವದಾದರೊಂದು ಕಾರ್ಪೊರೇಶನ್ನ ಬ್ರಿಟಿಶ ಹಿಂದುಸ್ತಾನದಲ್ಲಿ ಒಂದೇ ಅಥವಾ ಮುಖ್ಯ ಆಫೀಸನ್ನು ಮಾಡಿಕೊಂಡು ಇದ್ದರೆ ಅದು ಆ ಆಫೀಸಿನಲ್ಲಿ ಉದ್ಯೋಗ ನಡಿಸುತ್ತದೆ ಎಂದು ಎಣಿಸಲ್ಪಡುವದು. ಅಥವಾ ಅದು ತನ್ನ ಕೈಕೆಳಗೆ ಬೇರೊಂದು ಸ್ಥಳದಲ್ಲಿಯೂ ಒಂದು ಆಫೀಸನ್ನು ಇಟ್ಟಿದ್ದರೆ ಅಲ್ಲಿ ಹುಟ್ಟಿದಂಥ ದಾವೆಯ ಕಾರಣದ ಸಂಬಂಧದಲ್ಲಿ ಆ ಸ್ಥಳದಲ್ಲಿ ಉದ್ಯೋಗ ನಡಿಸುತ್ತದೆ ಎಂದು ಎಣಿಸಲ್ಪಡುವದು.

೧ ಉ—ಅ ಎಂಬವನೊಬ್ಬ ವರ್ತಕನು ಧಾರವಾಡದಲ್ಲಿ ಇರುತ್ತಾನೆ. ಬ ಎಂಬವನು ಧಾರವಾಡದಲ್ಲಿಯು ತನ್ನ ಏಜಂಟನ ಮುಖಾಂತರವಾಗಿ ಅ. ಎಂಬವನ ಸರಕುಗಳನ್ನು ಕೊಂಡು ಅವುಗಳನ್ನು ಎಮ್. ಎಸ್. ಎಮ್. ರೇಲ್ವೆ ಕಂಪನಿಯವರ ವಶಕ್ಕೆ ಕೊಡೆಂದು ಅ ಎಂಬವನಿಗೆ ಬರೆಯುತ್ತಾನೆ. ಅ ಎಂಬವನು ಬ ಎಂಬವನ ಮೇಲೆ ಆ ಸರಕುಗಳ ಜಿಲೆಯು ಸಲುವಾಗಿ ಧಾರವಾಡದಲ್ಲಿ ಆಗಲಿ ಅಥವಾ ವಿಜಾಪುರದಲ್ಲಿ ಆಗಲಿ ದಾವೆಯನ್ನು ಮಾಡಬಹುದು. ಯಾಕಂದರೆ ಧಾರವಾಡದಲ್ಲಿ ದಾವೆಯಕಾರಣ ಉಂಟಾಯಿತು. ವಿಜಾಪುರದಲ್ಲಿ ಪ್ರತಿವಾದಿಯು ಉದ್ಯೋಗ ನಡಿಸುತ್ತಾನೆ.

೨ ಉ—ಅ ಎಂಬವನು ಧಾರವಾಡದಲ್ಲಿಯೂ ಬ ಎಂಬುವವನು ವಿಜಾಪುರದಲ್ಲಿಯೂ ಕ ಎಂಬುವವನು ಕಾರವಾರದಲ್ಲಿಯೂ ಇರುತ್ತಾರೆ. ಅ, ಬ, ಕ ಎಂಬ ಮೂವರು ಸೊಲ್ಲಾಪುರದಲ್ಲಿ ಏಕತ್ರಕೂಡಿದ್ದಾಗ್ಗೆ ಬ ಕ ಇವರಿಬ್ಬರು ಕೂಡಿ ಅ ಎಂಬುವವನಿಗೆ ಬೇಡಿದಾಗ್ಗೆ ಹಣಕೊಡತಕ್ಕಂಥ ಒಂದು ಕತಬೆಯನ್ನು ಬರೆದುಕೊಡುತ್ತಾರೆ. ಸೊಲ್ಲಾಪುರದಲ್ಲಿ ದಾವೆಯ ಕಾರಣವು ಹುಟ್ಟಿದ್ದರಿಂದ ಅ ಎಂಬುವವನು ಬ ಮತ್ತು ಕ ಎಂಬುವವರ ಮೇಲೆ ಸೊಲ್ಲಾಪುರದಲ್ಲಿ ದಾವೆಯನ್ನು ಮಾಡಬಹುದು. ಇದಲ್ಲದೆ ಅ ಎಂಬುವವನು ಬ ಎಂಬುವವನ ವಾಸಸ್ಥಾನವಾದ ವಿಜಾಪುರದಲ್ಲಿ ಈ ಕ ಎಂಬುವವನ ವಾಸಸ್ಥಾನವಾದ ಕಾರವಾರದಲ್ಲಿ ಅವರಿಬ್ಬರ ಮೇಲೆ ದಾವೆಯನ್ನು ಮಾಡಬಹುದು. ಆದರೆ ಈ ಪ್ರತಿಯೊಂದು ಪ್ರಸಕ್ತಿಯಲ್ಲಿ ದಾವೆಯನ್ನು ಮಾಡಬೇಕಾಗಿದ್ದ ಸ್ಥಳದಲ್ಲಿ ವಾಸಿಸದಂಥ ಪ್ರತಿವಾದಿಯು ಅಡ್ಡಿ ಮಾಡಿದರೆ ಕೋರ್ಟಿನ ಅಪ್ಪಣೆಯು ಹೊರತಾಗಿ ದಾವೆಯನ್ನು ನಡಿಸಲಾಗದು. ದಾವೇದ ಕಾರಣವು ಹುಟ್ಟಿದ ಸ್ಥಳದಲ್ಲಿ ಅಂದರೆ ಸೊಲ್ಲಾಪುರದಲ್ಲಿ ದಾವೆ ಮಾಡಬೇಕಾದರೆ ಮೇಲ್ಕಂಡ ಅಪ್ಪಣೆಯು ಜರೂರಿ ಇರುವದಿಲ್ಲ. ಅಥವಾ ಪ್ರತಿವಾದಿಯು ಅಡ್ಡಿ ವಗೈರೆ ಮಾಡಿದರೆ ಅದು ನಡಿಯಲಾಗದು.

ದಾವೆ ಮಾಡತಕ್ಕ ಸ್ಥಳದ ಸಂಬಂಧದಿಂದ ತಕರಾರು ಮಾಡುವದಾದರೆ ಅದು ಯಾವಾಗ್ಗೆ ಮಾಡತಕ್ಕದ್ದು? ಈ ಬಗ್ಗೆ ತಕರಾರು ತೀವ್ರವಾಗಿ ಮಾಡಬೇಕು. ಮುದ್ದೆಗೆ ಠರಾಯಿಸಲ್ಪಟ್ಟಿರುವ ಪ್ರತಿಯೊಂದು ಪ್ರಸಂಗದಲ್ಲಿ ಮುದ್ದೆ

ಗಳು ಠರಾಯಿಸಲ್ಪಟ್ಟಿರುವ ವೇಳೆಗೆ ಅಥವಾ ಅದರ ಮುಂಚೆ ಆ ತಕರಾರು ಮಾಡುವದು ಅವಶ್ಯವದೆ. ಹೀಗೆ ಮಾಡಲಿಕ್ಕೆ ತಪ್ಪಿದರೆ ಅದರ ಮೂಲಕವಾಗಿ ಅನ್ಯಾಯವಾಗಿರದಿದ್ದರೆ ಅಪೀಲು ಅಥವಾ ತಪಾಸಣಿ ಕೋರ್ಟಿನವರು ಅದನ್ನು ಕಬೂಲಮಾಡಲಿಕ್ಕಿಲ್ಲ.

ಅಧಿಕಾರದ ಬಗ್ಗೆ ತಕರಾರು ಮಾಡಲಾಗಿ ಕೋರ್ಟಿಗೆ ಆ ದಾವೆಯನ್ನು ತನಗೆ ನಡಿಸಲಿಕ್ಕೆ ಅಥವಾ ಇನಸಾಫಮಾಡಲಿಕ್ಕೆ ಅಧಿಕಾರವಿಲ್ಲ. ಆ ದಾವೆಯು ಯಾವದೇ ಪರ್ಯಾಯದಲ್ಲಿ ಯಾವ ಕೋರ್ಟಿನಲ್ಲಿ ಮಾಡಬೇಕಾಗಿತ್ತೊ ಆ ಕೋರ್ಟಿನಲ್ಲಿ ಹಾಜರಮಾಡುವ ಬಗ್ಗೆ ಅಸಲ ಅರ್ಜಿಯನ್ನು ಆ ಕೋರ್ಟಿನವರು ಹಿಂದಕ್ಕೆ ಕೊಡುವರು. ಆ ಮೇಲೆ ವಾದಿಯು ಯೋಗ್ಯವಾದ ಕೋರ್ಟಿನಲ್ಲಿ ಅಸಲ ಅರ್ಜಿಯನ್ನು ದಾಖಲ ಮಾಡಬಹುದು. ಆ ವೇಳ್ಯಕ್ಕೆ ವಾದಿಗೆ ದಾವೆ ದಶೆಯಿಂದ ಬೇರೆ ಕೋರ್ಟ ಫೀ ಸ್ಟಾಂಪು ಕೊಡಲಿಕ್ಕೆ ಕಾರಣವಿಲ್ಲ. ಮೊದಲು ಹಾಜರಮಾಡಿದ ಸ್ಟಾಂಪಿನ ಮೇಲೆ ಎರಡನೇ ಕೋರ್ಟಿನಲ್ಲಿ ದಾವೆ ಮಾಡಲಿಕ್ಕೆ ಬರುವದು. (ಆ. ೭. ರೂಲ ೧೦.)

ಸಂಕ್ಷಿಪ್ತವಾಗಿ ಹೇಳುವದೆಂದರೆ—ಸ್ಥಾವರ ಆಸ್ತಿ ಸಂಬಂಧವಾದ ಅಥವಾ ಪ್ರತ್ಯಕ್ಷವಾಗಿ ಹಿಡಿದ ಯಾ ಜಪ್ತುಮಾಡಿದ ಜಂಗಮ ಆಸ್ತಿಯನ್ನು ತಿರುಗಿ ಬೇಡುವ ಸಲುವಾಗಿ ದಾವೆಯು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಆ ಆಸ್ತಿ ಇರುವದೊ ಆ ಕೋರ್ಟಿನಲ್ಲಿಯೇ ಮಾಡಬೇಕು. ಸ್ಥಾವರ ಆಸ್ತಿಯು ಬೇರೆ ಬೇರೆ ಕೋರ್ಟುಗಳ ಅಧಿಕಾರದ ಹದ್ದುಗಳಲ್ಲಿ ಇದ್ದರೆ ಆ ಸ್ಥಾವರ ಆಸ್ತಿಯ ಯಾವದಾದರು ಭಾಗವು ಯಾ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಇರುವದೊ ಆ ಕೋರ್ಟಿನಲ್ಲಿ ದಾವೆಯನ್ನು ಮಾಡಬಹುದು. ಅಂದರೆ ಮೇಲ್ಕಂಡ ಕೋರ್ಟುಗಳ ಪೈಕಿ ಯಾವದಾದರೊಂದು ಕೋರ್ಟಿನಲ್ಲಿ ದಾವೆ ಮಾಡಲಿಕ್ಕೆ ಬರುವದು. ಸ್ಥಾವರ ಆಸ್ತಿ ಸಂಬಂಧದಿಂದ ನ್ಯಾಯಾಶ್ರಯವನ್ನು ಯಾ ಮಾಲಿಗೆ ಮಾಡಲ್ಪಟ್ಟ ಅಪಾಯಕ್ಕಾಗಿ ಪ್ರತಿಫಲವನ್ನು ಬೇಡುವದರ ಸಲುವಾಗಿ ದಾವೆಯನ್ನು ಮಾಡಬೇಕಾಗಿದ್ದಲ್ಲಿ ವಾದಿಯು ಬೇಡುವಂಥ ವಿಷಯವನ್ನು ಪ್ರತಿವಾದಿ ಕಡಿಯಿಂದ ಸಂಪೂರ್ಣವಾಗಿ ಕೋರ್ಟಿನಿಂದ ಪಡೆಯಬಹುದಾಗಿದ್ದರೆ ಆ ದಾವೆಯನ್ನು ಪ್ರತಿವಾದಿಯು ವಾಸಮಾಡುವ ಸ್ಥಳ ಯಾವ ಕೋರ್ಟಿನ

ಅಧಿಕಾರದ ಹದ್ದಿಯಲ್ಲಿ ಇರುವದು. ಆ ಕೋರ್ಟಿನಲ್ಲಿ ಅಥವಾ ಸದರಿ ಸ್ಥಾವರ ಆಸ್ತಿಯು ಯಾವ ಕೋರ್ಟಿನ ಹದ್ದಿಯಲ್ಲಿ ಇರುವದು ಆ ಕೋರ್ಟಿನಲ್ಲಿ ಮಾಡಬಹುದು. ಇವುಗಳ ಹೊರ್ತಾಗಿ ಬೇರೆ ತರದ ದಾವೆಯನ್ನು ಮಾಡಬೇಕಾಗಿದ್ದಲ್ಲಿ ದಾವೆಯ ಕಾರಣವು ಪೂರ್ತಿಯಾಗಿ ಯಾ ಅಂಶತಃ ಹುಟ್ಟಿದಂಥ ಸ್ಥಳವು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿರುವದು ಆ ಕೋರ್ಟಿನಲ್ಲಿ ಅಥವಾ ಎಲ್ಲ ಪ್ರತಿವಾದೇರು ವಾಸಮಾಡುವ ಸ್ಥಳ ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ರುವದು ಆ ಕೋರ್ಟಿನಲ್ಲಿ ಮಾಡಬಹುದು. ಅಥವಾ ಕೆಲವು ಪ್ರತಿವಾದೇರು ವಾಸಮಾಡುವ ಸ್ಥಳವು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿರುವದು ಆ ಕೋರ್ಟಿನಲ್ಲಿ ಮಾಡಬಹುದು. ಆದರೆ ಈ ಪ್ರಸಕ್ತಿಯಲ್ಲಿ ವಿಧಿಸಲ್ಪಡುವದೇನಂದರೆ—ಆ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ವಾಸಮಾಡಿದಂಥ ಪ್ರತಿವಾದೇರು ಈ ಪ್ರಕಾರ ದಾವೆ ಮಾಡುವದಕ್ಕೆ ಸಮ್ಮತಿಕೊಡಬೇಕು. ಅಥವಾ ಈ ಪ್ರಕಾರ ದಾವೆ ಮಾಡುವದಕ್ಕೆ ವಾದಿಯು ಆ ಕೋರ್ಟಿನ ಅಪ್ಪಣೆಯನ್ನು ಪಡೆಯಬೇಕು.

---

# ೪ನೆಯ ಪ್ರಕರಣ.

**(ಬ) ವಾದಿಯ ಹೆಸರು, ವರ್ಣನೆ ಮತ್ತು ಇರುವ ಸ್ಥಳ;**

**(ಕ) ಪ್ರತಿವಾದಿಯ ಹೆಸರು, ವರ್ಣನೆ ಮತ್ತು ಇರುವ ಸ್ಥಳ ತಿಳಿಯಬಹುದಾದ ಮಟ್ಟಿಗೆ;**

ಈ ಎರಡು ತಪಶೀಲುಗಳು ವಿಶೇಷತಃ ಒಂದೇಪ್ರಕಾರದವು ಇರುವದರಿಂದ ಅವುಗಳ ವಿಚಾರ ಅಥವಾ ವಿವೇಚನ ಒಮ್ಮೆಲೆ ಮಾಡುವದು ಶುಲಭವಾದದ್ದು ಇರುತ್ತದೆ. ಆದ್ದರಿಂದ ಅವುಗಳ ವಿವೇಚನ ಒಮ್ಮೆಲೆ ಮಾಡೋಣ.

ತನಗೆ ಬಾಧ್ಯತೆಯುಂಟೆಂಬು ಅಥವಾ ನ್ಯಾಯಾಶ್ರಯ ಉಂಟೆಂದು ವಾದಿಸುವಂಥ ಪ್ರತಿಯೊಬ್ಬ ಮನುಷ್ಯನು ಯಾವ ಮನುಷ್ಯನ ಯಾ ಮನುಷ್ಯರ ವಿರುದ್ಧವಾಗಿ ಆ ಬಾಧ್ಯತೆಯು ಅಥವಾ ಆ ನ್ಯಾಯಾಶ್ರಯವು ಉಂಟೆಂದು ಅನ್ನುವನು ಅವನ ಮೇಲೆ ಅಥವಾ ಅವರ ಮೇಲೆ ದಾವೆಯು ಮಾಡಬಹುದು. ದಾವೆ ಮಾಡುವವನಿಗೆ **ವಾದಿ** ಅಂತಾ ಸಂಬೋಧಿಸುವರು. ಮತ್ತು ಯಾರ ವಿರುದ್ಧವಾಗಿ ದಾವೆ ಮಾಡಿರುತ್ತದೆಯೋ ಅವನಿಗೆ **ಪ್ರತಿವಾದಿ** ಅಂತಾ ಸಂಬೋಧಿಸುವರು. ಒಂದೇ ದಾವೇದಲ್ಲಿ ಒಬ್ಬನೇ ವಾದಿ ಇರುವನು ಅಥವಾ ಒಬ್ಬನಕಿಂತ ಹೆಚ್ಚಿಗೆ ಜನರು ವಾದೇರು ಇರುವರು. ಹಾಗೆ ಒಂದೇ ದಾವೆದಲ್ಲಿ ಒಬ್ಬನೇ ಪ್ರತಿವಾದಿ ಇರುವನು. ಅಥವಾ ಒಬ್ಬನಕಿಂತ ಹೆಚ್ಚಿಗೆ ಪ್ರತಿವಾದೇರು ಇರುವರು. ಯಾವನಾದರು ಒಬ್ಬ ಮನುಷ್ಯನಿಗೆ ಮಾತ್ರ ಮತ್ತೊಬ್ಬನ ವಿರುದ್ಧವಾಗಿ ಬಾಧ್ಯತೆಯನ್ನು ಉಂಟು ಅಥವಾ ಬಾಧ್ಯತೆಯುನ್ನುಂಟೆಂದು ಅವನು ವಾದಿಸುವನೊ ಆ ಮನುಷ್ಯನು ಯಾ ಮನುಷ್ಯನ ವಿರುದ್ಧವಾಗಿ ಬಾಧ್ಯತೆಯುನ್ನುಂಟೆಂಬು ಅನ್ನುವನೊ ಅವನ ಮೇಲೆ ದಾವೆಯುನ್ನು ಮಾಡಬಹುದು. ಈ ಪ್ರಸಕ್ತಿಯಲ್ಲಿ ವಾದಿಯು ಒಬ್ಬನೇ ಮತ್ತು ಪ್ರತಿವಾದಿ ಸಹಾ ಒಬ್ಬನೇ ಇರುವನು. **ಆದರೆ ಯಾವ ಪರಿಸ್ಥಿತಿಯಲ್ಲಿ ಒಬ್ಬರಿಗಿಂತಾ ಹೆಚ್ಚು ಜನರಿಗೆ ಒಂದೆ ದಾವೇದಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು? ಮತ್ತು ಹಾಗೆ ಯಾವ ಪರಿಸ್ಥಿತಿಯಲ್ಲಿ ಒಬ್ಬನಗಿಂತಾ ಹೆಚ್ಚು ಜನ**

**ರಿಗೆ ಒಂದೇ ದಾವೇದಲ್ಲಿ ಪ್ರತಿವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು?** ಈ ಎರಡು ಸಂಗತಿಗಳನ್ನು ಚನ್ನಾಗಿ ವಿಚಾರ ಮತ್ತು ವಿವೇಚನೆಯನ್ನು ಮಾಡುವದು ಅವಶ್ಯವಡೆ.

ಯಾವ ಪರಿಸ್ಥಿತಿಯಲ್ಲಿ ಒಬ್ಬನಿಗಿಂತಾ ಹೆಚ್ಚು ಜನರಿಗೆ ಒಂದೇ ದಾವೆಯಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು? ಇಬ್ಬರಿಗೆ ಅಥವಾ ಇಬ್ಬರಗಿಂತ ಹೆಚ್ಚು ಜನರಿಗೆ ಒಂದೇ ಕೃತ್ಯದಿಂದ ಅಥವಾ ವ್ಯವಹಾರದಿಂದ ಯಾ ಅನೇಕ ಕೃತ್ಯಗಳಿಂದ ಅಥವಾ ವ್ಯವಹಾರಗಳಿಂದ ಒಟ್ಟಾಗಿ ಮಾತ್ರ ಬಾಧ್ಯತೆಯು ಅಥವಾ ನ್ಯಾಯಾಶ್ರಯವು ಉದ್ಭವಿಸುವದೋ ಆಗ್ಗೆ ಸದರಿ ಎಲ್ಲರಿಗೆ ಒಂದೇ ದಾವೆದಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸುವದು ಅವಶ್ಯವದೆ.

**ಉ:— ಅ, ಬ** ಮತ್ತು **ಕ** ಎಂಬುವವರ ಹೆಸರಿನಿಂದ **ಡ** ಎಂಬುವವನು ಕರ್ಜ-ಕತಿಬೆಯನ್ನು ಬರೆದುಕೊಟ್ಟನು. ಸದರಿ ಕರ್ಜ-ಕತಿಬೆಯು ಆಧಾರದ ಮೇಲೆ ದಾವೆ ಮಾಡುವದಾಗಿದ್ದರೆ **ಅ, ಬ** ಮತ್ತು **ಕ** ಇವರನ್ನು ವಾದಿಗಳನ್ನಾಗಿ ಒಟ್ಟುಗೂಡಿಸಿ ದಾವೆಯನ್ನು ಮಾಡಬೇಕು. ಅವರನ್ನು ಹೀಗೆ ಒಟ್ಟುಗೂಡಿಸದೆ ದಾವೆಯನ್ನು ಮಾಡಬಾರದು. ಯಾಕಂದರೆ ಸದರಿ ಅವರಿಗೆ ಒಟ್ಟಾಗಿ ಮಾತ್ರ **ಡ** ಈತನ ವಿರುದ್ಧವಾಗಿ ಬಾಧ್ಯತೆಯುಂಟು.

ಮೇಲ್ಕಂಡ **ಅ, ಬ** ಮತ್ತು **ಕ** ಇವರ ಪೈಕಿ ಯಾರಾದರು ವಾದಿಯು ಯಾ ವಾದಿಗಳನ್ನಾಗಿ ದಾವೆ ಮಾಡಲಿಕ್ಕೆ ಸಮ್ಮತಿಕೊಡದಿದ್ದರೆ ಅಥವಾ ಇನಕಾರಮಾಡಿದರೆ ಏನು ಮಾಡತಕ್ಕದ್ದು? ಹಾಗೆ ಸದರಿ ಅವರಿಗೆ ವಾದಿಯಾಗಿ ಅಥವಾ ವಾದಿಗಳನ್ನಾಗಿ ದಾವೆದಲ್ಲಿ ಸೇರಿಸಲಿಕ್ಕೆ ಬರುವದೊ? ಇಲ್ಲ.

ಅವನ ಸಮ್ಮತಿಯಿಲ್ಲದೆ ಯಾರಿಗಾದರು ದಾವೆದಲ್ಲಿ ವಾದಿಯನ್ನಾಗಿ ಸೇರಿಸಲಿಕ್ಕೆ ಬರುವದಿಲ್ಲ ಎಂಬ ಬಗ್ಗೆ ನಿಯಮವುಂಟು. ಮುಂದೆ ಗತೀ ಏನು? ವಾದಿಯಾಗಲಿಕ್ಕೆ ಯಾರು ಇನಕಾರ ಮಾಡುವನೋ ಅವನಿಗೆ ಪ್ರತಿವಾದಿ ಮಾಡಬೇಕು. ಅಂದರೆ ಅವನಿಗೆ ಪ್ರತಿವಾದಿಯಲ್ಲಿ ಸಾಮೀಲು ಮಾಡಬೇಕು. ಸಾರಾಂಶ—ಅಂಥವರಿಗೆ ದಾವೆಯಲ್ಲಿ ಪಕ್ಷಕಾರ ಮಾಡದೇ ದಾವೆಯನ್ನು ಮಾಡತಕ್ಕದ್ದಲ್ಲ. ಈ ಪ್ರಕಾರ ಸಾಮೀಲು ಮಾಡತಕ್ಕ ಪಕ್ಷಕಾರರನ್ನು ಸಾಮೀಲು ಮಾಡದೆ ಇದ್ದರೆ ಆ ದಾವೆಯು ನಿರರ್ಥಕವಾಗುವದೇನು? ಇಲ್ಲಾ. ಕೋರ್ಟಿನವರು ಪ್ರತಿಯೊಂದು

ದಾವೆಯಲ್ಲಿ ತಮ್ಮ ಹುಜುರನಲ್ಲಿ ಪ್ರತ್ಯಕ್ಷವಾಗಿ ಹಾಜರಾಗಿದ್ದಂಥ ಪಕ್ಷಕಾರರ ಹಕ್ಕಗಳು ಲಾಭಹಾನಿಗಳು ಸಂಬಂಧಿಸಿದಷ್ಟು ಮಟ್ಟಿಗೆ ವಿವಾದದ ವಿಷಯು ವನ್ನು ವಿಚಾರಿಸ ಬಹುದು (ಆ. ೧ ರೂ.೯) ಸಾಮೀಲು ಮಾಡತಕ್ಕ ಪಕ್ಷಕಾರ ರನ್ನು ಸಾಮೀಲು ಮಾಡದಿದ್ದ ಬಗ್ಗೆ ಹರಕತು ಮಾಡುವದಾಗಿದ್ದರೆ ಅದು ಯಾವಾಗ ಮಾಡಬೇಕು ? ಸಾಧ್ಯವಾದಷ್ಟು ತ್ವರೆಯಾದ ವೇಳೆಯಲ್ಲಿ ಮಾಡಬೇಕು. ಮುದ್ದೆಗಳನ್ನು ತೆಗೆದಂಥ ಎಲ್ಲ ಪ್ರಸಕ್ತಿಗಳಲ್ಲಿಯು ಅಂಥ ಮುದ್ದೆಗಳನ್ನು ತೆಗೆ ಯುವ ವೇಳೆಗೆ ಅಥವಾ ಅದರ ಪೂರ್ವದಲ್ಲಿ ಈ ಬಗ್ಗೆ ಹರಕತ್ತು ಮಾಡಬೇಕು. ಈತರಹದ ಹರಕತ್ತಿನ ಕಾರಣವು ಹಿಂದಿನಿಂದ ಅಂದರೆ ಮುದ್ದೆಗಳನ್ನು ತೆಗೆದ ನಂತರಾ ಉದ್ಭವಿಸಿದಲ್ಲಿ ಏನು ಮಾಡಬೇಕು ? ಆ ಹರಕತ್ತಿನ ಕಾರಣವು ಉತ್ಪನ್ನ ವಾದನಂತರ ತ್ವರೆಯಾದ ವೇಳೆಯಲ್ಲಿ ಈ ಬಗ್ಗೆ ಹರಕತ್ತು ಮಾಡಬೇಕು ? ( ಆ ೧ ರೂ. ೧೩ )

**ಉ:—ಅ** ಎಂಬವನ ಹೆಸರಲೆ **ಬ** ಎಂಬುವನು ಒಂದು ಸಾಲದ ಕತಿಬೆ ಯನ್ನು ಬರೆದುಕೊಟ್ಟನು. ಸದರಿ ಸಾಲ **ಬ** ಎಂಬುವನು ತೀರಿಸಲಿಲ್ಲ ಕಾರಣ **ಅ** ಈತನು **ಬ** ಈತನ ಮೇಲೆ ಮೇಲ್ಕಂಡ ಸಾಲದ ಕತಿಬೆಯ ಆಧಾರದ ಮೇಲೆ ದಾವೆಯನ್ನು ಮಾಡಿದನು. ಈ ದಾವೆಯಲ್ಲಿ ಮುದ್ದೆಗಳನ್ನು ತೆಗೆದನಂತರ ಮತ್ತು ದಾವೇದ ನಿಕಾಲೆ ಆಗುವದರ ಒಳಗೆ **ಅ** ಈತನು ಮೃತವಾದನು. ಮೃತನಿಗೆ **ಕ, ಡ** ಮತ್ತು **ಇ** ಎಂಬ ಮೂರು ಮಂದಿ ವಾರಸದಾರರು ಇರುತ್ತಾರೆ. ಈ ಪ್ರಸಕ್ತಿಯಲ್ಲಿ **ಕ, ಡ** ಮತ್ತು **ಇ** ಈ ಮೂರು ಮಂದಿ ಕೂಡಿ ದಾವೆಯನ್ನು ನಡೆಯಿಸುವದು ಅವಶ್ಯವದೆ. ಇವರ ಪೈಕಿ ಯಾರಾದರು ವಾದಿಯಾಗಲಿಕ್ಕೆ ಇನಕಾರ ಮಾಡಿದರೆ ಅಂಥವನಿಗೆ ಪ್ರತಿವಾದಿಯಲ್ಲಿ ಸಾಮೀಲು ಮಾಡುವದು ಅವ ಶ್ಯವದೆ. ಹೀಗಿದ್ದು, **ಕ** ಮತ್ತು **ಡ** ಇವರು **ಇ** ಈತನಿಗೆ ಬಿಟ್ಟು ಅಂದರೆ ಅವ ನಿಗೆ ದಾವೆವಲ್ಲಿ ಪಕ್ಷಕಾರ ಮಾಡದೆ ಮೇಲ್ಕಂಡ ದಾವೆಯು ನಡಿಸಿದರೆ. **ಇ** ಎಂಬು ವನಿಗೆ ದಾವೆವಲ್ಲಿ ಪಕ್ಷಕಾರನು ಮಾಡಿಲ್ಲ ಎಂಬುವ ಬಗ್ಗೆ ಹರಕತ್ತು **ಬ** ಈತನು ಆದಷ್ಟು ತ್ವರೆಯಾದ ವೇಳೆಯುಲ್ಲಿ ಮಾಡಬೇಕು. ಇಂಥ ಯಾವದೊಂದು ಹರ ತ್ತನ್ನು ಈ ಪ್ರಕಾರಾ ಮಾಡದಿದ್ದ ಪಕ್ಷದಲ್ಲಿ ಏನು ಆಗುವದು ? ಪ್ರತಿವಾದಿಯು ಅದನ್ನು ಬಿಟ್ಟು ಬಿಟ್ಟನೆಂದು ಎಣಿಸಲಾಗುವದು.

ಕೆಳಗಿನ ಪ್ರಸಕ್ತಿಯಲ್ಲಿ ಒಬ್ಬನಿಗಿಂತಾ ಹೆಚ್ಚು ಜನರಿಗೆ ಒಂದೇ ದಾವೇಯಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು ? ಆದರೆ ಹಾಗೆ ಮಾಡುವದು ಕಾಯದೆಯಿಂದಾ ಅವಶ್ಯವದೆ ಹೀಗೆ ಏನು ಇಲ್ಲಾ ಅದು ಪಕ್ಷಕಾರರ ಮರ್ಜಿಮೇಲೆ ಅನೆ.

೧. ಒಬ್ಬನಿಗಿಂತ ಹೆಚ್ಚು ಜನರಿಗೆ ಬೇರೆ ಬೇರೆಯಾಗಿ ಯಾ ಒಬ್ಬನ ಬದಲು ಮತ್ತೊಬ್ಬನಾಗಿ ಒಂದೇ ಕೃತ್ಯದಿಂದ ಅಥವಾ ವ್ಯವಹಾರದಿಂದ ಯಾ ಅನೇಕಕೃತ್ಯಗಳಿಂದ ಅಥವಾ ವ್ಯವಹಾರದಿಂದ ಬಾಧ್ಯತೆಯುಂಟೊ ? ಮತ್ತು

೨. ಸದರಿ ಅವರು ಬೇರೆ ಬೇರೆ ದಾವೆಗಳನ್ನು ತಂದರೆ ಯಾವತ್ತರಿಗು ಸಾಮಾನ್ಯವಾದಂಥ ಯಾವದೊಂದು ಕಾಯದೆಯು ಯಾ ವಸ್ತುಸ್ಥಿತಿಯು ಸಂಬಂಧದ ಪ್ರಶ್ನವೂ ಉದ್ಭವಿಸುವದೊ ?

ಈ ಎರಡು ಶರ್ತುಗಳನ್ನು ಹಾಜರಿದ್ದಾಗ್ಗೆ ಮಾತ್ರ ಅನೇಕ ಜನರಿಗೆ ಒಂದೆ ದಾವೆಯಲ್ಲಿ ವಾದಿಗಳನ್ನಾಗಿ ಒಟ್ಟು ಗೂಡಿಸಲಿಕ್ಕೆ ಬರುವದು. ಈ ಎರಡು ಶರ್ತುಗಳ ಪೈಕಿ ಯಾವದಾದರೊಂದು ಹಾಜರ ಇದ್ದು ಮತ್ತೊಂದು ಹಾಜರಿರದ್ದರೆ ಮೇಲೆ ಹೇಳಿದಂತೆ ಅನೇಕ ಜನರಿಗೆ ವಾದಿಗಳನ್ನಾಗಿ ಒಟ್ಟು ಗೂಡಿಸಲಿಕ್ಕೆ ಬರಲಾರದು. ಕಾರಣ ಈ ಎರಡು ಶರ್ತುಗಳನ್ನು ಹಾಜರಿರುವದು ಅವಶ್ಯವಿದೆ.

**ಉ:—**(೧) **ಅ** ಮತ್ತು **ಬ** ಎಂಬವರಿಗೆ **ಕ** ಎಂಬುವವನು ಬಡೆದನು. ಈ ಪ್ರಸಕ್ತಿಯಲ್ಲಿ **ಅ** ಮತ್ತು **ಬ** ಇವರು ಕೂಡಿ **ಕ** ಈತನ ಮೇಲೆ ಲುಕಸಾನಿ ಬಗ್ಗೆ ಒಂದೇ ದಾವೆಯನ್ನು ಮಾಡಬಹುದು ತನ್ನ ಮರ್ಜಿ ಪ್ರಕಾರ ಅವರು ಬೇರೆ ಬೇರೆ ಸಹಾ ದಾವೆಗಳನ್ನು ಮಾಡಬಹುದು ಈ ದಾವೆದಲ್ಲಿ **ಅ** ಮತ್ತು **ಬ** ಇವರಿಗೆ ಸಾಮಾನ್ಯವಾದಂಥ ಕಾಯದೆಯ ಮತ್ತು ವಸ್ತುಸ್ಥಿತಿ ಸಂಬಂಧದ ಪ್ರಶ್ನವೂ ಇರುತ್ತದೆ. ಕಾರಣ ಅವರಿಗೆ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು.

(೨) **ಅ** ಎಂಬುವವನು **ಬ** ಎಂಬುವನ ಕಡೆಗೆ ಕೆಲವು ಸಾಲ ಮಾಡಿದನು. ಮುಂದೆ **ಕ** ಎಂಬುವವನ ಕಡೆಗೆ ಬೇರೆಯೊಂದು ಸಾಲ ಮಾಡಿದನು ಮತ್ತು **ಡ** ಎಂಬುವನ ಕಡಿಗೆ ಮತ್ತೊಂದು ಸಾಲ ಮಾಡಿದನು. ಸದರಿ ಸಾಲಗಳು ಬೇರೆ ಬೇರೆ ಇರುವವು. ಸದರಿ **ಬ, ಕ** ಮತ್ತು **ಡ** ಇವರ ಸಾಲಗಳನ್ನು ಮುಣಗಿಸುವ ಇರಾದೆಯಿಂದ **ಅ** ಈತನು ತನ್ನ ಮಗಳಿಗೆ ತನ್ನ ಆಸ್ತಿಯನ್ನು ಬಕ್ಷೀಸ

ಕೊಟ್ಟನು. ಸದರಿ ಬಕ್ಷೀಸ ರದ್ದುಪಡಿಸುವದರ ಪಶಿಂದಾ **ಬ, ಕ** ಮತ್ತು **ಡ** ಇವರು ಒಟ್ಟಾಗಿ **ಅ** ಈತನ ಮೇಲೆ ಒಂದೇ. ದಾವೆಯನ್ನು ಮಾಡಬಹುದು. ಅವರ ಮರ್ಜೀ ಪ್ರಕಾರ ಬೇರೆ ಬೇರೆಯಾಗಿ ಸಹ ದಾವೆಗಳನ್ನು ಮಾಡಬಹುದು. ಇದರಲ್ಲಿ **ಅ** ಈತನು **ಬ, ಕ** ಮತ್ತು **ಡ** ಇವರ ಸಾಲಗಳನ್ನು ಮುಣಿಗಿಸುವ ಇರಾದೆಯಿಂದ ತನ್ನ ಮಗಳಿಗೆ ಬಕ್ಷೀಸ ಕೊಟ್ಟನು ಯಾ ಇಲ್ಲಾ ಈ ಪ್ರಶ್ನೆಯ ವಿಚಾರವು ಮಹತ್ವದ್ದು ಇರುವದು. **ಬ, ಕ** ಮತ್ತು **ಡ** ಇವರು ಬೇರೆ ಬೇರೆ ದಾವೆಗಳನ್ನು ಮಾಡಿದರೆ ಈ ಪ್ರಶ್ನೆಯು ಆ ದಾವೆಗಳಲ್ಲಿ ಹೊರಡಬಹುದು. ಈ ಪ್ರಶ್ನೆಯು **ಬ, ಕ** ಮತ್ತು **ಡ** ಇವರಿಗೆ ಸಾಮಾನ್ಯವಾದಂಥ ಇರುವದು. ಕಾರಣ ಇವರಿಗೇ ಒಂದೇ ದಾವೆಯಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು.]

ಹ್ಯಾಗೆ ವಾದೇರು ಅನೇಕ ಜನರು ಇರುವರೋ ಅದರಂತೆ ಪ್ರತಿ ವಾದೇರು ಸಹ ಒಂದೇ ದಾವೇದಲ್ಲಿ ಅನೇಕ ಜನರು ಇರುವರು. **ಆದರೆ ಯಾವ ಪರಿಸ್ಥಿತಿಯಲ್ಲಿ ಒಬ್ಬರಗಿಂತಾ ಹೆಚ್ಚು ಜನರಿಗೆ ಒಂದೇ ದಾವೇದಲ್ಲಿ ಪ್ರತಿವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು ?** ಒಬ್ಬರಿಗಿಂತ ಹೆಚ್ಚು ಜನರಿಗೆ ಒಂದೇ ದಾವೆದಲ್ಲಿ ಕೆಳಗಿನ ಪರಿಸ್ಥಿತಿಯಲ್ಲಿ ಪ್ರತಿವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು.

೧. ಒಬ್ಬರಗಿಂತ ಹೆಚ್ಚು ಜನರ ವಿರುದ್ಧವಾಗಿ ಒಟ್ಟಾಗಿ ಯಾ ಬೇರೆ ಬೇರೆಯಾಗಿ ಒಬ್ಬನ ಬದಲು ಒಬ್ಬನಿಗಾಗಿ ಒಂದೇ ಕೃತ್ಯದಿಂದ ಅಥವಾ ವ್ಯವಹಾರದಿಂದ ಯಾ ಅನೇಕ ಕೃತ್ಯಗಳಿಂದ ಅಥವಾ ವ್ಯವಹಾರಗಳಿಂದ ಬಾಧ್ಯತೆಯುಂಟಾಗಿರುತ್ತದೆಯೋ, ಮತ್ತು

೨. ಸದರೀಯವರ ಮೇಲೆ ಬೇರೆ ಬೇರೆಯಾಗಿ ದಾವೆಗಳನ್ನು ಮಾಡಿದ್ದರೆ ಕಾಯದೆಯ ಅಥವಾ ವಸ್ತುಸ್ಥಿತಿಯ ಸಂಬಂಧವಾಗಿ ಯಾವದಾದರು ಸಾಮೂಹಿಕ ಪ್ರಶ್ನೆಯು ಹೊರಡಬಹುದೊ.

ಈ ಎರಡು ಶರ್ತುಗಳನ್ನು ಹಾಜರಿದ್ದಾಗ್ಗೆ ಮಾತ್ರ ಅನೇಕ ಜನರಿಗೆ ಒಂದೇ ದಾವೆಯಲ್ಲಿ ಪ್ರತಿವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು. ಈ ಎರಡು ಶರ್ತುಗಳ ಪೈಕಿ ಯಾವದಾದರೊಂದು ಹಾಜರಿದ್ದು ಮತ್ತೊಂದು ಹಾಜ

ರಿರದಿದ್ದರೆ ನಡೆಯಲಾರದು. ಆದರೆ ಎರಡು ಶರ್ತುಗಳು ಹಾಜರಿರುವದು ಅವಶ್ಯ ವದೆ.

**ಉ:** (೧) **ಬ** ಎಂಬುವವನು ಮತ್ತು **ಕ** ಎಂಬುವವನು ಕೂಡಿ ಸಂಗನಮತದಿಂದ **ಅ** ಎಂಬುವವನಿಗೆ ಬಡದರು. **ಅ** ಈತನು **ಬ** ಮತ್ತು **ಕ** ಇವರಿಗೆ ಪ್ರತಿವಾದಿಗಳನ್ನಾಗಿ ಒಂದೇ ದಾವೆವಲ್ಲಿ ಒಟ್ಟುಗೂಡಿಸ ಬಹುದು ಅಥವಾ ತನ್ನ ಮರ್ಜಿಪ್ರಕಾರ **ಬ** ಮತ್ತು **ಕ** ಇವರ ಮೇಲೆ ಬೇರೆ ಬೇರೆ ದಾವೆಗಳು ಸಹಾ ಮಾಡಬಹುದು. ಇವರಲ್ಲಿ **ಬ** ಮತ್ತು **ಕ** ಇವರು **ಅ** ಈತನಿಗೆ ಬಡದರೂ ಯಾ ಇಲ್ಲಾ ಎಂಬುದು ಸಾಮೂಹಿಕ ಪ್ರಶ್ನೆಯುಂಟು.

**ಉ:**—(೨) **ಅ** ಎಂಬುವವನು ತನ್ನ ಜಮೀನು **ಬ** ಎಂಬುವವನಿಗೆ ಲಾವಣಿಯಿಂದ ಕೊಟ್ಟನು. ಮತ್ತು **ಬ** ಈತನು ಲಾವಣಿದಾರನಾತೆಯಿಂದ ಆ ಜಮೀನಿಯ ಕಬಜಾ ಪಡಕೊಂಡನು. ಮುಂದೆ **ಬ** ಈತನು ಇದೇ ಜಮೀನಿಯ ಪೈಕಿ ಒಂದು ಭಾಗವನ್ನು **ಕ** ಎಂಬುವನಿಗೆ ಮತ್ತು ಮತ್ತೊಂದು ಭಾಗವೂ **ಡ** ಎಂಬುವನಿಗೆ ಕೊರಪಾಲಗೆ ಕೊಟ್ಟನು. **ಬ, ಕ** ಮತ್ತು **ಡ** ಇವರು ತಮ್ಮ ಕರಾರ ಮುಗಿದನಂತರ ಸಹ **ಅ** ಈತನಿಗೆ ಜಮೀನಿಯ ಕಬಜಾ ಕೊಡವಲ್ಲರು. ಈ ಪ್ರಸಕ್ತಿಯಲ್ಲಿ **ಬ, ಕ** ಮತ್ತು **ಡ** ಇವರಿಗೆ ಪ್ರತಿವಾದಿಗಳನ್ನಾಗಿ ಒಂದೇ ದಾವೆದಲ್ಲಿ ಒಟ್ಟುಗೂಡಿಸಿ **ಅ** ಈತನು ದಾವೆಯನ್ನು ಮಾಡಬಹು. ತನ್ನ ಮರ್ಜಿ ಪ್ರಕಾರ **ಬ, ಕ,** ಮತ್ತು **ಡ** ಇವರ ಮೇಲೆ ಬೇರೆ ಬೇರೆ ದಾವೆಗಳನ್ನು ಸಹ ಮಾಡಬಹುದು.

ಪ್ರತಿಯೊಬ್ಬ ಪ್ರತಿವಾದಿಯು, ಅವನ ವಿರುದ್ಧವಾಗಿ ಮಾಡಿಡ ಯಾವದಾದರು ದಾವೇಯಲ್ಲಿ ಬೇಡಿದ ಎಲ್ಲ ನ್ಯಾಯಾಶ್ರಯದ ಬಗ್ಗೆ ಹಿತಸಂಬಂಧ ಉಳ್ಳವನಾಗಿರುವ ಅಗತ್ಯವಿಲ್ಲ. ಯಾವದಾದರು ಕರಾರದ ಮೂಲಕವಾಗಿ ಯಾರಾದರೂ ಸದರ ಕರಾರಿನಂತೆ ನಡಿಯಲಿಕ್ಕೆ ಬದ್ಧರಾಗಿದ್ದರೆ ಅಥವಾ ಜವಾಬದಾರರಾಗಿದ್ದರೆ ಆ ಎಲ್ಲ ಜನರ ಮೇಲೆ ಅಥವಾ ಅವರ ಪೈಕಿ ಕೆಲವು ಜನರ ಮೇಲೆ ವಾದಿಯು ತನ್ನ ಇಚ್ಛೆಯಂತೆ ಒಂದೇದಾವೆಯನ್ನು ಮಾಡಬಹುದು. ಅಂದರೆ ಸಧರಿ (೧) ಎಲ್ಲ ಜನರ ಮೇಲೆ ದಾವೆ ಮಾಡುವನು ಅಥವಾ (೨) ಕೆಲವು ಜನರ ಮೇಲೆ ದಾವೆಯನ್ನು ಮಾಡುವನು ಮತ್ತು ಉಳದ ಜನರಿಗೆ ಬಿಡುವನು.

**ಉ:**—**ಅ** ಎಂಬುವವನಿಗೆ **ಬ, ಕ** ಮತ್ತು **ಡ** ಎಂಬುವವರು ೫೦೦೪ ರುಪಾಯಿಗಳ ಬಗ್ಗೆ ಒಂದು ಸಾಲದ ಕತಿಬೆಯನ್ನು ಬರೆದುಕೊಟ್ಟರು. ಸದರೀ

ಕತಿಬೆಯ ಕರಾರಿನಂತೆ ನಡೆಯಲಿಕ್ಕೆ **ಬ, ಕ** ಮತ್ತು **ಡ** ಈ ಮೂರು ಮಂದಿ ಬದ್ಧರಾಗಿರುತ್ತಾರೆ. **ಅ** ಈತನು **ಬ, ಕ** ಮತ್ತು **ಡ** ಈ ಮೂರು ಮಂದಿ ಮೇಲೆ ದಾವೆ ಮಾಡುವನು ಅಥವಾ ಇವರ ಪೈಕಿ ಕೆಲವರ ಮೇಲೆ ಅಂದರೆ **ಬ** ಮತ್ತು **ಕ** ಇವರ ಮೇಲೆ ದಾವೆ ಮಾಡುವನು ಮತ್ತು **ಡ** ಈತನಿಗೆ ಬಿಡುವನು.

**ಒಂದೆ ಸ್ವಾರ್ಥಸಂಬಂಧದಲ್ಲಿ ಒಬ್ಬ ಮನುಷ್ಯನು ಎಲ್ಲರ ತರ್ಫಿನಿಂದ ದಾವೆಯನ್ನು ಮಾಡಬಹುದು ಯಾ ಪ್ರತಿವಾದ ಮಾಡಬಹುದು.** (ಆ. ೧ ರೂಲ ೮) ಯಾವದೊಂದು ದಾವೆಯಲ್ಲಿ ಬಹು ಜನನಿಗೆ ಯಾ ಬಹುಜನರ ಸಮಾಜಕ್ಕೆ ಸ್ವಾರ್ಥಸಂಬಂಧವಿದ್ದಲ್ಲಿ ಅವರೆಲ್ಲರಿಗೂ ದಾವೆಯಲ್ಲಿ ಪಕ್ಷಕಾರಗನ್ನಾಗಿ ಮಾಡುವದು ಅನನಕೂಲವೂ ಅಶಕ್ಯವೂ ಇರುವದು. ಇಂಥ ಪ್ರಸಕ್ತಿಯಲ್ಲಿ ಏನು ಮಾಡಬೇಕು ? ಈ ತರಹದ ದಾವೆಯಲ್ಲಿ ಸ್ವಾರ್ಥಸಂಬಂಧವುಳ್ಳಂಥ ಜನರ ಪೈಕಿ ಒಬ್ಬನಾಗಲೀ ಹೆಚ್ಚು ಜನರಾಗಲೀ ಈ ಎಲ್ಲ ಅಂದರೆ ಸ್ವಾರ್ಥಸಂಬಂದವುಳ್ಳಂಥ ಎಲ್ಲ ಜನರ ತರ್ಫಿನಿಂದ ಅಥವಾ ಅವರ ಹಿತಕ್ಕಾಗಿ ಕೋರ್ಟಿನವರ ಅಪ್ಪಣೆಯನ್ನು ಪಡೆದುಕೊಂಡು ದಾವೆಯನ್ನು ಮಾಡಬಹುದು ಯಾ ತನ್ನ ಮೇಲಾಗಲೀ ತಮ್ಮ ಮೇಲಾಗಲೀ ದಾವೆಯನ್ನು ಮಾಡಿಸಿಕೊಳ್ಳಬಹುದು ಯಾ ಸದರೀ ದಾವೆಯಲ್ಲಿ ಪ್ರತಿವಾದವನ್ನು ನಡೆಯಿಸಬಹುದು. ಕೋರ್ಟಿನವರು ಈ ಎಲ್ಲ ಜನರಿಗೆ ಈ ದಾವೇದ ನೋಟೀಸ ಕೊಡಬಹುದು ಯಾ ಜಾಹೀರನಾಮೆಯಿಂದಾ ಈ ದಾವೇದ ಸಂಗತಿಯನ್ನು ಪ್ರಕಟಿಸಬಹುದು. ಈ ತರಹದ ದಾವೆಯಲ್ಲಿ ಸ್ವಾರ್ಥಸಂಬಂಧವುಳ್ಳಂಥ ಯಾವನಾದರೊಬ್ಬನು ಅಥವಾ ಯಾರಾದರು ತನಗೆ ಅಥವಾ ತಮಗೆ ಪಕ್ಷಕಾರನ್ನಾಗಿ ಮಾಡಬೇಕೆಂದು ಕೋರ್ಟಿಗೆ ಅರ್ಜಿಯನ್ನು ಮಾಡಬಹುದು. ಬಹುಜನ ವತಿಯಿಂದ ಮೇಲೆ ಹೇಳಿದ ದಾವೆಯನ್ನು ಮಾಡಬೇಕಾದರೆ ಆ ಬಗ್ಗೆ ಕೋರ್ಟಿನ ಅಪ್ಪಣೆಯನ್ನು ಪಡಕೊಳ್ಳುವದು ಅವಶ್ಯವದೆ. ಈ ತರದ ದಾವೆ ದಾಖಲು ಮಾಡುವ ಕಾಲಕ್ಕೆ ಮೇಲ್ಕಂಡಂತೆ ಅಪ್ಪಣೆಯನ್ನು ಪಡಕೊಳ್ಳುವ ಬಗ್ಗೆ ಕೋರ್ಟಿಗೆ ಅರ್ಜಿಯನ್ನು ಮಾಡಬಹುದು.

ಉದಾಹರಣಾರ್ಥ. "ಶ್ರೀ ಸಿದ್ಧಾರೂಢ ಸ್ವಾಮಿಯವರ ಭಕ್ತ ಜನರ ವತಿಯಿಂದ" ಈ ತರದ ದಾವೆಯನ್ನು ಮಾಡಲಿಕ್ಕೆ ಬರವದು ಹಾಗೆ "ಜೈನ ಸಮಾಜದ ವತಿಯಿಂದ" ಅಥವಾ "ಮುನಸಿಪಾಲಟಿಗೆ ಕರಾ ಕೊಡುವ ಜನರ ವತಿಯಿಂದ"

ವಗೈರೆ ಈ ಪ್ರಕಾರದ ದಾವೆಯನ್ನು ಮಾಡಬಹುದು. ಈ ತರದ ದಾವೆಯಲ್ಲಿ ಸರ ನಾಮೆಯನ್ನು ಕೆಳಗಿನಂತೆ ಬರೆಯಬೇಕು.

ಉ:—೧. **ಅ, ಬ** (ವರ್ಣನವನ್ನು ವಾಸಸ್ಥಳವನ್ನು ಬರೆಯಬೇಕು) ತನ್ನ ಸ್ವಂತದ ಬಗ್ಗೆ ಮತ್ತು **ಕ, ಡ** (ವರ್ಣನವನ್ನು ವಾಸಸ್ಥಳವನ್ನು ಬರೆಯು ಬೇಕು.) ಎಂಬುವವನ ಬೇರೆ ಎಲ್ಲ ಸಾವುಕಾರರ ಬಗ್ಗೆ..........ವಾದಿ ಅಥವಾ ಪ್ರತಿವಾದಿ.

೨ ಜೋತಿಬಾ ಸಾತುರಾಮ ಗಣೇಶಕರ, ವಯಾ ೫೦, ಜಾತಿ ಮರಾಠಾ, ಉದ್ಯೋಗ ವ್ಯವಹಾರ, ಸಾಕಿನ ಹುಬ್ಬಳ್ಳಿ ತನ್ನ ಸ್ವಂತದ ಬಗ್ಗೆ ಮತ್ತು ಶ್ರೀ ಭಾರತಿ ಮಠದ ಅನುಯಾಯಿಗಳರಾದವರ ಬಗ್ಗೆ...... ..ವಾದಿ ಅಥವಾ ಪ್ರತಿ ವಾದಿ

೩. ಸಿದ್ದಪ್ಪಾ ತಂದಿ ಗುರುಸಿದ್ದಪ್ಪಾ ಮಠದ, ವಯಾ ೪೨, ಜಾತಿ ಲಿಂಗಾಯತ, ಉದ್ಯೋಗ ಭಿಕ್ಷೆ, ಸಾಕೀನ ಹುಬ್ಬಳ್ಳಿ, ತನ್ನ ಸ್ವಂತದ ಬಗ್ಗೆ ಮತ್ತು ಶ್ರೀಸಿದ್ಧಾರೂಢಸ್ವಾಮಿ ಇವರ ಭಕ್ತ ಜನರ ಬಗ್ಗೆ ... ವಾದಿ ಅಥವಾ ಪ್ರತಿವಾದಿ

೪. ಗುರುಸಿದ್ದಪ್ಪಾ ತಂದಿ ರಾಚಪ್ಪಾ ಉಳ್ಳಾಗಡ್ಡಿ, ವಯಾ ೫೦, ಜಾತಿ ಲಿಂಗಾಯತ, ಉದ್ಯೋಗ ವ್ಯವಹಾರ, ಸಾಕೀನ ವಿಜಾಪುರ, ತನ್ನ ಸ್ವಂತದ ಬಗ್ಗೆ ಮತ್ತು ಮೂರಸಾವಿರಮಠದ ಅನುಯಾಯಿಗಳರಾದವರ ಬಗ್ಗೆ ... ... ವಾದಿ ಅಥವಾ ಪ್ರತಿವಾದಿ.

ಸಾಮೀಲು ಮಾಡಲಾಗದಂಥ ಯಾವನಾದರೂ ಪಕ್ಷಕಾರನನ್ನು ದಾವೆ ಯಲ್ಲಿ ಸಾಮೀಲು ಮಾಡಿದ್ದರಿಂದ ಆ ದಾವೆಯು ನಿರರ್ಥಕವಾಗುವದೇನು ? ಇಲ್ಲ. ಕೋರ್ಟಿನವರು ಪ್ರತಿಯೊಂದು ದಾವೆಯಲ್ಲಿ ತಮ್ಮ ಹುಜುರಿನಲ್ಲಿ ಪ್ರತ್ಯ ಕ್ಷವಾಗಿ ಹಾಜರಾಗಿದ್ದಂಥ ಪಕ್ಷಕಾರರ ಹಕ್ಕಗಳು ಲಾಭಹಾನಿಗಳು ಸಂಬಂಧಿಸಿ ದಷ್ಟು ಮಟ್ಟಿಗೆ ವಿವಾದದ ವಿಷಯವನ್ನು ವಿಚಾರಿಸಬಹುದು, (ಆ. ೧ ರ. ೯) ಸಾಮೀಲು ಮಾಡಲಾಗದಂಥ ಪಕ್ಷಕಾರರನ್ನು ಸಾಮೀಲು ಮಾಡಿದ ಬಗ್ಗೆ ಹರ ಕತ್ತು ಮಾಡುವದಾಗಿದ್ದರೆ ಅದು ಯಾವಾಗ ಮಾಡಬೇಕು ? ಸಾಧ್ಯವಾದಷ್ಟು ತ್ವರಿಸೂದ ವೇಳೆಯಲ್ಲಿ ಮಾಡಬೇಕು. ಮುದ್ದೆಗಳನ್ನು ತೆಗೆದಂಥ ಎಲ್ಲ ಪ್ರಸಕ್ತಿ ಗಳಲ್ಲಿಯೂ ಅಂಥ ಮುದ್ದೆಗಳನ್ನು ತೆಗೆಯುವ ವೇಳೆಗೆ ಅಥವಾ ಅದರ ಪೂರ್ವ ದಲ್ಲಿ ಈ ಬಗ್ಗೆ ಹರಕತ್ತು ಮಾಡಬೇಕು. ಈ ತರದ ಹರಕತ್ತಿನ ಕಾರಣವು

ಹಿಂದಿನಿಂದ ಅಂದರೆ ಮುದ್ದೆಗಳನ್ನು ತೆಗೆದ ನಂತರ ಉತ್ಪನ್ನವಾಗಿದ್ದರೆ ಏನು ಮಾಡುವದು ? ಆ ಹರಕತ್ತಿನ ಕಾರಣವು ೨ ಉತ್ಪನ್ನವಾದ ನಂತರ ತ್ವರೆಯಾದ ವೇಳೆಯಲ್ಲಿ ಈ ಬಗ್ಗೆ ಹರಕತು ಮಾಡಬೇಕು ? (ಆ. ೧ ರು. ೧೭) ಈ ಪ್ರಕಾರ ಹರಕತ್ತು ಮಾಡದಿದ್ದರೆ ಏನು ಆಗುವದು ? ಪ್ರತಿವಾದಿಯು ಅದನ್ನು ಬಿಟ್ಟುಬಿಟ್ಟೆನೆಂದು ಎಣಿಸಲಾಗುವದು. ಯಾವದೇ ದಾವೆಯಲ್ಲಿ ಈ ಪ್ರಕಾರದ ದೋಷವು ಕಂಡುಬಂದರೆ ಉಭಯ ಪಕ್ಷಕಾರರಲ್ಲಿ ಯಾವನಾದರೂ ಅರ್ಜಿ ಮಾಡಲಾಗಿ, ಅಯೋಗ್ಯವಾಗಿ ವಾದಿ ಅಥವಾ ಪ್ರತಿವಾದಿಯಾಗಿ ದಾವೆಯಲ್ಲಿ ಸೇರಿಸಲ್ಪಟ್ಟ ಯಾವನಾದರು ಪಕ್ಷಕಾರನ ಹೆಸರು ತೆಗೆದು ಹಾಕಲಿಕ್ಕೆ; ಮತ್ತು ವಾದಿಯಾ ಪ್ರತಿವಾದಿಯಾಗಿ ದಾವೆಯಲ್ಲಿ ಸೇರಿಸಲ್ಪಡತಕ್ಕಂಥ ಯಾವನೊಬ್ಬ ಮನುಷ್ಯನ ಹೆಸರು ದಾವೆಯಲ್ಲಿ ಸೇರಿಸಲಿಕ್ಕೆ ಕೋರ್ಟಿನವರು ತಮಗೆ ನ್ಯಾಯವಾಗಿ ತೋರಬಹುದಾದಂಥ ಶರ್ತುಗಳಿಂದ ಹುಕುಮು ಕೊಡಬಹುದು. ಯಾವನೊಬ್ಬ ಮನುಷ್ಯನನ್ನು ಅವನ ಸಮ್ಮತಿಯ ಹೊರ್ತಾಗಿ ದಾವೆಯಲ್ಲಿ ವಾದಿಯನ್ನಾಗಿ ಸೇರಿಸಲಾಗದು. ಯಾವದಾದರು ದಾವೆಯಲ್ಲಿ ವಾದಿ ಹೆಸರು ತಪ್ಪಾಗಿ ಹಾಕಿದ್ದರೆ ಕೋರ್ಟಿನವರು ಬೇರೆ ಯಾವನಾದರೊಬ್ಬ ಮನುಷ್ಯನನ್ನು ವಾದಿ ಸ್ಥಳದಲ್ಲಿ ನೇಮಿಸಬಹುದು, ಅಥವಾ ಅವನಿಗೆ ಸಾಮೀಲಾಗಿ ನಿಯಮಿಸಬಹುದು.

**ಸರಕಾರದವರಿಂದ ಯಾ ಅವರ ಮೇಲೆ ದಾವೆಗಳು**—ಸರಕಾರದವರು ಯಾ ಸರಕಾರದವರ ಮೇಲೆ ಮಾಡಲ್ಪಡತಕ್ಕ ದಾವೆಗಳನ್ನು "ಸೆಕ್ರೆಟರೀ ಆಫ್‌ಸ್ಟೇಟ ಫಾರ ಇಂಡಿಯಾ ಇನ್ನಕೌನ್‌ಸಿಲ" ಇವರು ಯಾ ಇವರ ಮೇಲೆ ಮಾಡಬೇಕು. 'ಸೆಕ್ರೆಟರೀ ಆಫ್‌ಸ್ಟೇಟ ಫಾರ ಇಂಡಿಯಾ ಇನ್‌ಕೌನ್‌ಸಿಲ್‌ರವರ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ದಾವೇದ ಕಾರಣ ಉಂಟಾಗಿರುತ್ತದೆಯೋ ಆ ಕೋರ್ಟಿನಲ್ಲಿ ಮಾಡಬೇಕು. ಸೆಕ್ರೆಟರೀ ಆಫ್‌ಸ್ಟೇಟ ಫಾರ್ ಇಂಡಿಯಾ ಇನ್‌ಕೌನ್‌ಸಿಲರವರ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಮೊದಲು ಸ್ಥಾನಿಕ ಸರಕಾರದ ಕೆಲವೊಬ್ಬ ಸೆಕ್ರೆಟರಿಗೆ ಯಾ ಜಿಲ್ಹೆಯ ಕಲೆಕ್ಟರನಿಗೆ ಲೇಖೀ ನೋಟೀಸು ಮುಟ್ಟಿಸುವದು ಅಥವಾ ಅವನ ಆಫೀಸಿನಲ್ಲಿ ಅಂಥ ನೋಟೀಸು ಇಡುವದು ಅವಶ್ಯವದೆ. ಇದರಂತೆ ಸರಕಾರಿ ಅಮಲದಾರನು ತನ್ನ ಹುದ್ದೆಯ ಸಂಬಂಧದಿಂದ ಮಾಡಿದ ಯಾವದೊಂದು ಕೃತ್ಯದ ವಿಷ

ಯವಾಗಿ ಆ ಸರಕಾರೀ ಅಮಲದಾರನ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ, ಅವನಿಗೆ ಸವರಿ ನೋಟೀಸು ಮುಟ್ಟಿಸುವದು ಯಾ ಅವನ ಆಫೀಸಿನಲ್ಲಿ ಅದು ಇಡುವದು ಅವಶ್ಯವದೆ. ಈ ಪ್ರಕಾರ ನೋಟೀಸು ಮುಟ್ಟಿಸಿದ ಯಾ ಇಟ್ಟ ಎರಡು ತಿಂಗಳ ತುಂಬುವ ವರೆಗೆ ಸದರೀ ಸ್ಟೇಟ ಸೆಕ್ರೆಟರೀ ಇನ್‌ಕೌನ್ಸಿಲರವರ ಮೇಲೆ ಯಾ ಯಾವನೊಬ್ಬ ಸರಕಾರೀ ಅಮಲದಾರನ ಮೇಲೆ ದಾವೆಯನ್ನು ಮಾಡಲಾಗದು. ಈ ಪ್ರಕಾರ ಮಾಡುವ ನೋಟೀಸಿನಲ್ಲಿ ಕೆಳಗೆ ಬರೆದ ಸಂಗತಿಗಳನ್ನು ಅವಶ್ಯವಾಗಿ ಕಾಣಿಸಬೇಕು. ನೋಟೀಸಿನಲ್ಲಿ ಅವಶ್ಯವಾಗಿ ಕಾಣಿಸತಕ್ಕ ಸಂಗತಿಗಳ ವಿವರಾ:—(೧) ಫಿರ್ಯಾದಿಯ ಕಾರಣವನ್ನು (೨) ವಾದಿಯ ಹೆಸರನ್ನು (೩) ವಾದಿಯ ವರ್ಣನೆಯನ್ನು (೪) ವಾದಿಯು ಇರುವ ಸ್ಥಳವನ್ನು ಮತ್ತು (೫) ವಾದಿಯು ಬೇಡುವ ನ್ಯಾಯಾಶ್ರಯವನ್ನು. ಈ ಎಲ್ಲ ಸಂಗತಿಗಳನ್ನು ನೋಟೀಸಿನಲ್ಲಿ ಬರೆಯಬೇಕು. ಇಷ್ಟೇ ಅಲ್ಲ. ಅಸಲಜರ್ಜಿಯಲ್ಲಿ ಇಂಥ ನೋಟೀಸು ಮೇಲ್ಕಂಡ ಪ್ರಕಾರ ಕೊಡಲ್ಪಟ್ಟದೆಂದು ಯಾ ಇಡಲ್ಪಟ್ಟಿದೆಂದು ಬರೆಯಬೇಕು. ಕಲಂ (೮೦). ಈ ಪ್ರಕಾರ ಕಾಯದೆಶೀರ ನೋಟೀಸು ಕೊಡದೆ ಅಥವಾ ಇಡದೆ ಅಸಲಜರ್ಜಿಯನ್ನು ದಾಖಲ ಮಾಡಿದರೆ ಅದು ಕೋರ್ಟಿನಿಂದ ನಾಕಾರಸಲ್ಪಡುವದು. "ಸೆಕ್ರೆಟರಿ ಆಫ್ ಸ್ಟೇಟ ಫಾರ ಇಂಡಿಯಾ ಇನ್‌ಕೌನ್ಸಿಲ್" ಇವರಿಂದ ಅಥವಾ ಇವರ ವಿರುದ್ಧ ಮಾಡಲ್ಪಡುವ ದಾವೆಗಳಲ್ಲಿ ಅಸಲಜರ್ಜಿಗಳೊಳಗೆ ವಾದಿಯ ಅಥವಾ ಪ್ರತಿವಾದಿಯ ಹೆಸರು, ವರ್ಣನೆ ವಾಸವಾಗಿರುವ ಸ್ಥಳ ಇವುಗಳನ್ನು ಬರೆಯಬಾರದು. ಆದರೆ ಇವುಗಳ ಬದಲಾಗಿ "ಸೆಕ್ರೆಟರಿ ಆಫ್‌ಸ್ಟೇಟ ಫಾರ್ ಇಂಡಿಯಾ ಇನ್‌ಕೌನ್ಸಿಲ್" ಎಂಬ ಸರನಾಮೆಯನ್ನು ಬರದರೆ ಸಾಕು.

**ಲಷ್ಕರಿ ಮನುಷ್ಯರಿಂದಲೂ, ಅವರ ಮೇಲೆಯೂ ಮಾಡಲ್ಪಡುವ ದಾವೆಗಳು**— ರಜೆಯನ್ನು ಪಡೆಯಲಾರದಂಥ ಆಫೀಸರರು ಯಾ ಸೋಲ್ಜರರು ತಮ್ಮ ಸಲುವಾಗಿ ದಾವೆಯನ್ನು ಮಾಡಲಿಕ್ಕೆ ಯಾ ದಾವೆಗೆ ಜವಾಬು ಕೊಡಲಿಕ್ಕೆ ಯಾವನೊಬ್ಬ ಮನುಷ್ಯನಿಗೆ ಅಧಿಕಾರ ಕೊಡಬಹುದು. ಇಂಥ ಅಧಿಕಾರವನ್ನು ಲೇಖಿಯಿಂದ ಕೊಡಬೇಕು. ಹಾಗೆ ಅಧಿಕಾರ ಪಡೆದ ಮನುಷ್ಯನು ತಾನು ಸ್ವತಃ ಕೆಲಸ ನಡೆಯಿಸಬಹುದು. ಅಥವಾ ವಕೀಲನನ್ನು ನೇಮಿಸಬಹುದು. (ಆ. ೨೮.)

**ಕಾರಪೊರೇಶನ್‌ಗಳಿಂದ ಅಥವಾ ಅವುಗಳ ಮೇಲೆ ಯಾ ದಾವೆಗಳು** (ಆ. ೨೯.) – ಕಾರಪೊರೇಶನ್ನದವರು ಅಥವಾ ಅವರ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಅವುಗಳ ಹೆಸರಿನಿಂದ ದಾವೆಯನ್ನು ಮಾಡಬೇಕು ಹೊರ್ತಾಗಿ ಅವುಗಳ ಅಮಲದಾರರ ಯಾ ಆಫೀಸರರ ಹೆಸರಿನಿಂದ ದಾವೆಯನ್ನು ಮಾಡತಕ್ಕದ್ದಲ್ಲ.

**ಉ:**—(೧) " **ಅ, ಬ** ಕಂಪನಿ ಲಿಮಿಟೆಡ್ ಇವರ ರಜಿಸ್ಟರ್ಡ ಆಫೀಸು ·········ಎಂಬಲ್ಲಿ ಇದೆ."

(೨)" ಧಿ ಧಾರವಾಡ ವ್ಯಾಪಾರೋತ್ತೇಜಕ ಕಂಪನಿ, ಲಿಮಿಟೆಡ್ ಇವರ ರಜಿಸ್ಟರದ ಆಫೀಸು ಧಾರವಾಡದಲ್ಲಿ ಇದೆ " ಈ ಪ್ರಕಾರ ಇಂಥ ದಾವೆಯಲ್ಲಿ ಪಕ್ಷಕಾರರ ಹೆಸರುಗಳನ್ನು ಬರೆಯತಕ್ಕದ್ದು. " ದಿ ಧಾರವಾಡ ವ್ಯಾಪಾರೋತ್ತೇಜಕ ಕಂಪನಿ ಲಿಮಿಟೆಡ್ ಇವರ ವತಿಯಿಂದ ಇವರ ಸೆಕ್ರೆಟರಿ ಅಥವಾ ಡಾಯರೆಕ್ಟರರಾದ ನಾರಾಯಣ ಲಿಂಗೋ ಕುಲಕರ್ಣಿ ವಗೈರೆ" ಅಂತಾ ಬರೆಯುವ ಪದ್ಧತಿಯು ಕಂಡುಬರುತ್ತದೆ. ಆದರೆ ಈ ಪ್ರಕಾರ ಬರೆಯುವದು ತಪ್ಪು ಇರುತ್ತದೆ. ಈ ಪ್ರಕಾರ ಪಕ್ಷಕಾರನ ಹೆಸರು ಬರೆದರೆ ದಾವೆಯು ಸದರೀ ಸೆಕ್ರೆಟರಿ ಅಥವಾ ಡಾಯರೆಕ್ಟರ ಈತನು ಯಾ ಈತನ ಮೇಲೆ ಮಾಡಿದಂತೆ ಆಗುತ್ತದೆ. ಅದು ಕಂಪನಿ ಮೇಲೆ ಮಾಡಿದಂತೆ ಆಗುವದಿಲ್ಲ. ಈ ಪ್ರಕಾರ ಪಕ್ಷಕಾರನ ಹೆಸರು ಬರೆದು ದಾವೆಯನ್ನು ಮಾಡಿ ಹುಕುಮನಾಮೆ ಪಡಕೊಂಡರೆ ಅದು ಕಂಪನಿಯ ಮೇಲೆ ನಡೆಯಿಸಲಿಕ್ಕೆ ಬರಲಾರದು. ಫಕ್ತ ಮೇಲ್ಕಂಡ ಸೆಕ್ರೆಟರಿ ಯಾ ಡಾಯರೆಕ್ಟರ ಇವರ ಜಾತಿಯ ಮೇಲೆ ನಡೆಯಿಸಲಿಕ್ಕೆ ಬರುವದು. ಕಾರಣ ಈ ಪ್ರಕಾರ ಪಕ್ಷಕಾರರ ಹೆಸರು ಬರೆಯಬಾರದು. ಇದರಂತೆ ರೇಲ್ವೆ ಕಂಪನಿಯ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಯಾವ ಹೆಸರಿನಿಂದ ಅದು ವ್ಯವಹಾರ ಮಾಡುವದೋ ಅದೇ ಹೆಸರಿನಿಂದ ಸದರೀ ಕಂಪನಿಯ ಮೇಲೆ ದಾವೆಯನ್ನು ಮಾಡತಕ್ಕದ್ದು. ಉ:—ಮದ್ರಾಸ ಆಂಡ ಸದರ್ನಮರಾಠಾ ರೇಲ್ವೆ ಕಂಪನಿ ಲಿಮಿಟೆಡ್ ಇವರ ರಜಿಸ್ಟರ್ಡ ಆಫೀಸು ಮದ್ರಾಸದಲ್ಲಿ ಇದೆ" ಇಷ್ಟೇ ಬರದರೆ ಸಾಕು. ಆದರೆ "ಮದ್ರಾಸ ಆಂಡ ಸದರ್ನಮರಾಠಾ ರೇಲ್ವೆ ಕಂಪನಿ ಲಿಮಿಟೆಡ್ ಇವರ ವತಿಯಿಂದ ಸದರೀ ಕಂಪನಿಯ ಏಜಂಟರಾದ ಎಚ್ ಸ್ಯಾಂಪನ ಅಂತಾ ವಗೈರೆ" ಬರೆದರೆ ಅದು ತಪ್ಪು

ಆಗುವದು. ಈ ಪ್ರಕಾರ ಬರೆದರೆ ಅದು ಸದರೀ ಏಜಂಟನ ಮೇಲೆ ದಾವೆ ಮಾಡಿದಂತೆ ಆಗುವದು. ಹೊರ್ತಾಗಿ ರೇಲ್ವೆ ಕಂಪನಿ ಮೇಲೆ ಮಾಡಿದಂತೆ ಆಗುವದಿಲ್ಲ. ಈ ದಾವೆಯಲ್ಲಿ ಹುಕುಮನಾಮೆ ಪಡಕೊಂಡರೆ ಅದರ ಅಮಲು ಏಜಂಟನ ಮೇಲೆ ನಡೆಯಿಸಲಿಕ್ಕೆ ಬರುವದು. ಆದರೆ ರೇಲ್ವೆ ಕಂಪನಿಯ ಮೇಲೆ ನಡೆಯಿಸಲಿಕ್ಕೆ ಬರಲಾರದು. ಕಾರಣ ಹೀಗೆ ಏಜಂಟನ ಹೆಸರು ಬರೆಯಬಾರದು. ರೇಲ್ವೆ ಕಂಪನಿಯವರ ವಿರುದ್ಧ ದಾವೆಯನ್ನು ಮಾಡಬೇಕಾದಲ್ಲಿ ಮತ್ತೊಂದು ಸಂಗತಿ ಒಳ್ಳೇ ಲಕ್ಷದಲ್ಲಿ ಇಡತಕ್ಕಂಥಾದ್ದು ಇರುತ್ತದೆ. ಅದು ಏನಂದರೆ (೫೭೭) ರೇಲ್ವೆ ಕಂಪನಿಯವರು ಮಾಲು ಅಥವಾ ದನಗಳನ್ನು ( ಕಲಂ ೭೭ ) ಒಯ್ದ ಬಗ್ಗೆ ಯೋಗ್ಯ ಹಣದಕಿಂತಾ ಹೆಚ್ಚಿನ ಹಣ ವಸೂಲು ಮಾಡಿಕೊಂಡರೆ ಆ ಹೆಚ್ಚಿನ ಹಣ ವಾಪಸ ಬೇಡುವದರ ಸಲುವಾಗಿ ಯಾ ರೇಲವೆ ಕಂಪನಿಯವರಿಗೆ ವೈಯುವದರ ದಶಿಂವಾ ಕೊಟ್ಟ ಮಾಲು ಅಥವಾ ದನಗಳನ್ನು ಇಲ್ಲದಂತಾದರೆ ಅಥವಾ ನಾಶವಾದರೆ ಅಥವಾ ಕೆಟ್ಟರೆ ಅವರ ಬಗ್ಗೆ ಪ್ರತಿಫಲವನ್ನು ಬೇಡುವವರ ಸಲುವಾಗಿ ಕಂಪನಿಯವರ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಮೊದಲು ಆ ಬಗ್ಗೆ ಲೇಖಿಯಿಂದ ನೋಟೀಸು ಮಾಡುವದು ಅವಶ್ಯವದೆ. ಸರಕಾರಿ ಕಂಪನಿ ಇದ್ದರೆ ಸದರಿ ನೋಟೀಸು ಸದರಿ ಕಂಪನಿ ಮ್ಯಾನೇಜರನಿಗೆ ಮಾಡಬೇಕು. ಮತ್ತು ಖಾಸಗೀ ಕಂಪನಿ ಇದ್ದರೆ ಸದರಿ ಕಂಪನಿಯು ಏಜಂಟನಿಗೆ ಮಾಡಬೇಕು.

**ಉ**:—ಗ್ರೇಟ ಇಂಡಿಯನ್ ಪೆನಿನಸುಲರ ರೇಲ್ವೆ ಕಂಪನಿ ಲಿಮಿಟೆಡ್" ಇದು ಸರಕಾರಿ ಕಂಪನಿ ಇರುವದು. ಮತ್ತು "ಮದ್ರಾಸ ಆಂಡ ಸದರ್ನಮರಾಠಾ ರೇಲ್ವೆಕಂಪನಿ ಲಿಮಿಟೆಡ್" ಇದು ಖಾಸಗಿ ಕಂಪನಿ ಇರುವದು. ಸದರಿ ನೋಟೀಸು ಲೇಖಿಯಿಂದ ಮಾಡಬೇಕು. ಮತ್ತು ಅದರಲ್ಲಿ ಎಷ್ಟು ಹಣ ಬೇಡುವದಿರುತ್ತದೆ ಅವನ್ನು ಸ್ಪಷ್ಟವಾಗಿ ಬೇಡಬೇಕು. ಈ ಪ್ರಕಾರ ನೋಟೀಸು ಮಾಡಿ ಅದು ಮುಟ್ಟಿಸಿದ ಆರು ತಿಂಗಳು ತುಂಬುವವರೆಗೆ ಸದರಿ ಕಂಪನಿಯ ಮೇಲೆ ದಾವೆಯನ್ನು ಮಾಡಲಾಗದು. ಈ ಪ್ರಕಾರ ಕಾಯದೆಶೀರ ನೋಟೀಸು ಕೊಡದೆ ಅಥವಾ ಮಾಡದೆ ಅಸಲರ್ಜಿಯನ್ನು ದಾಖಲ ಮಾಡಿದ್ದರೆ ಅದು ಕೋರ್ಟಿನಿಂದ ನಾಕಾರಿಸಲ್ಪಡುವದು. ಸದರೀ ನೋಟೀಸು ಹ್ಯಾಗೆ ಜಾರಿ ಮಾಡುವದು ? (೧) ಈ ನೋಟೀಸು ಮ್ಯಾನೇಜರನ ಯಾ ಏಜಂಟನ ಕೈಯಲ್ಲಿ ಕೊಡಬೇಕು. ಅಥವಾ (೨) ಮ್ಯಾನೇಜರನ ಯಾ ಏಜಂಟನ ಆಫೀಸಿನಲ್ಲಿ ಇಡಬೇಕು. ಅಥವಾ (೩) ಮ್ಯಾನೇಜರನ ಯಾ

ಏಜಂಟಿನ ಹೆಸರಲೆ ರಜಿಸ್ಟರ್ಡ ಪತ್ರದಿಂದ ಕಳಿಸಬೇಕು. (೧೪೦), ಈ ಮೂರು ಮಾರ್ಗಗಳ ಪೈಕಿ ಯಾವದಾದರು ಒಂದು ಮಾರ್ಗವನ್ನು ಅನುಸರಿಸಿದರೆ ಸಾಕು. ಆದರೆ ಈ ಪ್ರಕಾರ ನೋಟೀಸು ಕೊಟ್ಟದೆ ಅಂತಾ ಅಸಲರ್ಜಿಯಲ್ಲಿ ಕಾಣಿಸುವದು ಕಾರಣವಿಲ್ಲ.

**ಮುನಸಿಪಾಲಟಿಗಳಿಂದ ಯಾ ಅವುಗಳ ಮೇಲೆ ದಾವೆಗಳು**

ಇದರಲ್ಲಿ ಒಳ್ಳೆ ಧ್ಯಾಸದಲ್ಲಿ ಇಡತಕ್ಕ ಸಂಗತಿಯೆನಂದರೆ: — ಮುಂಬಯಿ ಇಲಾಖಾದಲ್ಲಿ ಮುನಸಿಪಾಲಟಿ ಆಕ್ಟಗಳಲ್ಲಿ ಎರಡು ಭೇದಗಳುಂಟು. ಒಂದು “ ಧಿ ಬಾಂಬೇ ಸಿಟಿ ಮುನಸಿಪಾಲಟೀಜ ಆಕ್ಟ” ಅಂದರೆ ಮುಂಬಯಿ ಶಹರ ಮುನಿಸಿಪಾಲಟಿ ಆಕ್ಟ ಮತ್ತೊಂದು “ಧೀ ಬಾಂಬೇ ಡಿಸ್ಟ್ರಿಕ್ಟ ಮುನಸಿಪಲ ಆಕ್ಟ” ಅಂದರೆ ಮುಂಬಯಿ ಜಿಲ್ಹಾ ಮುನಸಿಪಾಲಟಿ ಆಕ್ಟ” ಎಂಬ ಎರಡು ಭೇದಗಳುಂಟು. ಕೆಳಗೆ ಬರೆದ ಶಹರಗಳಿಗೆ “ ಧಿ ಬಾಂಬೆ ಸಿಟಿ ಮುನಸಿಪಾಲಟಿ ಆಕ್ಟ ” ಲಾಗು ಅದೆ. ಸದರಿ ಶಹರಗಳ ವಿವರಾ:—

**ಉತ್ತರಭಾಗ**

೧ ಅಹಮ್ಮದಾಬಾದ ೨ ನಡಿಯಾದ ೩ ಭಡೋಚ ೪ ಸುರತ ೫ ಠಾಣೆ ೬ ಗೋಘಾ, ಮುಂಬಯಿ ಸಬರ್ಬ ೭ ಬಾಂದ್ರಾ

**ಮಧ್ಯಭಾಗ**

೮ ಅಹ್ಮದನಗರ ೯ ಜಲಗಾವ ೧೦ ಭುಸಾವಳ ೧೧ ಅಮಲನೇರ ೧೨ ಧುಳೆ ೧೩ ನಾಶೀಕ ೧೪ ಪುಣೆ ಶಹರ ೧೫ ಪುಣೆ ಸಬರ್ಬ ೧೬ ಲೋಣಾವಳ ೧೭ ಸಾತಾರಾ ಶಹರ ೧೮ ಸೋಲಾಪೂರ ೧೯ ಪಂಢರಪುರ

**ದಕ್ಷಿಣಭಾಗ**

೨೦ ಬೆಳಗಾಂವಿ ೨೧ ವಿಜಾಪೂರ ೨೨ ಧಾರವಾಡ ೨೩ ಹುಬ್ಬಳ್ಳಿ ೨೪ ಗದಗಬೆಟಗೇರಿ; ೨೫ ರತ್ನಾಗಿರಿ.

ಸದರಿ ಶಹರ ಮುನಸಿಪಾಲಟಿಗಳು ಅಥವಾ ಅವುಗಳ ಮೇಲೆ ದಾವೆಗಳನ್ನು ಮಾಡಬೇಕಾಗಿದಲ್ಲಿ ಸದರಿ ಮುನಸಿಪಾಲಟಿಗಳ ಹೆಸರಿನಿಂದ ಅಥವಾ ಹೆಸರಲೆ **ಅವರ ಚೀಫ ಆಫಿಸರನ ಮುಖಾಂತರವಾಗಿ ಮಾಡತ**

**ಕ್ಕದ್ದು.** ( ಮುನಸಿಪಲ ಆಕ್ಟ ೧೯೨೫ನೇದ್ದು ಕಲಮು ೮) ಇವರಲ್ಲಿ ಸರ ನಾಮೆಯನ್ನು ಕೆಳಗಿನಂತೆ ಬರೆಯುಬೇಕು.

**ಉ** – ಹುಬ್ಬಳ್ಳಿ ಮುನಸಿಪಾಲಟಿಯು; ಅದರ ಚೀಫ ಆಫೀಸರನ ಮುಖಾಂತರವಾಗಿ......... ವಾದಿ ಅಥವಾ ಪ್ರತಿವಾದಿ.

ಮೇಲ್ಕಂಡ ಶಹರಗಳ ಮುನಸಿಪಾಲಟಿ ಹೊರ್ತಾಗಿ ಇತರ ಮುನಸಿಪಾಲಟಿಗಳಿಗೆ "ದಿ. ಬಾಂಬೇ ಡಿಸ್ಟ್ರಿಕ್ಟ ಮುನಸಿಪಲ್ ಆಕ್ಟ" ಲಾಗು ಅವೆ. ಸದರಿ ಮುನಸಿಪಾಲಟಿಗಳು ಅಥವಾ ಅವುಗಳ ಮೇಲೆ ದಾವೆಗಳನ್ನು ಮಾಡಬೇಕಾದಲ್ಲಿ ಸದರಿ ಮುನಸಿಪಾಲಟಿಗಳ ಹೆಸರಿನಿಂದಾ ಅಥವಾ ಹೆಸರಲೆ ಮಾಡತಕ್ಕದ್ದು. (ಮುನಸಿಪಲ್ ಆಕ್ಟ ಸನ್ ೧೯೮೦ ಕಲಮ ೯) ಇದರಲ್ಲಿ ಮುನಸಿಪಾಲಟಿ ಹೆಸರು ಬರಿಯಬೇಕಾದಲ್ಲಿ ಅದು ಯಾವ ಹೆಸರಿನಿಂದ ಕೆಲಸ ಮಾಡುವದು ಅಥವಾ ವ್ಯವಹಾರ ಮಾಡುವದು ಆ ಹೆಸರು ಬರಿಯಬೇಕು.

**ಉ**— "ಹಾವೇರಿ ಮುನಸಿಪಾಲಿಟಿ, ಹಾವೇರಿ ಊರಲ್ಲಿ ಇರೋದು" "ರಾಣೆಬಿನ್ನೂರ ಮುನಸಿಪಾಲಟಿ; ರಾಣೇಬಿನ್ನೂರ ಊರಲ್ಲಿ ಇರೋದು.

ಯಾವದಾದರು ಮುನಸಿಪಾಲಟಿಯ ಮೇಲೆ ಅಥವಾ ಅದರ ಅಮುಲ್‌ದಾರನ ಮೇಲೆ ಅಥವಾ ಅದರ ನೌಕರನ ಮೇಲೆ ಅಥವಾ ಸದರಿ ಮುನಸಿಪಾಲಟಿಯ ಹುಕುಮಿನಂತೆ ಮುನಸಿಪಾಲಟಿ ಆಕ್ಟಿನಲ್ಲಿ ವಿಧಿಸಿದ ಪ್ರಕಾರ ಯಾವನೊಬ್ಬನು ಕೆಲಸ ಮಾಡಿದ ಪಕ್ಷಕ್ಕೆ ಅವನ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಸದರಿ ಮುನಸಿಪಾಲಟಿಗೆ ಅಥವಾ ಅಮುಲದಾರನಿಗೆ ಅಥವಾ ನೌಕರನಿಗೆ ಅಥವಾ ಮೇಲೆ ಹೇಳಿದಂತೆ ಕೆಲಸ ಮಾಡತಕ್ಕ ಮನುಷ್ಯನಿಗೆ ಮೊದಲು ದಾವೆ ಮಾಡುವ ಬಗ್ಗೆ ಯಾ ದಾವೇದ ಕಾರಣದ ಬಗ್ಗೆ ಲೇಖಿಯಿಂದ ನೋಟೀಸು ಕೊಡುವದು ಅವಶ್ಯವದೆ. ಈ ಪ್ರಕಾರಾ ನೋಟೀಸು ಕೊಟ್ಟು ಅದು ಮುಟ್ಟಿಸಿದ ಎರಡು ತಿಂಗಳು ತುಂಬುವವರೆಗೆ ಸದರಿ ಮುನಸಿಪಾಲಟಿ ವಗೈರೆರ ಮೇಲೆ ದಾವೆಯನ್ನು ಮಾಡಲಾಗದು. ಸದರಿ ನೋಟೀಸಿನಲ್ಲಿ ದಾವೇದ ಕಾರಣವನ್ನು ಸ್ಪಷ್ಟವಾಗಿ ಬರಿಯಬೇಕು. ಮತ್ತು ದಾವೆದ ಕಾರಣ ಉಂಟಾದ ಅಥವಾ ಹರಕತ್ತಿನ ಕೃತ್ಯ ಘಡಾಯಿಸಿದ ಆರುತಿಂಗಳದಲ್ಲಿ ಸದರೀ ದಾವೆಯನ್ನು ಮಾಡತಕ್ಕದ್ದು. ತಾಕೀದಿಯಗೋಸ್ಕರ ಯಾ ಯಾವದೊಂದು ಕರಾರಿನಂತೆ ನಿರ್ಧಿಷ್ಟವಾದ ಕೃತ್ಯ

ವನ್ನು ಮಾಡುವವಕ್ಕೋಸ್ಕರವಾಗಿ ಮುನಸಿಪಾಲಟಿಯ ಮೇಲೆ ಅಥವಾ ಅದರ ಅಮಲದಾರ ವಗೈರೇರ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಮೇಲ್ಕಂಡಂತೆ ನೋಟೀಸು ಕೊಡುವದು ಕಾರಣವಿಲ್ಲ. ಈ ಪ್ರಕಾರ ದಾವೆಯನ್ನು ಮಾಡ ಬೇಕಾದಲ್ಲಿ ಮೇಲ್ಕಂಡಂತೆ ನೋಟೀಸು ಕೊಡದೆ ಸಹ ಮುನಸಿಪಾಲಟಿಯಮೇಲೆ ದಾವೆಯನ್ನು ಮಾಡಲಿಕ್ಕೆ ಬರುವದು. ನೋಟೀಸು ಕೊಡತಕ್ಕ ಪ್ರಸಕ್ತಿಯಲ್ಲಿ ಆ ಪ್ರಕಾರಾ ನೋಟೀಸು ಕೊಟ್ಟಲ್ಲಿ ಆ ಬಗ್ಗೆ ಮಜಕೂರು ಅಸಲಜರ್ಜಿಯಲ್ಲಿ ಬರೆಯುವದು ಅವಶ್ಯವಿಲ್ಲ.

**ರಜಿಸ್ಟರ್ಡ ಸೊಸಾಯಿಟಿಗಳು ಮತ್ತು ಅವುಗಳ ಮೇಲೆ ದಾವೆಗಳು**— ಯಾವದೊಂದು ರಜಿಸ್ಟರ್ಡ ಸೊಸಾಯಿಟಿಯು ಅಥವಾ ಸೊಸಾ ಯಟಿಯ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ; ಸದರಿ ಸೋಸಾಯಟಿಯ ನಿಯಮಗಳಿಂದ ವಿಧಿಸಲ್ಪಟ್ಟಂಥ ಅಧ್ಯಕ್ಷನು ಅಥವಾ ಅಧ್ಯಕ್ಷನ ಮೇಲೆ ಯಾ ಚೆಯರಮನ್‌ನು ಅಥವಾ ಚೆಯರಮನ್ನನ ಮೇಲೆ ಯಾ ಮುಖ್ಯ ಸೆಕ್ರೆಟರಿಯು ಅಥವಾ ಸೆಕ್ರೆಟರಿಯ ಮೇಲೆ ದಾವೆಯನ್ನು ಮಾಡತಕ್ಕದ್ದು. (ಸೊಸಾಯಿಟಿ ರಜಿಸ್ಟ್ರೈಶನ ಆಕ್ಟ ಸನ್ನ ೧೮೬೦ ಕಲಮು ೬.) ರಜಿಸ್ಟರ ಆಗದೆ ಇಲ್ಲದ ಸೊಸಾ ಯಟಿಯು ಅಥವಾ ಸೊಸಾಯಟಿಯ ಮೇಲೆ ಯಾ ಕಂಪನಿಯು ಅಥವಾ ಕಂಪ ನಿಯ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಸದರೀ ಸೊಸಾಯಟಿಯ ಯಾ ಕಂಪನಿಯ ಎಲ್ಲ ಮೆಂಬರರು ಅಥವಾ ಸಭಾಸದರು ಯಾ ಮೆಂಬರರ ಮೇಲೆ ಅಥವಾ ಸಭಾಸದರ ಮೇಲೆ ದಾವೆಯನ್ನು ಮಾಡತಕ್ಕದ್ದು. ಸದರಿ ಮೆಂಬರರ ಅಥವಾ ಸಭಾಸದರ ಸಂಖ್ಯಾ ಬಹಳೇ ಇದ್ದರೆ ಮತ್ತು ಸದರಿ ಎಲ್ಲ ಜನರಿಗೆ ಯಾ ಎಲ್ಲ ಜನರ ವಿರುದ್ಧ ಬಾಧ್ಯತೆಯುಂಟಾಗಿದ್ದರೆ ಆ. ೧ ರು. ೮ ನೇದ್ದರ ಫಾಯದೆ ಯನ್ನುತಕ್ಕೊಂಡು ಒಂದೇ ಸ್ವಾರ್ಥಸಂಬಂಧ ಉಳ್ಳಂಥ ಮೇಲ್ಕಂಡ ಮೆಂಬರರ ಯಾ ಸಭಾಸದರ ಪೈಕಿ ಒಬ್ಬ ಮೆಂಬರನು ಯಾ ಸಭಾಸದನು ಎಲ್ಲರ ತರ್ಫೆನಿಂದ ದಾವೆ ಯನ್ನು ಮಾಡಬಹುದು ಯಾ ಪ್ರತಿವಾದ ಮಾಡಬಹುದು. ರಜಿಸ್ಟರ ಆಗದೆ ಇಲ್ಲದ ಲಾಯಬ್ರರಿಯು ಅಥವಾ ಲಾಯಬ್ರರಿಯ ಮೇಲೆ ಯಾ ಕ್ಲಬ್ಬು ಅಥವಾ ಕ್ಲಬ್ಬಿನ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಸದರಿ ಲಾಯಬ್ರರಿಯು ಯಾ ಕ್ಲಬ್ಬಿನ ಎಲ್ಲ ಮೆಂಬರರು ಅಥವಾ ಸಭಾಸದರು ಯಾ ಮೆಂಬರರ ಮೇಲೆ ಅಥವಾ ಸಭಾ ಸದರ ಮೇಲೆ ಮಾಡತಕ್ಕದ್ದು. ಸದರಿ ಮೆಂಬರರು ಯಾ ಸಭಾಸದರು ಬಹಳೇ

ಇದ್ದರೆ (ಆ. ೧. ರೂಲ ೮ )ನೇ ಪ್ರಕಾರಾ ಸದರಿ ಎಲ್ಲರ ತರ್ಫೆಯಿಂದ ಯಾವ ನಾದರೂ ಒಬ್ಬ ಮೆಂಬರನು ಯಾ ಸಭಾಸದನು ದಾವೆಯನ್ನು ಮಾಡಬಹುದು. ಯಾ ಪ್ರತಿವಾದ ಮಾಡಬಹುದು.

**ಕೋಆಪರೆಟಿವ್ಹ ಸೊಸಾಯಟಿಗಳು ಯಾ ಸೊಸಾಯಟಿಗಳ ಮೇಲೆ ಅಂದರೆ ಸಹಕಾರಿ ಸಂಘಗಳು ಯಾ ಸಂಘಗಳ ಮೇಲೆ ದಾವೆಗಳು**—"ದಿ ಬಾಂಬೆ ಕೋ–ಆಪರೆಟಿವ್ಹ ಸೋಸಾಯಟೀಜ ಆಕ್ಟ" ಎಂಬ ೧೯೨೫ನೇ ಸಾಲಿನಲ್ಲಿ ಒಂದು ಆಕ್ಟ ಅಂದರೆ ಕಾನೂನು ಆಗಿರುತ್ತದೆ. ಸದರಿ ಆಕ್ಟಿನ ೨೩ನೇ ಕಲಮಿನಲ್ಲಿ ಕೆಳಗಿನಂತೆ ವಿಧಿಸಲ್ಪಟ್ಟಿರುತ್ತದೆ. ಯಾವದಾದರು ಕೋಆಪರೆಟಿವ್ಹ ಸೊಸಾಯಿಟಿಯು ಅಥವಾ ಸಹಕಾರಿ ಸಂಘವು ಕಾಯದೆ ಪ್ರಕಾರಾ ರಜಿಸ್ಟರವಾದ ಪಕ್ಷಕ್ಕೆ ಅದು ಆ ಯಾವ ಹೆಸರಿನಿಂದ ರಜಿಸ್ಟರ ಆಗಿರುತ್ತದೆಯೋ ಆ ಹೆಸರಿನಿಂದಾ ದಾವೆಯನ್ನು ಮಾಡುವದು ಅಥವಾ ತನ್ನ ಮೇಲೆ ಆದ ದಾವೆಗಳಲ್ಲಿ ಪ್ರತಿವಾದ ಮಾಡಬಹುದು. ದಾವೆಯನ್ನು ಮಾಡಬೇಕಾದಲ್ಲಿ ಯಾವ ಹೆಸರಿನಿಂದ ಸದರಿ ಕೋಆಪರೆಟಿವ್ಹ ಸೊಸಾಯಟಿಯು ಅಥವಾ ಸಹಕಾರಿ ಸಂಘವು ರಜಿಸ್ಟರ ಆಗಿರುತ್ತದೆಯೋ ಅದೇ ಹೆಸರು ಬರೆಯಬೇಕು. ಅಂದರೆ ಅದೇ ಹೆಸರಲೆ ಯಾ ಅದೆ ಹೆಸರಿನ ಮೇಲೆ ದಾವೆಯನ್ನು ಮಾಡತಕ್ಕದ್ದು. ಸದ ನಾಮೆಯು ಕೆಳಗಿನಂತೆ ಇರಬೇಕು.

**ಉ**—"ದಿ ಅನ್ನಪೂರ್ಣೇಶ್ವರಿ ಕೋಆಪರೆಟಿವ್ಹ ಸೊಸಾಯಿಟಿಯು ಹುಬ್ಬಳ್ಳಿಯಲ್ಲಿ ಇರುವದು." **ವಾದಿ ಯಾ ಪ್ರತಿವಾದಿ.**

ಕೋಆಪರೆಟಿವ್ಹ ಸೊಸಾಯಟಿಯು ಅಂದರೆ ಸಹಕಾರಿ ಸಂಘದ ಮೇಲೆ ದಾವೆಯನ್ನು ಮಾಡಬೇಕಾಗಿದ್ದಲ್ಲಿ ಮೊದಲು ರಜಿಸ್ಟ್ರಾರನಿಗೆ ( Registrar ) ಲೇಖಿಯಿಂದ ಈ ಬಗ್ಗೆ ನೋಟೀಸು ಮುಟ್ಟಿಸುವದು ಅಥವಾ ರಜಿಸ್ಟ್ರಾರನ ಆಫೀಸಿನಲ್ಲಿ ಅಂಥ ನೋಟೀಸು ಇಡುವದು ಅವಶ್ಯವದೆ. ಇದರಂತೆ ಕೋಆಪರೆಟಿವ್ಹ ಸೋಸಾಯಟಿಯು ಅಂದರೆ ಸಹಕಾರಿ ಸಂಘದ ಅಮಲದಾರನು ಸೊಸಾಯಟಿಯು ಅಂದರೆ ಸಂಘದ ವ್ಯವಹಾರದ ಸಂಬಂಧದಿಂದ ಮಾಡಿದ ಯಾವದೊಂದು ಕೃತ್ಯದ ವಿಷಯವಾಗಿ ಸದರಿ ಅಮಲದಾರನ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಮೊದಲು ರಜಿಸ್ಟ್ರಾರನಿಗೆ ಲೇಖಿಯಿಂದ ಈ ಬಗ್ಗೆ ನೋಟೀಸು ಮುಟ್ಟಿಸುವದು ಅಥವಾ ರಜಿಸ್ಟ್ರಾರನ ಆಫೀಸಿನಲ್ಲಿ

ಅಂದರೆ ಕಚೇರಿಯಲ್ಲಿ ಅಂಥ ನೋಟೀಸು ಇಡುವದು ಅವಶ್ಯವದೆ. ರಜಿಸ್ಟ್ರಾರನಿಗೆ ಸದರಿ ನೋಟೀಸು ಮುಟ್ಟಿಸಿದ ಯಾ ಅವನ ಆಫೀಸಿನಲ್ಲಿ ಅಂದರೆ ಕಚೇರಿಯಲ್ಲಿ ಸದರಿ ನೋಟೀಸು ಇಟ್ಟ ಎರಡು ತಿಂಗಳು ತುಂಬುವವರೆಗೆ ಸದರಿ ಸೋಸಾಯಿಟಿಯ ಅಂದರೆ ಸಂಘದ ಮೇಲೆ ಅಥವಾ ಅಮಲದಾರನ ಮೇಲೆ ದಾವೆಯನ್ನು ಮಾಡಲಾಗದು. ಈ ಪ್ರಕಾರ ಮಾಡುವ ನೋಟೀಸಿನಲ್ಲಿ ಕೆಳಗೆ ಬರೆದ ಸಂಗತೀಗಳನ್ನು ಅವಶ್ಯವಾಗಿ ಕಾಣಿಸಬೇಕು. ಸದರಿ ನೋಟೀಸಿನಲ್ಲಿ ಅವಶ್ಯವಾಗಿ ಕಾಣಿಸತಕ್ಕಂಥಾ ಸಂಗತಿಗಳ ವಿವರಾ—

೧ ಫಿರ್ಯಾದಿಯ ಕಾರಣವನ್ನು

೨ ವಾದಿಯ ಹೆಸರನ್ನು ( ಪೂರಾ ಹೆಸರು )

೩ ವಾದಿಯ ವರ್ಣನವನ್ನು ( ವಯಾ, ಜಾತಿ ಮತ್ತು ಉದ್ಯೋಗ ವಗೈರೆ )

೪ ವಾದಿಯು ಇರುವ ಸ್ಥಳವನ್ನು ಮತ್ತು (ಪತ್ತೆ)

೫ ವಾದಿಯು ಬೇಡುವ ನ್ಯಾಯಾಶ್ರಯವನ್ನು ಕೊಡತಕ್ಕ ಈ ಎಲ್ಲ ಸಂಗತಿಗಳನ್ನು ರಜಿಸ್ಟ್ರಾರನಿಗೆ ಕೊಡತಕ್ಕ ನೋಟೀಸಿನಲ್ಲಿ ಅವಶ್ಯವಾಗಿ ಬರೆಯಬೇಕು. ಇಷ್ಟೇ ಅಲ್ಲ. ಅಸಲಅರ್ಜಿಯಲ್ಲಿ ಇಂಥ ನೋಟೀಸು ಮೇಲ್ಕಂಡ ಪ್ರಕಾರ ಕೊಡಲ್ಪಟ್ಟಿದೆಂದು ಯಾ ಇಡಲ್ಪಟ್ಟಿದೆಂದು ಬರೆಯಬೇಕು. (ಕ ರೂ. ೭೦) ಈ ಪ್ರಕಾರಾ ಕಾಯಿದೇಶೀರ ನೋಟೀಸು ಕೊಡದೇ ಅಥವಾ ಇಡದೇ ಅಸಲಅರ್ಜಿಯನ್ನು ದಾಖಲಮಾಡಿದರೆ ಅದು ಕೋರ್ಟಿನಿಂದಾ ನಾಕಾರ-ಸಲ್ಪಡುವದು.

**ಪ್ಲೀಡಿಂಗಿನ ಕೆಳಗೆ ಸಹಿಮಾಡುವದು, ಇ ಕರಾರು ಬರೆಯುವದು—** ದಾವೆಯು ಕಾರ್ಪೋರೇಶನವರಿಂದ ಅಥವಾ ಅವರ ವಿರುದ್ಧವಾಗಿ ಮಾಡಲ್ಪಟ್ಟಲ್ಲಿ, ಆ ಕಾರ್ಪೋರೇಶನ್ನದವರ ಸಲುವಾಗಿ, ಸೆಕ್ರೆಟರಿಯು ಡಾಯರೆಕ್ಟರನು ಯಾ ಬೇರೊಬ್ಬ ಮುಖ್ಯ ಆಫೀಸರನು ಅಸಲಅರ್ಜಿಯ ಕೆಳಗೆ ಸಹಿಮಾಡಿ ಇ ಕರಾರು ಬರೆಯಬಹುದು. ಕಾರ್ಪೋರೇಶನ್ನದವರಿಂದ ಅಥವಾ ಅವರ ವಿರುದ್ಧವಾಗಿ ಮಾಡಲ್ಪಟ್ಟಲ್ಲಿ, ಆ ಕಾರ್ಪೋರೇಶನ್ನದವರ ಸಲುವಾಗಿ, ಸೆಕ್ರೆಟರಿಯು ಡಾಯರೆಕ್ಟರನು ಯಾ ಬೇರೊಬ್ಬ ಮುಖ್ಯ ಆಫೀಸರನು ಅಸಲಅರ್ಜಿಯ ಕೆಳಗೆ ಸಹಿಮಾಡಿ ಇ ಕರಾರು ಬರೆಯಬಹುದು. ಕಾರ್ಪೋರೇಶನ್ನದವರ ಮೇಲೆ ಸಮನು

ಬಜಾಯಿಸುವದು ಹ್ಯಾಗೆ ? ಕೆಳಗಿನ ಯಾವದೊಂದು ಬಗೆಯಿಂದ ಸಮನು ಬಜಾಯಿಸಬಹುದು.

೧. ಆ ಕಾರ್ಪೊರೇಶನ್ನದವರ ಸೆಕ್ರೆಟರಿಗೆ ಯಾ ಯಾವನೊಬ್ಬ ಡೈರೆಕ್ಟರನಿಗೆ, ಯಾ ಮುಖ್ಯ ಆಫೀಸರನಿಗೆ ಅದನ್ನು ಕೊಡುವದರಿಂದ ಅಥವಾ

೨. ಆ ಕಾರ್ಪೊರೇಶನ್ನಿನವರ ರಜಿಸ್ಟರು ಮಾಡಲ್ಪಟ್ಟ ಆಫೀಸಿನಲ್ಲಿ (ಇದ್ದರೆ) ಅಥವಾ ರಿಜಿಸ್ಟರು ಮಾಡಲ್ಪಟ್ಟ ಆಫೀಸು ಇಲ್ಲದಿದ್ದಲ್ಲಿ ಆ ಕಾರ್ಪೊರೇಶನ್ನಿನ ವ್ಯವಹಾರಗಳು ನಡೆಯುವ ಸ್ಥಳದಲ್ಲಿ ಸಮನಿನ ಪ್ರತಿಯನು ಇಟ್ಟು ಅಥವಾ ಟಪಾಲಿನಿಂದ ಕಳುಹಿಸಿ ಬಜಾಯಿಸಬಹುದು.

**ಪೇಢಿಯ ಹೆಸರಿನಿಂದ ಭಾಗೀದಾರರ ಮೇಲೆ ಅಥವಾ ಭಾಗೀದಾರರು ದಾವೆ ಮಾಡುವದು—** ಇಬ್ಬರು ಅಥವಾ ಹೆಚ್ಚು ಭಾಗಿದಾರರು ಬ್ರಿಟಿಶ ಹಿಂದುಸ್ಥಾನದಲ್ಲಿ ತಮ್ಮ ಉದ್ಯೋಗವನ್ನು ನಡೆಯಿಸುವವರು ತಮ್ಮ ಪೇಢಿಯ ಹೆಸರಿನಿಂದ ದಾವೆಯನ್ನು ಮಾಡಬಹುದು. ಅಥವಾ ಅವರ ಪೇಢಿಯ ಹೆಸರಿನಿಂದ ಅವರ ಮೇಲೆ ದಾವೆಯನ್ನು ಮಾಡಬಹುದು. ಭಾಗೀದಾರಿಯು ಮುರಿಯಲ್ಪಟ್ಟಿದ್ದರೆ ಅಂದರೆ ಪೇಢಿಯು ಮುರಿಯಲ್ಪಟ್ಟಿದ್ದರೆ ಸಹಿತ ಪೇಢಿಯ ಹೆಸರಿನಿಂದ ದಾವೆಯು ಮಾಡಬಹುದು. ಆದರೆ ಈ ಪ್ರಸಕ್ತಿಯಲ್ಲಿ ವಿಧಿಸಲ್ಪಡುವದೇನಂದರೆ—ಪೇಢಿಯು ಉದ್ಯೋಗ ನಡೆದ ವೇಳೆಯಲ್ಲಿ ಅಂದರೆ ಪೇಢಿಯು ಮುರಿಯಲ್ಪಡುವ ಮೊದಲು ದಾವೆಯ ಕಾರಣವು ಉದ್ಭವಿಸಿರಬೇಕು. ಪೇಢಿಯು ಮುರಿಯಲ್ಪಟ್ಟ ನಂತರ ದಾವೆಯ ಕಾರಣವು ಉದ್ಭವಿಸಿದರೆ ಪೇಢಿಯ ಹೆಸರಿನಿಂದ ದಾವೆಯು ಮಾಡಲಾಗದು. ಆದರೆ ಯಾವ ಯಾವ ಮನುಷ್ಯರನ್ನು ಜವಾಬದಾರರನ್ನಾಗಿ ಮಾಡುವ ಪ್ರಯತ್ನವಿರುವದೋ ಆ ಪ್ರತಿಯೊಬ್ಬ ಮನುಷ್ಯನ ಮೇಲೆ ದಾವೆಯು ಮಾಡತಕ್ಕದ್ದು. ಒಂದು ವೇಳೆ ಪೇಢಿಯು ಬ್ರಿಟಿಶ್ ಹಿಂದುಸ್ಥಾನದೊಳಗೆ ತಮ್ಮ ಉದ್ಯೋಗವನ್ನು ನಡೆಯಿಸುತ್ತಿರದಿದ್ದರೆ ಎಲ್ಲ ಭಾಗೀದಾರರು ಅಥವಾ ಎಲ್ಲ ಭಾಗೀದಾರರ ಮೇಲೆ ದಾವೆಯನ್ನು ಮಾಡಬೇಕಾಗುವದು. ಆದರೆ ಈ ಪ್ರಸಕ್ತಿಯಲ್ಲಿ ಪೇಢಿಯ ಹೆಸರಿನಿಂದ ದಾವೆಯು ಮಾಡಲಾಗದು. ಅದರಂತೆ ಏಕತ್ರ ಹಿಂದೂ ಕುಟುಂಬದ ಯಾ ಘರಾಣೇದ ಪೇಢಿಯು ಇದ್ದರೆ ಆ ಪೇಢಿಯ ಹೆಸರಿನಿಂದ ದಾವೆಯನ್ನು ಮಾಡಬಾರದು. ಆದರೆ

ಕುಟುಂಬದ ಎಲ್ಲ ದಾಯಾದಿಗಳು ಅಥವಾ ದಾಯಾದಿಗಳ ಮೇಲೆ ಯಾ ಕುಟುಂಬದ ಕರ್ತಾ ಈತನು ಆ ಕುಟುಂಬದ ಕರ್ತಾ ಅಂತಾ ಅಥವಾ ಹಾಗೆ ಅವನ ಮೇಲೆದಾವೆಯನ್ನು ಮಾಡತಕ್ಕದ್ದು.

ಪೇಢಿಯ ಹೆಸರಿನಿಂದ ಮಾಡತಕ್ಕ ದಾವೆಯಲ್ಲಿ ಎಲ್ಲ ಭಾಗೀದಾರರಿಗೆ ಆ ದಾವೆಯಲ್ಲಿ ಸೇರಿಸುವದು ಅವಶ್ಯವಿಲ್ಲ. ಹಾಗೆ ಪ್ರತಿವಾದಿಯು ಬೇಡುವವರೆಗೆ ಅಥವಾ ಯಾವನೊಬ್ಬ ಪಕ್ಷಕಾರನು ಬೇಡುವವರೆಗೆ ಆ ಪೇಢಿಯೊಳಗಿನ ಎಲ್ಲ ಮನುಷ್ಯರ ಹೆಸರುಗಳನ್ನು ಮತ್ತು ಇರುವ ಸ್ಥಳಗಳನ್ನು ಜಾಹೀರು ಮಾಡುವದು ಅಥವಾ ಬರೆಯಿಸುವದು ಕಾರಣವಿಲ್ಲ. ಪ್ರತಿವಾದಿಯು ಅಥವಾ ಯಾವನೊಬ್ಬ ಪಕ್ಷಕಾರನು ಅವುಗಳನ್ನು ಬೇಡಿದ ಪಕ್ಷಕ್ಕೆ ಅವುಗಳನ್ನು ಕೂಡಲೆ ಜಾಹೀರು ಮಾಡಬೇಕು. ಇದರಲ್ಲಿ ಸರನಾಮೆಯನ್ನು ಕೆಳಗಿನಂತೆ ಬರೆಯಬೇಕು :—

**ಉ— " ಅ ಬ.........ಎಂಬಲ್ಲಿ ಪಾಲುಗಾರಿಕೆಯಿಂದ ಉದ್ಯೋಗ ನಡಿಸುವ ಪೇಢಿಯು."**

" ರಾಯಚಂದ ಪ್ರತಾಪಜಿ ಮಾರವಾಡಿ ಎಂಬ ಹುಬ್ಬಳ್ಳಿಯಲ್ಲಿ ಪಾಲುಗಾರಿಕೆಯಿಂದ ಉದ್ಯೋಗ ನಡಿಸುವ ಪೇಢಿಯು " " ಆನಂಗನಿ ನೂರಮುಹಮ್ಮದ ಕಾಠೇವಾಡಿ ಎಂಬ ಹುಬ್ಬಳ್ಳಿಯಲ್ಲಿ ಪಾಲುಗಾರಿಕೆಯಿಂದ ಉದ್ಯೋಗ ನಡಿಸುವ ಪೇಢಿಯು " ಸದರಿ ಹೆಸರಿನ ಕೂಡ " ಸದರಿ ಪೇಢಿಯ ವಹಿವಾಟದಾರ ವ ಮೂಲಕ ರಾಯಚಂದ ಪ್ರತಾಪಜಿ " ಅಥವಾ " ರಹಿಮಾನಸಾಬ ವಲ್ಲದ ಹುಸೇನಸಾಬ " ಅಂತಾ ವಗೈರೆ ಬರಿಯುವ ಪದ್ಧತಿಯು ಕಂಡು ಬರುತ್ತದೆ. ಆದರೆ ಹೀಗೆ ಬರೆಯುವದು ಅವಶ್ಯವಿಲ್ಲ. ಇಷ್ಟೇ ಅಲ್ಲ. ಹೀಗೆ ಬರೆಯುವದು ತಪ್ಪು ಅದೆ. ಕಾರಣ ಹೀಗೆ ಹೆಚ್ಚಿನ ಮಜಕೂರು ಬರೆಯಬಾರದು. ಫಕ್ತ " ರಾಯಚಂದ ಪ್ರತಾಪಜಿ ಮಾರವಾಡಿ ಎಂಬ ಹುಬ್ಬಳ್ಳಿಯಲ್ಲಿ ಪಾಲುಗಾರಿಕೆಯಿಂದ ಉದ್ಯೋಗ ನಡಿಸುವ ಪೇಢಿಯು " ಅಂತಾ ಬರೆದರೆ ಸಾಕು. ಇದಕ್ಕಿಂತ ಹೆಚ್ಚಿಗೆ ಏನೂ ಬರೆಯುವದು ಕಾರಣವಿಲ್ಲ. ಪೇಢಿಯು ಹೆಸರಿನಿಂದ ಮೇಲಿನಂತೆ ದಾವೆ ಮಾಡುವ ಪ್ರಸಂಗದಲ್ಲಿ ಸದರಿ ಪೇಢಿಯ ಭಾಗೀದಾರರ ಪೈಕಿ ಯಾವನೊಬ್ಬನು ಅಸಲರ್ಜಿಗೆ ಸಹಿ ಮಾಡಿದರೆ, ಯಾ ಖರೇತನದ ಪ್ರತಿಜ್ಞಾ ಲೇಖವು ಕೊಟ್ಟರೆ ಯಾ ದಾಖಲೆ

ಕೊಟ್ಟರೆ ಸಾಕಾಗುವದು. ಇದರಿಂದ ಭಾಗೀದಾರನ ಹೆಸರು ಗೊತ್ತು ಆಗುವದು. ಸಹಿ ಕೆಳಗಿನಂತೆ ಮಾಡಬೇಕು. "ರಾಯಚಂದ ಪ್ರತಾಪಜಿ ಮಾರವಾಡಿ, ಪೇಢಿಯ ಭಾಗಿದಾರನು" ಅಂತಾ ಸಹಿಮಾಡಿದರೆ ಸಾಕು. ಭಾಗೀದಾರರ ಪೈಕಿ ಯಾವನಾದರು ಒಬ್ಬನು ವಾದಿಯಾಗಿ ದಾವೆ ಮಾಡಿದರೆ ಸಾಕು.

ಪೇಢಿಯ ಮೇಲೆ ದಾವೆ ಮಾಡುವ ಪ್ರಸಂಗದಲ್ಲಿ ಸಹ ಪೇಢಿಯ ಹೆಸರು ಮೇಲಿನಂತೆ ಬರೆಯಬೇಕು. ಆದರೆ ಯಾರ ಮೇಲೆ ಸಮನು ಬಜಾಯಿಸಬೇಕು ಎಂಬುವದು ಬರೆಯಬೇಕು. ಇದು ಕೆಳಗಿನಂತೆ ಬರೆದರೆ ಸಾಕು. ಮೊದಲು ಪೇಢಿಯ ಹೆಸರು ಮೇಲಿನಂತೆ ಬರೆಯಬೇಕು. ಆ ಮೇಲೆ ಕೆಳಗಿನಂತೆ ಷರಾ ಬರೆದರೆ ಸಾಕು. "ಇದರ ಸಮನು ರಾಯಚಂದ ಪ್ರತಾಪಜಿ ಮಾರವಾಡಿ, ವಯಾ ೫೦, ಜಾತಿ ಜೈನ, ಉದ್ಯೋಗ ವ್ಯವಹಾರ, ಸಾಕೀನ ಹುಬ್ಬಳ್ಳಿ. ಪೇಢಿಯ ಭಾಗೀದಾರನು ಇವನ ಮೇಲೆ ಬಜಾಯಿಸಬೇಕು" ಅಥವಾ "ಇದರ ಸಮನು ರಹಿಮಾನಸಾಬ ವಲ್ಲದ ಹುಸೇನಸಾಬ ವಯಾ ೪೫, ಜಾತಿ ಮುಸಲಮಾನ, ಉದ್ಯೋಗ ವ್ಯವಹಾರ, ಸಾಕೀನ ಹುಬ್ಬಳ್ಳಿ, ಪೇಢಿಯ ಮ್ಯಾನೇಜರನು ಇವನ ಮೇಲೆ ಬಜಾಯಿಸಬೇಕು." ಅಂದರೆ ಪೇಢಿಯ (೧) ಭಾಗೀದಾರರ ಪೈಕಿ ಯಾವನಾದರೊಬ್ಬನ ಮೇಲೆ ಅಥವಾ ಹೆಚ್ಚು ಜನರ ಮೇಲೆ ಅಥವಾ (೨) ಬ್ರಿಟಿಶ್ ಹಿಂದುಸ್ಥಾನದೊಳಗಿನ ಯಾವ ಮುಖ್ಯ ಸ್ಥಳದಲ್ಲಿ ಭಾಗೀದಾರಿಯ ಉದ್ಯೋಗವು ನಡೆಯುತ್ತಿದ್ದಿತೋ ಆ ಸ್ಥಳದಲ್ಲಿ ಭಾಗೀದಾರಿಯ ಕೆಲಸವು ಯಾವ ಮನುಷ್ಯನ ನಿರ್ಬಂಧವಲ್ಲಿ ಯಾ ವ್ಯವಸ್ಥೆಯ ಕೆಳಗೆ ಇದ್ದಿತೋ ಆ ಮನುಷ್ಯನ ಮೇಲೆ ಸಮನು ಆ ಲಾಗು ಮಾಡಬೇಕು.



ಆದರೆ ಗೊತ್ತು ಪಡಿಸುವದೇನಂದರೆ— ಭಾಗೀದಾರಿಯು ಮುರಿಯಲ್ಪಟ್ಟಿದ್ದರೆ ಬ್ರಿಟಿಶ್ ಹಿಂದುಸ್ಥಾನದೊಳಗಿರುವ ಯಾವ ಯಾವ ಭಾಗೀದಾರರನ್ನು ಜವಾಬದಾರರನ್ನಾಗಿ ಮಾಡುವ ಪ್ರಯತ್ನವಿದ್ದಿತೋ ಆ ಪ್ರತಿಯೊಬ್ಬ ಮನುಷ್ಯನ ಮೇಲೆ ಸಮನು ಲಾಗು ಮಾಡಬೇಕು. ಯಾರ ಮೇಲೆ ಸಮನು ಲಾಗು ಮಾಡಿರುವದಿಲ್ಲ ಅವನ ವಿರುದ್ಧ ಆ ಹುಕುಮನಾಮೆಯು ಅಮಲು ನಡಿಸಲಿಕ್ಕೆ ಬರಲಾರದು. ಸಮನು ಯಾವ ನಾತೇದಿಂದ ಲಾಗೂ ಮಾಡಲ್ಪಟ್ಟಿತ್ತೆಂಬುವದರ ದಶಿಂದಾ ಸಮನಿನ ಕೂಡ ನೋಟೀಸು ಮಾಡಬೇಕು. ನೋಟೀಸು ಕೆಳಗೆ ಬರೆದ ಪ್ರಕಾರ ಮಾಡಬೇಕು.



೧. "ನೀನು ಪ್ರತಿವಾದಿಯಾದ 'ರಾಯಚಂದ ಪ್ರತಾಪಜಿ ಮಾರವಾಡಿ' ಎಂಬ ಪೇಢಿಯ ಭಾಗೀದಾರನು ಇರುತ್ತೀ' ಅಥವಾ

೨. "ಪ್ರತಿವಾದಿಯಾದ 'ರಾಯಚಂದ ಪ್ರತಾಪಜಿ ಮಾರವಾಡಿ' ಎಂಬ ಭಾಗೀದಾರಿಯು ಯಾ ಪೇಢಿಯು ನಿನ್ನ ನಿರ್ಬಂಧದಲ್ಲಿ ಅಥವಾ ನಿನ್ನ ವ್ಯವಸ್ಥೆ ಕೆಳಗೆ ಅದೆ" ಅಥವಾ

೩. "ನೀನು ಪ್ರತಿವಾದಿಯಾದ 'ರಾಯಚಂದ ಪ್ರತಾಪಜಿ ಮಾರವಾಡಿ' ಎಂಬ ಪೇಢಿಯ ಭಾಗೀದಾರನು ಅಂತಾ ಮತ್ತು ಸದರಿ ಪೇಢಿಯು ನಿನ್ನ ನಿರ್ಬಂಧದಲ್ಲಿ ಅಥವಾ ವ್ಯವಸ್ಥೆ ಕೆಳಗೆ ಅದೆ" ಅಂತಾ ಈ ನೋಟೀಸಿನಿಂದ ತಿಳಿಸಿ ಲಗತ ಇಟ್ಟ ಸಮನು ನಿನ್ನ ಮೇಲೆ ಬಜಾಯಿಸಿರುತ್ತದೆ.

ಭಾಗೀದಾರರೆಂದು ಯಾರಾದರು ಮನುಷ್ಯರ ಮೇಲೆ ಅವರ ಪೇಢಿಯ ಹೆಸರಿನಿಂದ ದಾವೆಮಾಡಿದ್ದಲ್ಲಿ ಅವರು ತಮ್ಮ ತಮ್ಮ ಹೆಸರಿನಿಂದ ವ್ಯಕ್ತಿಶಃ ಹಾಜರಾಗಬೇಕು. ಆದರೂ ಆನಂತರ ನಡೆಯಿಸತಕ್ಕ ಎಲ್ಲ ಕೆಲಸಗಳನ್ನು ಪೇಢಿಯ ಹೆಸರಿನಿಂದ ಚಾಲು ಇಡಬೇಕು. ಪೇಢಿಯ ಹೆಸರಿನಿಂದ ಪೇಢಿಯಮೇಲೆ ದಾವೆ ಮಾಡಿದಲ್ಲಿ ಸದರಿ ಪೇಢಿಯ ಎಲ್ಲ ಭಾಗೀದಾರರು ಕೂಡಿ ಒಂದೇ ಕೈಫಿಯತು ಕೊಡುವರು, ಅಥವಾ ಅವರವರಲ್ಲಿ ತಕರಾರು ಅಥವಾ ವ್ಯಾಜ್ಯವಿದ್ದರೆ ಅವರು ಬೇರೆ ಬೇರೆ ಕೈಫಿಯತು ಕೊಡುವರು. ಪೇಢಿಯ ತರ್ಫಿನಿಂದ ಯಾವನಾದರು ಭಾಗೀದಾರನು ಹಾಜರಾಗಿ ಕೈಫಿಯತು ಕೊಟ್ಟರೆ ಮತ್ತು ಪ್ರತಿವಾದ ನಡಿಸಿದರೆ ಸಾಕು. ಎಲ್ಲರು ಹಾಜರ ಆಗುವದು ಅವಶ್ಯವದೆ ಹೀಗೇನೂ ಇಲ್ಲ. ಪೇಢಿಯ ತರ್ಫಿನಿಂದ ಕೈಫಿಯತು ಕೊಡಬೇಕಾದಲ್ಲಿ ಅದರಲ್ಲಿ ಸರನಾಮೆ ಕೆಳಗಿನಂತೆ ಬರೆಯಬೇಕು. "ರಾಯಚಂದ ಪ್ರತಾಪಜಿ ಮಾರವಾಡಿ ಎಂಬ ಪೇಢಿಯ ತರ್ಫಿನಿಂದ ಸದರಿ ಪೇಢಿಯ ಭಾಗೀದಾರನಾದ ವರದಾಜೀ ಪ್ರತಾಪಜಿ ಮಾರವಾಡಿ ಈತನು ಕೊಡುವ ಕೈಫಿಯತು ಏನಂದರೆ" — ಇದರಂತೆ ಬರೆದು ಕೈಫಿಯತ್ತಿನ ಮಜಕೂರು ಬರೆಯಬೇಕು.

ಯಾವನಾದರು ಮನುಷ್ಯನು ತನ್ನ ಸ್ವಂತ ಹೆಸರಿನ ಹೊರತು ಬೇರೆ ಹೆಸರಿನಿಂದ ಉದ್ಯೋಗ ಅಥವಾ ವ್ಯವಹಾರ ಅಥವಾ ಅಂಗಡಿಯನ್ನು ನಡಿಸಿದಲ್ಲಿ ಅವನಿಗೆ ಸದರಿ ಉದ್ಯೋಗ ಅಥವಾ ವ್ಯವಹಾರ ಅಥವಾ ಅಂಗಡಿಯ ಬಾಬತು ದಾವೆ

ಮಾಡಬೇಕಾದಲ್ಲಿ ಅವನು ತನ್ನ ಸ್ವಂತ ಹೆಸರಿನಿಂದ ಮಾಡಬೇಕು ಅಂದರೆ ತನ್ನ ಸ್ವಂತ ಹೆಸರಿನ ಹೊರತು ಯಾವ ಹೆಸರಿನಿಂದ ಸದರಿಯವನು ಉದ್ಯೋಗ ಅಥವಾ ವ್ಯವಹಾರ ಅಥವಾ ಅಂಗಡಿಯನ್ನು ನಡಿಸುವನೋ ಆ ಹೆಸರಿನಿಂದ ಮಾಡತಕ್ಕದ್ದಲ್ಲ. ಆದರೆ ಸದರಿ ಅವನ ಮೇಲೆ ದಾವೆಯು ಮಾಡಬೇಕಾದಲ್ಲಿ ಅವನು ಸ್ವಂತ ಹೆಸರಿನ ಹೊರತು ಬೇರೆ ಯಾವ ಹೆಸರಿನಿಂದ ಉದ್ಯೋಗ ಅಥವಾ ವ್ಯವಹಾರ ಅಥವಾ ಅಂಗಡಿಯನ್ನು ನಡಿಸಿದಲ್ಲಿ ಆ ಬೇರೆ ಹೆಸರಿನಿಂದ ದಾವೆಮಾಡಬಹುದು ಅಥವಾ ಅವನ ಸ್ವಂತ ಹೆಸರಿನಿಂದ ದಾವೆ ಮಾಡಬಹುದು—

ಅ ಎಂಬುವವನು 'ವನಿತಾ ವಸ್ತ್ರಭಾಂಡಾರ' ಎಂಬ ಹೆಸರಲೆ ಒಂದು ಅಂಗಡಿಯನ್ನು ನಡಿಸುತ್ತಾನೆ. ಆ ಅಂಗಡಿ ಸಂಬಂಧಿ ಅ ಈತನಿಗೆ ದಾವೆಯನ್ನು ಮಾಡಬೇಕಾಗಿದ್ದಲ್ಲಿ ಅವನು ಆ ದಾವೆಯು ತನ್ನ ಸ್ವಂತ ಹೆಸರಿನಿಂದ ಮಾಡಬೇಕು. ಆದರೆ ಅಂಗಡಿ ಹೆಸರಿನಿಂದ ಮಾಡಬಾರದು. ಅ ಈತನ ವಿರುದ್ಧ ದಾವೆಯು ಮಾಡಬೇಕಾಗಿದ್ದಲ್ಲಿ ಅ ಈತನ ಸ್ವಂತ ಹೆಸರಲೆ ಅಥವಾ ಅವನ ಅಂಗಡಿಯ ಹೆಸರಲೆ ದಾವೆಯು ಮಾಡಲ್ಪಡಬಹುದು.

**ಜಿಮ್ಮೆದಾರರು, ಮೃತ್ಯುಪತ್ರ ನಡೆಯಿಸುವವರು, ಮತ್ತು ವಹಿವಾಟು ನಡೆಯಿಸುವವರು, ಇವರಿಂದ ಯಾ ಇವರ ಮೇಲೆ ಮಾಡಲ್ಪಡುವ ದಾವೆಗಳು**— ಜಿಮ್ಮೆದಾರರ ಮೃತ್ಯುಪತ್ರ ನಡಿಸುವವರ ಯಾ ವಹಿವಾಟ ನಡೆಯಿಸುವವರ ಕೈ ಸೇರಿದಂಥ ಮಾಲಿಗೆ ಸಂಬಂಧವಾದ ಎಲ್ಲ ದಾವೆಗಳಲ್ಲಿ ಸದರಿ ಮಾಲಿನೊಳಗಿನ ವಾಸ್ತವಿಕ ಹಿತಕರವಾಗಿ ಸ್ವಾರ್ಥಸಂಬಂಧವುಳ್ಳಂಥ ಮನುಷ್ಯನು ಮತ್ತು ಯಾವನೊಬ್ಬ ಮೂರನೇ ಮನುಷ್ಯನೊಳಗೆ ವಾದವಿದ್ದಲ್ಲಿ ಆ ಜಿಮ್ಮೆದಾರನು, ಮೃತ್ಯುಪತ್ರ ನಡೆಯಿಸುವವನು ಅಥವಾ ವಹಿವಾಟ ನಡೆಯಿಸುವವನು ಸದರಿಪ್ರಕಾರ ಹಿತಕಾರವಾಗಿ ಸ್ವಾರ್ಥಸಂಬಂಧವುಳ್ಳಂಥ ಮನುಷ್ಯರ ಪ್ರತಿನಿಧಿಯಾಗುವವನು ಮತ್ತು ಸದರಿ ದಾವೆಯಲ್ಲಿ ಮೇಲ್ಕಂಡಂತೆ ಸ್ವಾರ್ಥಸಂಬಂಧವುಳ್ಳಂಥ ಮನುಷ್ಯನು ಇಂಥವರಿಗೆ ಪಕ್ಷಕಾರರನ್ನಾಗಿ ಮಾಡುವ ಅವಶ್ಯವೂ ಪ್ರಾಯಶಃ ಬೀಳಲಿಕ್ಕಿಲ್ಲ. ಈ ನಿಯಮವು ಕೆಳಗಿನಂತೆ ವಿಶದಮಾಡೋಣ.

೧. ಜಿಮ್ಮೆದಾರರು ಮೊದಲಾದವರ ಕೈಸೇರಿಸಿದ ಮಾಲಿನ ಸಂಬಂಧಿವಾದ ಇರಬೇಕು ಮತ್ತು—

೨. ಸದರಿ ಮಾಲಿನೊಳಗೆ ವಾಸ್ತವಿಕ ಹಿತಕರವಾಗಿ ಸ್ವಾರ್ಥಸಂಬಂಧವುಳ್ಳಂಥ ಮನುಷ್ಯನೊಳಗೆ ಮತ್ತು ಯಾವನೊಬ್ಬ ಮೂರನೇ ಮನುಷ್ಯನೊಳಗೆ ಮೇಲ್ಕಂಡ ಮಾಲಿನ ಸಂಬಂಧಿ ವಾದ ಇರಬೇಕು.

ಈ ಎರಡು ಸಂಗತಿಗಳನ್ನು ಹಾಜರ ಇದ್ದಾಗ್ಗೆ ಮಾತ್ರ ಮೇಲ್ಕಂಡಂತೆ ಸ್ವಾರ್ಥಸಂಬಂಧವುಳ್ಳಂಥ ಮನುಷ್ಯರ ಪ್ರತಿಸಿಧಿಯಾಗಿ ಜಿಮ್ಮೇದಾರ ಮೊದಲಾದವರು ದಾವೆಯನ್ನು ನಡಿಯಿಸಬಹುದು. ಸದರಿ ದಾವೆಗಳಲ್ಲಿ ಸರನಾಮೆಗಳು ಕೆಳಿಗಿನಂತೆ ಬರಿಯಬೇಕು.

"**ಅ, ಬ** (ವರ್ಣನವನ್ನು ವಾಸಸ್ಥಳವನ್ನು ಬರೆಯಬೇಕು), ಮೃತಪಟ್ಟ **ಕ, ಡ** ಎಂಬುವವನ ಮೃತ್ಯುಪತ್ರ ನಡಿಸುವವನು."

**ಅಲ್ಪವಯಸ್ಕರು ಮಾಡುವ ಅಥವಾ ಅವರ ಮೇಲೆ ಮಾಡಲ್ಪಡುವ ದಾವೆಗಳು**—ಅಲ್ಪವಯಸ್ಕನು ಮಾಡತಕ್ಕ ಪ್ರತಿಯೊಂದು ದಾವೆಯನ್ನು ಅವನ ಹೆಸರಿನಿಂದ ಪ್ರೌಢಮನುಷ್ಯನು ಮಾಡಬೇಕು. ಆ ಮನುಷ್ಯನು ಅಂಥ ದಾವೆಯಲ್ಲಿ ಆ ಅಲ್ಪವಯಸ್ಕನ 'ಹಿತಚಿಂತಕನೆಂದು' ಹೇಳಲ್ಪಡುವನು. ಅಲ್ಪವಯಸ್ಕನಿಗೆ ತನ್ನ ಹಿತವನ್ನು ಚನ್ನಾಗಿ ನೋಡಲಿಕ್ಕೆ ಆಗುವದಿಲ್ಲಾದ ಕಾರಣ ಅವನ ಹಿತವನ್ನು ಚನ್ನಾಗಿ ನೋಡುವಂಥ ಪ್ರೌಢಮನುಷ್ಯನ ಮುಖಾಂತರವಾಗಿ ದಾವೆಯನ್ನು ಮಾಡತಕ್ಕದ್ದು.

ಅಲ್ಪವಯೀ ಯಾರಿಗೆ ಅನ್ನಬೇಕು ? ಬ್ರಿಟಿಷ್ ಹಿಂದುಸ್ಥಾನದಲ್ಲಿ ವಾಸಮಾಡತಕ್ಕಂಥ ಪ್ರತಿಯೊಬ್ಬನು ತನಗೆ ೧೮ವರ್ಷಗಳು ಮಿಕ್ಕುವವರೆಗೆ ಅಲ್ಪವಯಸ್ಕನು ಇರುವನು. ಪ್ರತಿಯೊಬ್ಬನು ತನಗೆ ೧೮ವರ್ಷ ಮಿಕ್ಕಿದ ಕೂಡಲೆ ಪ್ರೌಢನಾಗುವನು. ಆದರೆ ಯಾವನೊಬ್ಬ ಅಲ್ಪವಯಸ್ಕನಿಗೆ ಯೋಗ್ಯವಾದ ಅಧಿಕಾರಿಯಿಂದ ನಿಯಮಿಸಲ್ಪಟ್ಟ ಅಥವಾ ಜಾಹೀರುಮಾಡಲ್ಪಟ್ಟ ಪಾಲಕನು ಇದ್ದಲ್ಲಿ ಸದರಿ ಅವನು ೨೧ ವರ್ಷಗಳು ಮಿಕ್ಕುವರೆಗೆ ಅಲ್ಪವಯಸ್ಕನು ಇರುವನು. ಉ:— ಡಿಸ್ಟ್ರಿಕ್ಟ ಕೋರ್ಟಿನಿಂದ '**ಅ**' ಎಂಬ ಅಲ್ಪವಯಸ್ಕನ ದಶೆಯಿಂದಾ ಹಿತಚಿಂತಕನನ್ನು ನಿಯಮಿಸಲ್ಪಟ್ಟಲ್ಲಿ ಅಥವಾ ಪಾಲಕನನ್ನು ನಿಯಮಿಸಲ್ಪಟ್ಟಲ್ಲಿ '**ಅ**' ಈತನಿಗೆ ೨೧ ವರ್ಷಗಳು ಮಿಕ್ಕುವವರೆಗೆ ಅವನು ಅಲ್ಪವಯಸ್ಕನು ಇರುವನು ಮತ್ತು ೨೧ ವರ್ಷ ಮಿಕ್ಕಿದ ಕೂಡಲೆ ಅವನು ಪ್ರೌಢನಾಗುವನು ಅಥವಾ ಪೂರ್ಣ ವಯಸ್ಕನಾಗುವನು.

ಹ್ಯಾಗೆ ಅಲ್ಪವಯಸ್ಕನು ಹಿತಚಿಂತಕನ ಮುಖಾಂತರವಾಗಿ ದಾವೆಯನ್ನು ಮಾಡಬೇಕೋ ಅದರಂತೆ ಅಲ್ಪವಯಸ್ಕನ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಕೋರ್ಟಿನವರು ಯಾರೊಬ್ಬ ತಕ್ಕ ಮನುಷ್ಯನನ್ನು ಆ ಅಲ್ಪವಯಸ್ಕನ ದಶಿಂದಾ ಆ ದಾವೆಯ ಸಂಬಂಧದ ಪಾಲಕನಾಗಿ ನೇಮಿಸಬೇಕು. ಅಂದರೆ ಅಲ್ಪವಯಸ್ಕ ನಾದ ಪ್ರತಿವಾದಿ ಬಗ್ಗೆ ದಾವೆಯ ಸಂಬಂಧದ ಪಾಲಕನನ್ನು ಕೋರ್ಟಿನವರು ನೇಮಿಸಬೇಕು.

ಅಲ್ಪವಯಸ್ಕನ ತರ್ಫೆನಿಂದ ದಾವೆಯು ಮಾಡಬೇಕಾದಲ್ಲಿ ಆ ದಾವೆಯ ಸರನಾಮೆಯನ್ನು ಕೆಳಗಿನಂತೆ ಬರೆಯಬೇಕು.

" **ಅ, ಬ** ಎಂಬ ಅಪ್ರಾಯಸ್ಥನ ( ವರ್ಣನವನ್ನು ವಾಸಸ್ಥಳವನ್ನು ಬರೆಯಬೇಕು ) ಬಗ್ಗೆ; ಅವನ ಹಿತಚಿಂತಕನಾದ **ಕ, ಡ** ಎಂಬುವನ (ಅಥವಾ ಕೋರ್ಟ ಆಫ್ ವಾರ್ಡಿನ) ಮುಖಾಂತರವಾಗಿ. " ವಾದಿ

"ರುದ್ರಪ್ಪಾ ತಂದಿ ರಾಮಪ್ಪಾ ಹಂಚಿನಾಳ, ವಯಾ ೧೦, ಜಾತಿ ಲಿಂಗಾಯತ, ಉದ್ಯೋಗ ಸಾಲಿಕಲಿಯುವದು, ಸಾಕೀನ ತಡಸ; ಈ ಅಪ್ರಾಯಸ್ಥನ ಬಗ್ಗೆ ಅವನ ಹಿತಚಿಂತಕನಾದ ಮಲ್ಲಪ್ಪಾ ತಂದಿ ಕಲ್ಲಪ್ಪಾ ಉಳ್ಳಾಗಡ್ಡಿ ಸಾಕೀನ ಸದರ ಈತನ ಮುಖಾಂತರವಾಗಿ ವಾದಿ

ಅಲ್ಪವಯಸ್ಕನ ಮೇಲೆ ದಾವೆಯನ್ನು ಮಾಡಬೇಕಾದಲ್ಲಿ ಆ ದಾವೆಯ ಸರನಾಮೆ ಯನ್ನು ಕೆಳಗಿನಂತೆ ಬರೆಯಬೇಕು.

" **ಅ, ಬ** ಅಪ್ರಾಯಸ್ಥನ ( ವರ್ಣನವನ್ನು, ವಾಸಸ್ಥಳವನ್ನು ಬರೆಯ ಬೇಕು ) ಬಗ್ಗೆ, ಈ ದಾವೆಯ ಸಂಬಂಧದ ಅವನ ಪಾಲಕನಾದ **ಕ, ಡ** ಎಂಬು ವವನ ಮುಖಾಂತರವಾಗಿ. " ಪ್ರತಿವಾದಿ "ರುದ್ರಪ್ಪಾ ತಂದಿ ರಾಮಪ್ಪಾ ಹಂಚಿನಾಳ ವಯಾ ೧೦, ಜಾತಿ ಲಿಂಗಾಯತ, ಉದ್ಯೋಗ ಸಾಲಿಕಲಿಯುವದು, ಸಾಕೀನ ತಡಸ, ತಾಲೂಕ ಹುಬ್ಬಳ್ಳಿ; ಈ ಅಪ್ರಾಯಸ್ಥನ ಬಗ್ಗೆ; ಈ ದಾವೆಯ ಸಂಬಂಧದ ಅವನ ಪಾಲಕನಾದ ಮಲ್ಲಪ್ಪಾ ತಂದಿ ಕಲ್ಲಪ್ಪಾ ಉಳ್ಳಾಗಡ್ಡಿ, ವಯಾ ೩೫, ಜಾತಿ ಲಿಂಗಾಯತ, ಉದ್ಯೋಗ ವ್ಯವಹಾರ, ಸಾಕೀನ ಸದರ ಇವನ ಮುಖಾಂತರವಾಗಿ ..ಪ್ರತಿವಾದಿ. ಹಿತಚಿಂತಕನಿಲ್ಲದೆ ಅಲ್ಪವಯ ಸ್ಕನು ಯಾ ಅವನ ಸಲುವಾಗಿ ಬೇರೊಬ್ಬನು ದಾವೆಯನ್ನು ತಂದಲ್ಲಿ, ಅದನ್ನು ದಾವೆಗಳ ಯಾದಿಯೊಳಗಿಂದ ತೆಗೆದು ಹಾಕುವದರಲ್ಲಿ ಬರುವದು.

ಅಲ್ಪವಯಸ್ಕನಾದ ವಾದಿಯು ಯಾ ಅರ್ಜದಾರನು ಪೂರ್ಣವಯಸ್ಕ ನಾದ ಅಥವಾ ಪ್ರೌಢನಾದ ಬಳಿಕ ಅವನು ದಾವೆಯ ಅಥವಾ ಅರ್ಜಿಯ ಕೆಲಸ ವನ್ನು ನಡೆಯಿಸುವ ನಿಶ್ಚಯವನ್ನು ಮಾಡಿದಲ್ಲಿ ಹಿತಚಿಂತಕನ ಬಿಡುಗಡೆಗಾ ಗಿಯೋ ಕೆಲಸವನ್ನು ತನ್ನ ಹೆಸರಿನಿಂದ ನಡೆಯಿಸುವ ಪರವಾನಗಿಗಾಗಿಯೋ ಅರ್ಜಿಮಾಡಿ ಆ ಬಗ್ಗೆ ಹುಕುಮುದೊರೆಯಬೇಕು. ಅಂಥ ಪ್ರಸಕ್ತಿಯಲ್ಲಿ ಆ ದಾವೆಯ ಯಾ ಅರ್ಜಿಯ ಸರನಾಮೆಯನ್ನು ಕೆಳಗೆ ಬರೆದಂತೆ ದುರುಸ್ತು ಮಾಡಬೇಕು —

" ಈ ಪೂರ್ವದಲ್ಲಿ ಅಲ್ಪವಯಸ್ಕನಾಗಿದ್ದು **ಕ, ಡ** ಎಂಬ ಹಿತಚಿಂತಕನ ಮುಖಾಂತರವಾಗಿ ಕೆಲಸ ನಡಿಸುತ್ತಿದ್ದ; ಮತ್ತು ಈಗ ಪೂರ್ಣವಯಸ್ಸಿನವ ನಾದ **ಅ, ಬ.** "

ಅಸ್ವಸ್ಥ ಮನಸ್ಸಿನವರು ಮಾಡುವ ಅಥವಾ ಅವರ ಮೇಲೆ ಮಾಡಲ್ಪಡುವ ದಾವೆಗಳು:—ಅಲ್ಪವಯಸ್ಸಿನವರಿಗೆ ಲಾಗು ಇದ್ದ ಮೇಲ್ಕಂಡ ಎಲ್ಲಾ ಕಾನೂನು ಗಳನ್ನು ಅಸ್ವಸ್ಥವಾದ ಮನಸ್ಸುಳ್ಳ ಮನುಷ್ಯರಿಗೆ ಸಹ ಲಾಗೂ ಆಗುವವೆಂದು ತಿಳಿಯತಕ್ಕದ್ದು. ಅಂದರೆ ಹುಚ್ಚರ ವತಿಯಿಂದ ಅಥವಾ ಹುಚ್ಚರ ಮೇಲೆ ಯಾ ಅಸ್ವಸ್ಥವಾದ ಮನಸ್ಸುಳ್ಳವರ ವತಿಯಿಂದ ಅಥವಾ ಅಂಥವರ ಮೇಲೆ ಯಾ ದುರ್ಬಲ ಮನಸ್ಸಿನವರ ವತಿಯಿಂದ ಅಥವಾ ಅವರ ಮೇಲೆ ದಾವೆಯನ್ನು ಮಾಡ ಬೇಕಾದಲ್ಲಿ ಅಲ್ಪವಯಸ್ಸಿನವರ ವತಿಯಿಂದ ಅಥವಾ ಅವರ ಮೇಲೆ ದಾವೆಯನ್ನು ಮಾಡುವಬಗ್ಗೆ ಮೇಲ್ಕಂಡ ಎಲ್ಲಾ ಕಾನೂನುಗಳಿಗೆ ಅನುಸರಿಸಿ ಮಾಡಬೇಕು.

**ಉ:** – ದುರ್ಬಲ ಮನಸ್ಸಿನವನು ಮಾಡತಕ್ಕ ಪ್ರತಿಯೊಂದು ದಾವೆ ಯನ್ನು ಅವನ ಹೆಸರಿನಿಂದ ಪ್ರೌಢ ಮನುಷ್ಯನು ಮಾಡಬೇಕು ಹಾಗೆ ದುರ್ಬಲ ಮನಸ್ಸಿನವನಾದ ಪ್ರತಿವಾದಿಯ ಬಗ್ಗೆ ದಾವೆಯ ಸಂಬಂಧವ ಪಾಲಕನನ್ನು ಕೋರ್ಟಿನವರು ನೇಮಿಸಬೇಕು ವಗೈರೆ ದುರ್ಬಲ ಮನಸ್ಸಿನವನ ತರ್ಫೆಯಿಂದ ದಾವೆಯು ಮಾಡಬೇಕಾಗಿದ್ದಲ್ಲಿ ಆ ದಾವೆಯ ಸರನಾಮೆಯನ್ನು ಕೆಳಗೆ ಬರೆದಂತೆ ಬರೆಯಬೇಕು —

"**ಅ ಬ** ಎಂಬ (ವರ್ಣನವನ್ನು ವಾಸಸ್ಥಳವನ್ನು ಬರೆಯಬೇಕು); ಹುಚ್ಚ ನು(ಯಾ ದುರ್ಬಲ ಮನಸ್ಸಿನವನು;) ಅವನ ಹಿತಚಿಂತಕನಾದ **ಕ, ಡ** ಎಂಬುವ

ವನ ಮುಖಾಂತರವಾಗಿ"      ವಾದಿ.  ಇವರಂತೆ ದುರ್ಬಲ ಮನಸ್ಸಿನವನ ಮೇಲೆ ದಾವೆಯು ಮಾಡಬೇಕಾಗಿದ್ದಲ್ಲಿ ಆ ದಾವೆಯ ಸರನಾಮೆಯುನ್ನು ಕೆಳಗೆ ಬರೆದಂತೆ ಬರೆಯಬೇಕು—

"**ಅ, ಬ** ಎಂಬ ಹುಚ್ಚನು (ಅಥವಾ ದುರ್ಬಲ ಮನಸ್ಸಿನವನು) (ವರ್ಣನ ವನ್ನೂ ವಾಸಸ್ಥಳವನ್ನೂ ಬರೆಯಬೇಕು) ಬಗ್ಗೆ, ಈ ದಾವೆಯ ಸಂಬಂಧದ ಅವನ ಪಾಲಕನಾದ **ಕ, ಡ** ಎಂಬುವವನ ಮುಖಾಂತರವಾಗಿ" ಪ್ರತಿವಾದಿ.

**ಸ್ಥಾವರಾಸ್ತಿಯ ಒತ್ತೆಗಳ ಸಂಬಂಧದ ದಾವೆಗಳು**—ಒತ್ತೆಯ ತಾರಣದಲ್ಲಿ ಅಥವಾ ಬಿಡಿಸಿಕೊಳ್ಳುವ ಹಕ್ಕಿನಲ್ಲಿ ಹಿತಸಂಬಂಧವಿದ್ದ ಎಲ್ಲ ಜನ ರನ್ನು ಸದರಿ ಆಸ್ತಿಯ ಸಂಬಂಧದ ದಾವೆಗಳಲ್ಲಿ ಪಕ್ಷಕಾರರೆಂದು ದಾಖಲಮಾಡ ತಕ್ಕದ್ದು.  ಮೂಲ ಒತ್ತೆ ವ್ಯವಹಾರ ಮಾಡಿದ ಎಲ್ಲ ಜನರಿಗೆ ಮತ್ತು ಕಾಯದೆ ಯಿಂದ ಅಥವಾ ಅಪಸಾತಿನಲ್ಲಿ ಆದ ವಿನಿಯೋಗದಿಂದ ಒತ್ತೆ ಇಡುವವನ ಅಥವಾ ಒತ್ತೆ ಇಟ್ಟುಕೊಂಡವನ ಹಕ್ಕುಗಳನ್ನು ಯಾವ ಜನರಿಗೆ ಪ್ರಾಪ್ತ ಆಗಿರುವದೋ ಆ ಎಲ್ಲ ಜನರಿಗೆ ಆ ದಾವೆಯಲ್ಲಿ ಪಕ್ಷಕಾರರನ್ನು ಮಾಡುವದು ಅವಶ್ಯವದೆ.  ಯಾವ ದೊಂದು ಪಶ್ಚಾತ್ ಒತ್ತೆಯನ್ನು ಬಿಡಿಸಿಕೊಳ್ಳುವ ಬಗ್ಗೆ ಮಾಡಿದ ದಾವೆಯಲ್ಲಿ ಮೊದಲಿನ ಒತ್ತೆ ಇಟ್ಟುಕೊಂಡವನನ್ನು ಪಕ್ಷಕಾರನನ್ನಾಗಿ ಸೇರಿಸುವ ಅಗತ್ಯವಿಲ್ಲ; ಆದರೆ ಮೊದಲಿನ ಒತ್ತೆ ಬಿಡಿಸಿಕೊಳ್ಳುವ ಬಗ್ಗೆ ಮಾಡಿದ ದಾವೆಯಲ್ಲಿ ಪಶ್ಚಾತ್ ಒತ್ತೆ ಇಟ್ಟುಕೊಂಡವನನ್ನು ಪಕ್ಷಕಾರನನ್ನಾಗಿ ಸೇರಿಸುವದು ಅಗತ್ಯವಿದೆ.

**ಉ:— ಅ,** ಎಂಬುವವನು ತನ್ನ ೨೦,೦೦೦ ರೂಪಾಯಿಗಳ ಕಿಮ್ಮತ್ತಿನ ಮನೆಯನ್ನು ತಾರೀಖು ೫–೬–೧೯೨೭ನೇ ಇಸ್ವಿ ದಿವಸ ೧೦,೦೦೦ ರೂಪಾಯಿಗ ಳಿಗೆ, **ಬ,** ಎಂಬುವವನ ಕಡೆಗೆ ಒತ್ತೆ ಇಟ್ಟನು.  ಸದರಿ ಒತ್ತೆ ಬೋಜಾ ಕಾಯಮ ಇರುತ್ತಿರಲು ಅದೇ ಮನೆಯನ್ನು ೩೦೦೦ ರೂಪಾಯಿಗಳಿಗೆ ತಾರೀಖು ೪–೫–೧೯೨೮ನೇ ಇಸ್ವಿ ದಿವಸ **ಕ,** ಎಂಬುವವನ ಕಡೆಗೆ ಒತ್ತೆ ಇಟ್ಟನು.  ಇದರಲ್ಲಿ **ಅ** ಈತನಿಗೆ **ಕ** ಈತನ ಒತ್ತೆ ಬಿಡಿಸುವದರ ದಶಿಯಿಂದ ದಾವೆಯನ್ನು ಮಾಡಬೇಕಾದಲ್ಲಿ ಆ ದಾವೆಯಲ್ಲಿ **ಬ** ಈತನಿಗೆ ಪಕ್ಷಕಾರನನ್ನಾಗಿ ಮಾಡುವದು ಕಾರಣವಿಲ್ಲ.  ಆದರೆ **ಬ** ಈತನ ಒತ್ತೆ ಬಿಡಿಸುವದರ ದಶಿಯಿಂದ ದಾವೆಯನ್ನು ಮಾಡಬೇಕಾದಲ್ಲಿ ಆ ದಾವೆಯಲ್ಲಿ **ಕ** ಈತನಿಗೆ ಪಕ್ಷಕಾರನನ್ನಾಗಿ ಮಾಡುವದು ಅವಶ್ಯವದೆ.

**(ಡ) ವಾದಿಯು ಅಥವಾ ಪ್ರತಿವಾದಿಯು ಅಲ್ಪವಯಸ್ಕನು ಅಥವಾ ಅಸ್ವಸ್ಥಮನಸ್ಸಿನವನಾಗಿದ್ದರೆ ಆ ಬಗ್ಗೆ ಕೈಫಿಯತ್ತು ಎಂಬ ಸಂಗತಿಯ ವಿವರಣೆ ಮಾಡುವಾ**–ಅಲ್ಪವಯಸ್ಕನು ಅಥವಾ ಅಸ್ವಸ್ಥಮನಸ್ಸಿನವನು ತನ್ನ ಹಿತಚಿಂತಕನ ಮುಖಾಂತರವಾಗಿ ದಾವೆಯನ್ನು ಮಾಡತಕ್ಕದ್ದು. ಅದರಂತೆ ಅಲ್ಪವಯಸ್ಕನಾದ ಅಥವಾ ಅಸ್ವಸ್ಥಮನಸ್ಸಿನವನಾದ ಪ್ರತಿವಾದಿಯ ಬಗ್ಗೆ ದಾವೆಯ ಸಂಬಂಧದ ಪಾಲಕನನ್ನು ನೇಮಿಸುವದು ಅವಶ್ಯವದೆ. ಮತ್ತು ಅಲ್ಪವಯಸ್ಕನ ಅಥವಾ ಅಸ್ವಸ್ಥಮನಸ್ಸಿನವನ ದಾವೆಯ ಸರನಾಮೆಯಲ್ಲಿ ಸದರಿ ಅವನು ಅಲ್ಪವಯೀ ಅಥವಾ ಅಸ್ವಸ್ಥಮನಸ್ಸಿನವನು ಇದ್ದ ಬಗ್ಗೆ ಮಜಕೂರು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಕಾಣಿಸುವದು ಅವಶ್ಯವದೆ. ಈ ಮಜಕೂರು ಫಕ್ತ ಸರನಾಮೆಯಲ್ಲಿ ಕಾಣಿಸಿದರೆ ಸಾಕಾಗುವದಿಲ್ಲ. ಆದರೆ ಅಸಲಜಿಯಲ್ಲಿ ಅಥವಾ ಕೈಫಿಯತ್ತಿನಲ್ಲಿ ಅನುಕ್ರಮವಾಗಿ ವಾದಿಯು ಅಲ್ಪವಯಸ್ಕನು ಅಥವಾ ಅಸ್ವಸ್ಥಮನಸ್ಸಿನವನು ವ ಪ್ರತಿವಾದಿಯು ಅಲ್ಪವಯಸ್ಕನು ಅಥವಾ ಅಸ್ವಸ್ಥಮನಸ್ಸಿನವನು ಇದ್ದ ಬಗ್ಗೆ ಮಜಕೂರು ಸ್ಪಷ್ಟವಾಗಿ ಕಾಣಿಸುವದು ಅವಶ್ಯವದೆ. ಆದಷ್ಟುಮಟ್ಟಿಗೆ ಅದು ೧ನೇ ಪ್ಯಾರಾಗ್ರಾಫದಲ್ಲಿ ಕಾಣಿಸುವದು ಒಳ್ಳೇದು. ಸದರಿ ಮಜಕೂರು ಕೆಳಗಿನಂತೆ ಬರೆಯಬೇಕು.

**ಉ:**—೧. ವಾದಿಯು ಅಪ್ರಾಯಸ್ಥನು ಇರುತ್ತಾನೆ.

೨. ಪ್ರತಿವಾದಿಯು ಅಪ್ರಾಯಸ್ಥನು ಇರುತ್ತಾನೆ.

೩. ವಾದಿಯು ಅಸ್ವಸ್ಥಮನಸ್ಸಿನವನು ಅಥವಾ ದುರ್ಬಲಮನಸ್ಸಿನವನು ಅಥವಾ ಹುಚ್ಚನು ಇರುತ್ತಾನೆ.

೪. ಇದರಲ್ಲಿ ೧–೨ ಪ್ರತಿವಾದೇರು ಅಸ್ವಸ್ಥಮನಸ್ಸಿನವರು ಇರುತ್ತಾರೆ.

**(ಇ) ಫಿರ್ಯಾದಿಯ ಕಾರಣಗಳನ್ನುಂಟು ಮಾಡಿದಂಥ ಸಂಗತಿಗಳ ವಿವರ; ಮತ್ತು ಯಾವಾಗ ಆ ಕಾರಣ ಉಂಟಾಯಿತೆಂಬುದು** – ದಾವೆಯ ಕಾರಣ ಇಲ್ಲದೆ ಬುದ್ಧಿವುಳ್ಳಂಥ ಯಾವ ಮನುಷ್ಯನು ದಾವೆಯನ್ನು ಮಾಡಲಿಕ್ಕಿಲ್ಲ. ಅಂದರೆ ಏನಾದರೂ ದಾವೇ ಮಾಡುವ ಕಾರಣ ಇದ್ದ ಮನುಷ್ಯನೇ ದಾವೆಯನ್ನು ಮಾಡುವನು. ಆದರೆ ದಾವೆಯನ್ನು ಮಾಡುವ ಪೂರ್ವದಲ್ಲಿ ದಾವೆಯ ಕಾರಣ ಏನು ಅದೆ ? ಅದು ಯಾವ ಸಂಗತಿಗಳಿಂದ

ಉಂಟಾಯಿತು ? ಅದು ಯಾರ ವಿರುದ್ಧ ಉಂಟಾಯಿತು ? ಮತ್ತು ಅದು ಎಂದು ಉಂಟಾಯಿತು ? ಈ ಸಂಗತಿಗಳನ್ನು ಚನ್ನಾಗಿ ವಿಚಾರ ಮಾಡಬೇಕು. ಮತ್ತು ಅವುಗಳನ್ನು ಅಸಂದಿಗ್ಧವಾಗಿ ಅಸಲಜರ್ಜಿಯಲ್ಲಿ ಕಾಣಿಸಬೇಕು. ಬರೆ ದಾವೆಯ ಕಾರಣ ಇದ್ದರೆ ಸಾಕಾಗುವದಿಲ್ಲ. ಆದರೆ ಅದು ಅಸಲರ್ಜಿಯಲ್ಲಿ ಸ್ಪಷ್ಟವಾಗಿ ಕಾಣಿಸುವದು ಅವಶ್ಯವದೆ. ಅಸಲರ್ಜಿಯಲ್ಲಿ ದಾವೆಯ ಕಾರಣ ಕಾಣಿಸದಿದ್ದರೆ ಏನಾಗುವದು ? ಆರ್ಡರ ೭ ರುಲ. ೧೧ನೇ ಪ್ರಕಾರ ಸದರಿ ಅಸಲರ್ಜಿಯು ಕೋರ್ಟಿನಿಂದ ನಾಕಾರಿಸಲ್ಪಡುವದು. ಅಸಲರ್ಜಿಯಲ್ಲಿ ದಾವೆಯ ಕಾರಣ ಕಾಣಿಸಲಿಲ್ಲೆಂಬ ಕಾರಣದ ಮೇಲಿಂದ ದಾವೆಯ ಗುಣಗಳ ಸಂಬಂಧಿ ವಿಚಾರ ಮಾಡದೇ ಕೋರ್ಟಿನವರು ಸದರಿ ಅಸಲರ್ಜಿ ನಾಕಾರಿಸಿರುವರು. ಈ ಸಬಬಿನಿಂದ ಅಸಲರ್ಜಿಯು ನಾಕಾರಿಸಲ್ಪಡಲಾಗಿ ಆ ಕಾರಣದಿಂದ ವಾದಿಗೆ ಅದೇ ದಾವೆಯ ಕಾರಣಕ್ಕಾಗಿ ಹೊಸ ಅಸಲರ್ಜಿಯನ್ನು ಹಾಜರುಮಾಡಿ ಬೇರೆ ದಾವೆಯನ್ನು ಮಾಡಲಿಕ್ಕೆ ಅಡ್ಡಿ ಇಲ್ಲ. ಆದರೆ ಈ ಬೇರೆ ದಾವೆಯ ಬಗ್ಗೆ ಬೇರೆ ಕೋರ್ಟ ಫೀ ಸ್ಟಾಂಪ ಕೊಡಬೇಕಾಗುವದು.

ದಾವೆಯ ಕಾರಣ ಅಂದರೆ ಏನು ? ಕೋರ್ಟಿನಿಂದ ನ್ಯಾಯಾಶ್ರಯವನ್ನು ಪಡಕೊಳ್ಳುವ ಬಗ್ಗೆ ಯಾವ ಯಾವ ಸಂಗತಿಗಳ ಮೇಲೆ ವಾದಿಯು ಆಧಾರಿಸುವನೋ ಅವುಗಳನ್ನು ಒಟ್ಟುಗೂಡಿಸಿದರೆ ಅದು ದಾವೆಯ ಕಾರಣವಾಗುವದು. ಆದರೆ ಈ ಸಂಗತಿಗಳನ್ನು ಸಾಬೀತ ಮಾಡತಕ್ಕಂಥ ಸಂಗತಿಗಳು ದಾವೆಯ ಕಾರಣವಾಗುವದಿಲ್ಲ.

**ಉ:** – **ಅ** ಎಂಬುವವನು **ಬ** ಎಂಬುವವನಿಗೆ ೧೦೦ ರೂಪಾಯಿಗಳನ್ನು ಒಂದು ತಿಂಗಳದಲ್ಲಿ ವಾಪಸ ಕೊಡುವ ಕರಾರಿನಿಂದ ಕೊಟ್ಟನು. ಸದರಿ ಕರಾರು ಮತ್ತು ವ್ಯವಹಾರವು **ಕ** ಮತ್ತು **ಡ** ಎಂಬುವವರ ಸಮಕ್ಷಮ ಆಯಿತು. ಕರಾರ ಪ್ರಕಾರ ಬ ಈತನು ಸದರಿ ರೂಪಾಯಿ ಕೊಡಲಿಲ್ಲ. ಇದರಲ್ಲಿ ದಾವೆಯ ಕಾರಣ ತೋರಿಸುವ ಬಗ್ಗೆ ಕೆಳಗಿನಂತೆ ಪೃಥಕ್ಕರಣ ಮಾಡೋಣ.

೧. **ಅ** ಈತನು **ಬ** ಈತನಿಗೆ ೧೦೦ ರೂಪಾಯಿ ಕೊಟ್ಟನು.

೨. **ಬ** ಈತನು ಸದರಿ ರೂಪಾಯಿಗಳನ್ನು ಒಂದು ತಿಂಗಳದಲ್ಲಿ **ಅ** ಈತನಿಗೆ ವಾಪಸ ಕೊಡಲಿಕ್ಕೆ ಕರಾರು ಮಾಡಿದನು.

೩. ಕರಾರಿನ ಪ್ರಕಾರ ಸದರಿ ರೂಪಾಯಿಗಳನ್ನು ಬ ಈತನು ಅ ಈತನಿಗೆ ಕೊಟ್ಟಿಲ್ಲ.

೪. ಸದರಿ ಕರಾರು ಮತ್ತು ವ್ಯವಹಾರವು ಕ ಮತ್ತು ಡ ಇವರ ಸಮಕ್ಷಮಾ ಆಯಿತು.

ಇದರಲ್ಲಿ ೧–೨ ಮತ್ತು ೩ ಕಲಮಿನಲ್ಲಿ ಕಂಡ ಸಂಗತಿಗಳು ದಾವೆಯು ಕಾರಣವಾಗಿರುವವು. ೪ನೇ ಕಲಮಿನಲ್ಲಿ ಕಂಡ ಸಂಗತಿಯು ಮೇಲಿನ ಮೂರು ಸಂಗತಿಗಳನ್ನು ಸಾಬೀತು ಮಾಡತಕ್ಕಂಥಾದ್ದು ಇರುವದು. ಈ ಸಂಗತಿಯು ದಾವೆಯು ಕಾರಣವಾಗುವಂತೆ ಇಲ್ಲ. ದಾವೆಯು ಕಾರಣವು ಉದ್ಭವಿಸಲಿಕ್ಕೆ ಯಾರ ಸಮಕ್ಷಮಾ ಅ ಈತನು ಹಣಾ ಕೊಟ್ಟನು ವಗೈರೆ ಸಂಗತಿಯು ಮಹತ್ವದ್ದಲ್ಲ. ಆದರೆ ಸದರಿ ಕಾರಣ ಸಾಬೀತು ಮಾಡುವಾಗ್ಗೆ ಸದರಿ ಸಂಗತಿಯು ಮಹತ್ವದ್ದುವಿರುವದು. ಮೇಲ್ಕಂಡಂತೆ ಕ ಮತ್ತು ಡ ಇವರ ಸಮಕ್ಷಮಾ ಅ ಈತನು ಬ ಈತನಿಗೆ ಹಣಾ ಕೊಟ್ಟರೆ ಮತ್ತು ಕರಾರ ಪ್ರಕಾರ ಬ ಈತನು ಸದರಿ ಹಣಾ ವಾಪಸ ಕೊಡದೇ ಇದ್ದರೆ ದಾವೆಯು ಕಾರಣ ಉದ್ಭವಿಸುವದು.

ದಾವೆಯು ಕಾರಣವು ಪ್ರತಿವಾದಿಯು ಮಾಡತಕ್ಕ ಯಾ ಮಾಡುವ ಪ್ರತಿಪಕ್ಷದ ಮೇಲೆ ಅವಲಂಬಿಸಿರುವದಿಲ್ಲ. ಅದು ವಾದಿಯು ಬೇಡುವ ನ್ಯಾಯಾಶ್ರಯದ ಮೇಲೆ ಪೂರ್ಣವಾಗಿ ಅವಲಂಬಿಸಿರುವದು. ಯಾವ ಸಂಗತಿಗಳ ಆಧಾರದ ಮೇಲಿಂದ ವಾದಿಯು ಕೋರ್ಟಿನಿಂದ ನ್ಯಾಯಾಶ್ರಯವನ್ನು ಬೇಡುವನೋ ಅವುಗಳೆಲ್ಲ ದಾವೆಯು ಕಾರಣಗಳಾಗುವವು. ದಾವೆಯು ಕಾರಣವು ದಾವೆಯು ದಾಖಲು ಮಾಡುವ ಮುಂಚಿತವಾಗಿ ಉದ್ಭವಿಸಿರುವದು.

**ಪ್ರತಿಯೊಂದು ದಾವೆಯು ರಚನೆ ಹ್ಯಾಗೆ ಮಾಡಬೇಕು?** ಸಾಧಿಸುವ ಮಟ್ಟಿಗೆ ವಿವಾದದ ವಿಷಯಗಳನ್ನು ಕುರಿತು ಕಡೆಯ ನಿರ್ಣಯವನ್ನು ಮಾಡಲಿಕ್ಕೆ ಆಧಾರ ಕೊಡುವಂತೆಯೂ ಅದರಿಂದ ಆ ವಿಷಯಗಳ ಸಂಬಂಧವಾಗಿ ವ್ಯಾಜ್ಯವು ಪುನಃ ನಡಿಯಲಿಕ್ಕೆ ಆಸ್ಪದವಾಗದಂತೆಯೂ ಪ್ರತಿಯೊಂದು ದಾವೆಯನ್ನು ರಚಿಸಲ್ಪಡಬೇಕು. ಅಂದರೆ ಸದರಿ ವಿವಾದದ ವಿಷಯದ ಬಗ್ಗೆ ಬೇರೆ ದಾವೆಯನ್ನು ಮಾಡಲಿಕ್ಕೆ ಕಾರಣ ಬೀಳಬಾರದು. ದಾವೆಯು ಕಾರಣದ ವಿಷಯದಲ್ಲಿ ದಾವೆ ಮಾಡುವ ಕಾಲದಲ್ಲಿ ವಾದಿಗೆ ಬೇಡುವದಕ್ಕೆ ಹಕ್ಕು ಇರುವ ಬಾಧ್ಯ

ತೆಯು **ಸಮಗ್ರವಾಗಿ** ಪ್ರತಿಯೊಂದು ದಾವೆಯಲ್ಲಿ ಸೇರಿಸಲ್ಪಟ್ಟಿರಬೇಕು; ಆದರೆ ಸದರಿ ದಾವೆಯನ್ನು ಯಾವದಾದರು ಕೋರ್ಟಿನ ಹುಕುಮತ್ತಿನೊಳಗೆ ತರುವದಕ್ಕಾಗಿ ವಾದಿಯು ತನ್ನ ಬಾಧ್ಯತೆಯು ಯಾವದೊಂದು ಭಾಗವನ್ನು ಬಿಟ್ಟು ಕೊಡಬಹುದು. ಬೇಡತಕ್ಕ ವಿಷಯವನ್ನೆಲ್ಲ ದಾವೆಯಲ್ಲಿ ಕಾಣಿಸುವದು ಅವಶ್ಯವದೆ. **ಉ:–ಅ** ಎಂಬುವವನು **ಬ** ಎಂಬುವನಿಗೆ ೬೦೦೦ರೂ. ಗಳ ದಶಿಂದ ಒಂದು ದಸ್ತೈವಜು ಬರೆದುಕೊಟ್ಟನು, ಸದರಿ ದಸ್ತೈವಜಿನ ಮೇಲೆ **ಬ** ಈತನಿಗೆ ೨ನೇ ವರ್ಗ ಸಬ್‌ಜಜ್ಜ ಕೋರ್ಟಿನಲ್ಲಿ ಪೂರಾ ಹಣ ಅಂದರೆ ೬೦೦೦ ರೂಪಾಯಿಗಳು ವಸೂಲ ಮಾಡಲಿಕ್ಕೆ ದಾವೆಯನ್ನು ಮಾಡಲಿಕ್ಕೆ ಬರಲಾರದು. ಯಾಕಂದರೆ ೫೦೦೦ ರೂಪಾಯಿಗಳ ಕಿಮ್ಮತ್ತಿನಕಿಂತ ಹೆಚ್ಚಿನ ಕಿಮ್ಮತ್ತಿನ ದಾವೆಯು ಚವಕಶಿ ಮಾಡಲಿಕ್ಕೆ ೨ನೇ ವರ್ಗ ಸಬ್‌ಜಜ್ಜ ಕೋರ್ಟಿಗೆ ಅಧಿಕಾರವಿಲ್ಲ. ಕಾರಣ ಪೂರಾ ಹಣ ವಸೂಲ ಮಾಡಬೇಕಾಗಿದ್ದಲ್ಲಿ **ಬ** ಈತನು ೧ನೇ ವರ್ಗ ಸಬ್‌ಜಜ್ಜ ಕೋರ್ಟಿನಲ್ಲಿ ದಾವೆಯನ್ನು ಮಾಡತಕ್ಕದ್ದು. ಆದರೆ **ಅ** ಈತನ ಕಡಿಂದ ಪೂರಾ ಹಣ ವಸೂಲು ಆಗುವಂತೆ ಇಲ್ಲವೆಂದು ಕಂಡುಬಂದರೆ **ಬ** ಈತನು ಸದರಿ ಹಣದ ಪೈಕಿ ಕೆಲವು ಭಾಗ ಬಿಟ್ಟುಕೊಡುವನು. ೧೦೦೦ ರೂಪಾಯಿಗಳು ಅಥವಾ ಅದರಕಿಂತ ಹೆಚ್ಚಿನ ರಕಮು ಬಿಟ್ಟುಕೊಟ್ಟರೆ **ಬ** ಎಂಬುವವನಿಗೆ ೨ನೇ ವರ್ಗ ಸಬ್‌ಜಜ್ಜ ಕೋರ್ಟಿನಲ್ಲಿ ದಾವೆಯನ್ನು ಮಾಡಲಿಕ್ಕೆ ಬರುವದು.

ಹೀಗೆ ಬಾಧ್ಯತೆಯ ಭಾಗವನ್ನು ಬಿಟ್ಟುಕೊಟ್ಟರೆ ಅದರ ಬಗ್ಗೆ ಪುನಃ ಬೇರೆ ದಾವೆಯನ್ನು ಮಾಡಲಿಕ್ಕೆ ಬರುವದೇನು ? ಇಲ್ಲ. ಯಾವನೊಬ್ಬ ವಾದಿಯು ತನ್ನ ಬಾಧ್ಯತೆಯ ಯಾವದೊಂದು ಭಾಗವನ್ನು ದಾವೆಯಲ್ಲಿ ಕಾಣಿಸ ದಿದ್ದರೆ, ಯಾ ಬುದ್ಧಿಪೂರ್ವಕವಾಗಿ ಅದನ್ನು ಬಿಟ್ಟುಕೊಟ್ಟರೆ, ಹಾಗೆ ದಾವೆಯಲ್ಲಿ ಕಾಣಿಸದಂಥ ಯಾ ಬಿಟ್ಟುಕೊಟ್ಟಂಥ ಭಾಗದ ವಿಷಯದಲ್ಲಿ ಅವನು ಆ ಮೇಲೆ ದಾವೆಯನ್ನು ಮಾಡಲಾಗದು. ಅಂದರೆ ಮೇಲೆ ಹೇಳಿದ ಉದಾಹರಣದಲ್ಲಿ ಕಾಣಿಸಿದಂತೆ **ಬ** ಈತನು ೧೦೦೦ ರೂಪಾಯಿಗಳು ದಾವೆಯಲ್ಲಿ ಸೇರಿಸದಿದ್ದರೆ ಅಥವಾ ಬಿಟ್ಟುಕೊಟ್ಟರೆ ಆ ೧೦೦೦ ರೂಪಾಯಿಗಳ ಸಲುವಾಗಿ ಬೇರೆ ಮತ್ತೊಂದು ದಾವೆಯನ್ನು ಮಾಡಲಿಕ್ಕೆ ಬರಲಾರದು.

ಹಲವು ನ್ಯಾಯಾಶ್ರಯಗಳ ಪೈಕಿ ಕೆಲವು ನ್ಯಾಯಾಶ್ರಯದ ಬಗ್ಗೆ ದಾವೆಯನ್ನು ಮಾಡಿ, ಉಳಿದ ನ್ಯಾಯಾಶ್ರಯದ ಬಗ್ಗೆ ದಾವೆಯನ್ನು ಮಾಡದಿದ್ದಲ್ಲಿ

ಅವುಗಳ ಬಗ್ಗೆ ಬೇರೆ ದಾವೆಯನ್ನು ಮಾಡಲಾಗದು. ಒಂದೇ ದಾವೆಯ ಕಾರಣದ ಸಂಬಂಧದಲ್ಲಿ ಹಕ್ಕು ಪಡೆಯಲಿಕ್ಕೆ ಒಂದಕ್ಕಿಂತ ಹೆಚ್ಚು ಸಾಧನಗಳುಳ್ಳ ಮನುಷ್ಯನು ಆ ಯಾವತ್ತು ಸಾಧನಗಳಿಗಾಗಿ ಯಾ ಅಂಥ ಸಾಧನಗಳಲ್ಲಿ ಕೆಲವುಗಳಿಗಾಗಿ ದಾವೆಯನ್ನು ಮಾಡಬಹುದು. ಆದರೆ ಅವನು ಆ ಎಲ್ಲ ಸಾಧನಗಳ ಬಗ್ಗೆ ದಾವೆಯನ್ನು ಮಾಡದೆ ಬಿಟ್ಟರೆ, ಕೋರ್ಟಿನವರ ಅಪ್ಪಣೆಯಿಂದ ಬಿಟ್ಟಲ್ಲಿ-ಹೊರ್ತಾಗಿ ಆ ಬಿಟ್ಟಂಥ ಸಾಧನಗಳಿಗಾಗಿ ಅನಂತರದಲ್ಲಿ ಅವನು ದಾವೆಯನ್ನು ಮಾಡಲಾಗದು. ( ಆರ್ಡರ ೨. ರೂಲ ೨. )

**ವಿವರಣೆ**— ಪಾತ್ರತೆಯ ಮೇಲೆ ಮತ್ತು ಆ ಪಾತ್ರತೆಯನ್ನು ನೇರವೇರಿಸುವ ಬಗ್ಗೆ ಕೊಟ್ಟ ಅನುಷಂಗಿಕ ತಾರಣದ ಮೇಲೆ ಅವಲಂಬಿಸಿರುವ ಹಕ್ಕು ಮತ್ತು ಅದೇ ಪಾತ್ರತೆಯ ಮೂಲಕವಾಗಿ ಒಂದರಹಿಂದೊಂದಾಗಿ ಉಂಟಾಗುವ ಹಕ್ಕಗಳನ್ನು ಅನುಕ್ರಮವಾಗಿ ದಾವೆಯ ಒಂದೇ ಕಾರಣವಾಗುತ್ತದೆಂದು ತಿಳಿಯಬೇಕು.

**ಉ**— ೧. **ಅ** ಎಂಬುವವನು ಒಂದು ಮನೆಯನ್ನು ವರ್ಷಕ್ಕೆ ೧೨೦೦ ರೂಪಾಯಿಗಳಿಗೆ ಬಾಡಿಗೆಯಿಂದ ಬ ಎಂಬುವವನಿಗೆ ಕೊಡುತ್ತಾನೆ. ಸನ್ನ ೧೯೨೪–೧೯೨೬ ಮತ್ತು ೧೯೨೭ ಈ ಮೂರು ಪೂರ್ಣ ವರ್ಷಗಳ ಬಾಡಿಗೆಯು ಬರತಕ್ಕದ್ದಿದ್ದು, ಅದು **ಅ** ಎಂಬುವವನಿಗೆ ಮುಟ್ಟಿಲ್ಲ, ಆದರೆ **ಅ** ಎಂಬುವವನು ಸನ್ ೧೯೨೬ನೇ ವರ್ಷದ ಬಾಡಿಗೆಗಾಗಿ ಮಾತ್ರ **ಬ** ಎಂಬುವವನ ಮೇಲೆ ಸನ್ ೧೯೨೮ರಲ್ಲಿ ದಾವೆಯನ್ನು ಮಾಡುತ್ತಾನೆ. ಅವನು ಪುನಃ ಸನ್ ೧೯೨೫ನೇ ಅಥವಾ ೧೯೨೭ನೇ ವರ್ಷದ ಬಾಡಿಗೆಗಾಗಿ **ಬ** ಎಂಬುವವನ ಮೇಲೆ ದಾವೆಯನ್ನು ಮಾಡಲಾಗದು.

೨. **ಅ** ಎಂಬುವವನ ಕಡೆಯಿಂದ **ಬ** ಎಂಬವವನು ೫೦೦ ರೂಪಾಯಿ ಸಾಲವಾಗಿ ತಕ್ಕೊಂಡು ಪ್ರತಿವರ್ಷ ೧೦೦ ರೂಪಾಯಿ ಕಂತಿನಂತೆ ಸದರಿ ರೂಪಾಯಿ ತಿರಿಗಿ ಕೊಡಲಿಕ್ಕೆ ಒಪ್ಪಿಕೊಂಡು ಒಂದು ದಸ್ತೈವಜು ಬರೆದುಕೊಟ್ಟನು ಮೊದಲನೇ ಕಂತು ಸನ್ನ ೧೯೨೪ ಇಸ್ವಿಯಲ್ಲಿ ಬರತಕ್ಕದ್ದು, ಎರಡನೇ ಕಂತು ಸನ್ ೧೯೨೫ನೇ ಇಸ್ವಿಯಲ್ಲಿ ಬರತಕ್ಕದ್ದು, ಮುಂದೆ ಹಾಗೇ ದರವರ್ಷ ಕಂತುಗಳು ಬರತಕ್ಕವು. ಸನ್ ೧೯೨೪ ಮತ್ತು ೧೯೨೫ನೇ ವರ್ಷಗಳ ಕಂತುಗಳು

ಅ ಇವನಿಗೆ ಮುಟ್ಟಿಲ್ಲ. ಕಾರಣ ಅ ಇವನು ಸನ್ನ ೧೯೨೬ನೇ ಇಶ್ವಿಯಲ್ಲಿ ಸನ್ನ ೧೯೨೫ನೇ ವರ್ಷದ ಕಂತಿನ ಬಾಬತ್ತು ಮಾತ್ರ ದಾವೆಯನ್ನು ಮಾಡುತ್ತಾನೆ. ಮುಂದೆ ಅವನು ಸನ್ ೧೯೨೪ನೇ ವರ್ಷದ ಕಂತಿನ ಬಾಬತ್ತು **ಬ** ಇವನ ಮೇಲೆ ಪುನಃ ದಾವೆಯನ್ನು ಮಾಡಲಾಗದು.

೩. ಅ ಎಂಬುವವನ ಕಡೆಯಿಂದ **ಬ** ಎಂಬುವವನು ೫೦೦ ರೂಪಾಯಿ ಸಾಲವಾಗಿ ತಕ್ಕೊಂಡು ಪ್ರತಿ ವರ್ಷಕ್ಕೆ ೧೦೦ ರೂ. ಯ ಕಂತಿನಂತೆ ಮತ್ತು ಯಾವ ದಾದರೊಂದು ಕಂತು ತಪ್ಪಿದರೆ ಕೊಡತಕ್ಕ ಎಲ್ಲ ಹಣ ಒಮ್ಮೆಲೆ ಕೊಡಲಿಕ್ಕೆ ಒಪ್ಪಿಕೊಂಡು ಒಂದು ದಸ್ತೈವಜು ಸನ್ ೧೯೨೩ನೇ ಇಶ್ವಿಯಲ್ಲಿ ಬರೆದು ಕೊಟ್ಟನು. ಸನ್ ೧೯೨೪ನೇ ವರ್ಷ ಅ ಇವನಿಗೆ ಒಂದು ಕಂತು ಬರತಕ್ಕದ್ದು ಬರಲಿಲ್ಲ. ಈ ಪ್ರಸಕ್ತಿಯಲ್ಲಿ ಕರಾರಿನ ಪ್ರಕಾರ ಅ ಇವನಿಗೆ ಎಲ್ಲ ಹಣದ ಬಗ್ಗೆ ಅಂದರೆ ೫೦೦ ರೂಪಾಯಿ ಒಮ್ಮೆಲೆ ವಸೂಲ ಮಾಡುವ ಹಕ್ಕು ಪ್ರಾಪ್ತವಾಗು ವದು. ಹೀಗಿದ್ದು ಅ ಇವನು ಸನ್ ೧೯೨೪ನೇ ಸಾಲಿನಲ್ಲಿ ಸನ್ ೧೯೨೩ನೇ ಸಾಲದ ಒಂದೇ ಕಂತಿನ ಸಂಬಂಧದಿಂದ ಮಾತ್ರ ದಾವೆಯನ್ನು ಮಾಡುತ್ತಾನೆ. ಅ ಅವನು ಮುಂದೆ ಇತರ ಕಂತಿನ ಬಾಬತ್ತು ಯಾ ಉಳಿದ ಕಂತುಗಳ ಬಾಬತ್ತು **ಬ** ಇವನ ಮೇಲೆ ಪುನಃ ದಾವೆಯನ್ನು ಮಾಡಲಾಗದು.

**ಒಂದೇ ದಾವೆಯಲ್ಲಿ ಒಂದರಕ್ಕಿಂತ ಹೆಚ್ಚು ಕಾರಣಗಳನ್ನು ಒಟ್ಟುಗೂಡಿಸಲಿಕ್ಕೆ ಬರುವದೇನು?**— ಬರುವದು. ಆದರೆ ಈ ಪ್ರಸಕ್ತಿ ಯಲ್ಲಿ ಕೆಳಗಿನ ನಿಯಮಗಳನ್ನು ಲಕ್ಷ್ಯದಲ್ಲಿ ಇಡತಕ್ಕದ್ದು.

ಒಬ್ಬನೇ ವಾದಿಯು ಮತ್ತು ಒಬ್ಬನೇ ಪ್ರತಿವಾದಿಯು ಮತ್ತು ಎರಡು ಅಥವಾ ಎರಡರಕಿಂತ ಹೆಚ್ಚು ಕಾರಣಗಳು ಇದ್ದರೆ ಈ ಪ್ರಸಕ್ತಿಯಲ್ಲಿ ವಾದಿಯು ಅನೇಕ ಕಾರಣಗಳನ್ನು ಒಂದೇ ದಾವೆಯಲ್ಲಿ ಒಟ್ಟುಗೂಡಿಸಬಹುದು. ಅಥವಾ ಅವನು ತನ್ನ ಇಚ್ಛೆಯಂತೆ ಪ್ರತಿಯೊಂದು ಕಾರಣದ ದಶಿಯಿಂದ ಬೇರೆ ಬೇರೆ ದಾವೆಗಳನ್ನು ಸಹ ಮಾಡಬಹುದು.

**ಉ:**— ಅ ಎಂಬುವವನ ಕಡೆಯಿಂದ **ಬ** ಎಂಬುವವನು ಮಾರ್ಚ ತಿಂಗಳದಲ್ಲಿ ೧೦೦ ರೂಪಾಯಿ, ಎಪ್ರೇಲ ತಿಂಗಳದಲ್ಲಿ ೧೦೦ ರೂಪಾಯಿ ಮತ್ತು ಮೇ ತಿಂಗ ಳಲ್ಲಿ ೧೦೦ ರೂಪಾಯಿಯಂತೆ ಸಾಲವಾಗಿ ತೆಗೆದುಕೊಂಡು ಅವುಗಳ ಬಗ್ಗೆ ಅನು

ಕ್ರಮವಾಗಿ ಮಾರ್ಚ, ಎಪ್ರೇಲ ಮತ್ತು ಮೇ ತಿಂಗಳಗಳಲ್ಲಿ ಬೇರೆ ಬೇರೆ ದಸ್ತೈ ವಜುಗಳನ್ನು ಬರೆದು ಕೊಟ್ಟನು. ಇದರಲ್ಲಿ ಪ್ರತಿಯೊಂದು ದಸ್ತೈವಜಿಗೆ ಬೇರೆ ಬೇರೆ ಕಾರಣವುಂಟು. ಅ ಇವನು ತನ್ನ ಇಚ್ಛೆಯಂತೆ ಒಂದೇ ದಾವೆಯಲ್ಲಿ ಈ ಮೂರು ದಸ್ತೈವಜಿನ ಕಾರಣಗಳನ್ನು ಒಟ್ಟುಗೂಡಿಸಿ ಬ ಇವನ ಮೇಲೆ ದಾವೆಯನ್ನು ಮಾಡಬಹುದು. ಅಥವಾ ಪ್ರತಿಯೊಂದು ದಸ್ತೈವಜಿನ ಬಗ್ಗೆ ಯಾ ಕಾರಣದ ಬಗ್ಗೆ ಬೇರೆ ಬೇರೆ ದಾವೆಯನ್ನೂ ಸಹ ಮಾಡಬಹುದು. ಅಂದರೆ ಅ. ಇವನಿಗೆ ಬ. ಇವನ ಮೇಲೆ ಮೂರು ದಸ್ತೈವಜಿನ ಸಂಬಂಧದಿಂದ ಒಂದೇ ದಾವೆಯನ್ನು ಮಾಡಲಿಕ್ಕೂ ಬರುವದು. ಅಥವಾ ಪ್ರತಿಯೊಂದು ದಸ್ತೈವಜಿನ ಸಂಬಂಧದಿಂದ ಬೇರೆ ಬೇರೆ ದಾವೆಯನ್ನು ಸಹ ಮಾಡಲಿಕ್ಕೂ ಬರುವದು.

**ಇಬ್ಬರು ಅಥವಾ ಇಬ್ಬರಕಿಂತ ಹೆಚ್ಚು ಜನರು ವಾದೇರು ಮತ್ತು ಒಬ್ಬನೇ ಪ್ರತಿವಾದಿ ಇದ್ದರೆ ಅವರಿಗೆ ಒಂದೇ ದಾವೆಯಲ್ಲಿ ಕೆಳಗಿನ ಪ್ರಸಕ್ತಿಯಲ್ಲಿ ದಾವೆಯ ಅನೇಕ ಕಾರಣಗಳನ್ನು ಒಟ್ಟುಗೂಡಿಸಲಿಕ್ಕೆ ಬರುವದು**—ಸದರಿ ಇಬ್ಬರು ಅಥವಾ ಇಬ್ಬರಕಿಂತ ಹೆಚ್ಚು ಜನ ವಾದೇರಿಗೆ ಆ ದಾವೆಯ ಕಾರಣಗಳಲ್ಲಿ ಸಾಮೂಹಿಕ ಹಿತಸಂಬಂಧವಿರಬೇಕು. ಆದರೆ ಯಾವ ಪ್ರಸಕ್ತಿಯಲ್ಲಿ ಒಬ್ಬರಕಿಂತ ಹೆಚ್ಚು ಜನರಿಗೆ ಒಂದೇ ದಾವೆಯಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು ಎಂಬುವ ಬಗ್ಗೆ ಇದ್ದ ನೀಯಮಗಳಿಗೆ ಅನುಸರಿಸಿ ಒಂದೇ ದಾವೆಯಲ್ಲಿ ದಾವೆಯ ಅನೇಕ ಕಾರಣಗಳನ್ನು ಒಟ್ಟುಗೂಡಿಸಲಿಕ್ಕೆ ಬರುವದು. ಇಬ್ಬರಿಗೆ ಅಥವಾ ಇಬ್ಬರಕಿಂತ ಹೆಚ್ಚು ಜನರಿಗೆ ಒಂದೇ ಕೃತ್ಯದಿಂದ ಅಥವಾ ವ್ಯವಹಾರದಿಂದ ಯಾ ಅನೇಕ ಕೃತ್ಯಗಳಿಂದ ಅಥವಾ ವ್ಯವಹಾರಗಳಿಂದ ಒಟ್ಟಾಗಿ ಯಾ ಬೇರೆ ಬೇರೆಯಾಗಿ ಬಾಧ್ಯತೆಯು ಅಥವಾ ನ್ಯಾಯಾಶ್ರಯವವು ಉದ್ಭವಿಸುವದೋ ಮತ್ತು ಸದರಿ ಅವರು ಬೇರೆಬೇರೆದಾವೆಗಳನ್ನು ತಂದರೆ ಯಾವತ್ತರಿಗೂ ಸಾಮಾನ್ಯವಾದಂಥ ಯಾವದೊಂದು ಕಾಯದೆಯ ಯಾ ವಸ್ತುಸ್ಥಿತಿಯ ಪ್ರಶ್ನೆವು ಉದ್ಭವಿಸುವದೋ ಆಗ್ಗೆ ಸದರಿ ಎಲ್ಲರಿಗೆ ಒಂದೇ ದಾವೆಯಲ್ಲಿ ವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು.

**ಉ:**—ಅ ಮತ್ತು ಬ ಎಂಬ ಉಭಯತರ ಹೆಸರಿನಿಂದ ಕ ಎಂಬುವನು ಬೇರೆ ಬೇರೆ ಮೂರು ದಸ್ತೈವಜಗಳನ್ನು ಬರೆದು ಕೊಟ್ಟನು. ಅ ಮತ್ತು

**ಬ,** ಇವರು ಕೂಡಿ ಸದರಿ ಮೂರೂ ದಸ್ತೈವಜಿನ ಬಾಬತ್ತು ಒಂದೇ ದಾವೆಯನ್ನು ಮಾಡಬಹುದು. ಅಥವಾ ಪ್ರತಿಯೊಂದು ದಸ್ತೈವಜಿನ ಬಾಬತ್ತು ಬೇರೆ ಬೇರೆ ದಾವೆಯನ್ನು ಸಹ ಮಾಡಬಹುದು. ಅವರಿಗೆ ತಮ್ಮ ಇಚ್ಛೆಯಂತೆ ಒಂದೇ ದಾವೆಯಲ್ಲಿ ದಾವೆಯ ಮೂರು ಕಾರಣಗಳನ್ನು ಒಟ್ಟುಗೂಡಿಸಲಿಕ್ಕೆ ಬರುವದು. ಸದರಿ ಪ್ರಕಾರದ ದಾವೆಯ ಕಾರಣಗಳ ಸಂಬಂಧವಲ್ಲಿ **ಅ** ಮತ್ತು **ಬ** ಇವರಿಗೆ ಸಾಮೂಹಿಕ ಹಿತಸಂಬಂಧ ಉಂಟು.

**ಒಬ್ಬನೆ ವಾದಿಯು ಇಬ್ಬರು ಅಥವಾ ಇಬ್ಬರಕಿಂತ ಹೆಚ್ಚು ಜನರು ಪ್ರತಿವಾದೇರು ಇದ್ದರೆ ಅವರ ವಿರುದ್ಧ ಒಂದೇ ದಾವೆಯಲ್ಲಿ ಕೆಳಗಿನ ಪ್ರಸಕ್ತಿಯಲ್ಲಿ ದಾವೆಯ ಅನೇಕ ಕಾರಣಗಳನ್ನು ಒಟ್ಟುಗೂಡಿಸಲಿಕ್ಕೆ ಬರುವದು**—ದಾವೆಯ ಕಾರಣಗಳ ಸಂಬಂಧದಲ್ಲಿ ಎಲ್ಲ ಪ್ರತಿವಾದೇರ ಸಾಮೂಹಿಕ ಹಿತಸಂಬಂಧ ಇರಬೇಕು. ದಾವೆಯ ಕಾರಣಗಳ ಸಂಬಂಧಿ ಸಾಮೂಹಿಕ ಹಿತಸಂಬಂಧ ಇರುವದು ಅವಶ್ಯವದೆ. ಆದರೆ ಯಾವ ಪ್ರಸಕ್ತಿಯಲ್ಲಿ ಒಬ್ಬರಕಿಂತ ಹೆಚ್ಚು ಜನರಿಗೆ ಒಂದೇ ದಾವೆಯಲ್ಲಿ ಪ್ರತಿವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು ಎಂಬುವ ಬಗ್ಗೆ ಹಿಂದೆ ಹೇಳಿದ ನಿಯಮುಗಳುಂಟೋ ಅವುಗಳಿಗೆ ಅನುಸರಿಸಿ ಒಂದೇ ದಾವೆಯಲ್ಲಿ ದಾವೆಯ ಅನೇಕ ಕಾರಣಗಳನ್ನು ಒಟ್ಟುಗೂಡಿಸಲಿಕ್ಕೆ ಬರುವದು. ಒಬ್ಬನಕಿಂತ ಹೆಚ್ಚು ಜನರ ವಿರುದ್ಧವಾಗಿ ಒಟ್ಟಾಗಿ ಯಾ ಬೇರೆ ಬೇರೆಯಾಗಿ ಒಬ್ಬನ ಬದಲು ಒಬ್ಬನಿಗೆ ಒಂದೇ ಕೃತ್ಯದಿಂದ ಅಥವಾ ವ್ಯವಹಾರದಿಂದ ಯಾ ಅನೇಕ ಕೃತ್ಯಗಳಿಂದ ಅಥವಾ ವ್ಯವಹಾರಗಳಿಂದ ಬಾಧ್ಯತೆಯು ಉಂಟಾಗಿರುತ್ತದೆಯೋ ಮತ್ತು ಸದರಿ ಅವರ ಮೇಲೆ ಬೇರೆ ಬೇರೆಯಾಗಿ ದಾವೆಗಳನ್ನು ಮಾಡಿದ್ದರೆ ಕಾಯದೆಯ ಯಾ ವಸ್ತುಸ್ಥಿತಿಯ ಸಂಬಂಧವಾದ ಯಾವದಾದರು ಸಾಮೂಹಿಕ ಪ್ರಶ್ನೆಯು ಹೊರಡಬಹುದೋ ಆಗ್ಗೆ ಸದರಿ ಎಲ್ಲರಿಗೆ ಒಂದೇ ದಾವೆಯಲ್ಲಿ ಪ್ರತಿವಾದಿಗಳನ್ನಾಗಿ ಒಟ್ಟುಗೂಡಿಸಲಿಕ್ಕೆ ಬರುವದು.

**ಉ:—** **ಅ** ಎಂಬುವವನ ಹೆಸರಿನಿಂದ **ಬ** ಮತ್ತು **ಕ** ಎಂಬುವವರು ಕೂಡಿ ಬೇರೆ ಬೇರೆ ದಸ್ತೈವಜುಗಳನ್ನು ಬರೆದುಕೊಟ್ಟರು. ಈ ಎಲ್ಲ ದಸ್ತೈವಜು

ಗಳ ಬಾಬತು **ಅ** ಇವನು ತನ್ನ ಇಚ್ಛೆಯಂತೆ **ಬ** ಮತ್ತು **ಕ** ಇವರ ಮೇಲೆ ಒಂದೇ ದಾವೆಯನ್ನು ಮಾಡಬಹುದು. ಅಥವಾ ಬೇರೆ ಬೇರೆ ದಾವೆಯನ್ನು ಮಾಡಬಹುದು.

**ಅನೇಕ ಜನರು ವಾದೇರು ಅನೇಕ ಜನರು ಪ್ರತಿವಾದೇರು ಇದ್ದರೆ ಸದರಿ ವಾದೇರಿಗೆ ಮೇಲೆ ಹೇಳಿದ ನಿಯಮಗಳಿಗೆ ಅನುಸರಿಸಿ ಪ್ರತಿವಾದೇರ ವಿರುದ್ಧ ಒಂದೇ ದಾವೆಯಲ್ಲಿ ದಾವೆಯ ಅನೇಕ ಕಾರಣಗಳು ಒಟ್ಟುಗೂಡಿಸಲಿಕ್ಕೆ ಬರುವದು.**

**ಉ:—ಅ** ಮತ್ತು **ಬ** ಎಂಬ ಉಭಯತರ ಹೆಸರಿನಿಂದ **ಕ** ಮತ್ತು **ಡ** ಎಂಬುವವರು ಕೂಡಿ ಬೇರೆ ಬೇರೆ ದಸ್ತೈವಜುಗಳನ್ನು ಬರೆದು ಕೊಟ್ಟರು. **ಅ** ಮತ್ತು **ಬ** ಇವರು ಕೂಡಿ ತಮ್ಮ ಇಚ್ಛೆಯಂತೆ **ಕ** ಮತ್ತು **ಡ** ಇವರ ಮೇಲೆ ಈ ಎಲ್ಲ ದಸ್ತೈವಜುಗಳ ಬಾಬತು ಒಂದೇ ದಾವೆಯನ್ನು ಮಾಡಬಹುದು ಅಥವಾ ಪ್ರತಿಯೊಂದ ದಸ್ತೈವಜಿನ ಸಂಬಂಧದಿಂದ ಬೇರೆ ಬೇರೆ ದಾವೆಯನ್ನು ಮಾಡಬಹುದು.

**ಸಾಮಿಲು ಮಾಡಲಾಗದ್ದನ್ನು ಮಾಡಿದ ಬಗ್ಗೆ ಹರಕತ್ತು ಯಾವಾಗ ಮಾಡಬೇಕು ?** ದಾವೆಯ ಕಾರಣಗಳು ತಪ್ಪಾಗಿ ಸೇರಿಸಲ್ಪಟ್ಟ ಬಗ್ಗೆ ಮಾಡತಕ್ಕ ಎಲ್ಲ ಹರಕತ್ತುಗಳನ್ನು ಆವಷ್ಟು ತ್ವರೆಯಾದ ವೇಳೆಯಲ್ಲಿ ಮಾಡಬೇಕು. ಮತ್ತು ಹರಕತ್ತಿನ ಕಾರಣವು ಆ ತರುವಾಯ ಉಂಟಾದ ಪ್ರಸಂಗವನ್ನು ಹೊರತು ಪಡಿಸಿ ಮುದ್ದೆಗಳು ಠರಾಯಿಸಲ್ಪಟ್ಟ ಎಲ್ಲ ಸಂಗತಿಗಳಲ್ಲಿ ಮುದ್ದೆಗಳನ್ನು ಠರಾಯಿಸುವ ವೇಳೆಗೆ ಅಥವಾ ಅದಕ್ಕಿಂತ ಮುಂಚೆ ಮಾಡಬೇಕು. ಮತ್ತು ಇಂಥ ಯಾವದಾವರು ಹರಕತ್ತನ್ನು ಈ ರೀತಿಯಾಗಿ ಮಾಡದಿದ್ದರೆ ಅದನ್ನು ಬಿಟ್ಟುಬಿಡಲಾಯಿತೆಂದು ತಿಳಿಯಬೇಕು. (ಆರ್ಡರ ೨, ರೂಲ ೭).

**ದಾವೆಯ ಕಾರಣಗಳು ಒಂದೇ ದಾವೆಯಲ್ಲಿ ಒಟ್ಟುಗೂಡಿಸುವ ಬಗ್ಗೆ ಮೇಲೆ ಹೇಳಿದ ನಿಯಮಗಳಿಗೆ ಕೆಳಗಿನಂತೆ ಅಪವಾದಗಳು ಉಂಟು.**

೧. ಸ್ಥಾವರಾಸ್ತಿಯನ್ನು ಪಡಕೊಳ್ಳುವ ಬಗ್ಗೆ ಕೆಲವು ಹಕ್ಕುಗಳನ್ನು ಮಾತ್ರ ಸಾಮಿಲು ಮಾಡಲಿಕ್ಕೆ ಬರುವವು. ಅವು ಯಾವವು ! ಕೋರ್ಟಿನ

ಅಪ್ಪಣೆಯಿಲ್ಲದೆ ಸ್ಥಾವರ ಆಸ್ತಿಯನ್ನು ಪಡಕೊಳ್ಳುವ ವಿಷಯದ ದಾವೆಯಲ್ಲಿ ಕೆಳಗೆ ವಿವರಿಸಿವ ಹಕ್ಕುಗಳ ಹೊರ್ತಾಗಿ ಯಾವದೇ ದಾವೆಯ ಕಾರಣವನ್ನು ಸೇರಿಸಬಾರದು; ಆ ಹಕ್ಕುಗಳು ಯಾವವೆಂದರೆ—

(ಅ) ಬೇಡಿದ ಆಸ್ತಿಯ ಅಥವಾ ಅದರ ಯಾವದಾದರೂ ಭಾಗದ ಸಂಬಂಧದ ಒಳಗಡೆಯ ಅಥವಾ ದರಮ್ಯಾನ ಉತ್ಪನ್ನಕ್ಕೆ ಅಥವಾ ಬಾಡಿಗೆಯ ಬಾಕಿಗೆ ಸಂಬಂಧಿಸಿದಂಥ ಹಕ್ಕುಗಳು,

(ಬ) ಆ ಆಸ್ತಿಯನ್ನು ಅಥವಾ ಅದರ ಯಾವದಾದರೂ ಭಾಗವನ್ನು ಯಾವ ಕರಾರಿನನ್ವಯ ಧಾರಣ ಮಾಡಿರುವದೋ ಆ ಕರಾರನ್ನು ಮುರಿದಬಗ್ಗೆ ಲುಕ್ಸಾನಿನ ಮೋಬದಲೆಯ ಹಕ್ಕುಗಳು; ಮತ್ತು

(ಕ) ಯಾವ ಹಕ್ಕುಗಳಲ್ಲಿ ಬೇಡಿದ ನ್ಯಾಯಾಶ್ರಯವು ಒಂದೇ ದಾವೆಯ ಕಾರಣದ ಮೇಲೆ ಆಧರಿಸಲ್ಪಟ್ಟಿರುವದೋ: ಅಂಥ ಹಕ್ಕುಗಳು ಆದರೆ ಗೊತ್ತುಪಡಿಸುವದೇನೆಂದರೆ ವತ್ತೆಬಿಡಿಸಿಕೊಳ್ಳುವ ಹಕ್ಕು ಮುಣುಗಿಸಿಬಿಡುವ ವಿಷಯದ ಯಾ ಒತ್ತೆ ಬಿಡಿಸಿಕೊಳ್ಳುವ ವಿಷಯದ ದಾವೆಯಲ್ಲಿ ಒತ್ತೆಯಾಗಿದ್ದ ಮಿಳಕತ್ತಿನ ಕಬಜೆ ಕೊಡುವ ಬಗ್ಗೆ ಹುಕುಮ ಬೇಡಿಕೊಳ್ಳುವದಕ್ಕೆ ಇದರೊಳಗಿನ ಯಾವದಾದರು ಠರಾವಿನ ಮೇಲಿಂದ ಯಾವನಾದರು ಪಕ್ಷಕಾರನಿಗೆ ಪ್ರತಿಬಂಧವಾಗುತ್ತದೆಂದು ತಿಳಿಯಬಾರದು. ( ಆರ್ಡರು ೨, ರೂಲು ೪ ).

(೨) ಮೃತ್ಯುಪತ್ರ ನಡೆಯಿಸುವವನು ವಹಿವಾಟದಾರನು ಅಥವಾ ವಾರಸದಾರನು ಇವರು ಬೇಡುವ ಅಥವಾ ಇವರ ವಿರುದ್ಧವಾಗಿ ಬೇಡಲ್ಪಡುವ ಹಕ್ಕುಗಳ ಸಂಬಂಧಿ ದಾವೆಯನ್ನು ಮಾಡಬೇಕಾಗಿದ್ದಲ್ಲಿ ಕೆಳಗಿನ ನಿಯಮಿಗೆ ಅನುಸರಿಸಿ ಮಾಡಬೇಕು. ಮೃತ್ಯುಪತ್ರ ನಡೆಯಿಸುವವನೆಂದಾಗಲಿ, ಸತ್ತವನ ಆಸ್ತಿಯ ವಹಿವಾಟದಾರನೆಂದಾಗಲಿ, ವಾರಸದಾರನೆಂದಾಗಲಿ ಯಾವನೊಬ್ಬ ಮನುಷ್ಯನಿಗಿರುವ ಬಾಧ್ಯತೆಯನ್ನು ಅಥವಾ ಯಾವನೊಬ್ಬನಿಂದ ಬಾಧ್ಯತೆಯನ್ನು ಸಲ್ಲತಕ್ಕ ಬಾಧ್ಯತೆಯನ್ನು ಸ್ವತಃ ಆ ಮನುಷ್ಯನಿಗಿರುವ ಬಾಧ್ಯತೆಗೆ ಯಾ ಸ್ವತಃ ಆ ಮನುಷ್ಯನಿಗೆ ಸಲ್ಲತಕ್ಕ ಬಾಧ್ಯತೆಗೆ ಜೋಡಿಸಲಾಗದು; ಆದರೆ—

(೧) ಯಾ ಸ್ವತ್ತಿನ ಸಂಬಂಧದಿಂದ ಮೃತ್ಯುಪತ್ರ ನಡೆಯಿಸುವವನೆಂದಾಗಲೀ ವಹಿವಾಟದಾರನೆಂದಾಗಲೀ ವಾರಸದಾರನೆಂದಾಗಲೀ ವಾದಿಯು ದಾವೆಯನ್ನು ಮಾಡಿರುತ್ತಾನೋ; ಅಥವಾ,

ಪ್ರತಿವಾದಿಯ ಮೇಲೆ ದಾವೆಯಾಗಿರುತ್ತದೆಯೋ ಅದೇ ಸ್ವತ್ತಿನ ಸಂಬಂಧದಿಂದ ಮೇಲೆ ಹೇಳಿದ ಬಾಧ್ಯತೆಗಳು ಹುಟ್ಟಿರುತ್ತವೆಂದು ವಾದವಿದ್ದಲ್ಲಿ; ಅಥವಾ,

(೨) ಯಾವ ಮೃತಪಟ್ಟ ಮನುಷ್ಯನ ಬದಲಾಧಿಕಾರಿಯಾಗಿದ್ದನೋ ಅವನ ಸಂಗಡ ಕೂಡಿಕೊಂಡು ಅವನಿಗೆ ಯಾವ ದಾವೆಗಳ ವಿಷಯದಲ್ಲಿ ಹಕ್ಕು ಅಥವಾ ಪಾತ್ರತೆಯಿರುವದೋ ಅಂಥವಾಗಿದ್ದಲ್ಲಿ ಈ ನಿಯಮವು ಸಂಬಂಧಿಸುವದಿಲ್ಲ. ( ಆರ್ಡರು ೨, ರೂಲು ೫ ).

**ದಾವೆಯ ಕಾರಣವೂ ಯಾವ ದಿವಸ ಉಂಟಾಯಿತೆಂಬದನ್ನು ಸ್ಪಷ್ಟವಾಗಿ ಬರೆಯಬೇಕು**–ದಾವೆಯ ಕಾರಣವನ್ನು ಯಾವ ದಿವಸ ಸಂಪೂರ್ಣವಾಗಿರುತ್ತದೆಯೋ, ಅಥವಾ ಯಾವ ದಿವಸ ದಾವೆಯು ಮಾಡಲಿಕ್ಕೆ ಹಕ್ಕು ಪ್ರಾಪ್ತವಾಗಿರುತ್ತದೆಯೋ ಆ ದಿವಸದ ತಾರೀಖು ಬರೆಯಬೇಕು, ಕಾರಣಾ ಕಾಯದೆಯಿಂದ ಅದೇ ದಿವಸ ದಾವೆಯ ಕಾರಣವುಂಟಾಗಿರುವದು. **ಉ:— ಅ** ಎಂಬುವವನು **ಬ** ಎಂಬುವವನಿಗೆ ತಾರೀಖು ೨೧–೩–೧೯೨೭ನೇ ಇಸ್ವಿ ದಿವಸ ಒಂದು ನೂರು ರೂಪಾಯಿ ಸಾಲವಾಗಿ ಕೊಟ್ಟನು. ಸದರಿ ಸಾಲದ ಖಾತ್ರಿಬಗ್ಗೆ **ಬ** ಇವನು ಅದೆ ತಾರೀಖಿನ ದಿವಸ ಒಂದು ದಸ್ತೈವಜು ಬರೆದುಕೊಟ್ಟು ಆ ತಾರೀಖಿನಿಂದ ೬ ತಿಂಗಳಲ್ಲಿ ಸದರಿ ರೂಪಾಯಿ ಕೊಡಲಿಕ್ಕೆ ಒಪ್ಪಿಕೊಂಡನು. ಈ ಪ್ರಸಕ್ತಿಯಲ್ಲಿ ಕರಾರಿನ ಪ್ರಕಾರ ೬ ತಿಂಗಳಲ್ಲಿ ಅಂದರೆ ತಾ|| ೨೧–೯–೧೯೨೭ನೇ ಇಸ್ವಿಯ ಪೂರ್ವದಲ್ಲಿ **ಬ** ಇವನು **ಅ** ಇವನಿಗೆ ಮೇಲ್ಕಂಡ ರೂಪಾಯಿ ಕೊಡದಿದ್ದರೆ ದಾವೆಯ ಕಾರಣವು ಸಂಪೂರ್ಣವಾಗಿ ಉಂಟಾಗುವದು ಅಥವಾ **ಬ** ಇವನ ಮೇಲೆ ದಾವೆಯನ್ನು ಮಾಡಲಿಕ್ಕೆ **ಅ** ಇವನಿಗೆ ಹಕ್ಕು ಪ್ರಾಪ್ತವಾಗುವದು. ಕಾರಣ "ತಾರೀಖು ೨೧–೯–೧೯೨೭ನೇ ಇಸ್ವಿ ದಿವಸ ದಾವೆಯ ಕಾರಣವುಂಟಾಗಿರುತ್ತದೆ" ಅಂತಾ ಬರೆಯಬೇಕು.

**(ಪ) ಕೋರ್ಟಿಗೆ ಹುಕುಮತ್ತು ಇರುವದಾಗಿ ತೋರಿಸುವ ಸಂಗತಿಗಳು**— ಯಾವ ಸಂಗತಿಗಳ ಮೂಲಕವಾಗಿ ಕೋರ್ಟಿಗೆ ದಾವೆಯ ಚವಕಶಿ ಮಾಡುವ ಅಧಿಕಾರ ಪ್ರಾಪ್ತವಾಗುವದು ಈ ಬಗ್ಗೆ ಹಿಂದಕ್ಕೆ ವಿಶದವಾಗಿ ವಿವರಣ ಮಾಡಿರುತ್ತದೆ. ಸಂಕ್ಷಿಪ್ತದಲ್ಲಿ ಸದರಿ ಸಂಗತಿಗಳನ್ನು ಕೆಳಗಿನಂತೆ ಹೇಳಲಿಕ್ಕೆ ಬರುವವು. ಅವುಗಳನ್ನು:—

ಸ್ಥಾವರಾಸ್ತಿ ಸಂಬಂಧವಾಗಿ ಅಥವಾ ಪ್ರತ್ಯಕ್ಷ ಹಿಡಿದ ಯಾ ಜಪ್ತುಮಾಡಿದ ಜಂಗಮ ಆಸ್ತಿಯನ್ನು ವಾಪಸಬೇಡುವ ಸಲುವಾಗಿ ದಾವೆಯು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಆ ಆಸ್ತಿ ಇರುವದೋ ಆ ಕೋರ್ಟಿನಲ್ಲಿಯೇ ಮಾಡಬೇಕು. ಸ್ಥಾವರ ಆಸ್ತಿಯ ಯಾವದಾದರೂ ಭಾಗವು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಇರುವದೋ ಆ ಕೋರ್ಟಿನಲ್ಲಿ ದಾವೆಯನ್ನು ಮಾಡಬಹುದು. ಅಂದರೆ ಇಂಥ ಕೋರ್ಟುಗಳ ಪೈಕಿ ಯಾವದಾದರೂ ಒಂದು ಕೋರ್ಟಿನಲ್ಲಿ ದಾವೆಯನ್ನು ಮಾಡಬಹುದು. ಸ್ಥಾವರ ಆಸ್ತಿಯ ಸಂಬಂಧದಿಂದ ನ್ಯಾಯಾಶ್ರಯವನ್ನು ಯಾ ಮಾಲಿಗೆ ಮಾಡಲ್ಪಟ್ಟ ಅಪಾಯಕ್ಕಾಗಿ ಪ್ರತಿಫಲವನ್ನು ಬೇಡುವದರ ಸಲುವಾಗಿ ದಾವೆಯನ್ನು ಮಾಡಬೇಕಾಗಿದ್ದಲ್ಲಿ ವಾದಿಯು ಬೇಡುವಂಥ ವಿಷಯವನ್ನು ಪ್ರತಿವಾದಿ ಕಡೆಯಿಂದ ಸಂಪೂರ್ಣವಾಗಿ ಕೋರ್ಟಿನಿಂದಲೇ ಪಡೆಯಬಹುದಾಗಿದ್ದರೆ ಆ ದಾವೆಯನ್ನು ಪ್ರತಿವಾದಿಯು ವಾಸಮಾಡುವ ಸ್ಥಳವು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಇರುವದೋ ಆ ಕೋರ್ಟಿನಲ್ಲಿ ಯಾ ಸದರಿ ಸ್ಥಾವರ ಆಸ್ತಿಯು ಯಾವ ಕೋರ್ಟಿನ ಹದ್ದಿಯಲ್ಲಿ ಇರುವದೋ ಆ ಕೋರ್ಟಿನಲ್ಲಿ ಮಾಡಬಹುದು. ಇವುಗಳ ಹೊರತಾಗಿ ಬೇರೆ ತರಹದ ದಾವೆಯನ್ನು ಮಾಡಬೇಕಾಗಿದ್ದಲ್ಲಿ ದಾವೆಯ ಕಾರಣವು ಪೂರ್ತೆಯಾಗಿ ಯಾ ಅಂಶತಃ ಹುಟ್ಟಿದಂಥ ಸ್ಥಳವು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಇರುವದೋ ಆ ಕೋರ್ಟಿನಲ್ಲಿ ಅಥವಾ ಎಲ್ಲ ಪ್ರತಿವಾದೇರು ವಾಸ ಮಾಡುವ ಸ್ಥಳವು ಯಾವ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ಇರುವದೋ ಆ ಕೋರ್ಟಿನಲ್ಲಿ ಮಾಡಬಹುದು. ಆದರೆ ಈ ಪ್ರಸಕ್ತಿಯಲ್ಲಿ ವಿಧಿಸಲ್ಪಡುವದೇನಂದರೆ ಆ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ವಾಸಮಾಡದಂಥ ಪ್ರತಿವಾದೇರು ಈ ಪ್ರಕಾರ ದಾವೆಯನ್ನು ಮಾಡುವದಕ್ಕೆ ಸಮ್ಮತಿಕೊಡಬೇಕು. ಅಥವಾ ಈ ಪ್ರಕಾರ ದಾವೆಯನ್ನು ಮಾಡುವದಕ್ಕೆ ವಾದಿಯು ಆ ಕೋರ್ಟಿನ ಅಪ್ಪಣೆಯನ್ನು ಪಡೆಯಬೇಕು.

" ಈ ದಾವೆಯ ಚವಕಶಿಮಾಡುವ ಅಧಿಕಾರ (ಅಥವಾ ಹುಕುಮತ್ತು) ಈ ಕೋರ್ಟಿಗೆ ಅದೆ. " ಅಂತಾ ಬರೆಯುವ ಪದ್ಧತಿಯು ಬಹುತರವಾಗಿ ಕಂಡು ಬರುತ್ತದೆ. ನಿಜವಾಗಿ ವಿಚಾರಮಾಡಿದರೆ ಕೋರ್ಟಿಗೆ ಹುಕುಮತ್ತು ಅದೆ ಅಂತಾ ಬರೆಯುವದು ಕಾರಣವಿಲ್ಲ. ಫ. ಪ್ಯಾರಾದಲ್ಲಿ ಕಂಡಂತೆ ಕೋರ್ಟಿಗೆ

**ಹುಕುಮತ್ತು ಇರುವದಾಗಿ ತೋರಿಸುವ ಸಂಗತಿಗಳು** ಬರೆಯಬೇಕು. ಒಟ್ಟಿಗೆ ಈ ಸಂಗತಿಯನ್ನು ಕಾಣಿಸುವದು ವಿಶೇಷ ಮಹತ್ವದ್ದು. ಇಷ್ಟೆ ಅಲ್ಲಾ ಅವಶ್ಯವಾದದ್ದು ಇರುತ್ತದೆ. ಕಾರಣಾ ಅಸಲರ್ಜಿಯಲ್ಲಿ ಮೇಲ್ಕಂಡ ಪೈಕಿ ಯಾವದಾದರು ಸಂಗತಿಯನ್ನು ಕೆಳಗೆ ಬರೆದಂತೆ ಬರೆಯಬೇಕು.

**ಉ:**— ೧. "ಪ್ರತಿವಾದಿಯು ಈ ಕೋರ್ಟಿನ ಹದ್ದಿಯಲ್ಲಿ ವಾಸಮಾಡುತ್ತಾನೆ."

೨. "ಇದರಲ್ಲಿ ೨–೩ ಮತ್ತು ೪ನೇ ಪ್ರತಿವಾದೇರು ಈ ಕೋರ್ಟಿನ ಹದ್ದಿಯಲ್ಲಿ ವಾಸಮಾಡುತ್ತಾರೆ. ಮತ್ತು ೧ನೇ ಪ್ರತಿವಾದಿಯು ಸದರಿ ಹದ್ದಿಯಲ್ಲಿ ವಾಸಮಾಡದಿದ್ದರೂ; ಅವನ ಮೇಲೆ ಈ ಕೋರ್ಟಿನಲ್ಲಿ ದಾವೆಯನ್ನು ಮಾಡುವದರ ದಸಿಂದ ಅಪ್ಪಣೆಯನ್ನು ಪಡಕೊಳ್ಳುವದಕ್ಕಾಗಿ ಅರ್ಜಿಯನ್ನು ಮಾಡಿರುತ್ತದೆ."

೩. "ದಾವೆಯ ಆಸ್ತಿಯು ಈ ಕೋರ್ಟಿನ ಹದ್ದಿಯಲ್ಲಿ ಇರುತ್ತದೆ."

೪. "ದಾವೆಯ ದಸ್ತೈವಜೂ ಈ ಕೋರ್ಟಿನ ಹದ್ದಿಯಲ್ಲಿ ಬರೆಯಲ್ಪಟ್ಟಿತು."

೫. "ದಾವೆಯ ದಸ್ತೈವಜಿನ ಬಾಬತ್ತು ರೂಪಾಯಿ ಧಾರವಾಡದಲ್ಲಿ ಈ ಕೋರ್ಟಿನ ಹದ್ದಿಯಲ್ಲಿ ಕೊಡಬೇಕೆಂದು ಗೊತ್ತಾಗಿತ್ತು." ಈ ಪ್ರಕಾರ ಬರೆಯಬೇಕು.

**(ಗ) ವಾದಿಯು ಬೇಡುವ ನ್ಯಾಯಾಶ್ರಯವು**—ಅಸಲರ್ಜಿಯಲ್ಲಿ ನ್ಯಾಯಾಶ್ರಯವನ್ನು ಸ್ಪಷ್ಟವಾಗಿ ನಿರ್ದಿಷ್ಟಗೊಳಿಸತಕ್ಕದ್ದು. ದಾವೆಯ ಕಾರಣದ ವಿಷಯದಲ್ಲಿ ದಾವೆ ಮಾಡುವ ಕಾಲದಲ್ಲಿ ವಾದಿಗೆ ಬೇಡುವದಕ್ಕೆ ಹಕ್ಕು ಇರುವ ಬಾಧ್ಯತೆಯನ್ನು ಸಮಗ್ರವಾಗಿ ಪ್ರತಿಯೊಂದು ದಾವೆಯಲ್ಲಿ ಸೇರಿಸಲ್ಪಟ್ಟಿರಬೇಕು. (ಆ. ೨, ರೂಲ ೨). ಅಂದರೆ ಒಂದೇ ದಾವೆಯ ಕಾರಣದ ಮೂಲಕ ಅನೇಕ ಬಾಧ್ಯತೆಗಳು ಉಂಟಾಗಿದ್ದರೆ ಅವುಗಳನ್ನೆಲ್ಲ ಒಂದೇ ದಾವೆಯಲ್ಲಿ ಬೇಡುವದು ಅವಶ್ಯವದೆ. ಪ್ರತಿಯೊಂದು ಅಸಲರ್ಜಿಯಲ್ಲಿ ವಾದಿಯು ಬೇಡತಕ್ಕ ನ್ಯಾಯಾಶ್ರಯವನ್ನು ಅಥವಾ ಅದಲ್ಲದಿದ್ದರೆ ಅದರ ಬದಲಾಗಿ ಬೇಡುವ ಬೇರೆ ನ್ಯಾಯಾಶ್ರಯವನ್ನು ಸ್ಪಷ್ಟವಾಗಿ ಹೇಳಿರತಕ್ಕದ್ದು. ಅನವ್ಯವಿದ್ದ ನ್ಯಾಯಾಶ್ರಯವನ್ನು ಅಸಲರ್ಜಿಯಲ್ಲಿ ಬರೆದರೆ ಸಾಕು. ಬೇಡತಕ್ಕ ಮಹತ್ವದ ನ್ಯಾಯಾಶ್ರಯದ ಹೊರ್ತಾಗಿ

**ಕೋರ್ಟಿನವರು ತಾವಾಗಿ ಕೊಡತಕ್ಕ ನ್ಯಾಯಾಶ್ರಯವನ್ನು ಬೇಡುವ ಕಾರಣವಿಲ್ಲ.** ಎಷ್ಟೋ ಅಸಲಜರ್ಜಿಗಳಲ್ಲಿ ಕೆಳಗಿನಂತೆ ಮಜಕೂರು ಕಂಡಬರುತ್ತದೆ.

**ಉ:**— ೧. ಕೋರ್ಟಿಗೆ ಅವಶ್ಯಕಂಡ ಇತರ ನ್ಯಾಯಾಶ್ರಯವನ್ನು ಕೊಡಬೇಕು.

೨. ಈ ಪ್ರಕರಣದ ಸ್ವರೂಪಕ್ಕೆ ಅವಶ್ಯವಾದ ಇನ್ನೂ ಯಾ ಬೇರೆ ನ್ಯಾಯಾಶ್ರಯವನ್ನು ಕೊಡಬೇಕು.

೩. ಪ್ರಸಂಗಬಿದ್ದಲ್ಲಿ ಅಸಲಜರ್ಜಿಯನ್ನು ದುರಸ್ತುಮಾಡಲಿಕ್ಕೆ ವಾದಿಗೆ ಪರವಾನಗಿ ಇರಬೇಕು.

ಯಾವ ಸಾಮಾನ್ಯ ಅಥವಾ ಇತರ ನ್ಯಾಯಾಶ್ರಯವನ್ನು ಕೋರ್ಟಿನವರು ತಮಗೆ ಕಂಡಮಟ್ಟಿಗೆ ಬೇಡಿದರೆ ಹ್ಯಾಗೋ ಹಾಗೇ ಬೇಡದೆ, ತಾವಾಗಿಯೇ ಕೊಡುವರೋ ಆ ಸಾಮಾನ್ಯ ಅಥವಾ ಇತರ ನ್ಯಾಯಾಶ್ರಯವನ್ನು ಬೇಡುವ ಅಗತ್ಯವಿಲ್ಲ (ಆರ್ಡರ ೭, ರೂಲ ೭). ಮೇಲೆ ಬರೆದ ಮೂರು ನಾಯಾಶ್ರಯಗಳನ್ನು ಯೋಗ್ಯ ಪ್ರಸಂಗದಲ್ಲಿ ಕೋರ್ಟಿನವರು ತಾವಾಗಿ ಬೇಡದೆ ಕೊಡುವರು. ಕಾರಣ ಅವುಗಳನ್ನು ಅಸಲಜರ್ಜಿಯಲ್ಲಿ ಬೇಡುವ ಕಾರಣವಿಲ್ಲ. ಕಾರಣ ಅವುಗಳನ್ನು ಅಸಲಜರ್ಜಿಯಲ್ಲಿ ಯಾ ಲೇಖಿ ಕೈಫಿಯತ್ತಿನಲ್ಲಿ ಬರೆಯುಬಾರದು.

(ಹ) **ವಾದಿಯು ಪಡಕೊಳ್ಳತಕ್ಕ ಹಣದ ವಜಾಬಾಕಿಯನ್ನು ಮಾಡಿದ್ದರೆ ಯಾ ತನ್ನ ಬಾಧ್ಯತೆಯ ಕೆಲವು ಭಾಗವನ್ನು ಬಿಟ್ಟಿದ್ದರೆ ಹಾಗೆ ವಜಾಮಾಡಿದ ರಕಮು ಯಾ ಬಿಟ್ಟ ರಕಮು ಸ್ಪಷ್ಟವಾಗಿ** ಅಸಲಜರ್ಜಿಯಲ್ಲಿ ಕಾಣಿಸಬೇಕು. ಈ ಬಗ್ಗೆ ವಿಶೇಷ ವಿವೇಚನ ಮಾಡುವದು ಅಗತ್ಯವಿಲ್ಲ.

(ಆಯ್) **ಹುಕುಮತ್ತಿನ ಮತ್ತು ಕೋರ್ಟ ಫೀ ಕಾರಣಗಳ ಬಗ್ಗೆ ದಾವೆಯ ವಿಷಯದ ಕಿಮ್ಮತ್ತಿನ ತಕ್ತೆ; ಆ ಸಂಗತಿಯಲ್ಲಿ ಸಾಧ್ಯವಿರುವ ಮಟ್ಟಿಗೆ**– ವಾದಿಯು ತನ್ನ ಅಸಲಜರ್ಜಿಯಲ್ಲಿ ದಾವೆಯ ಆಕಾರ ಹುಕುಮತ್ತಿನ ಬಗ್ಗೆ ಮತ್ತು ಕೋರ್ಟ ಫೀ ಬಗ್ಗೆ ಸ್ಪಷ್ಟವಾಗಿ ಮತ್ತು ವಿಶದವಾಗಿ ಬರೆಯಬೇಕು. ಯೋಗ್ಯಪ್ರಸಕ್ತಿಯಲ್ಲಿ ಹುಕುಮತ್ತಿನ ಬಗ್ಗೆ ಮತ್ತು ಕೋರ್ಟ ಫೀ

ಬಗ್ಗೆ ದಾವೆಯ ಆಕಾರ ಬೇರೆ ಬೇರೆಯಾಗಿ ಬರೆಯಬೇಕು. ಸದರಿ ಆಕಾರಗಳಲ್ಲಿ ಬೇರೆ ಬೇರೆ ಭೇದವುಂಟು. ಕೋರ್ಟ ಫೀ ಕಾನೂನಿನ ಅಥವಾ ಆಕ್ಟಿನ ಪ್ರಕಾರಾ ಕೋರ್ಟ ಫೀ ಆಕರಣೆ ಮಾಡಬೇಕಾಗುವದು. ಬಹುತರವಾಗಿ ಬೇಡತಕ್ಕ ಹಣದ ಮೇಲೆ ಅಥವಾ ಕಬಜಾ ಬೇಡತಕ್ಕ ಆಸ್ತಿಯ ಕಿಮ್ಮತ್ತಿನ ಮೇಲೆ ಕೋರ್ಟ ಫೀ ಕೊಡಬೇಕಾಗುವದು. ಆಸ್ತಿಯ ಬೆಲೆಯ ಯಾ ಕಿಮ್ಮತ್ತಿನ ಮೇಲೆ ಕೋರ್ಟ ಫೀ ಕೊಟ್ಟಿದ್ದರೆ ಹಾಗೆ ಸ್ಪಷ್ಟವಾಗಿ ಬರೆಯಬೇಕು. ಆಸ್ತಿಯ ಬೆಲೆಯ ಮೇಲೆ ಇಲ್ಲದೆ ಎರಡನೇ ಆಧಾರದ ಮೇಲೆ ಅಂದರೆ ತರಮಿನ ಮೇಲೆ ವಗೈರೆ ಆಕಾರ ಮಾಡಿದ್ದರೆ ಹಾಗೆ ಬರೆಯಬೇಕು.

"ದಾವೆಯ ಆಕಾರ ಕೋರ್ಟ ಫೀ ಬಗ್ಗೆ ೭೫ ರೂಪಾಯಿ ಮಾಡಿರುತ್ತದೆ. ಇದು ತರಮಿನ ೭॥ ಪಟ್ಟು ಆಗುತ್ತದೆ." "ದಾವೆಯ ಆಕಾರ ಕೋರ್ಟ ಫೀ ಬಗ್ಗೆ ತರಮಿನ ೭॥ ಪಟ್ಟು ಆದ ೭೫ ರೂಪಾಯಿ ಮಾಡಿರುತ್ತದೆ.

" ದಾವೆಯ ಆಕಾರ ಕೋರ್ಟ ಫೀ ಬಗ್ಗೆ ಆಸ್ತಿಯ ಬೆಲೆಯಾದ ೧೦೦ ರೂಪಾಯಿ ಮಾಡಿರುತ್ತದೆ."

ಎರಡು ದಸ್ತೈವಜುಗಳ ಸಂಬಂಧದಿಂದ ಒಂದೇ ದಾವೆಯನ್ನು ಮಾಡಿದ್ದಲ್ಲಿ ಕೆಳಗಿನಂತೆ ಬರೆಯಬೇಕು. "ದಾವೆಯ ಆಕಾರ ಸನ್ನ ೧೯೨೭ನೇ ಸಾಲಿನ ದಸ್ತೈವಜಿನ ಸಂಬಂಧದಿಂದ ४४೫ ರೂಪಾಯಿ ಮಾಡಿರುತ್ತದೆ. ಮತ್ತು ಸನ್ನ ೧೯೨೮ನೇ ಸಾಲಿನ ದಸ್ತೈವಜಿನ ಸಂಬಂಧದಿಂದ ೨೭೫ ರೂಪಾಯಿ ಮಾಡಿರುತ್ತದೆ. ಮತ್ತು ಕೋರ್ಟಿನ ಹುಕುಮತ್ತಿನ ಬಗ್ಗೆ ೭೨೦ ರೂಪಾಯಿ ಮಾಡಿರುತ್ತದೆ.

ಕೋರ್ಟ ಫೀ ಬಗ್ಗೆ ಮತ್ತು ಹುಕುಮತ್ತಿನ ಬಗ್ಗೆ ದಾವೆಯ ಆಕಾರ ಒಂದೇ ಇದ್ದರೆ ಕೆಳಗಿನಂತೆ ಬರೆಯಬೇಕು. "ಹುಕುಮತ್ತಿನ ಬಗ್ಗೆ ಮತ್ತು ಕೋರ್ಟ ಫೀ ಬಗ್ಗೆ ದಾವೆಯ ಆಕಾರ ೬೦೦ ರೂಪಾಯಿ ಮಾಡಿರುತ್ತದೆ." ಹಾಗೆ ४೦೦ ರೂಪಾಯಿ ದರವ್ಯಾನ ಉತ್ಪನ್ನಸಹಿತಾ ೧೫೦೦ ರೂಪಾಯಿಗಳ ಕಿಮ್ಮತ್ತಿನ ಮನೆಯ ಕಬಜಾ ಬೇಡುವ ದಾವೆಯಲ್ಲಿ ಕೆಳಗಿನಂತೆ ಬರೆದರೆ ಸಾಕು. " ಹುಕುಮತ್ತಿನ ಬಗ್ಗೆ ಮತ್ತು ಕೋರ್ಟ ಫೀ ಬಗ್ಗೆ ದಾವೆಯ ಆಕಾರ ೨೦೦೦ ರೂಪಾಯಿ ಮಾಡಿರುತ್ತದೆ." ಯಾಕಂದರೆ ಮನೆಯ ಕಬಜಾದ ಬಗ್ಗೆ ದರವ್ಯಾನ ಉತ್ಪನ್ನದ ಬಗ್ಗೆ ಬಾಧ್ಯತೆಯನ್ನು ಒಂದೇ ಕಾರಣದಿಂದ ಉದ್ಭವಿಸಿರುತ್ತದೆ.

ಹುಕುಮತ್ತಿನ ಬಗ್ಗೆ ದಾವೆಯು ಆಕಾರ ೫೦೦೦ ರೂಪಾಯಿಗಳಿಗಿಂತ ಕಡಿಮೆ ಮಾಡಿದ್ದರೆ ಆ ದಾವೆಯು ಚವಕಶಿ ಮಾಡುವ ಅಧಿಕಾರ ೨ನೇ ವರ್ಗ ಸಬ್ಬಜಜ್ಜ ಕೋರ್ಟಿಗೆ ಉಂಟು. ಆದರೆ ಸದರಿ ಆಕಾರ ೫೦೦೦ ರೂಪಾಯಿಗಳಿಗಿಂತ ಹೆಚ್ಚುಮಾಡಿದ್ದರೆ ಸದರಿ ದಾವೆಯ ಚವಕಶಿ ಮಾಡುವ ಅಧಿಕಾರ ೨ನೇ ವರ್ಗ ಸಬ್ಬಜಜ್ಜ ಕೋರ್ಟಿಗೆ ಇಲ್ಲ. ಆದರೆ ೧ನೇ ವರ್ಗ ಸಬ್ಬಜಜ್ಜ ಕೋರ್ಟಿಗೆ ಇರುವದು. ಕಾರಣ ಈ ಪ್ರಕಾರ ಹುಕುಮತ್ತು ಠರಾಯಿಸುವದರ ದಶೆಯಿಂದ ಅಸಲ ರ್ಜಿಯಲ್ಲಿ ಹುಕುಮತ್ತಿನ ಬಗ್ಗೆ ಮಾಡತಕ್ಕ ಆಕಾರ ಸ್ಪಷ್ಟವಾಗಿ ಬರೆಯಬೇಕು. **ಆದರೆ ಹುಕುಮತ್ತಿನ ಆಕಾರ ಯಾತರ ಮೇಲೆ ಅವಲಂಬಿಸಿರುವದು?** ಈ ಪ್ರಶ್ನೆಯು ಬಿಕ್ಕಟ್ಟಿನದು ಅಲ್ಲ. ಯಾವ ದಾವೆಯಲ್ಲಿ ವಿಶಿಷ್ಟ ರಕಮು ಬೇಡಿರುತ್ತದೆಯೋ ಆ ದಾವೆಯಲ್ಲಿ ಆ ರಕಮಿನಷ್ಟೇ ಹುಕುಮತ್ತಿನ ಬಗ್ಗೆ ದಾವೆಯು ಆಕಾರ ಮಾಡಬೇಕು. ಈ ಪ್ರಸಕ್ತಿಯಲ್ಲಿ ಕೋರ್ಟ ಫೀ ಬಗ್ಗೆ ಸಹ ಅಷ್ಟೇ ಆಕಾರ ಮಾಡಬೇಕಾಗುವದು. ಅಂದರೆ ಹಣಾ ಬೇಡುವ ದಾವೆಯಲ್ಲಿ ಎಷ್ಟು ಹಣಾ ದಾವೆಯಲ್ಲಿ ಬೇಡಿರುತ್ತದೆಯೋ ಅಷ್ಟೇ ಹಣದ ಮೇಲೆ ಕೋರ್ಟ ಫೀ ಆಕಾರ ಮತ್ತು ಹುಕುಮತ್ತಿನ ಆಕಾರ ಅವಲಂಬಿಸಿರುತ್ತದೆ. ದಾವೆಯಲ್ಲಿ ೩೫೦ ರೂಪಾಯಿ ಬೇಡಿದರೆ ಆ ದಾವೆಯಲ್ಲಿ ಕೋರ್ಟ ಫೀ ಬಗ್ಗೆ ಮತ್ತು ಹುಕುಮತ್ತಿನ ಬಗ್ಗೆ ದಾವೆಯ ಆಕಾರ ೩೫೦ ರೂಪಾಯಿ ಆಗುವದು. ಸ್ಥಾವರ ಆಸ್ತಿಯು ಕಬಜಾ ಬೇಡುವ ದಾವೆಯಲ್ಲಿ ಹುಕುಮತ್ತಿನ ಆಕಾರ ಆ ಆಸ್ತಿಯು ಬೆಲೆಯ ಮೇಲೆ ಅವಲಂಬಿಸಿರುವದು. ಆದರೆ ಕೋರ್ಟ ಫೀಯು ಆಕಾರ ಬೆಲೆಯು ಮೇಲೆ ಮಾತ್ರ ಅವಲಂಬಿಸಿರುವದು ಅಂತಾ ಅನ್ನಲಿಕ್ಕೆ ಬರಲಾರದು. ಹಿಂದೆ ಹೇಳಿದಂತೆ ಕೋರ್ಟ ಫೀ ಆಕಾರ ಕೋರ್ಟ ಫೀ ಆಕ್ಟಿನಲ್ಲಿ ಹೇಳಿದ ಕಲಮುಗಳಿಗೆ ಅನುಸರಿಸಿ ಮಾಡಬೇಕಾಗುವದು. ವರ್ಷಾ ೧೦ ರೂಪಾಯಿ ಸರಕಾರಿ ತರಮು ಇರುವ ಜಮೀನಿಯ ಕಿಮ್ಮತ್ತು ೧೫೦೦ ರೂಪಾಯಿ ಇದ್ದರೆ, ಆ ಜಮೀನಿಯು ಕಬಜಾ ಬೇಡತಕ್ಕ ದಾವೆಯಲ್ಲಿ ಕೋರ್ಟ ಫೀ ಆಕಾರ, ಕೋರ್ಟ ಫೀ ಆಕ್ಟಿನ ಪ್ರಕಾರ ತರಮಿನ ೭॥ ಪಟ್ಟು ಆದ ೭೫ ರೂಪಾಯಿ ಮಾಡಬೇಕು. ಮತ್ತು ೭೫ ರೂಪಾಯಿಗಳ ಮೇಲೆ ಕೋರ್ಟ ಫೀ ಕೊಡಬೇಕು. ಮತ್ತು ಹುಕುಮತ್ತಿನ ಬಗ್ಗೆ ಆಕಾರ ಆಸ್ತಿಯು ಬೆಲೆಯಾದ ೧೫೦೦ ರೂಪಾಯಿ ಮಾಡಬೇಕು. ಈ ಸಂಗತಿಯ ಅಸಲ ರ್ಜಿಯಲ್ಲಿ ಬರೆಯಬೇಕಾದರೆ ಕೆಳಗಿನಂತೆ ಬರೆಯಬೇಕು. " ದಾವೆಯ ಆಕಾರ ಕೋರ್ಟ ಫೀ ಬಗ್ಗೆ ತರಮಿನ ೭॥ ಪಟ್ಟು ಆದ ೭೫ ರೂಪಾಯಿ ಮತ್ತು ಹುಕು

ಮತ್ತಿನ ಬಗ್ಗೆ ಆಸ್ತಿಯ ಬೆಲೆಯಾದ ೧೫೦೦ ರೂಪಾಯಿ ಮಾಡಿರುತ್ತದೆ" ಅಂತಾ ಬರೆದರೆ ಸಾಕು. ಮನೆಯ ಕಬಜಾ ಬೇಡುವ ದಾವೆಯಲ್ಲಿ ಕೋರ್ಟ ಫೀ ಮನೆಯ ಬೆಲೆಯ ಮೇಲೆ ಕೊಡಬೇಕಾಗುವದು. ಈ ಪ್ರಸಕ್ತಿಯಲ್ಲಿ ಕೋರ್ಟ ಫೀ ಬಗ್ಗೆ ದಾವೆಯ ಆಕಾರ ಎಷ್ಟು ಇರುವದು ಅಷ್ಟೇ ಆಕಾರ ಹುಕುಮತ್ತಿನ ಬಗ್ಗೆ ಇರುವದು. ಯಾವಾಗಲು ಹುಕುಮತ್ತಿನ ಬಗ್ಗೆ ಆಕಾರ ಆಸ್ತಿಯ ಯಾ ಬಾಧ್ಯತೆಯ ಬೆಲೆಯ ಮೇಲೆ ಅವಲಂಬಿಸಿರುವದು. ಅಸಲಜರ್ಜಿಯಲ್ಲಿ ಈ ಪ್ರಸಕ್ತಿಯಲ್ಲಿ ದಾವೆಯ ಆಕಾರ ಕೆಳಗಿನಂತೆ ಬರೆಯಬೇಕು. "ದಾವೆಯ ಆಕಾರ ಕೋರ್ಟ ಫೀ ಬಗ್ಗೆ ಮತ್ತು ಹುಕುಮತ್ತಿನ ಬಗ್ಗೆ ಆಸ್ತಿಯ ಬೆಲೆಯಾದ ೧೫೦೦ ರೂಪಾಯಿ ಮಾಡಿರುತ್ತದೆ." ಅಥವಾ "ದಾವೆಯ ಆಕಾರ ಕೋರ್ಟ ಫೀ ಬಗ್ಗೆ ಮತ್ತು ಹುಕುಮತ್ತಿನ ಬಗ್ಗೆ ೧೫೦೦ ರೂಪಾಯಿ ಮಾಡಿರುತ್ತದೆ."

**ಕೆಲವು ಬಾಧ್ಯತೆಯ ಕಿಮ್ಮತ್ತು ಠರಾಯಿಸಲಿಕ್ಕೆ ಬರುವಂತೆ ಇರುವದಿಲ್ಲ. ಉ:**—ದಾಂಪತ್ಯ ಸಂಬಂಧದ ಹಕ್ಕನ್ನು ಹಿಂದಕ್ಕೆ ಪಡೆಯುವ ಸಂಬಂಧದ ದಾವೆಯಲ್ಲಿ ಬಾಧ್ಯತೆಯ ಕಿಮ್ಮತ್ತು ಠರಾಯಿಸಲಿಕ್ಕೆ ಬರುವಂತೆ ಇಲ್ಲ. ಈ ಪ್ರಸಕ್ತಿಯಲ್ಲಿ ಹುಕುಮತ್ತಿನ ಆಕಾರ ಯಾತರ ಮೇಲೆ ಅವಲಂಬಿಸಿರುವದು ? ಅದು ವಾದಿಯ ಇಚ್ಛೆಯ ಮೇಲೆ ಅವಲಂಬಿಸಿರುವದು. ವಾದಿಯು ತನ್ನ ಇಚ್ಛೆಯಂತೆ ಹುಕುಮತ್ತಿನ ಬಗ್ಗೆ ದಾವೆಯ ಆಕಾರ ಮಾಡಬಹುದು. ಇದರಂತೆ ತಾಕೀದಿಯ ಅಥವಾ **ಈಜಮೆಂಟ** ಹಕ್ಕಿನ ಸಂಬಂಧದ ದಾವೆಯಲ್ಲಿ ಬಾಧ್ಯತೆಯ ಕಿಮ್ಮತ್ತು ಠರಾಯಿಸಲಿಕ್ಕೆ ಬರುವಂತೆ ಇಲ್ಲ. ಕಾರಣ ಈ ಪ್ರಸಕ್ತಿಯಲ್ಲಿ ಸಹ ವಾದಿಯು ತನ್ನ ಇಚ್ಛೆಯಂತೆ ಹುಕುಮತ್ತಿನ ಬಗ್ಗೆ ದಾವೆಯ ಆಕಾರ ಮಾಡಬಹುದು. ಈ ಪ್ರಕಾರದ ದಾವೆಗಳಲ್ಲಿ ಕೋರ್ಟ ಫೀ ಆಕ್ಟಿನ ಪ್ರಕಾರ ನಿಶ್ಚಿತವಾದ ಕೋರ್ಟ ಫೀ ಕೊಡಬೇಕಾಗುವದು. ಮತ್ತು ಆ ಆಧಾರ ಮೇಲಿಂದ ಕೋರ್ಟ ಫೀ ಆಕಾರ ಬರೆಯಬೇಕಾಗುವದು.

**ಹಣದ ಸಂಬಂಧವಾದ ದಾವೆಗಳಲ್ಲಿ**— ವಾದಿಯು ಹಣವನ್ನು ವಸೂಲು ಮಾಡಲಿಕ್ಕೆ ಬೇಡುತ್ತಿದ್ದಾಗ್ಗೆ ಆ ಹಣದ ಸರಿಯಾದ ರಕಮು ಎಷ್ಟೆಂಬುದನ್ನು ಅಸಲಜರ್ಜಿಯಲ್ಲಿ ಬರೆಯಬೇಕು. ಆದರೆ ಒಳಗಡೆಯ ಲಾಭಕ್ಕಾಗಿ ಅಥವಾ ವಾದಿಗೂ ಪ್ರತಿವಾದಿಗೂ ನಡೆದಂಥ ಬಾಯಿಗೂಡದ ಲೆಖ್ಖವನ್ನು ತೆಗೆದುಕೊಳ್ಳಲಾಗಿ ವಾದಿಗೆ ದೊರೆಯತಕ್ಕದ್ದಾಗಿ ಹೊರಡುವಂಥ ಹಣಕ್ಕಾಗಿ ವಾದಿಯು ದಾವೆಮಾಡಿದ್ದಾಗ್ಗೆ ಅಸಲಜರ್ಜಿಯಲ್ಲಿ ದಾವೆ ಮಾಡಿದ ಅಜಮಾಸಿನ ರಕಮು ಬರೆಯಬೇಕು.

# ೫ ನೆಯ ಪ್ರಕರಣ

**ಅಸಲಜರ್ಜಿಯ ಸಂಬಂಧಿ ಸಾಮಾನ್ಯ ನಿಯಮಗಳು—**

**ಪ್ರತಿವಾದಿಯ ಸ್ವಾರ್ಥ ಸಂಬಂಧವನ್ನು ಮತ್ತು ಪಾತ್ರತೆಯನ್ನು ಅಸಲಜರ್ಜಿಯಲ್ಲಿ ತೋರಿಸತಕ್ಕದ್ದು**—ಅಸಲಜರ್ಜಿಯಲ್ಲಿ ಪ್ರತಿವಾದಿಯು ದಾವೆಯ ವಿಷಯದೊಳಗೆ ಸ್ವಾರ್ಥ ಸಂಬಂಧವುಳ್ಳವನಿರುತ್ತಾನೆಂದಾಗಲಿ ಸ್ವಾರ್ಥ ಸಂಬಂಧದ ಬಾಧ್ಯತೆಯನ್ನು ತೋರಿಸುತ್ತಾನೆಂದಾಗಲಿ ಬರೆಯಬೇಕು; ಮತ್ತು ವಾದಿಯ ದಾವೆಗೆ ಜವಾಬು ಕೊಡುವಂತೆ ಪರ್ಮಾಯಿಸಲ್ಪಡಲಿಕ್ಕೆ ಅವನು ಪಾತ್ರನಾಗಿರುತ್ತಾನೆಂದು ಬರೆಯಬೇಕು. (ಆ. ೭, ರೂಲ ೫).

**ಮುದ್ದತಿನ ಕಾಯದೆಯಿಂದ ಬಿಡುಗಡೆ ಹೊಂದಲಿಕ್ಕೆ ಇರುವ ಆಧಾರಗಳು ಅಸಲಜರ್ಜಿಯಲ್ಲಿ ಬರೆಯಬೇಕು** – ದಾವೆಯು ಮುದ್ದತಿನ ಕಾಯಿದೆಯಿಂದ ವಿಧಿಸಿರುವ ಮುದ್ದತು ದಾಟಿದ ತರುವಾಯ ಮಾಡಲ್ಪಟ್ಟಿದ್ದಲ್ಲಿ ಆ ಕಾಯದೆಯಿಂದ ಬಿಡುಗಡೆ ಹೊಂದಲಿಕ್ಕಿದ್ದ ಆಧಾರವನ್ನು ಅಸಲಜರ್ಜಿಯಲ್ಲಿ ತೋರಿಸಬೇಕು. **ಉ:**— **ಅ** ಎಂಬುವವನು **ಬ** ಎಂಬುವವನಿಗೆ ತಾರೀಖು ೨೬–೧೨–೧೯೨೫ನೇ ಇಸ್ವಿ ದಿವಸ ಬೇಡಿದಾಗ್ಗೆ ಕೊಡುವ ಕರಾರಿನಿಂದ ಒಂದು ಸಾಲದ ಕತಿಬೆಯನ್ನು ಅಂದರೆ ಪ್ರಾಮಿಸರಿ ನೋಟನ್ನು ಬರೆದುಕೊಟ್ಟನು. ಸದರಿ ದಸ್ತೈವಜಿನ ಮೇಲೆ ಮುದ್ದತಿಯಲ್ಲಿ ದಾವೆಯು ಮಾಡಬೇಕಾಗಿದ್ದಲ್ಲಿ ತಾರೀಖು ೨೬–೧೨–೧೯೨೮ನೇ ಇಸ್ವಿ ದಿವಸ ಅಥವಾ ಅದರ ವಳಗಾಗಿ ಮಾಡತಕ್ಕದ್ದು. ತಾರೀಖು ೨೬–೧೨–೧೯೨೮ನೇ ಇಸ್ವಿದಿವಸ ಕೋರ್ಟಿಗೆ ಸೂಟಿ ಇರುವದರಿಂದ ಆ ದಿವಸ ದಾವೆಯು ಮಾಡಲಿಕ್ಕೆ ಅಂದರೆ ದಾಖಲ ಮಾಡಲಿಕ್ಕೆ ಬರುವಂತೆ ಇಲ್ಲ. ಆದರೆ ಕೋರ್ಟಿನ ಸುರುವಿನ ದಿವಸ ಅಂದರೆ ತಾರೀಖು ४–೧–೧೯೨೯ ನೇ ಇಸ್ವಿದಿವಸ ದಾವೆಯನ್ನು ದಾಖಲು ಮಾಡಲಿಕ್ಕೆ ಬರುವದು. ಈ ಪ್ರಸಕ್ತಿಯಲ್ಲಿ ಅಸಲಜರ್ಜಿಯಲ್ಲಿ ಕೆಳಗಿನಂತೆ ಮಜಕೂರು ಕಾಣಿಸತಕ್ಕದ್ದು.

" ದಾವೆಯ ಪ್ರಾಮಿಸರಿ ನೋಟಿನ ಮುದ್ದತು ತಾ. ೨೬–೧೨–೧೯೨೮ ನೇ ಇಸ್ವಿ ದಿವಸ ಹೋಗುತ್ತಿದ್ದು ಆ ದಿವಸ ಕೋರ್ಟಿಗೆ ಸೂಟಿ ಇರುವದರಿಂದ

ಆ ದಿವಸ ದಾವೆಯು ದಾಖಲ ಮಾಡದೆ ಮುಂದೆ ಕೋರ್ಟಿನ ಮೊದಲಿನ ಸುರುವಿನ ದಿವಸ ಅಂದರೆ ತಾರೀಖು ೪–೧–೧೯೨೯ನೇ ಇಶ್ವಿ ದಿವಸ ದಾವೆಯನ್ನು ದಾಖಲು ಮಾಡಿರುತ್ತದೆ. ” (ಆ. ೭, ರೂಲ ೬).

**ವಾದಿಯು ಪ್ರತಿನಿಧಿಯ ರೂಪದಿಂದ ದಾವೆ ಮಾಡುತ್ತಿದ್ದಾಗ** — ವಾದಿಯು ಪ್ರತಿನಿಧಿಯ ರೂಪದಿಂದ ದಾವೆಯನ್ನು ಮಾಡಿದಲ್ಲಿ, ದಾವೆಯ ವಿಷಯದೊಳಗೆ ಅವನಿಗೆ ಪ್ರತ್ಯಕ್ಷವಾಗಿ ನಡೆಯುವಂಥ ಸ್ವಾರ್ಥ ಸಂಬಂಧ ಉಂಟೆಂದು ಅಸಲಜಿಯಲ್ಲಿ ಬರೆಯಬೇಕು. ಅದಲ್ಲದೆ ಆ ವಿಷಯವನ್ನು ಕುರಿತು ದಾವೆಯನ್ನು ಮಾಡಲಿಕ್ಕೆ ತನಗೆ ಅಧಿಕಾರ ಕೊಡಲಿಕ್ಕೆ ಅಗತ್ಯವಿರುವಂಥ ಉಪಾಯವನ್ನು(ಏನಾದರು ಇದ್ದರೆ) ಅವನು ಮಾಡಿರುವದನ್ನು ಸಹ ಬರೆಯಬೇಕು. (ಆ. ೭, ರೂಲ ೫).

**ಅಸಲಜಿಯ ಮೇಲೆ ಅಥವಾ ಕೈಫಿಯತ್ತಿನ ಮೇಲೆ ಸಹಿ ಮಾಡತಕ್ಕದ್ದು**—(ಆ. ೬, ರೂಲ ೧೫). ಪ್ರತಿಯೊಂದು ಅಸಲರ್ಜಿಯ ಮೇಲೆ ಅಥವಾ ಕೈಫಿಯತ್ತಿನ ಮೇಲೆ ಪಕ್ಷಕಾರನು ಮತ್ತು ಅವನ ವಕೀಲನು (ಯಾವನಾದರು ಇದ್ದರೆ) ಸಹಿ ಮಾಡತಕ್ಕದು. ಆದರೆ ಯಾವನೊಬ್ಬ ಕೆಲಸ ನಡಿಸುವ ಪಕ್ಷಕಾರನು, ಗೈರ ಹಾಜರಿಯ ಕಾರಣದಿಂದ ಅಥವಾ ಇತರ ಒಳ್ಳೇಕಾರಣದ ಬಗ್ಗೆ ಅಸಲಜಿಯ ಯಾ ಕೈಫಿಯತ್ತಿನ ಮೇಲೆ ಸಹಿ ಮಾಡಲು ಅಸಮರ್ಥನಾದಲ್ಲಿ ಅದರ ಮೇಲೆ, ಅವನಿಂದ ಅದರ ಮೇಲೆ ಸಹಿ ಮಾಡುವದಕ್ಕೆ ಅಥವಾ ಅವರ ಕಡಿಂದ ದಾವೆಯನ್ನು ಅಥವಾ ಉತ್ತರ ಪಕ್ಷವನ್ನು ನಡಿಯಿಸುವದಕ್ಕೆ ಯೋಗ್ಯವಾಗಿ ಅಧಿಕೃತನಾದ ಯಾವನಾದರು ಮನುಷ್ಯನು ಸಹಿ ಮಾಡಬಹುದು. ಪಕ್ಷಕಾರನು ವಕೀಲನನ್ನು ಕೊಡದಿದ್ದರೆ ಅವನೊಬ್ಬನೆ ಸಹಿ ಮಾಡಬೇಕು. ಮತ್ತು ಅಸಲರ್ಜಿ ಯಾ ಕೈಫಿಯತ್ತು ದಾಖಲ ಮಾಡಬೇಕು.

**ಅಸಲರ್ಜಿಯ ಯಾ ಕೈಫಿಯತ್ತಿನ ಮೇಲೆ ಖರೇತನದ ಬಗ್ಗೆ ಸಹಿ ಮಾಡೋಣ** –(ಆ. ೬, ರೂಲ ೧೫)ಪ್ರತಿಯೊಂದು ಅಸಲರ್ಜಿಯ ಯಾ ಕೈಫಿಯತ್ತಿನ ಅಡಿಗೆ ಪಕ್ಷಕಾರನು ಅಥವಾ ದಾವೆ ನಡೆಯಿಸುವ ಪಕ್ಷಕಾರರೊಳಗೆ ಒಬ್ಬನು ಅಥವಾ ದಾವೆಯ ವಸ್ತುಸ್ಥಿತಿಯನ್ನು ಬಲ್ಲವನೆಂದು ಕೋರ್ಟಿಗೆ ತೃಪ್ತಿಯಾಗುವಂತೆ ಸಾಬೀತು ಮಾಡಲ್ಪಟ್ಟ ಬೇರೆಯವನೊಬ್ಬ ಮನುಷ್ಯನು ಖರೇತನದ

ಬಗ್ಗೆ ಪ್ರತಿಜ್ಞಾ ಲೇಖವನ್ನು ಮಾಡಿರಬೇಕು. ದಾವೆಯಲ್ಲಿ ಅನೇಕ ಪಕ್ಷಕಾರರು ಇದ್ದಲ್ಲಿ ಅವರೆಲ್ಲರೂ ಮೇಲೆ ಹೇಳಿದಂತೆ ಖರೇತನದ ಬಗ್ಗೆ ಪ್ರತಿಜ್ಞಾ ಲೇಖವನ್ನು ಮಾಡಬೇಕು ಹೀಗೆ ಏನು ಇಲ್ಲ. ಆದರೆ ಸದರಿ ಪಕ್ಷಕಾರರ ಪೈಕಿ ಯಾವನಾದ ರೊಬ್ಬನು ಮೇಲೆ ಹೇಳಿದಂತೆ ಪ್ರತಿಜ್ಞಾ ಲೇಖವನ್ನು ಮಾಡಿದರೆ ಸಾಕಾಗುವದು. ಎಲ್ಲರೂ ಮಾಡಿದರು ಅಡ್ಡಿಯಿಲ್ಲ. ದಾವೆಯ ವಸ್ತುಸ್ಥಿತಿಯನ್ನು ಬಲ್ಲವನು ಪಕ್ಷಕಾ ಕಾರರ ಪೈಕಿ ಅಲ್ಲದೆ ಬೇರೆ ಯಾವನೊಬ್ಬ ಮನುಷ್ಯನು ಸಹ ಪ್ರತಿಜ್ಞಾಲೇಖ ವನ್ನು ಮಾಡುವನು.

ಖರೇತನದ ಬಗ್ಗೆ ಪ್ರತಿಜ್ಞಾಲೇಖವನ್ನು ಮಾಡುವ ಮನುಷ್ಯನು; ಅಸಲ ಜರ್ಜಿಯ ಯಾ ಕೈಫಿಯತ್ತಿನ ನಂಬರು ಹಾಕಿದ ಪ್ಯಾರಾಗ್ರಾಫಗಳನ್ನು ಉಲ್ಲೇಖಿಸಿ ತನ್ನ ಸ್ವಂತ ಮಾಹಿತಿಯಿಂದ ತಾನು ಯಾವದರ ಮೇಲೆ ಖರೇತನದ ಸಹಿಯನ್ನು ಮಾಡುತ್ತಾನೆ. ಮತ್ತು ಯಾವದರ ಮೇಲೆ ತನಗೆ ದೊರೆತ ಮತ್ತು ನಿಜವೆಂದು ನಂಬಲ್ಪಟ್ಟ ಮಾಹಿತಿಯಿಂದ ಖರೇತನದ ಸಹಿ ಮಾಡುತ್ತಾನೆಂಬುದನ್ನು ಸ್ಪಷ್ಟ ಗೊಳಿಸತಕ್ಕದ್ದು.

ಪಕ್ಷಕಾರನು ಅಸಲಜರ್ಜಿಯಲ್ಲಿ ಯಾ ಕೈಫಿಯತ್ತಿನಲ್ಲಿ ತನ್ನ ಸ್ವಂತ ಮಾಹಿ ತಿಯಿಂದ ಯಾವ ಸಂಗತಿಗಳನ್ನು ನಿಜವೆನ್ನುವನು ಮತ್ತು ಯಾವ ಸಂಗತಿಗಳನ್ನು ದೊರೆತ ಮತ್ತು ನಿಜವೆಂದು ನಂಬಲ್ಪಟ್ಟ ಮಾಹಿತಿಯಿಂದ ನಿಜವೆನ್ನುವನು ಎಂಬು ವದು ವಿಂಗಡಿಸಿ ಸ್ಪಷ್ಟವಾಗಿ ಬರೆಯಬೇಕು. ಪ್ರತಿಜ್ಞಾಲೇಖದ ಮಹತ್ವವು ಬಹಳೇ ಇರುತ್ತದೆ. ಸುಳ್ಳು ಪ್ರತಿಜ್ಞಾಲೇಖವನ್ನು ಮಾಡಿದರೆ ಅದು ಇಂಡಿಯನ ಪಿನಲ ಕೋಡ ಪ್ರಕಾರ ದೊಡ್ಡ ಗುನ್ಹೆ ಆಗುವದು. ಕಾರಣ ಪ್ರತಿಜ್ಞಾಲೇಖದಲ್ಲಿ ಯಾವ ಸಂಗತಿಗಳನ್ನು ಸ್ವಂತ ಮಾಹಿತಿ ಮೇಲಿಂದ ಅಥವಾ ದೊರೆತ ಮತ್ತು ನಂಬಲ್ಪಟ್ಟ ಮಾಹಿತಿ ಮೇಲಿಂದ ನಿಜವೆನ್ನುವನು ಎಂಬದನ್ನು ಒಳ್ಳೇ ವಿಚಾರದಿಂದ ಸ್ಪಷ್ಟವಾಗಿ ಬರೆಯಬೇಕು. "ಅಸಲಜರ್ಜಿಯ ೧ನೇ ಕಲಮಿನಿಂದ ಅಖೈರಿನ ಕಲ ಮಿನಲ್ಲಿ ಕಾಣಿಸಿದ ಮಜಕೂರು ನನ್ನ ಸ್ವಂತ ಮಾಹಿತಿ ಮೇಲಿಂದ ಮತ್ತು ದೊರೆತ ಮತ್ತು ನಂಬಲ್ಪಟ್ಟ ಮಾಹಿತಿ ಮೇಲಿಂದ ನಿಜವಿರುತ್ತದೆ'' ಅಂತಾ ಬರೆ ಯುವ ಪದ್ಧತಿಯು ಕಂಡಬರುತ್ತದೆ. ಸ್ವಂತ ಮಾಹಿತಿಯಿಂದ ಹೇಳುವ ಸಂಗತಿ ಗಳಲ್ಲಿ ಮತ್ತು ದೊರೆತ ಮತ್ತು ನಂಬಲ್ಪಟ್ಟ ಮಾಹಿತಿಯಿಂದ ಹೇಳುವ ಸಂಗತಿಗ

ಳಲ್ಲಿ ಭೇದವಿದ್ದರೆ ಆ ಸಂಗತಿಗಳು ಯಾವವು ಎಂಬದನ್ನು ವಿಂಗಡಿಸಿ ತೋರಿ ಸಬೇಕು.

ಖರೇತನದ ಪ್ರತಿಜ್ಞಾಲೇಖದ ಮೇಲೆ ಅದನ್ನು ಮಾಡುವ ಮನುಷ್ಯನು ಸಹಿ ಮಾಡಬೇಕು; ಮತ್ತು ಯಾವ ತಾರೀಖಿಗೆ ಮತ್ತು ಯಾವ ಸ್ಥಳದಲ್ಲಿ ಅದರ ಮೇಲೆ ಸಹಿ ಮಾಡಲಾಯಿತೆಂಬುದನ್ನು ಹೇಳಿರತಕ್ಕದ್ದು.

ಪ್ರತಿಜ್ಞಾಲೇಖದ ಒಂದು ನಮೂನೆ ಕೆಳಗೆ ಕೊಡುತ್ತೇವೆ. "ನಾನು ಅ, ಬ (ವಾದಿಯ ಯಾ ಪ್ರತಿವಾದಿಯ ಯಾ ಪ್ರತಿಜ್ಞಾಲೇಖ ಮಾಡುವವನ ಹೆಸರು ಬರೆಯಬೇಕು.) ಮಾಡುವ ಪ್ರತಿಜ್ಞಾಲೇಖ ( ಯಾ ಇ ಕರಾರು ) ಏನಂದರೆ:— ಮೇಲೆ ಅಸಲಜಿಯ ೧, ೨, ೩, ೪, ೫, ಮತ್ತು ೧೦ನೇ ಪ್ಯಾರಾಗ್ರಾಫುಗಳಲ್ಲಿ ( ಅಥವಾ ಕಲಮುಗಳಲ್ಲಿ ) ಬರೆದ ಮಜಕೂರು ನನ್ನ ಸ್ವಂತ ಮಾಹಿತಿಯಿಂದ ಮತ್ತು ೬, ೭, ೮, ಮತ್ತು ೯ನೇ ಪ್ಯಾರಾಗ್ರಾಫುಗಳಲ್ಲಿ ಬರೆದ ಮಜಕೂರು ನನ್ನ ದೊರೆತ ಮತ್ತು ನಿಜವೆಂದು ನಂಬಲ್ಪಟ್ಟ ಮಾಹಿತಿಯಿಂದ ನಿಜವಿರುತ್ತದೆ. ಇದಕ್ಕೆ ನಾನು ತಾರೀಖು ೧೨–೩–೧೯೨೯ನೇ ಇಶ್ವಿ ದಿವಸ ನನ್ನ ವಕೀಲರಾದ ರಾ. ರಾಮರಾವ ದೇಶಪಾಂಡೆ ಸಾಕೀನ ಹುಬ್ಬಳ್ಳಿ ಇವರ ಕಚೇರಿಯಲ್ಲಿ ನನ್ನ ಸಹಿ ಮಾಡಿದ್ದೇನೆ. (ಅಥವಾ ಹುಬ್ಬಳ್ಳಿ ೨ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ನನ್ನ (ಸಹಿ ಮಾಡಿದ್ದೇನೆ) "

ಸಹಿ. ಅ ಬ... ... ... ...

ಕೋರ್ಟಿನವರು ಯಾವದಾದರು ಅಸಲಜಿಯೊಳಗಿಂದ ಯಾ ಕೈಫಿಯತ್ತಿನೊಳಗಿಂದ ಅನವಶ್ಯ ಅಥವಾ ದುಷ್ಟವಾಗಬಹುದಾದ ಅಥವಾ ದಾವೆಯು ನ್ಯಾಯವಾದ ಇನಸಾಫಿಗೆ ಬಾಧೆಯುಂಟು ಮಾಡಬಹುದಾದ, ಅಡಚಣೆಯುಂಟು ಮಾಡಬಹುದಾದ ಅಥವಾ ವಿಳಂಬವುಂಟು ಮಾಡಬಹುದಾದ ಯಾವದಾದರು ಮಜಕೂರನ್ನು ತೆಗೆದುಹಾಕಬೇಕೆಂದು ಅಥವಾ ಸುಧಾರಿಸಬೇಕೆಂದು ಹುಕುಮು ಮಾಡಬಹುದು. ಕೋರ್ಟಿನವರು ಪಕ್ಷಕಾರರಿಗೆ ತಮ್ಮ ಅಸಲಜಿಯನ್ನು ಯಾ ಕೈಫಿಯತಿಯನ್ನು ಬದಲಾಯಿಸುವದಕ್ಕೆ ಅಥವಾ ಸುಧಾರಿಸುವದಕ್ಕೆ ಬಿಡಬಹುದು; ಮತ್ತು ಪಕ್ಷಕಾರರೊಳಗೆ ವಾದದಲ್ಲಿರುವ ನಿಜವಾದ ಪ್ರಶ್ನೆಗಳನ್ನು ನಿರ್ಣಯಿಸುವ ಕಾರಣದ ಬಗ್ಗೆ ಬೇಕಾಗಬಹುದಾದಂಥ ಎಲ್ಲ ಸುಧಾರಣೆಗಳನ್ನು ಪಕ್ಷಕಾರನು ಮಾಡಬಹುದು. (ಆ ೬. ರೂ ೧೬, ೧೭).

ವಾದಿಯು ಅಸಲರ್ಜಿಯ ಸಂಗಡ ಏನಾದರೂ ದಸ್ತೈವಜುಗಳನ್ನು ಹಾಜರು ಮಾಡಿದ್ದರೆ ಅವುಗಳ ತಪಶೀಲಿನ ಯಾದಿಯನ್ನು ಅವನು ಆ ಅರ್ಜಿಯ ಕೆಳಗೆ ಬರೆಯಬೇಕು; ಯಾ ಅದನ್ನು ಆ ಅರ್ಜಿಗೆ ಜೋಡಿಸಬೇಕು. ಮತ್ತು, ಅಸಲರ್ಜಿಯನ್ನು ಕೋರ್ಟಿನವರು ಸ್ವೀಕರಿಸಿದರೆ, ಅವನು ದಾವೆಯಲ್ಲಿ ಪ್ರತಿವಾದಿಗಳಿದ್ದಷ್ಟು ಆ ಅರ್ಜಿಯ ನಕಲುಗಳನ್ನು ಸಾಧಾರಣ (ಸ್ಟಾಂಪಲ್ಲದ) ಕಾಗದದ ಮೇಲೆ ಬರೆದು ಕೋರ್ಟಿನಲ್ಲಿ ಹಾಜರು ಮಾಡಬೇಕು. (ಆ ೭, ರೂ. ೯).

**ಅಸಲರ್ಜಿಯನ್ನು ಹಿಂದಕ್ಕೆ ಕೊಡೋಣ** – ದಾವೆಯು ಯಾವದೆ ಪರ್ಯಾಯದಲ್ಲಿ, ಯಾವ ಕೋರ್ಟಿನಲ್ಲಿ ದಾವೆಯನ್ನು ಮಾಡಬೇಕಾಗಿತ್ತೋ ಆ ಕೋರ್ಟಿನಲ್ಲಿ ಹಾಜರು ಮಾಡುವ ಬಗ್ಗೆ ಅಸಲರ್ಜಿಯನ್ನು ಕೋರ್ಟಿನವರು ಹಿಂದಕ್ಕೆ ಕೊಡಬೇಕು. ಯಾವ ಕೋರ್ಟಿನಲ್ಲಿ ದಾವೆಯು ಹಾಜರು ಮಾಡತಕ್ಕದ್ದು ಆ ಕೋರ್ಟಿನಲ್ಲಿ ಆ ದಾವೆಯು ಹಾಜರು ಮಾಡಿದೆ ತಪ್ಪಿನಿಂದ ಬೇರೆ ಕೋರ್ಟಿನಲ್ಲಿ ಅಂದರೆ ಯಾವ ಕೋರ್ಟಿನಲ್ಲಿ ಆ ದಾವೆಯು ಹಾಜರು ಮಾತಲಾಗಿದ್ದಿತ್ತೋ ಆ ಕೋರ್ಟಿನಲ್ಲಿ ಆ ದಾವೆಯು ಹಾಜರು ಮಾಡಿದರೆ ಅದನ್ನು ಅಂದರೆ ಆ ಅಸಲರ್ಜಿಯನ್ನು ಆ ಕೋರ್ಟಿನವರು ಯೋಗ್ಯವಾದ ಕೋರ್ಟಿಗೆ ಹಾಜರು ಮಾಡುವ ಬಗ್ಗೆ ವಾದಿಗೆ ಹಿಂದಕ್ಕೆ ಕೊಡಬೇಕು. ಸದರಿ ಅಸಲರ್ಜಿಯನ್ನು ಹಿಂದಕ್ಕೆ ಪಡಕೊಂಡು ಸದರಿ ವಾದಿಯು ಯೋಗ್ಯವಾದ ಕೋರ್ಟಿನಲ್ಲಿ ಅದೇ ಅಸಲರ್ಜಿಯನ್ನು (ಅಂದರೆ ಮತ್ತೊಮ್ಮೆ ಬೇರೆ ಸ್ಟಾಂಪ ಹಚ್ಚದೆ) ಹಾಜರು ಮಾಡಬಹುದು. (ಆ. ೭, ರೂ. ೧೦).

**ಅಸಲರ್ಜಿಯನ್ನು ನಾಕಾರಿಸೋಣ** –ಕೆಳಗೆ ಹೇಳಿದ ಸಂಗತಿಗಳಲ್ಲಿ ಅಸಲರ್ಜಿಯನ್ನು ನಾಕಾರಿಸಬೇಕು:—(ಆ. ೭, ರೂ. ೧೧).

(ಅ) ಅದರಲ್ಲಿ ದಾವೆಯ ಕಾರಣವು ತೋರಿ ಬಾರದಿದ್ದರೆ,

(ಬ) ಬೇಡಿದಂಥ ನ್ಯಾಯಾಶ್ರಯದ ಬೆಲೆಯನ್ನು ಆ ಅರ್ಜಿಯಲ್ಲಿ ಕಡಿಮೆ ಬರೆಯಲ್ಪಟ್ಟದ್ದು; ಕೋರ್ಟಿನವರಿಂದ ನೇಮಿಸಲ್ಪಟ್ಟ ಮುದ್ದತಿನೊಳಗೆ ಆ ಬೆಲೆಯನ್ನು ದುರಸ್ತು ಮಾಡಿಕೊಡಲಿಕ್ಕೆ ವಾದಿಗೆ ಕೋರ್ಟಿನ ಹುಕುಮು ಆಗಿರಲಾಗಿ, ಆ ಮುದ್ದತಿನೊಳಗೆ ಅವನು ಅದನ್ನು ದುರಸ್ತು ಮಾಡಿ ಕೊಡದಿದ್ದರೆ,

(ಕ) ಬೇಡಿದಂಥ ನ್ಯಾಯಾಶ್ರಯದ ಬೆಲೆಯು ಯೋಗ್ಯವಾಗಿ ಬರೆಯಲ್ಪಟ್ಟಾಗ್ಗೆ ಅಸಲರ್ಜಿಯ ಕಡಿಮೆ ಬೆಲೆಯುಳ್ಳ ಸ್ಟಾಂಪಿನ ಮೇಲೆ ಬರೆಯಲ್ಪಟ

ಕಾರಣ, ಇಂಥಾದ್ದೊಂದು ಮುದ್ದತಿನೊಳಗೆ ತಕ್ಕ ಸ್ಟಾಂಪ ಕಾಗದವನ್ನು ಹಾಜರು ಮಾಡಬೇಕೆಂದು ವಾದಿಗೆ ಕೋರ್ಟಿನ ಹುಕುಮು ಆಗಿರಲಾಗಿ, ಅವನು ಆ ಪ್ರಕಾರ ಮಾಡದಿದ್ದರೆ,

(ಡ) ಅಸಲಜರ್ಜಿಯೊಳಗಿನ ಮಜಕೂರಿನ ಮೇಲಿಂದ ಯಾವದೊಂದು ಕಾಯಿದೆಯಿಂದ ಅಡ್ಡಿಯುಂಟೆಂದು ತೋರಿದರೆ,

ಇವುಗಳ ಪೈಕಿ ಯಾವದೊಂದು ಸಬಬಿನಿಂದ ಅಸಲಜರ್ಜಿಯು ನಾಕಾರಿಸಲ್ಪಡಲಾಗಿ ಅಷ್ಟೇ ಕಾರಣದಿಂದ ವಾದಿಗೆ ಅವೇ ದಾವೆಯ ಕಾರಣಕ್ಕಾಗಿ ಹೊಸ ಅಸಲಜರ್ಜಿಯನ್ನು ಹಾಜರು ಮಾಡಲಿಕ್ಕೆ ಅಡ್ಡಿಯಾಗಲಾರದು. ವಾದಿಯು ಪುತ್ರೊಮ್ಮೆ ತಕ್ಕ ಹೊಸ ಸ್ಟಾಂಪನ್ನು ಖರೀದಿ ಮಾಡಿ ಅದರ ಮೇಲೆ ಹೊಸ ಅಸಲಜರ್ಜಿಯನ್ನು ಬರೆದು ಅದನ್ನು ಹಾಜರು ಮಾಡಬಹುದು.

**ಅಸಲಜರ್ಜಿಯಲ್ಲಿ ಆಧಾರವಾಗಿ ತಿಳಿಯಲ್ಪಟ್ಟಿರುವ ದಸ್ತೈವಜುಗಳು.** (ಆ. ೭, ರೂ. ೧೪).

ವಾದಿಯು ತನ್ನ ವಶದಲ್ಲಿ ಯಾ ಅಧಿಕಾರದೊಳಗೆ ಇರುವಂಥ ಯಾವದೊಂದು ದಸ್ತೈವಜಿನ ಆಧಾರದಿಂದ ದಾವೆಯನ್ನು ಮಾಡಿದರೆ, ಅವನು ಅಸಲಜರ್ಜಿಯ ಸಂಗಡ ಆ ದಸ್ತೈವಜನ್ನು ಕೋರ್ಟಿನಲ್ಲಿ ಹಾಜರು ಮಾಡಿ, ಅದೇ ವೇಳೆಗೆ ಅದನ್ನು ಆಗಲಿ ಅದರ ನಕಲನ್ನಾಗಲಿ ಅಸಲಜರ್ಜಿಯ ಸಂಗಡ ದಫ್ತರಿನಲ್ಲಿ ದಾಖಲು ಮಾಡುವ ಬಗ್ಗೆ ಕೊಡತಕ್ಕದ್ದು.

ವಾದಿಯು ತನ್ನ ದಾವೆಗೆ ಆಧಾರವಾದಂಥ ಪ್ರಮಾಣಗಳೆಂದು ಬೇರೆ ದಸ್ತೈವಜುಗಳ (ಅವು ಅವನ ವಶದಲ್ಲಾಗಲಿ ಅಧಿಕಾರದೊಳಗಾಗಲಿ ಇರಲಿ ಇಲ್ಲದಿರಲಿ) ಪುರಾವೆಯನ್ನು ತೋರಿಸುತ್ತಿದ್ದರೆ, ಆ ದಸ್ತೈವಜುಗಳನ್ನು ಅವನು ಅಸಲಜರ್ಜಿಯ ಕೆಳಗೆ ಯಾ ಅದರ ಸಂಗಡ ದಾಖಲಾಗತಕ್ಕ ಯಾದಿಯೊಳಗೆ ನಮೂದಿಸಬೇಕು.

ದಸ್ತೈವಜುಗಳಲ್ಲಿ ಎರಡು ಭೇದ ಮಾಡಿರುತ್ತವೆ. ಒಂದು ಯಾವ ದಸ್ತೈವಜುಗಳ ಮೇಲೆ ವಾದಿಯು ದಾವೆ ಮಾಡುತ್ತಾನೋ ಆ ದಸ್ತೈವಜುಗಳು ಮತ್ತು ಎರಡನೇದ್ದು ಹಕ್ಕಿನ ಪುರಾವೇದ ಬಗ್ಗೆ ವಾದಿಯು ಅವಲಂಬಿಸದಂಥ ಅಥವಾ ಅವಲಂಬಿಸುವಂಥ ದಸ್ತೈವಜುಗಳು. ಯಾವ ದಸ್ತೈವಜುಗಳ ಮೇಲೆ ವಾದಿಯು ದಾವೆ ಮಾಡುತ್ತಾನೋ ಆ ದಸ್ತೈವಜುಗಳನ್ನು ವಾದಿಯು ಅಸಲಜರ್ಜಿಯ ಸಂಗಡ ಹಾಜರು ಮಾಡತಕ್ಕದ್ದು.

ಉ:—ಕರ್ಜಕತಿಬೆಯು, ಯಾ ಸಾಲದ ಕತಿಬೆಯು, ಯಾ ಪ್ರಾಮಿಸರಿ ನೋಟಿನ ಯಾ ಕರಾರನಾಮೆಯು ಆಧಾರದ ಮೇಲಿಂದ ಮಾಡಿದ ಅಥವಾ ಮಾಡ ತಕ್ಕ ಎಲ್ಲ ದಾವೆಗಳಲ್ಲಿ ಸದರಿ ಕರ್ಜಕಿತಿಬೆಯು ವಗೈರೆ ಅಸಲ ಅರ್ಜಿಯ ಸಂಗಡ ಹಾಜರಮಾಡಬೇಕು. ಇತರ ದಸ್ತೈವಜುಗಳನ್ನು ಅಸಲ ಅರ್ಜಿಯ ಸಂಗಡ ಹಾಜರ ಮಾಡುವದು ಕಾಯಿದೆಯಿಂದ ಅಗತ್ಯವಿಲ್ಲ. ಆದರೆ ಅವುಗಳನ್ನು ಅಸಲ ಅರ್ಜಿಯ ಸಂಗಡ ಹಾಜರಮಾಡಿದ್ದರೆ ಅಡ್ಡಿಯಿಲ್ಲಾ. ಸದರಿ ಇತರ ದಸ್ತೈವ ಜುಗಳನ್ನು ಅಸಲ ಅರ್ಜಿಯ ಸಂಗಡ ಹಾಜರಮಾಡದಿದ್ದರೂ ಅವುಗಳನ್ನೆಲ್ಲಾ ಅಸಲ ಅರ್ಜಿಯ ಸಂಗಡ ದಾಖಲಾಗತಕ್ಕ ದಸ್ತೈವಜುಗಳ ಯಾದಿಯಲ್ಲಿ ನಮೂದ ಮಾಡಬೇಕು. ಸಾರಾಂಶ—ವಾದಿಯು ಅವಲಂಬಿಸುವಂಥ ದಸ್ತೈ ವಜಗಳನ್ನು (೧) ಅಸಲ ಅರ್ಜಿಯ ಸಂಗಡ ಹಾಜರಮಾಡಬೇಕು. ಅಥವಾ (೨) ಅಸಲ ಅರ್ಜಿಯ ಸಂಗಡ ದಾಖಲಾಗತಕ್ಕ ದಸ್ತೈವಜಿ ಯಾದಿಯೊ ಳಗೆ ನಮೂದಿಸಬೇಕು. ದಸ್ತೈವಜಿನ ಸಂಬಂಧಿ ಈ ಎರಡು ಮಾರ್ಗ ಗಳ ಪೈಕಿ ಕನಿಷ್ಟ ಯಾವದಾದರೊಂದು ಮಾರ್ಗವನ್ನು ವಾದಿಯು ಸ್ವೀಕರಿಸಲಿಕ್ಕೆ ಬೇಕು. ವಾದಿಯು ಅಸಲ ಅರ್ಜಿಯ ಸಂಗಡ ಪ್ರತ್ಯಕ್ಷ ದಸ್ತೈವಜನ್ನು ಹಾಜರಮಾಡದಿದ್ದರೆ ಮತ್ತು ಅಸಲರ್ಜಿಯ ಸಂಗಡ ದಾಖಲಾಗತಕ್ಕ ದಸ್ತೈ ವಜಿನ ಯಾದಿಯಲ್ಲಿ ನಮೂದ ಮಾಡದಿದ್ದರೆ ಏನಾಗುವದು ? ಮುಂದೆ ವಾದಿಗೆ ಸದರಿ ದಸ್ತೈವಜುಗಳು ತನ್ನ ಪುರಾವೆದ ದಸೆಯಿಂದ ಆ ದಾವೆಯಲ್ಲಿ ಹಾಜರಮಾಡಲಿಕ್ಕೆ ಬರುವದೇನು ? ಕೋರ್ಟಿನ ಅಪ್ಪಣೆಯ ಹೊರತು ಅವುಗ ಳನ್ನು ಹಾಜರಮಾಡಲಿಕ್ಕೆ ಬರಲಾರದು. ಅಥವಾ ಅವುಗಳನ್ನು ಪುರಾವೆಕ್ಕೆ ಗ್ರಾಹ್ಯವಾಗಲಾರವು. ಈ ಬಗ್ಗೆ ಕೆಳಗಿನ ನಿಯಮವನ್ನು ಒಳ್ಳೇ ಲಕ್ಷ್ಯದಲ್ಲಿ ಇಡತಕ್ಕದ್ದು.

ಅಸಲ ಅರ್ಜಿಯ ಸಂಗಡ ವಾದಿಯು ಕೋರ್ಟಿನಲ್ಲಿ ಹಾಜರಮಾಡತಕ್ಕಂಥ ಯಾ ಅರ್ಜಿಯ ಕೆಳಗಾಗಲಿ ಸಂಗಡವಾಗಲಿ ದಾಖಲಾದ ಯಾದಿಯಲ್ಲಿ ಬರೆಯಲ್ಪ ಡತಕ್ಕಂಥ ದಸ್ತೈವಜುವನ್ನು ವಾದಿಯು ಆ ಪ್ರಕಾರ ಹಾಜರಮಾಡದಿದ್ದರೆ ಯಾ ಯಾದಿಯಲ್ಲಿ ಬರೆಯದಿದ್ದರೆ. ಆ ದಾವೆಯ ಸುನಾವಣೆಯ ಕಾಲದಲ್ಲಿ ಆ ದಸ್ತೈ ವಜು ಅವನ ತರ್ಫಿನ ಪುರಾವೆ ಎಂದು, **ಕೋರ್ಟಿನ ಅಪ್ಪಣೆಯ ಹೊರತು ಗ್ರಾಹ್ಯವಾಗದು.**

೬—೬೬೯೬

ಸದರಿ ನಿಯಮಿಗೆ ಕೆಳಗಿನ ಅಪವಾದವುಂಟು. ದಾವೆಯಲ್ಲಿ ಪ್ರತಿವಾದಿಯ ಸಾಕ್ಷಿದಾರರ ಉಲಟ ತಪಾಸಣೆಗಾಗಿ ಹಾಜರ ಮಾಡಿದಂಥ ಯಾ ಪ್ರತಿವಾದಿಯ ಬಾಯಿಂದ ಉದ್ಭವಿಸಲ್ಪಟ್ಟ ಯಾವದೊಂದು ಪ್ರಕರಣದ ಜವಾಬಿಗಾಗಿ ಹಾಜರ ಮಾಡಿದಂಥ ಯಾ ಯಾವನೊಬ್ಬ ಸಾಕ್ಷಿದಾರನ ಸ್ಮರಣವನ್ನು ಜಾಗ್ರತಿ ಪಡಿಸುವದಕ್ಕಾಗಿ ಮಾತ್ರ ಅವನಕೈಯಲ್ಲಿ ಕೊಡಲ್ಪಟ್ಟಂಥ ದಸ್ತೈವಜುಗಳು ಅಸಲ ಅರ್ಜಿಯ ಸಂಗಡ ಹಾಜರಮಾಡುವದು ಅಗತ್ಯವಿಲ್ಲ; ಹಿಂದೆನಿಂದ ಸಹ ಹಾಜರ ಮಾಡಲಿಕ್ಕೆ ಬರುವದು.

ಅಸಲರ್ಜಿಯ ಸಂಗಡ ಹಾಜರಮಾಡತಕ್ಕಂಥ ಯಾ ಅಸಲರ್ಜಿಯ ಸಂಗಡ ದಾಖಲಾಗತಕ್ಕ ಯಾದಿಯೊಳಗೆ ನಮೂದ ಮಾಡಿಸತಕ್ಕಂಥ ದಸ್ತೈವಜು ವಾದಿಯ ವಶದಲ್ಲಿ ಯಾ ಅಧಿಕಾರದೊಳಗಾಗಿ ಇಲ್ಲದಿದ್ದರೆ ಏನುಮಾಡಬೇಕು ! ಇಂಥ ಯಾವದೊಂದು ದಸ್ತೈವಜು ವಾದಿಯ ವಶದಲ್ಲಾಗಲಿ ಅದಿಕಾರದೊಳಗಾಗಲಿ ಇಲ್ಲದ ಪಕ್ಷದಲ್ಲಿ ಅದು ಯಾರ ವಶದಲ್ಲಾಗಲಿ ಅಧಿಕಾರದೊಳಗಾಗಲಿ ಇರುತ್ತದೆಂದು ಅವನು ಶಕ್ಯವಿದ್ದರೆ ಹೇಳಬೇಕು. (ಆ. ೭ ರೂ. ೧೫.)

ಯಾವದೊಂದು ಅಂಗಡಿಯ ಲೆಖ್ಖದ ವಹಿಗಳೊಳಗಿನ ಲೆಖ್ಖದ ನೋಂದಿನ ಆಧಾರದ ಮೇಲೆ ದಾವೆಯನ್ನು ಮಾಡಬೇಕಾಗಿದ್ದಲ್ಲಿ ಆ ದಸ್ತೈವಜುಗಳು ಅಂದರೆ ಆ ಲೆಖ್ಖದ ವಹಿಗಳು ವಾದಿಯು ಅಸಲರ್ಜಿಯ ಸಂಗಡ ಹಾಜರಪಡಿಸಿ, ಆ ದಾವೆ ನಿಕಾಲೆ ಆಗುವ ವರೆಗೆ ಹಾಗೇ ಕೋರ್ಟಿನಲ್ಲಿ ಇಡಬೇಕಾದರೆ ವಾದಿಯ ವ್ಯವಹಾರಕ್ಕೆ ಬಹಳ ತೊಂದರೆ ಆಗುವದು ಮತ್ತು ದಾವೆ ದಾಖಲ ತಾರೀಖಿನಿಂದ ಅಂಗಡಿಯ ಬಾಬತು ಮುಂದಿನ ವ್ಯವಹಾರಗಳನ್ನು ಮತ್ತು ಆ ಬಗ್ಗೆ ಲೆಖ್ಖಗಳನ್ನು ಆ ಲೆಖ್ಖದ ವಹಿಗಳು ಕೋರ್ಟಿನಲ್ಲಿ ಹಾಜರ ಇರುವದರಿಂದ ಆ ಲೆಖ್ಖದ ವಹಿಗಳಲ್ಲಿ ಬರೆಯಲಿಕ್ಕೆ ಅನನುಕೂಲವಾಗುವದು. ಕಾರಣ ಈ ಬಗ್ಗೆ ಕೆಳಗಿನ ನಿಯಮವೂ ಮಾಡಿರುತ್ತದೆ.

ವಾದಿಯು ತನ್ನ ವಶದಲ್ಲಾಗಲಿ ಅಧಿಕಾರದೊಳಗಾಗಲಿ ಇರುವಂಥ ಯಾವದೊಂದು ಅಂಗಡಿಯ ವಹಿಗಳೊಳಗಿನ ಯಾ ಬೇರೊಂದು ಲೆಖ್ಖದ ವಹಿಗಳೊಳಗಿನ ನೋಂದಿನ ಆಧಾರದಿಂದ ದಾವೆಯನ್ನು ಮಾಡಿದರೆ, ಅವನು ಅಸಲರ್ಜಿಯನ್ನು ದಾಖಲಮಾಡುವಾಗ ಆ ವಹಿಗಳನ್ನು ಆ ನೋಂದಿನ ನಕಲು ಸಹಿತವಾಗಿ ಹಾಜರ ಮಾಡಬೇಕು.

ಕೋರ್ಟಿನವರು ಯಾ ಅವರಿಂದ ಈ ಕೆಲಸಕ್ಕೆ ನೇಮಿಸಲ್ಪಟ್ಟ ಆಫೀಸರನು ತತ್ಕಾಲವೇ ಗೊತ್ತಿನ ಸಲುವಾಗಿ ಆ ದಸ್ತೈವಜಿಗೆ ಗುರುತು ಮಾಡತಕ್ಕದ್ದು; ಮತ್ತು ಅದರ ನಕಲನ್ನು ತಪಾಸಿಸಿ ಅದರ ಸಂಗಡ ಸರಿನೋಡಿದ ಬಳಿಕ ಆ ನಕಲು ಸರಿಯಾಗಿದ್ದರೆ ಆ ಬಗ್ಗೆ ಅದಕ್ಕೆ ಸಹಿಮಾಡಿ ವಹಿಯನ್ನು ವಾದಿಗೆ ಹಿಂದಕ್ಕೆ ಕೊಟ್ಟು ನಕಲನ್ನು ದಪ್ತರಿಗೆ ದಾಖಲ ಮಾಡಿಸಬೇಕು. ಸಾರಾಂಶ—ಕೋರ್ಟಿನವರು ವಹಿಗಳೊಳಗಿನ ಲೆಖ್ಖದ ಮೂಲ ನೋಂದಿಗೆ ಗುರ್ತುಮಾಡಿ ಆ ವಹಿಗಳನ್ನು ವಾದಿಗೆ ವಾಪಸಮಾಡುವರು. (ಆ. ೭ ರೂ ೧೭.)

ಅಸಲರ್ಜಿ ವಗೈರೆ ಕೋರ್ಟಿನಲ್ಲಿ ಯಾರು ದಾಖಲ ಮಾಡಬಹುದು? ದಾವೇಯ ಪಕ್ಷಗಾರನು.

(೧) ತಾನೇ ಆಗಲಿ ಅಥವಾ;

(೨) ಮಾನ್ಯನಾದಂಥ ತನ್ನ ಗುಮಾಸ್ತನ ಮುಖಾಂತರವಾಗಿ ಆಗಲಿ ಅಥವಾ—

(೩) ತನ್ನ ಸಲುವಾಗಿ ಕೆಲಸ ನಡಿಸಲಿಕ್ಕೆ ಯೋಗ್ಯರೀತಿಯಿಂದ ನಿಯಮಿಸಲ್ಪಟ್ಟಂಥ ವಕೀಲನ ಮುಖಾಂತರವಾಗಿ ಆಗಲೀ—

ಕೋರ್ಟಿನಲ್ಲಿ ಹಾಜರಾಗಬಹುದು. ಯಾ ಅದಕ್ಕೆ ಅರ್ಜಿಯನ್ನು ಮಾಡಬಹುದು.

— —

# ೬ನೆಯ ಪ್ರಕರಣ

**ಅಸಲಜರ್ಜಿಯು ದಾಖಲಾದನಂತರಾ**— ಪ್ರತಿಯೊಂದು ದಾವೆಯ ವಿವರಗಳನ್ನು ಕೋರ್ಟಿನವರು ಆ ಬಗ್ಗೆ ಇಟ್ಟ ಒಂದು ಬುಕ್ಕಿನಲ್ಲಿ ಬಾರುಮಾಡಿಸಿ ಅದಕ್ಕೆ ದಿವಾಣೀ ದಾವೆಗಳ ರಿಜಿಸ್ಟರೆಂದು ಹೆಸರಿಡಬೇಕು; ಪ್ರತಿವರ್ಷದಲ್ಲಿ ಅಸಲಜರ್ಜಿಗಳನ್ನು ತೆಗೆದುಕೊಂಡ ಕ್ರಮದಂತೆ ಅಂಥ ನೋಂದುಗಳಿಗೆ ನಂಬರ ಗಳನ್ನು ಕೊಡಬೇಕು. ಸದರಿ ಪ್ರಕಾರಾ ಅಸಲಜರ್ಜಿಯು ನೊಂದು ಆದನಂತರಾ ವಕೀಲರು ತನ್ನು ಮಾಹಿತಿದಶಿಂದ ಆ ದಾವೆಯ ನಂಬರನ್ನು ಮತ್ತು ಆ ದಾವೆಯ ಕೊನೆಯ ಚವಕಶಿಯು ಯಾ ಮುದ್ದೆಗಳು ಠರಾಯಿಸುವ ಬಗ್ಗೆ ನಿಯುಮಿಸಿದ ತಾರೀಖನ್ನು ತಮ್ಮ ಡಾಯರಿಯಲ್ಲಿ ಬರಿಯಬೇಕು.

**ಪ್ರತಿವಾದಿಗೆ ಸಮನು ಮಾಡುವದು**— ದಾವೆಯು ಯೋಗ್ಯ ರೀತಿಯಿಂದ ಮಾಡಲ್ಪಟ್ಟಾಗ್ಗೆ, ಹಾಜರಾಗಿ ದಾವೆಯ ಜವಾಬು ಕೊಡುವ ವಿಷಯು ದಲ್ಲಿ ಕೋರ್ಟು ಪ್ರತಿವಾದಿಗೆ ಸಮನು ಮಾಡಬಹುದು. ಮತ್ತು ಠರಾಯಿಸಿದ ರೀತಿಯಿಂದ ಅದನ್ನು ಬಜಾಯಿಸಬಹುದು. (ಕಲಮು ೬೭) ಪ್ರತಿವಾದಿಗೆ ಸದರಿ ಸಮನಿನಲ್ಲಿ ಬರೆದ ತಾರೀಖಿಗೆ ಹಾಜರಾಗಿ ಜವಾಬು ಕೊಡಲಿಕ್ಕೆ ಹೇಳಬೇಕು.

ಆದರೆ ವಿಧಿಸಲ್ಪಡುವದೇನಂದರೆ ಅಸಲಜರ್ಜಿಯು ದಾಖಲಾದಕೂಡಲೇ ಪ್ರತಿವಾದಿಯು ಹಾಜರಾಗಿ ವಾದಿಯ ದಾವೆಯನ್ನು ಒಪ್ಪಿಕೊಂಡರೆ ಇಂಥ ಸಮನು ತೆಗೆಯತಕ್ಕದ್ದಲ್ಲ. ಸಮನು ತೆಗೆಯುವಾಗ ಕೋರ್ಟಿನವರು ಅದು ದಾವೆಯು ಮುದ್ದೆಗಳನ್ನು ಠರಾಯಿಸುವದಕ್ಕೆ ಮಾತ್ರವೋ, ಯಾ ದಾವೆಯ ಅಖೈ ರಿನ ನಿರ್ಣಯಕ್ಕೆ ಎಂಬದನ್ನು ಸಮನಿನ ಮೇಲೆ ಸ್ಪಷ್ಟವಾಗಿ ಬರೆಯುವರು.

ಸ್ಮಾಲಕಾಜ ದಾವೆಗಳ ಸಂಬಂಧಿ ಯಾ ಹಣದ ವಸೂಲಿಯ ಬಗ್ಗೆ ಮಾಡದ ದಾವೆಗಳ ಸಂಬಂಧಿ ಸಮನುಗಳು ಆ ದಾವೆಗಳ ಅಖೈರಿನ ನಿರ್ಣಯಕ್ಕೆ ಅಂತಾ ತೆಗೆಯುವರು. ಸ್ಥಾವರ ಆಸ್ತಿಯ ಬಾಬತ್ತು ಅಥವಾ ಒತ್ತೆಯ ಬಾಬತ್ತು ಅಥವಾ ಇತರ ಹಕ್ಕಿನ ಬಾಬತ್ತು ಮಾಡಿದ ದಾವೆಗಳ ಸಂಬಂಧಿ ಸಮನುಗಳು ಆ ದಾವೆಗಳ ಮುದ್ದೆಗಳನ್ನು ಠರಾಯಿಸುವದಕ್ಕೆ ಮಾತ್ರ ತೆಗೆಯುವರು.

ಪ್ರತಿವಾದಿಯು ತನ್ನ ಹಕೀಕತಿಗೆ ಬಲಕೊಡುವದಕ್ಕೋಸ್ಕರ ಆಧರಿಸಲ ಪೇಕ್ಷಿಸಿದ್ದಾಗಿ ಪ್ರತಿವಾದಿಯ ವಶದಲ್ಲಾಗಲಿ ಅಧಿಕಾರದೊಳಗಾಗಲಿ ಇರುವಂಥ ಎಲ್ಲ ದಸ್ತೈವಜುಗಳನ್ನು ಹಾಜರ ಮಾಡಲಿಕ್ಕೆ, ಅವನು ಹಾಜರಾಗಿ ಜವಾಬು ಕೊಡುವದಕ್ಕೋಸ್ಕರವಾಗಿ ಕಳುಹಿಸಲ್ಪಡುವ ಸಮುನಿನಲ್ಲಿ ಹುಕುಮು ಇರಬೇಕು.

ದಾವೆಯು ಅಖೈರಿನ ನಿರ್ಣಯಕ್ಕೋಸ್ಕರವಾಗಿ ಸಮನು ಕಳುಹಿಸಲ್ಪಟ್ಟಲ್ಲಿ ತಾನು ಹಾಜರಾಗತಕ್ಕ ದಿವಸ ತನ್ನ ಎಲ್ಲ ಸಾಕ್ಷಿದಾರರನ್ನು ಹಾಜರ ಮಾಡ ಲಿಕ್ಕೆ ಸಹ ಪ್ರತಿವಾದಿಗೆ ಆ ಸಮುನಿನಲ್ಲಿ ಹುಕುಮು ಇರಬೇಕು.

ದಾವೆಯ ಸಮನು ಜಾರಿ ಆದನಂತರಾ ಆ ಪ್ರತಿವಾದಿಯು

(ಅ) ಸ್ವತಃ ತಾನೇ; ಅಥವಾ

(ಬ) ದಾವೆಯ ಹಕೀಕತ್ತನ್ನು ಚೆನ್ನಾಗಿ ತಿಳಿದುಕೊಂಡವನಾಗಿ ಅದರೊ ಳಗಿನ ಗೌರವದ ಪ್ರಶ್ನೆಗಳಿಗೆಲ್ಲ ಉತ್ತರಗಳನ್ನು ಕೊಡಬಲ್ಲವನಾದಂಥ ವಕೀಲನ ಮುಖಾಂತರವಾಗಿ, ಅಥವಾ

(ಕ) ಅಂಥ ಯಾವತ್ತು ಪ್ರಶ್ನೆಗಳಿಗೆ ಉತ್ತರ ಕೊಡಬಲ್ಲವನಾದ ಬೇರೊಬ್ಬ ಮನುಷ್ಯನಿಂದ ಸಹಿತನಾದಂಥ ಒಬ್ಬ ವಕೀಲನ ಮುಖಾಂತರವಾಗಿ ಹಾಜರಾಗ ಬಹುದು.

ಪ್ರತಿವಾದಿಯನ್ನು ಸ್ವತಃ ಹಾಜರ ಪಡಸಲಿಕ್ಕೆ ಕೋರ್ಟಿನವರಿಗೆ ಕಾರಣ ತೋರಿದರೆ ಸಮುನಿನಲ್ಲಿ ಬರೆದ ದಿವಸ ಸ್ವತಃ ಕೋರ್ಟಿನಲ್ಲಿ ಹಾಜರಾಗಲಿಕ್ಕೆ ಅವ ನಿಗೆ ಆ ಸಮುನಿನಲ್ಲಿ ಹುಕುಮನ್ನು ಬರೆಯಬೇಕು. ಇದರಂತೆ ಅದೇ ದಿವಸ ವಾದಿ ಯನ್ನು ಸ್ವತಃ ಹಾಜರು ಪಡಿಸಲಿಕ್ಕೆ ಕೋರ್ಟಿನವರಿಗೆ ಕಾರಣ ತೋರಿದರೆ ಅವರು ಆ ಪ್ರಕಾರ ಹಾಜರಾಗಲಿಕ್ಕೆ ಅವನಿಗೆ ಹುಕುಮು ಮಾಡತಕ್ಕದ್ದು. ಆದರೆ ನಿರ್ದಿಷ್ಟಗೊಳಿಸಿದ ಹದ್ದುಗಳೊಳಗಾಗಿ ವಾಸವಾಗಿರುತ್ತಿದ್ದ ಹೊರತು ಯಾವ ಪಕ್ಷಕಾರನಿಗೂ ಸ್ವತಃ ಹಾಜರಾಗುವದಕ್ಕೆ ಕೋರ್ಟಿನವರು ಹುಕುಮು ಮಾಡ ಲಾಗದು. ಈ ಬಗ್ಗೆ ನಿರ್ದಿಷ್ಟಗೊಳಿಸಿದ ಹದ್ದು ಯಾವದು ?

೧. ಕೋರ್ಟಿನ ಅಧಿಕಾರದ ಸ್ಥಳ ಸೀಮೆಯಲ್ಲಿ ಸ್ಥಳವೂ, ಅಥವಾ

೨. (ಅ) ಕೋರ್ಟಿನ ಅಧಿಕಾರದ ಸ್ಥಳ ಸೀಮೆಯ ಹೊರಗೆ ಆದರೆ ಕೋರ್ಟಿನ ಸ್ಥಳದಿಂದ ಐವತ್ತು ಮೈಲುಗಳೊಳಗಿನ ಸ್ಥಳವೊ

(ಬ) ರೇಲವೆ ಲಾಯಿನ ಮೇಲೆ ಇದ್ದರೆ ಕೋರ್ಟಿನ ಸ್ಥಳದಿಂದ ಇನ್ನೂರು ಮೈಲಿಗಿಂತ ಕಡಿಮೆ ಅಂತರದ ಮೇಲೆ ಇರತಕ್ಕಂಥ ಸ್ಥಳವೂ ಪ್ರತಿಯೊಂದು ಸಮನಿನ ಸಂಗಡ ಅಸಲರ್ಜಿಯ ಒಂದು ಪ್ರತಿಯು ಇರತಕ್ಕದ್ದು.

**ಪ್ರತಿವಾದಿಗೆ ಸಮನು ಮಾಡಬೇಕಂತಾ ಹುಕುಮು ಆದ ನಂತರಾ ಅದನ್ನು ಕಳಿಸುವದರ ದೆಶೆಯಿಂದ ವಾದಿಯು ಭತ್ತೆ ಹಚ್ಚಬೇಕು**— ಕೋರ್ಟಿನಿಂದ ತೆಗೆಯಲ್ಪಟ್ಟ ಪ್ರತಿಯೊಂದು ಪ್ರೋಸೆಸ್ಸು ಅದನ್ನು ತೆಗೆಯಿಸುವ ಪಕ್ಷಕಾರನ ವೆಚ್ಚದಿಂದ ಬಜಾಯಿಸಲ್ಪಡಬೇಕು. ಆ ಬಜಾವಣೆಗಾಗಿ ವಸೂಲ ಮಾಡತಕ್ಕ ಕೋರ್ಟು ಫೀ ಪ್ರೋಸೆಸ್ಸು ತೆಗೆಯುವ ಪೂರ್ವದಲ್ಲಿ ಕೋರ್ಟಿನಿಂದ ನೇಮಿಸಿದಂಥ ಮುದ್ದತಿನೊಳಗೆ ಕೊಡತಕ್ಕದ್ದು. (ಆ ೪೮, ರೂ ೯.) ಸಮನು ಟಪಾಲಿನಿಂದ ಸಹ ಕಳುಹಿಸಲಿಕ್ಕೆ ಬರುವದು. ಮತ್ತು ಆ ಬಗ್ಗೆ ವೆಚ್ಚವನ್ನು ಸಹ ಯೋಗ್ಯ ವೇಳೆಯಲ್ಲಿ ಕೊಡಬೇಕಾಗುವದು. ಟಪಾಲಿನಿಂದ ಕಳುಹಿಸಿದ ನೋಟೀಸಿನ, ಸಮನಿನ ಅಥವಾ ಪತ್ರದ ಬಗ್ಗೆ ಅಂಚೆಯ ಹಾಸಲು ಕೊಡಬೇಕಾಗಿರುವಲ್ಲಿ ಅದನ್ನು ಮತ್ತು ಅದನ್ನು ರಜಿಸ್ಟರ ಮಾಡುವ ಬಗ್ಗೆ ಫೀಯನ್ನು, ಅದನ್ನು ಕಳುಹಿಸುವ ಮೊದಲು ಗೊತ್ತುಪಡಿಸಬಹುದಾದ ವೇಳೆಯೊಳಗಾಗಿ ತೆರತಕ್ಕದ್ದು. ಪ್ರತಿವಾದಿಗೆ ಸಮನು ಮಾಡಬೇಕು ಅಂತಾ ಹುಕುಮು ಆದನಂತರ ನೇಮಿಸಿದ ವೇಳೆಯಲ್ಲಿ ಪ್ರೊಸೆಸ್ಸು ಅಂದರೆ ಭತ್ತೆಯನ್ನು ಕೊಡತಕ್ಕದ್ದು. ಆ ಪ್ರಕಾರ ನೇಮಿಸಿದ ದಿವಸ ಆ ಸಮನು ಬಜಾಯಿಸುವಗೋಸ್ಕರ ಕೊಡತಕ್ಕ ಕೋರ್ಟ ಫೀ ಮತ್ತು ಟಪಾಲಿನ ಸಂಬಂಧದಿಂದ ಏನಾದರು ಖರ್ಚು ಕೊಡತಕ್ಕದ್ದಿದ್ದರೆ ಅದನ್ನು ವಾದಿಯು ಕೊಡದೇ ಇದ್ದುದರಿಂದ ಪ್ರತಿವಾದಿಯ ಮೇಲೆ ಸಮನು ಬಜಾಯಿಸಲ್ಪಡಲಿಲ್ಲವೆಂದು ಕಂಡು ಬಂದಲ್ಲಿ ಕೋರ್ಟಿನವರು ಆ ದಾವೆಯನ್ನು ತೆಗೆದು ಹಾಕಬೇಕೆಂದು ಹುಕುಮು ಮಾಡಬಹುದು. ಕಾರಣ ಗೊತ್ತು ಪಡಿಸಬಹುದಾದ ವೇಳೆಯಲ್ಲಿ ಪ್ರೋಸೆಸ್ಸು ಅಥವಾ ಭತ್ತೆಯನ್ನು ಕೊಡಲಿಕ್ಕೆ ತಪ್ಪಬಾರದು.

**ಸಮನು ಬಜಾಯಿಸುವದು**— ಪ್ರತಿವಾದಿಗೆ ಸಮನಿನದೊಂದು ಪ್ರತಿಯನ್ನು ಕೊಟ್ಟು, ಇದಾ ತೆಗೆದುಕೋ ಎಂದು ಹೇಳಿ ಮುಂದೆ ಹಿಡಿದು ಸಮನನ್ನು ಬಜಾಯಿಸಬೇಕು. ಆದಷ್ಟುಮಟ್ಟಿಗೆ ಪ್ರತಿವಾದಿಯ ಮೇಲೆ ಅಂದರೆ

ಮೇಲೆ ಹೇಳಿದ ಪ್ರಕಾರದಿಂದ ಸಮನು ಬಜಾಯಿಸುವ ಪ್ರಯತ್ನ ಮಾಡುವ ಅಗತ್ಯವಿದೆ. (ಆ ೫, ರೂ ೧೦.) ಒಬ್ಬನಿಗಿಂತ ಹೆಚ್ಚುಜನ ಪ್ರತಿವಾದಿಗಳಿದ್ದಲ್ಲಿ ಪ್ರತಿಯೊಬ್ಬ ಪ್ರತಿವಾದಿಯ ಮೇಲೆ ಸಮನು ಬಜಾಯಿಸಲ್ಪಡತಕ್ಕದ್ದು. (ಆ ೫, ರೂ ೧೧.)ಸಾಧಿಸುವ ಹಾಗಿದ್ದಲ್ಲಿ ಸ್ವತಃ ಪ್ರತಿವಾದಿಯ ಮೇಲೆ ಸಮನು ಬಜಾಯಿಸತಕ್ಕದ್ದು. ಸ್ವತಃ ಪ್ರತಿವಾದಿಯ ಮೇಲೆ ಸಮನು ಬಜಾಯಿಸುವದು ಸಾಧಿಸದಿದ್ದರೆ ಸಮನು ತೆಗೆದುಕೊಳ್ಳಲಿಕ್ಕೆ ಅಧಿಕೃತನಾದ ಗುಮಾಸ್ತನನ್ನು ಆ ಪ್ರತಿವಾದಿಯು ನೇಮಿಸಿಟ್ಟಲ್ಲಿ ಆ ಗುಮಾಸ್ತನ ಮೇಲೆ ಬಜಾಯಿಸಿದರೆ ಸಾಕಾಗಿ ರುವದು. ( ಆ ೫, ರೂ ೧೨. ) ಯಾವದೊಂದು ದಾವೆಯಲ್ಲಿ ಪ್ರತಿವಾದಿಯು ದೊರೆಯದಿದ್ದರೆ ಮತ್ತು ತನ್ನ ಸಲುವಾಗಿ ಸಮನು ತೆಗೆದುಕೊಳ್ಳಲಿಕ್ಕೆ ಅಧಿಕೃತ ನಾದ ಗುಮಾಸ್ತನನ್ನು ನೇಮಿಸಿಡದಿದ್ದರೆ ಆ ಪ್ರತಿವಾದಿಯ ಕುಟುಂಬದವನಾಗಿ ಅವನ ಕೂಡ ವಾಸಿಸುವಂಥ ಯಾವನೊಬ್ಬ ಪ್ರಬುದ್ಧ ಪುರುಷನ ಮೇಲೆ ಸಮನು ಬಜಾಯಿಸಬಹುದು. ( ಆ ೫, ರೂ ೧೫. ) ಶಕ್ಯವಿದ್ದಷ್ಟು ಮಟ್ಟಿಗೆ ಖುದ್ದ ಪ್ರತಿವಾದಿಗೆ ಹುಡಕಬೇಕು. ಮತ್ತು ಅವನ ಮೇಲೆ ಸಮನು ಬಜಾಯಿಸಲಿಕ್ಕೆ ಪ್ರಯತ್ನವನ್ನು ಮಾಡಬೇಕು. ಹುಡುಕಿದರೂ ಪ್ರತಿವಾದಿಯು ದೊರೆಯದಿ ದ್ದರೆ ಮಾತ್ರ ಅವನ ಕೂಡ ವಾಸಿಸುವಂಥ ಯಾವನೊಬ್ಬ ಪ್ರಬುದ್ಧ ಪುರುಷನ ಮೇಲೆ ಸಮನು ಬಜಾಯಿಸಬೇಕು. ಪ್ರತಿವಾದಿಯ ನೌಕರನು ಪ್ರತಿವಾದಿಯ ಕುಟುಂಬದವನಾಗಿರುವದಿಲ್ಲ. ಕಾರಣ ಪ್ರತಿವಾದಿಯ ನೌಕರನ ಮೇಲೆ ಪ್ರತಿವಾ ದಿಯ ಬಾಬತ್ತು ಸಮನು ಬಜಾಯಿಸಲಿಕ್ಕೆ ಬರಲಾಗದು. ಮತ್ತು ಕಾಯಿದೆ ಯಿಂದ ನಡೆಯಲಾಗದು.

ಯಾವನೊಬ್ಬ ಪ್ರತಿವಾದಿಯು ಸಮನು ತೆಗೆದ ಕೋರ್ಟಿನ ಸ್ಥಳ ಸೀಮೆ ಯೊಳಗೆ ವಾಸಮಾಡದೆ ಅವನು ಸದರಿ ಕೋರ್ಟಿನ ಸ್ಥಳ ಸೀಮೆಯೊಳಗೆ ಮ್ಯಾನೇ ಜರನ ಅಥವಾ ಗುಮಾಸ್ತನ ಮುಖಾಂತರವಾಗಿ ಉದ್ಯೋಗವನ್ನಾಗಲಿ ಯಾ ಕೆಲಸವನ್ನಾಗಲಿ ನಡಸಿದ ಪಕ್ಷಕ್ಕೆ ಸದರಿ ಪ್ರತಿವಾದಿಯ ಬಾಬತ್ತು ಸದರಿ ಮ್ಯಾನೇಜರನ ಮೇಲೆ ಯಾ ಗುಮಾಸ್ತನ ಮೇಲೆ ಸಮನು ಬಜಾಯಿಸಿದರೆ ಸಾಕಾ ಗುವದು.

ಸ್ಥಾವರ ಮಾಲಿನ ಸಂಬಂಧದಿಂದ ನ್ಯಾಯಾಶ್ರಯವನ್ನು ಬೇಡಿದಂಥ ಯಾ ಆ ಮಾಲಿಗೆ ಮಾಡಲ್ಪಟ್ಟ ಅಪಾಯಕ್ಕಾಗಿ ಲುಕ್ಸಾನು ಬೇಡುವಂಥ ದಾವೆಯಲ್ಲಿ

ಸಮನು ಖುದ್ದ ಪ್ರತಿವಾದಿಯ ಮೇಲೆ ಬಜಾಯಿಸುವದಾಗದಿದ್ದಲ್ಲಿ ಮತ್ತು ಪ್ರತಿ ವಾದಿಯು ಸಮನು ತೆಗೆದುಕೊಳ್ಳಲಿಕ್ಕೆ ಅಧಿಕೃತನಾದ ಗುಮಾಸ್ತನನ್ನು ನೇಮಿಸಿಡದಿದ್ದರೆ ಆ ಮಾಲು ತನ್ನ ಆಧೀನದಲ್ಲಿ ಇದ್ದಂಥ ಪ್ರತಿವಾದಿಯ ಯಾವನೊಬ್ಬ ಗುಮಾಸ್ತನ ಮೇಲೆ ಸಮನು ಬಜಾಯಿಸಬಹುದು. ಅಂದರೆ ಸ್ಥಾವರ ಮಾಲಿನ ಸಂಬಂಧಿ ದಾವೆಯಲ್ಲಿ ಖುದ್ದ ಪ್ರತಿವಾದಿಯು ದೊರೆಯದಿದ್ದರೆ ಆ ಮಾಲು ತನ್ನ ಅಧೀನದಲ್ಲಿ ಇದ್ದಂಥ ಪ್ರತಿವಾದಿಯ ಗುಮಾಸ್ತನ ಮೇಲೆ ಸಮನು ಬಜಾಯಿಸಬಹುದು.

**ಕಾರ್ಪೋರೇಶನ್ನಿನವರ** ಮೇಲೆ ಕೆಳಗೆ ಬರೆದ ಯಾವದೊಂದು ರೀತಿಯಿಂದ ಸಮನು ಬಜಾಯಿಸಬಹುದು.

(ಅ) ಆ ಕಾರ್ಪೋರೇಶನ್ನಿನವರ ಸೆಕ್ರೆಟರಿಗೆ ಯಾ ಯಾವನೊಬ್ಬ ಡೈರೆಕ್ಟರನಿಗೆ ಯಾ ಮುಖ್ಯ ಆಫೀಸರನಿಗೆ ಅದನ್ನು ಕೊಡುವದರಿಂದ ಅಥವಾ

(ಬ) ಆ ಕಾರ್ಪೋರೇಶನ್ನಿನವರು ರಜಿಸ್ಟರು ಮಾಡಲ್ಪಟ್ಟ ಆಫೀಸಿನಲ್ಲಿ (ಇದ್ದರೆ) ಅಥವಾ ರಜಿಸ್ಟರು ಮಾಡಲ್ಪಟ್ಟ ಆಫೀಸು ಇಲ್ಲದಿದ್ದಲ್ಲಿ ಆ ಕಾರ್ಪೋರೇಶನ್ನಿನ ವ್ಯವಹಾರಗಳು ನಡೆಯುವ ಸ್ಥಳದಲ್ಲಿ ಸಮನಿನ ಪ್ರತಿಯನ್ನು ಇಟ್ಟು ಅಥವಾ ಟಪಾಲಿನಿಂದ ಕಳುಹಿಸಿ ( ಆ ೨೯, ರೂ ೨. )

ಯಾವನೊಬ್ಬ ಮನುಷ್ಯನ ಮೇಲೆ ಭಾಗೀದಾರನೆಂದು ಅವರ ಪೇಢಿಯ ಹೆಸರಿನಿಂದ ದಾವೆಯನ್ನು ಮಾಡಿದ್ದರೆ—

(ಅ) ಭಾಗೀದಾರ ಪೈಕಿ ಯಾವನಾದರೊಬ್ಬನ ಮೇಲೆ ಅಥವಾ ಹೆಚ್ಚು ಜನರ ಮೇಲೆ ಅಥವಾ

(ಬ) ಭಾಗೀದಾರಿಯ ಉದ್ಯೋಗವು ನಡೆಯುತ್ತಿದ್ದ ಸ್ಥಳದಲ್ಲಿ ಆ ಭಾಗೀದಾರಿಯ ಕೆಲಸವನ್ನು ಯಾವ ಮನುಷ್ಯನ ನಿರ್ಬಂಧದಲ್ಲಿ ಅಥವಾ ವ್ಯವಸ್ಥೆಯ ಕೆಳಗೆ ಇರುವದೋ ಆ ಮನುಷ್ಯನ ಮೇಲೆ.

ಸಮನು ಲಾಗು ಮಾಡಬೇಕು. ಈ ಪ್ರಕಾರ ಸಮನು ಲಾಗುಮಾಡಿದ ಪಕ್ಷಕ್ಕೆ ಸದರಿ ಪೇಢಿಯ ಎಲ್ಲ ಭಾಗೀದಾರರ ಮೇಲೆ ಮತ್ತು ಪೇಢಿಯ ಮೇಲೆ ಅದು ಲಾಗು ಮಾಡಲ್ಪಟ್ಟದೆ ಅಂತಾ ತಿಳಿಯಬೇಕು.

ಸಾರಾಂಶ:—ಅದಷ್ಟರ ಮಟ್ಟಿಗೆ ಸಮನು ಖುದ್ದ ಪ್ರತಿವಾದಿಯ ಮೇಲೆ ಬಜಾಯಿಸಬೇಕು. ಪ್ರತಿವಾದಿಗೆ ಹುಡುಕಿದರೂ ಅವನು ಶಿಗದಿದ್ದರೆ, (ಅ) ಅವನಿಂದ ಸಮನು ತೆಗೆದುಕೊಳ್ಳಲಿಕ್ಕೆ ಅಧಿಕೃತನಾದ ಗುಮಾಸ್ತನ ಮೇಲೆ ಯಾ (ಬ) ಪ್ರತಿವಾದಿಯ ಕೂಡ ವಾಸಿಸುವಂಥ ಯಾವನೊಬ್ಬ ಪ್ರಬುದ್ಧ ಪುರುಷನ ಮೇಲೆ ಸಮನು ಬಜಾಯಿಸಬಹುದು.

**ಸಮನು ಲಾಗು ಹ್ಯಾಗೆ ಮಾಡಬೇಕು?** ಖುದ್ದ ಪ್ರತಿವಾದಿಗಾಗಲೀ ಅವನ ಗುಮಾಸ್ತನಿಗಾಗಲೀ ಅವನ ಸಲುವಾಗಿ ಬೇರೊಬ್ಬ ಮನುಷ್ಯನಿಗಾಗಲೀ ಸಮನು ಬಜಾಯಿಸುವ ಅಮಲದಾರನು ಅಂದರೆ ಬೇಲೀಫನು ಆ ಸಮನಿನ ನಕಲು ಕೊಟ್ಟಿರುತ್ತಾನೋ ಯಾ ತೆಗೆದುಕೋ ಎಂದು ಹೇಳಿ ಅದನ್ನು ಮುಂದೆ ಹಿಡಿದ ಬಳಿಕ ಆ ಸಮನಿನ ಅಸಲು ಪ್ರತಿಯ ಕೆಳಗೆ ಸಮನು ಮುಟ್ಟಿತೆಂದು ಬರೆಯಲ್ಪಟ್ಟ ಪಾವತಿಯ ಷರೆಯ ಕೆಳಗೆ ಆ ಅಮಲದಾರನು ಅಂದರೆ ಬೇಲೀಫನು; ಯಾವನಿಗೆ ಸಮನಿನ ನಕಲು ಕೊಟ್ಟಿರುತ್ತಾನೋ, ಯಾ ತೆಗೆದುಕೋ ಎಂದು ಹೇಳಿ ಅದನ್ನು ಮುಂದೆ ಹಿಡಿದಿರುತ್ತಾನೋ ಆ ಮನುಷ್ಯನ ಸಹಿಯನ್ನು ಬೇಡಬೇಕು. ಯಾವನೊಬ್ಬನ ಮೇಲೆ ಸಮನು ಬಜಾಯಿಸಿದರೆ ಅವನ ಕಡಿಯಿಂದ ಸದರಿ ಸಮನಿನ ನಕಲು ಮುಟ್ಟಿದ ಬಗ್ಗೆ ಸಮನಿನ ಅಸಲು ಪ್ರತಿಯ ಮೇಲೆ ಬೇಲೀಫನು ಅವನ ಕಡಿಯಿಂದ ಸಹಿ ಪಡಕೊಳ್ಳಬೇಕು. ಈ ಪ್ರಕಾರ ಸಮನು ಬಜಾಯಿಸಲ್ಪಟ್ಟ ಎಲ್ಲ ಪ್ರಸಕ್ತಿಗಳಲ್ಲಿ ಆ ಬಜಾಯಿಸುವ ಅಮಲದಾರನು ಅಂದರೆ ಬೇಲೀಫನು ಆ ಸಮನು ಬಜಾಯಿಸಿದ (೧) ವೇಳೆಯನ್ನು (೨) ರೀತಿಯನ್ನು ಮತ್ತು (೩) ಸಮನು ಯಾವನ ಮೇಲೆ ಬಜಾಯಿಸುವದರಲ್ಲಿ ಬಂದಿತೋ ಆತನನ್ನು ಯಾವನು ತೋರಿಸಿದನೋ ಮತ್ತು ಯಾವನು ಆ ಸಮನು ಕೊಡುವಾಗ್ಗೆ ಯಾ ತೆಗೆದುಕೊ ಎಂದು ಮುಂದೆ ಮಾಡಿದಾಗ್ಗೆ ನೋಡಿದನೋ ಅಂಥ ಯಾವನಾದರೂ ಮನುಷ್ಯನಿದ್ದರೆ ಆತನ ಹೆಸರು ಮತ್ತು ಪತ್ತೆಗಳನ್ನು ಗುರುತು ಅಸಲ ಪ್ರತಿಯ ಕೆಳಗೆ ಷರೆಯನ್ನು ಬರೆಯಬೇಕು; ಯಾ ಬರೆಯಿಸಬೇಕು, ಅಥವಾ ಬೇರೆ ಕಾಗದದ ಮೇಲೆ ಬರೆದು ಯಾ ಬರೆಯಿಸಿ ಅದನ್ನು ಅಸಲು ಪ್ರತಿಗೆ ಜೋಡಿಸಬೇಕು. ಕೋರ್ಟಿನವರು ತಮಗೆ ಅವಶ್ಯಕಂಡರೆ ಸಮನು ಬಜಾಯಿಸುವ ಅಮಲದಾರನ ತಪಾಸಣೆಯು ಮಾಡಿ ಅಥವಾ ತಪಾಸಣೆ ಮಾಡಿದೆ ಸಮನು ಯೋಗ್ಯವಾಗಿ ಬಜಾಯಿಸಲ್ಪಟ್ಟಿದೆ ಯಾ ಇಲ್ಲ ಎಂಬ ಬಗ್ಗೆ ನಿರ್ಣಯಿಸುವರು.

**ಪ್ರತಿವಾದಿಯು ಸಮನು ತೆಗೆದುಕೊಳ್ಳಲಿಕ್ಕೆ ಇನಕಾರಿಸಿದಲ್ಲಿ ಅಥವಾ ದೊರೆಯದಿದ್ದಲ್ಲಿ ಕೆಲಸದ ಕ್ರಮ—**

(ಅ) ಪ್ರತಿವಾದಿಯಾಗಲೀ ಅವನ ಮುಖತ್ಯಾರನಾಗಲೀ ಸದರೀ ಹೇಳಿದ ಪ್ರಕಾರದ ಬೇರೆ ಮನುಷ್ಯನಾಗಲೀ ಪಾವತಿಯ ಷರೆಯ ಕೆಳಗೆ ಸಹಿ ಮಾಡಲಿಕ್ಕೆ ನಾಕಾರಿಸಿದಲ್ಲಿ; ಅಥವಾ

(ಬ) ಸಮನು ಬಜಾಯಿಸುವ ಅಮುಲದಾರನಿಗೆ ಎಲ್ಲ ಯೋಗ್ಯ ಮತ್ತು ವಾಜವೀ ದಕ್ಷತೆಯಿಂದಲು ಪ್ರತಿವಾದಿಯು ದೊರೆಯದಿದ್ದಲ್ಲಿ ಮತ್ತು ಅವನ ಸಲುವಾಗಿ ಸಮನು ತೆಗೆದುಕೊಳ್ಳಲಿಕ್ಕೆ ಅಧಿಕೃತನಾದ ಗುಮಾಸ್ತನನ್ನು ಅವನು ನೇಮಿಸಿರದಿದ್ದಲ್ಲಿ ಅಥವಾ ಅವನು ಬಜಾಯಿಸಿಕೊಳ್ಳುವಂಥ ಬೇರೆ ಯಾವ ಮನುಷ್ಯನು ಇರದಿದ್ದಲ್ಲಿ ಪ್ರತಿವಾದಿಯು ವಾಡಿಕೆಯಾಗಿ ಇರುವಂಥ ಅಥವಾ ಉದ್ಯೋಗ ನಡೆಯಿಸುವಂಥ ಅಥವಾ ನಫೆಯ ಸಲುವಾಗಿ ಸ್ವತಃ ಕೆಲಸ ಮಾಡುವಂಥ ಮನೆಯ ಹೊರಬಾಗಲಿಗೆ ಯಾ ಬೇರೆ ಯಾವದೊಂದು ಪ್ರಸಿದ್ಧವಾದ ಭಾಗಕ್ಕೆ ಆ ಬಜಾಯಿಸುವ ಅಮುಲದಾರನು ಆ ಸಮನಿನ **ನಕಲನ್ನು ಹಚ್ಚಿ** ಆ ನಕಲು ಹಾಗೆ ಹಚ್ಚಿದ್ದನ್ನು ಹಾಗೆ ಹಚ್ಚಲಿಕ್ಕೆ ಕಾರಣವಾದ ಸಂಗತಿಗಳನ್ನು ಮತ್ತು, ಆ ಮನೆಯ ಗುರುತು ಹೇಳಿದಂಥ ಮತ್ತು ಆ ನಕಲು ಹಚ್ಚಿದ್ದಾಗ್ಗೆ ನೋಡಿದಂಥ ಯಾವನಾದರು ಮನುಷ್ಯನಿದ್ದರೆ ಅವನ ಹೆಸರು ಮತ್ತು ಪತ್ತೆಯನ್ನು ಅಸಲುಪ್ರತಿಯು ಕೆಳಗೆ ಬರೆದು ಅಥವಾ ಬೇರೆ ರಿಪೋರ್ಟಿನಲ್ಲಿ ಬರೆದು ಅದನ್ನು ಅಸಲು ಪ್ರತಿಗೆ ಜೋಡಿಸಿ ಆ ಸಮನು ತೆಗೆದ ಕೋರ್ಟಿಗೆ ಅದನ್ನು ಹಿಂದಕ್ಕೆ ಕೊಡಬೇಕು. ಸ್ವಲ್ಪದರಲ್ಲಿ ಹೇಳುವದೇನಂದರೆ:—

ಪ್ರತಿವಾದಿಯು ಸಮನು ತೆಗೆದುಕೊಳ್ಳಲಿಕ್ಕೆ ನಾಕಾರಿಸಿದ ಪಕ್ಷಕ್ಕೆ ಅಥವಾ ಯೋಗ್ಯ ಮತ್ತು ವಾಜವೀದಕ್ಷತೆಯಿಂದಲು ಪ್ರತಿವಾದಿಯು ದೊರೆಯದಿದ್ದ ಪಕ್ಷಕ್ಕೆ ಕೆಳಗಿನಂತೆ ಸಮನು ಬಜಾಯಿಸಬೇಕು. ಪ್ರತಿವಾದಿಯು ವಾಸಮಾಡುವಂಥ ಅಥವಾ ಉದ್ಯೋಗ ನಡೆಯಿಸುವಂಥ ಮನೆಯ ಹೊರಬಾಗಲಿಗೆ ಯಾ ಬೇರೆ ಯಾವದೊಂದು ಪ್ರಸಿದ್ಧವಾದ ಭಾಗಕ್ಕೆ ಆ ಸಮನಿನ ನಕಲು ಹಚ್ಚಬೇಕು. ಮತ್ತು ಆ ಬಗ್ಗೆ ರಿಪೋರ್ಟು ಮಾಡಬೇಕು. ಸದರಿ ರಿಪೋರ್ಟಿನಲ್ಲಿ ಕೆಳಗಿನ ಸಂಗತಿಗಳನ್ನು ಕಾಣಿಸತಕ್ಕದ್ದು.

(ಅ) ಸಮನಿನ ನಕಲು ಪ್ರತಿವಾದಿಯ ಹೊರಬಾಗಲಿಗೆ ಯಾ ಎರಡನೆ ಭಾಗಕ್ಕೆ ಹಚ್ಚಿದ್ದನ್ನು ಮತ್ತು

(ಬ) ಹಾಗೆ ಹಚ್ಚಲಿಕ್ಕೆ ಕಾರಣವಾದ ಸಂಗತಿಗಳನ್ನು ಮತ್ತು

(ಕ) ಆ ಮನೆಯ ಗುರುತು ಹೇಳಿದಂಥ ಯಾವನಾದರು ಮನಷ್ಯನಿದ್ದರೆ ಅವನ ಹೆಸರು ಮತ್ತು ಪುತ್ತು ಪತ್ತೆಯನ್ನು

(ಡ) ಆ ನಕಲು ಹಚ್ಚಿದ್ದಾಗ್ಗೆ ನೋಡಿದಂಥ ಯಾವನಾದರೂ ಮನುಷ್ಯನಿದ್ದರೆ ಅವನ ಹೆಸರು ಮತ್ತು ಪತ್ತೆಯನ್ನು

ಈ ಪ್ರಕಾರ ಸಂಗತಿಗಳನ್ನು ಸಮನಿನ ಅಸಲಪ್ರತಿಯ ಮೇಲೆ ಬರೆದು ಸರಿ ರಿಪೋರ್ಟು ಕೋರ್ಟನಲ್ಲಿ ಬೇಲೀಫನು ಹಾಜರು ಮಾಡಬೇಕು. (ಆ ೫, ರೂ. ೧೭)

ತನ್ನ ಮೇಲೆ ಸಮನು ಲಾಗು ಆಗಬಾರದೆಂಬ ಉದ್ದೇಶದಿಂದ ಪ್ರತಿವಾದಿಯು ತನ್ನ ಮೋರೆಯನ್ನು ತಪ್ಪಿಸುತ್ತಿದ್ದಲ್ಲಿ ಅಥವಾ ಬೇರೆ ಯಾವದೊಂದು ಕಾರಣದಿಂದ ಪ್ರತಿವಾದಿಯ ಮೇಲೆ ಸಮನು ಬಜಾಯಿಸುವ ಅಶಕ್ಯವಿದ್ದಲ್ಲಿ ಏನು ಮಾಡಬೇಕು ?

(ಅ) ಸಮನು ಬಜಾಯಿಸಿಕೊಳ್ಳಬಾರದೆಂಬುದಾಗಿ ಪ್ರತಿವಾದಿಯು ಮೋರೆ ತಪ್ಪಿಸುತ್ತಾನೆಂದು ನಂಬಲಿಕ್ಕೆ ಕಾರಣ ಉಂಟೆಂದು ಯಾ

(ಬ) ಬೇರೆ ಯಾವದೊಂದು ಕಾರಣದಿಂದ ವಾಡಿಕೆಯ ಕ್ರಮದಂತೆ ಸಮನು ಬಜಾಯಿಸಲಿಕ್ಕೆ ಬರುವದಿಲ್ಲವೆಂದು ಆ ಕೋರ್ಟನವರು ಮನಗಂಡಲ್ಲಿ ಸಮನು ಬಜಾಯಿಸುವದರ ಬಗ್ಗೆ ಅವರು ಕೆಳಗೆ ಬರೆದ ಕ್ರಮವು ಸ್ವೀಕರಿಸಬೇಕು. ಆ ಕ್ರಮವು:—

(೧) ಕೋರ್ಟಿನೊಳಗೆ ಬಹಿರಂಗವಾದ ಯಾವದೊಂದು ಸ್ಥಳದಲ್ಲಿಯೂ

(೨) ಸಮನು ಹೊರಡುವ ಪೂರ್ವದಲ್ಲಿ ಪ್ರತಿವಾದಿಯು ಇಂಥ ಮನೆಯಲ್ಲಿ ವಾಸಿಸಿರುತ್ತಾನೆಂದು ಅಥವಾ ಉದ್ಯೋಗ ನಡೆಯಿಸುತ್ತಿದ್ದನೆಂದು ಅಥವಾ ನಫೆಯ ಸಲುವಾಗಿ ಸ್ವತಃ ಕೆಲಸ ಮಾಡುತ್ತಿದ್ದನೆಂದು ತಿಳಿದಿದ್ದರೆ ಆ ಮನೆಯ

ಯಾವದೊಂದು ಬಹಿರಂಗವಾದ ಭಾಗದಲ್ಲಿಯೂ ಆ ಸಮುಸಿನ ನಕಲು ಹಚ್ಚು ವದರಿಂದ ಅಥವಾ

(೩) ಕೋರ್ಟಿಗೆ ಯೋಗ್ಯವಾಗಿ ತೋರಿದಂಥ ಬೇರೆ ಯಾವದೊಂದು ರೀತಿಯಿಂದ ಸಮನು ಬಜಾಯಿಸಬೇಕು. (ಆ. ೫, ರೂ. ೨೦)

ಕೋರ್ಟಿನವರ ಹುಕುಮಿನಿಂದ ಬೇರೆ ರೀತಿಯಾಗಿ ಅಂದರೆ ಮೇಲಿನ ಪ್ರಕಾರ ಮಾಡಲ್ಪಟ್ಟ ಬಜಾವಣೆಯ ಪರಿಣಾಮವು ಸ್ವತಃ ಪ್ರತಿವಾದಿಯ ಮೇಲೆ ಸಮನು ಬಜಾಯಿಸಿದಂತೆ ಆಗುವದು. ಮೇಲೆ ಹೇಳಿದ ಎರಡೇ ಪ್ರಸಕ್ತಿಗಳಲ್ಲಿ ಮಾತ್ರ ಬೇರೆ ರೀತಿಯಾಗಿ ಅಂದರೆ ಮೇಲಿನಂತೆ ಸಮನು ಬಜಾಯಿಸಲಿಕ್ಕೆ ಕೋರ್ಟಿನವರು ಹುಕುಮು ಮಾಡುವರು.

ಪ್ರತಿವಾದಿಯು ಮತ್ತೊಂದು ಅಂದರೆ ಬೇರೆ ಕೋರ್ಟಿನ ಹದ್ದಿನೊಳಗೆ ವಾಸಿಸುತಿದ್ದಲ್ಲಿ, ಆ ಪ್ರತಿವಾದಿಯ ವಾಸಸ್ಥಳದಲ್ಲಿ ಅಧಿಕಾರ ನಡೆಯಿಸುವಂಥ ಕೋರ್ಟಿಗೆ ಅವನ ಮೇಲೆ ಸಮನು ಬಜಾಯಿಸಲಿಕ್ಕೆ ಸಮನನ್ನು ಹೊರಡಿಸಿದ ಕೋರ್ಟಿನವರು ಕಳುಹಿಸಬೇಕು. ಪ್ರತಿವಾದಿಯು ತುರಂಗದಲ್ಲಿ ಆತಂಕಿಸಲ್ಪಟ್ಟಿದ್ದರೆ, ಆ ತುರಂಗವು ಸ್ವಾಧೀನದಲ್ಲಿರುವ ಅಮಲದಾರನ ಕೈಯಲ್ಲಿ ಪ್ರತಿವಾದಿಯ ಬಾಬತ್ತು ಸಮನು ಕೊಟ್ಟು ಅಥವಾ ಟಪಾಲಿನಿಂದಾಗಲಿ ಅಥವಾ ಇತರ ರೀತಿಯಿಂದಾಗಲಿ ಅದನ್ನು ಅವನ ಕಡೆ ಕಳುಹಿಸಿ ಪ್ರತಿವಾದಿಯ ಮೇಲೆ ಸಮನು ಬಜಾಯಿಸಬೇಕು. ಪ್ರತಿವಾದಿಯು ಸರಕಾರಿ ಅಮಲದಾರನಾಗಿದ್ದರೆ ಯಾ ಸರಕಾರಿ ನೌಕರನಾಗಿದ್ದರೆ ಯಾ ರೇಲ್ವೆಕಂಪನಿಯ ನೌಕರನಾಗಿದ್ದರೆ, ಅವನ ಬಾಬತ್ತು ಸಮನು ಅವನು ಕೆಲಸದಲ್ಲಿರುವ ಆಫೀಸಿನ ಮುಖ್ಯಾಧಿಕಾರಿಯ ಕಡೆಗೆ ಸಮನು ಕಳುಹಿಸಿ ಅವನ ಮಾರಿಫತ್ತು ಪ್ರತಿವಾದಿಯ ಮೇಲೆ ಅದನ್ನು ಬಜಾಯಿಸಬಹುದು.

---

# ೭ ನೆಯ ಪ್ರಕರಣ

## ಕೈಫಿಯತ್ತಿನ ಸಂಬಂಧಿ ಮಹತ್ವದ ನಿಯಮಗಳು

ಪ್ರತಿವಾದಿಯು ಮೇಲೆ ಸಮನು ಬಜಾಯಿಸಲ್ಪಟ್ಟಸಂತರ ಕೋರ್ಟಿನಿಂದ ಅವನಿಗೆ ಹಾಜರು ಆಗಲಿಕ್ಕೆ ನೇಮಿಸಿದ ದಿನಸ ಅವನು

(ಅ) ಸ್ವತಃ ತಾನೇ ಅಥವಾ

(ಬ) ದಾವೆಯ ಹಕೀಕತನ್ನು ಚನ್ನಾಗಿ ತಿಳಿದುಕೊಂಡವನಾಗಿ ಅದರೊಳಗಿನ ಗೌರವದ ಪ್ರಶ್ನೆಗಳಿಗೆಲ್ಲ ಉತ್ತರಗಳನ್ನು ಕೊಡಬಲ್ಲವನಾದಂಥ ವಕೀಲನ ಮುಖಾಂತರವಾಗಿ ಅಥವಾ

(ಕ) ಅಂಥ ಯಾವತ್ತು ಪ್ರಶ್ನೆಗಳಿಗೆ ಉತ್ತರ ಕೊಡಬಲ್ಲವನಾದ ಬೇರೊಟ್ಟ ಮನುಷ್ಯನಿಂದ ಸಹಿತನಾವಂಥ ಒಬ್ಬ ವಕೀಲನ ಮುಖಾಂತರವಾಗಿ ಹಾಜರು ಆಗರಬಹುದು. ಅವನು ದಾವೆಯ ಮೊದಲನೆ ಸುನಾವಣಿಯ ಕಾಲದಲ್ಲಿಯಾ ಅದರ ಪೂರ್ವದಲ್ಲಿ ತನ್ನ ಜಬಾಬಿನ ಲೇಖೀ ಕೈಫೀಯತನ್ನು ಹಾಜರು ಮಾಡಜಹುದು. ಕೋರ್ಟಿನವರು ಅವನಿಗೆ ಕೈಫೀಯತನ್ನು ಹಾಜರು ಮಾಡಲಿಕ್ಕೆ ಅವಧಿ ಕೊಟ್ಟರೆ ಆ ಅವಧಿಯೊಳಗಾಗಿ ಅವನ್ನು ಅಸನು ಹಾಜರು ಮಾಡಬಹುದು. ಕಾಯದೆಯಿಂದ ಪ್ರತಿವಾದಿಯು ಲೇಖೀ ಕೈಫೀಯತ್ತನ್ನು ಕೊಡುವದು ಅಥವಾ ಕೊಡದೇ ಇರುವದು ಅವನ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ತನ್ನ ಮನಸಿಗೆ ಬಂದರೆ ಅವನು ಲೇಖೀ ಕೈಫೀಯತನ್ನು ಕೊಡಬಹುದು. ಇಲ್ಲದಿದ್ದರೆ ತಾನು ಸ್ವತಃ ಕೋರ್ಟಿನಲ್ಲಿ ಹಾಜರಾಗಿ ಕೋರ್ಟಿನ ಯದುರಿಗೆ ತೋಂಡಿ ಜಬಾಬ ಕೊಡಬಹುದು. ಕೆಲವು ಪ್ರಸಕ್ತಿಗಳಲ್ಲಿ ಕೋರ್ಟಿನವರು ಪ್ರತಿವಾದಿಗೆ ಲೇಖೀ ಕೈಫೀಯತನ್ನು ಹಾಜರು ಮಾಡಲಿಕ್ಕೆ ಫರ್ಮಾಯಿಸಬಹುದು. ಆ ಪ್ರಸಕ್ತಿಗಳಲ್ಲಿ ಪ್ರತಿವಾದಿಯು ಲೇಖೀ ಕೈಫೀಯತನ್ನು ಹಾಜರು ಮಾಡಲಿಕ್ಕೇಬೇಕು. ಆ ವೇಳೆಗೆ ಅವನಿಗೆ ಲೇಖೀಕೈಫೀಯಸನ್ನು ಹಾಜರು ಮಾಡುವದು ತಪ್ಪಸಲಿಕ್ಕೆ ಬರಲಾಗದು. ಪ್ರತಿವಾದಿಗೆ ಲೇಖೀ ಕೈಫೀಯತನ್ನು ಹಾಜರು ಮಾಡಲಿಕ್ಕೆ ಕೋರ್ಟಿನವರು. ಫರ್ಮಾಯಿಸಿದರೂ ಅವನು ಯೋಗ್ಯ ವೇಳೆಯಲ್ಲಿ

ಹಾಜರು ಮಾಡದಿದ್ದರೆ ಏನಾಗುವದು ? ಪ್ರತಿವಾದಿಯ ಕಡಿಂದ ಹೀಗೆ ಲೇಖೀ ಕೈಫೀಯತನ್ನು ಬೇಡಲ್ಪಟ್ಟು ಆವನು ಕೋರ್ಟು ಗೊತ್ತು ಪಡಿಸಿದ ವೇಳೆಯೊಳಗಾಗಿ ಅದನ್ನು ಹಾಜರು ಪಡಿಸುದಕ್ಕೆ ತಪ್ಪಿದಲ್ಲಿ ಕೋರ್ಟಿನವರು ಅವನಿಗೆ ವಿರುದ್ಧವಾಗಿ ಫೈಸಲು ಮಾಡಬಹುದು ಅಥವಾ ಆ ದಾವೆಯ ಸಂಬಂಧದಲ್ಲಿ ತಮಗೆ ಯೋಗ್ಯ ತೋರುವಂಥ ಹುಕುಮನ್ನು ಮಾಡಬಹುದು.

ಪ್ರತಿವಾದಿಗೆ ಲೇಖೀ ಕೈಫೀಯತನ್ನು ಹಾಜರು ಮಾಡುವದಾಗಿದ್ದರೆ ಅವನು ಈ ಮೊದಲು ಹೇಳಿದ ಮತ್ತು ಇನ್ನು ಮುಂದೆ ಹೇಳ ಬಹುದಾದ ನಿಯಮಗಳಿಗೆ ಒಳಪಟ್ಟು ತಯಾರಿಸಿ ಕೋರ್ಟಿನಲ್ಲಿ ಹಾಜರು ಮಾಡಬೇಕು. ಸಾಮಾನ್ಯತಃ ಅಸಲರ್ಜಿಗೆ ಲಾಗು ಇದ್ದ ನಿಯಮಗಳು ಕೈಫೀಯತ್ತಿಗೆ ಸಹ ಲಾಗು ಇರುತ್ತವೆ. ಕಾರಣಾ ಕೈಫಿಯತ್ತು ಬರೆಯುವ ಮುಂದೆ ಸದರಿ ಎಲ್ಲ ನಿಯಮಗಳು ಒಳ್ಳೇಧ್ಯಾಸದಲ್ಲಿ ತಂದು ಅವುಗಳಿಗೆ ಅನುಸರಿಸಿ ಕೈಫೀಯತನ್ನು ತಯಾರಿಸಬೇಕು. ಒಬ್ಬರಗಿಂತ ಹೆಚ್ಚು ಜನ ಪ್ರತಿವಾದೇರು ಇದ್ದಲ್ಲಿ ಮತ್ತು ಅವರವರ ಉತ್ತರ ಪಕ್ಷಗಳನ್ನು ಬೇರೆ ಬೇರೆ ತರಹದಿದ್ದಲ್ಲಿ ಸದರಿ ಪ್ರತಿಯೊಬ್ಬರು ಬೇರೆ ಬೇರೆ ಕೈಫೀಯತನ್ನು ಕೊಡಬೇಕು. ಅಂದರೆ ಬಹುಜನ ಪ್ರತಿವಾದೇರ ಉತ್ತರ ಪಕ್ಷವನ್ನು ಒಂದೆ ತರಹದಿದ್ದಲ್ಲಿ ಸದರಿ ಅವರು ಒಂದೇ ಕೈಫಿಯತನ್ನು ಕೊಡಬಹುದು. **ಉ:– ಅ,** ಎಂಬವನ ಹೆಸರಲೆ **ಬ** ಮತ್ತು **ಕ** ಎಂಬುವವರು ಸಾಲದ ಕತಿಬೆಯನ್ನು ಬರೆದು ಕೊಟ್ಟು ಆ ಸಾಲವನ್ನು ಫೇಡುಮಾಡುವದಿಲ್ಲ. ಸದರಿ ಸಾಲದ ಕತಿಬೆಯ ಆಧಾರದಿಂದ **ಅ** ಇತನು **ಬ** ಮತ್ತು **ಕ** ಇವರ ಮೇಲೆ ದಾವೆಯನ್ನು ಮಾಡುತ್ತಾನೆ. ಈ ದಾವೆಯಲ್ಲಿ ಸದರಿ ಫೇಡು ಮಾಡಿದ ಬಗ್ಗೆ **ಬ** ಮತ್ತು **ಕ** ಇವರ ಉತ್ತರ ಪಕ್ಷವಿದ್ದರೆ ಸದರಿ ಅವರು ಕೂಡಿ ಒಂದೇ ಕೈಫೀಯತು ಕೊಡಬಹುದು.

ಆದರೆ ಸದರಿ ಉಭಯತರ ಪೈಕಿ **ಬ** ಈತನು ಸದರಿ ಸಾಲದ ಕತಿಬಿಗೆ ಭರಪಾಯಿ ಹಾಕಿದ್ದರಿಂದ ಅವನ ವಿರುದ್ಧ ಅಷ್ಟೇ ದಾವೆಯನ್ನು ಮುದ್ಧತಿಯಲ್ಲಿದ್ದರೆ ಮತ್ತು **ಕ** ಇತನು ಭರಪಾಯಿ ಹಾಕದಿದ್ದದರಿಂದ ಅವನ ವಿರುದ್ಧ ದಾವೆಯು ಮುದ್ದತು ಮೀರಿದ್ದರೆ ಸದರಿ **ಬ** ಮತ್ತು **ಕ** ಇವರ ಉತ್ತರ ಪಕ್ಷಗಳನ್ನು ಬೇರೆ ಬೇರೆ ಇರುವವು. ಕಾರಣಾ ಈ ಪ್ರಸಕ್ತಿಯಲ್ಲಿ **ಬ** ಮತ್ತು **ಕ** ಇವರು ಬೇರೆ ಬೇರೆ ಕೈಫೀಯತಗಳನ್ನು ಕೊಡಬೇಕು.

ಕೈಫೀಯತನ್ನು ಬರೆಯಬೇಕಾದರೆ ಮೊದಲು ಯಾವ ದಾವೆಯಲ್ಲಿ ಕೈಫಿಯ ತನ್ನು ಹಾಜರು ಮಾಡತಕ್ಕದ್ದು. (೧) ಆ ದಾವೆಯ ನಂಬರು ಮತ್ತು (೨) ದಾವೆಯು ಮಾಡಲ್ಪಟ್ಟ ಕೋರ್ಟಿನ ಹೆಸರು ಮತ್ತು (೩) ವಾದಿಯ ಹೆಸರು ಮತ್ತು (ಪ್ರತಿವಾದಿಯ ಹೆಸರು ಬರೆಯಬೇಕು. ದಾವೆಯಲ್ಲಿ ಬಹುಜನ ವಾದೇರು ಮತ್ತು ಬಹುಜನ ಪ್ರತಿವಾದೇರು ಇದ್ದಲ್ಲಿ ಸದರಿ ಅವರ ಪೈಕಿ ಒಂದನೇವಾದಿಯ ಯಾ ಒಂದನೇ ಪ್ರತಿವಾದಿಯ, (ಹೇಗೆ ಇರುವದೊ ಹಾಗೆ) ಹೆಸರು ಬರೆದು ಮುಂದೆ " ವಗೈರೇರು " ಅಂತಾ ಬರೆಯಬೇಕು. **ಉ:**–

(೧) **ಅ, ಬ,**...............ವಗೈರೇರು.................ವಾದೇರು

ವಿರುದ್ಧ

(೧) **ಕ, ಡ,**...............ವಗೈರೇರು.............ಪ್ರತಿವಾದೇರು.

ಒಬ್ಬನಿಗಿಂತ ಹೆಚ್ಚು ಜನರು ಪ್ರತಿವಾದೇರಿದ್ದರೆ ಅವರ ಪೈಕಿ ಯಾರ ವತಿಯಿಂದ ಕೈಫೀಯತನ್ನು ಹಾಜರು ಮಾಡಿರುತ್ತದೆಂಬುದನ್ನು ಸ್ಪಷ್ಟವಾಗಿ ಬರೆಯಬೇಕು. ಈ ಪ್ರಸಕ್ತಿಯಲ್ಲಿ ವಾದಿ ಮತ್ತು ಪ್ರತಿವಾದೆರ ಹೇಸರುಗಳನ್ನು ಮೇಲಿನಂತೆ ಬರೆದ ಮೇಲೆ ಮತ್ತು ಕೈಫೀಯತ್ತಿನ ಮಜಕೂರು ಬರೆಯುವ ಮೊದಲು ಕೆಳಗಿನಂತೆ ಷರಾ ಬರೆಯಬೇಕು.

" ಇದರಲ್ಲಿ ೩ನೇ ಪ್ರತಿವಾದಿಯ ಕೈಫೀಯತ್ತೇನಂದರೆ " ಅಥವಾ

" ಪ್ರತಿವಾದಿ ಲಕ್ಷ್ಮಪ್ಪಾ ಮಹಾದೇವಪ್ಪಾ ಈತನ ಕೈಫಿಯತು ಕೆಳಗಿ ನಂತೆ ಇದೆ "

ಅಥವಾ

" ಇದರಲ್ಲಿ ೩ನೇ ಪ್ರತಿವಾದಿ ಲಕ್ಷ್ಮಪ್ಪಾ ಮಹಾದೇವಪ್ಪಾ ಈತನ ಕೈಫೀ ಯತ್ತೇನೆಂದರೆ "

ಈ ಪ್ರಕಾರ ಷರಾ ಬರೆದು ಕೈಫೀಯತ್ತಿನ ಮಜಕೂರು ಬರೆಯಲಿಕ್ಕೆ ಪ್ರಾರಂಭ ಮಾಡಬೇಕು. ಅಸಲರ್ಜಿಯಂತೆ ಕೈಫಿಯತ್ತಿನಲ್ಲಿ ಸಹ ಬರೆಯುವ ಮಜ ಕೂರು ಅಗತ್ಯವಿದ್ದಾಗ ಅದನ್ನು ಪ್ಯಾರಾಗ್ರಾಫುಗಳಾಗಿ ವಿಭಾಗಿಸಿ ಅವಕ್ಕೆ ಅನು ಕ್ರಮ ನಂಬರಗಳನ್ನು ಕೊಡಬೇಕು. ತಾರೀಖುಗಳನ್ನು, ರಕಮುಗಳನ್ನು ಮತ್ತು ನಂಬರಗಳನ್ನು ಅಂಕೆಗಳಿಂದ ಕೊಡಬೇಕು. ಅಸಲರ್ಜಿಯ ಮೇಲೆ ಪಕ್ಷಕಾರನು

ಸಹಿಮಾಡುವ ಬಗ್ಗೆ ಮತ್ತು ಇಕರಾರು ಮಾಡುವ ಬಗ್ಗೆ ಯಾ ಪ್ರತಿಜ್ಞಾ ಲೇಖ ವನ್ನು ಮಾಡುವ ಬಗ್ಗೆ ನಿಯಮಗಳು ಈ ಮೊದಲು ಹೇಳಿರುತ್ತೇವೆ. ಆ ಎಲ್ಲ ನಿಯಮಗಳು ಕೈಫೀಯತ್ತಿನ ಮೇಲೆ ಪಕ್ಷಕಾರನು ಸಹಿ ಮಾಡುವಬಗ್ಗೆ ಮತ್ತು ಇಕರಾರು ಯಾ ಪ್ರತಿಜ್ಞಾಲೇಖವನ್ನು ಮಾಡುವಬಗ್ಗೆ ಸಹ ಲಾಗೂ ಇರುತ್ತವೆ.

ಕೈಫೀಯತಿನಲ್ಲಿ ನ್ಯಾಯಾಶ್ರಯವನ್ನು ಬೇಡಬಾರದು. ಅಸಲರ್ಜಿಯೊಳ ಗಿನ ಸಂಗತಿಗಳಿಗೆ ಉತ್ತರ ಪಕ್ಷವನ್ನು ಕೈಫೀಯತಿನಲ್ಲಿ ಮಾಡಿದರೆ ಸಾಕಾಗು ವದು. "ವಾದಿಯ ದಾವೆ ರದ್ದಪಡಿಸಿ ಪ್ರತಿವಾದಿಯ ಖರ್ಚು ಕೋಡಿಸಬೇಕು" ಅಥವಾ "ಮೇಲ್ಕಂಡ ಸಂಗತಿಗಳನ್ನು ಲಕ್ಷದಲ್ಲಿ ತಂದು ವಾದಿ ದಾವೆ ಖರ್ಚು ಸಹಿತಾ ರದ್ದು ಪಡಿಸಬೇಕು. ಮತ್ತು ಪ್ರತಿವಾದಿಯ ಖರ್ಚು ಕೊಡಿಸಬೇಕು" ಅಂತಾ ಬರೆಯಬಾರದು. ಕೈಫೀಯತ್ತು ಹಾಜರು ಮಾಡಲಿಕ್ಕೆ ಕೋರ್ಟಫೀ ಸ್ಟಾಂಪು ಕೊಡಲಿಕ್ಕೆ ಕಾರಣವಿಲ್ಲ.

ಪ್ರತಿಯೊಂದು ಕೈಫೀಯತಿನಲ್ಲಿ ಪ್ರತಿವಾದಿಯು ತನ್ನ ಉತ್ತರಪಕ್ಷದ ಬಗ್ಗೆ ಯಾವ ಮಹತ್ವದ ಸಂಗತಿಗಳ ಮೇಲೆ ಆಧರಿಸುತ್ತಾನೋ ಅವುಗಳನ್ನು ಮಾತ್ರ ಸಂಕ್ಷಿಪ್ತವಾಗಿ ಬರೆಯಬೇಕು; ಆದರೆ ಅವನು ಯಾತರ ಮೇಲಿಂದ ಸಾಬೀತು ಮಾಡಬೇಕಾಗಿರುವದೋ ಆ ಪುರಾವೆಯನ್ನು ಕೊಡಬಾರದು. ಅಂದಮೇಲೆ ಕಾಯದೆಯ ಮತ್ತು ಪುರಾವೆಯ ಸಂಗತಿಗಳನ್ನು ಬರೆಯಬಾರದು. ಬರೇ ವಸ್ತು ಸ್ಥಿತಿಯನ್ನು ಹೇಳಬೇಕು. ಹೊರ್ತಾಗಿ ಕಾಯದೆಯು ಯಾ ಪುರಾವೆಯು ಹೇಳು ಬಾರದು. ಈ ಬಗ್ಗೆ ಈ ಮೊದಲು ವಿವೇಚನ ಮಾಡಿರುತ್ತದೆ. ಕಾರಣಾ ಅದರ ಪುನರಾವೃತ್ತಿಯನ್ನು ಮಾಡುವದು ಕಾರಣವಿಲ್ಲ. ಸದರಿ ವಿವೇಚನವನ್ನು ಚೆನ್ನಾಗಿ ಓದಿಕೊಳ್ಳಬೇಕು. ಮತ್ತು ಲಕ್ಷ್ಯದಲ್ಲಿ ಇಡಬೇಕು ಮತ್ತು ಅವುಗಳಿಗೆ ಅನುಸರಿಸಿ ಕೈಫೀಯತನ್ನು ತಯಾರಿಸಬೇಕು. ಕೈಫೀಯತಿನಲ್ಲಿ ಕಾಯದೆಯ ತಕರಾರನ್ನು ಯಾ ಉತ್ತರಪಕ್ಷವನ್ನು ಮಾಡಬಾರದು. ಅಂತಾ ಇದರ ಅರ್ಥವಾಗುವದಿಲ್ಲ. **ಉ:**– "ಮೃತನಿಗೆ ವಾದಿಯು ಸಮೀಪದ ವಾರಸದಾರನಾಗುವದಿಲ್ಲ. ಆದರೆ ಪ್ರತಿವಾದಿಯು ಮಾತ್ರ ಸದು ಮೃತನ ಸರಳ ಮತ್ತು ಸಮೀಪದ ವಾರಸ ದಾರನು ಇರುತ್ತಾದೆ." ಇದರಲ್ಲಿ ಕಾಯದೆಯ ಸಿದ್ಧಾಂತ ಹೇಳಿದಂತೆ ಆಗುವದು. ಕೋರ್ಟನವರ ಎದುರಿಗೆ ಬಂದ ಸಂಗತಿಗಳ ಮೇಲಿಂದ ಅವರು ವಾದಿಯು ಯಾ

ಪ್ರತಿವಾದಿಯು ಯಾ ಮತ್ತೊಬ್ಬನು ವಾರಸದಾರ ಇರುತ್ತಾನೆಂದು ನಿರ್ಣಯ ಕೊಡುವರು. ಕಾರಣ ಪ್ರತಿವಾದಿಯು ತನ್ನ ಕೈಫಿಯತಿನಲ್ಲಿ ತಾನು ಮೈತನ ವಾರಸದಾರನಿದ್ದೇನೆ. ಅಂತಾ ಹೇಳಿದೆ. ತಾನು ಯಾವ ಸಂಗತಿಗಳಮೇಲಿಂದ ಅಥವಾ ನಾತೇಯಿಂದ ಮೈತನ ವಾರಸದಾರನಿರುತ್ತೇನೆಂದು ವಾದಿಸುವನೋ ಆ ಸಂಗತಿಗಳನ್ನು ಯಾ ಆ ನಾತೇಯನ್ನು ಬರೆಯಬೇಕು. ಆ ಸಂಗತಿಗಳನ್ನು ಕೈಫಿಯತಿನ ಮುಖಾಂತರವಾಗಿ ಕೋರ್ಟಿನ ಎದುರಿಗೆ ತಂದಲ್ಲಿ ಅವುಗಳ ವಿಚಾರ ಮಾಡಿ ಕೋರ್ಟಿನವರು ಪ್ರತಿವಾದಿಯು ಮೈತನ ವಾರಸದಾರನಿದ್ದಾನೆ. ಯಾ ಇಲ್ಲಾ ಎಂಬುದನ್ನು ನಿರ್ಣಯ ಮಾಡುವರು.

## ಸಾಮಾನ್ಯ ಉತ್ತರ ಪಕ್ಷಗಳು

೧. **ನಾಕಬೂಲಿಯು** ( Denial )— (ಅ) ಪ್ರತಿವಾದಿಯು ( ಸಂಗತಿಗಳನ್ನು ಬರೆಯಬೇಕು. ) ನಾಕಬೂಲು ಮಾಡುತ್ತಾನೆ.

(ಬ) ಪ್ರತಿವಾದಿಯು ( ಸಂಗತಿಗಳನ್ನು ಬರೆಯಬೇಕು. ) ಕಬೂಲು ಮಾಡುವದಿಲ್ಲ.

(ಕ) ಪ್ರತಿವಾದಿಯು ( ಸಂಗತಿಗಳನ್ನು ಬರೆಯಬೇಕು. ) ಕಬೂಲು ಮಾಡುತ್ತಾನೆ ಆದರೆ (.........ಸಂಗತಿಗಳನ್ನು ಬರೆಯಬೇಕು. ) ಎಂದು ಹೇಳುತ್ತಾನೆ.

೨. **ನಿಷೇಧ** (Protest)— (ಅ) ಪ್ರತಿವಾದಿಯಾದ (......... ಹೆಸರು ಬರೆಯಬೇಕು. ) ಪೇಡಿಯಲ್ಲಿ ತಾನು ಒಬ್ಬ ಪಾಲುಗಾರನೆಂಬುವನ್ನು ಪ್ರತಿವಾದಿಯು ನಿರಾಕರಿಸುತ್ತಾನೆ.

(ಬ) ಯಾವ ಕರಾರು ಆಯಿತೆಂದು ಅಂಬೋಣವಿದೆಯೋ ಆ ಕರಾರು ಅಥವಾ ಯಾವದೇ ಕರಾರು ವಾದಿಯೊಡನೆ ಮಾಡಿದ್ದನ್ನು ಪ್ರತಿವಾದಿಯ ನಾಕಬೂಲು ಮಾಡುತ್ತಾನೆ.

(ಕ) ಪ್ರತಿವಾದಿಯು ಐವಜನ್ನು ಕಬೂಲು ಮಾಡುತ್ತಾನೆ. ಆದರೆ ವಾದಿಯು ಹಕ್ಕನ್ನು ಕಬೂಲು ಮಾಡುವದಿಲ್ಲ.

(ಡ) ಅಸಲಅರ್ಜಿಯಲ್ಲಿ ದಾಖಲು ಮಾಡಿದ ಮಾಲನ್ನು ಅಥವಾ ಅದರ ಪೈಕಿ ಯಾವದೋ ಮಾಲನ್ನು ವಾದಿಯು ಪ್ರತಿವಾದಿಗೆ ಮಾರಿದ್ದನ್ನು ಪ್ರತಿವಾದಿಯು ನಾಕಬೂಲಮಾಡುತ್ತಾನೆ.

**೩. ಮುದ್ದತು** (Limitation)— ಸನ್ನ ೧೯೦೮ನೇ ಇಸ್ವಿಯ ಹಿಂದುಸ್ಥಾನದ ಮುದ್ದತಿನ ವಿಷಯದ ಆಕ್ಟಿನ ಒಂದನೆ ಪರಿಶಿಷ್ಟದೊಳಗಿನ...... ...ನೇ ಆರ್ಟಿಕಲ್ಲಿನನ್ವಯ ಅಥವಾ......ನೇ ಆರ್ಟಿಕಲ್ಲಿನನ್ವಯ ದಾವೆಗೆ ಮುದ್ದತಿನ ಹರಕತ್ತು ಇದೆ.

**೪. ಅಧಿಕಾರವು** ( Gurisdiction ) — ( ಅ ) ಕೋರ್ಟಿಗೆ ದಾವೆಯ ಚೌಕಶಿ ಮಾಡುವ ಅಧಿಕಾರವಿಲ್ಲ. ಯಾಕಂದರೆ (ಕಾರಣಗಳನ್ನು ಬರೆಯಬೇಕು.)

(ಬ) ಸನ್ ...... ತಾರೀಖಿನ ದಿನ ಪ್ರತಿವಾದಿಯು ವಾದಿಗೆ ಒಂದು ವಜ್ರದ ಉಂಗರವನ್ನು ಕೊಟ್ಟನು. ಮತ್ತು ಅದನ್ನು ವಾದಿಯು ಸ್ವೀಕರಿಸಿದನು; ಇದರ ಮೂಲಕವಾಗಿ ಯಾವ ದಾವೆಯ ಕಾರಣವಿತ್ತೆಂದು ಅಂಬೋಣವಿದೆಯೋ ಅದು ಅಲ್ಲದಂತಾಯಿತು.

**೫. ನಾದಾರತನವು** ( Insolvency ) — (ಅ) ಪ್ರತಿವಾದಿಯು ನಾದಾರನೆಂದು ಠರಾಯಿಸಲ್ಪಟ್ಟಿದ್ದಾನೆ.

(ಬ) ದಾವೆಯು ಮಾಡಲ್ಪಡುವ ಮುಂಚೆ ವಾದಿಯು ನಾದಾರನೆಂದು ಠರಾಯಿಸಲ್ಪಟ್ಟಿದ್ದನು. ಮತ್ತು ದಾವೆ ಮಾಡುವ ಹಕ್ಕು ರಿಸೀವರನಲ್ಲಿ ನಿವಿಷ್ಟವಾಗಿತು.

**೬. ಅಲ್ಪಪ್ರಾಯವು** ( Minority )— ಯಾವ ಕರಾರು ಮಾಡಲ್ಪಟ್ಟಿತೆಂದು ಅಂಬೋಣವಿದೆಯೋ ಅವನ್ನು ಮಾಡುವ ವೇಳೆಯಲ್ಲಿ ಪ್ರತಿವಾದಿಯು ಅಪ್ರಾಯಸ್ಥನಾಗಿದ್ದನು.

**೭. ಕೋರ್ಟಿನಲ್ಲಿ ಹಣವನ್ನು ಭರಣಾ ಮಾಡುವದು** (Payment into Court)— ಇಡೀ ದಾವೆಯ ಸಂಬಂಧದಿಂದ (ಅಥವಾ ದಾವೆಯ ಅಂಶವಾಗಿರುವ ...... ರೂಪಾಯಿಯ ಸಂಬಂಧದಿಂದ; ಅಥವಾ ಹ್ಯಾಗಿರುವದೋ ಹಾಗೆ) ಪ್ರತಿವಾದಿಯು ಕೋರ್ಟಿನಲ್ಲಿ ... ... ರೂಪಾಯಿಯನ್ನು

ಭರಣಾ ಮಾಡಿದ್ದಾನೆ. ಮತ್ತು ಅವನು ಹೇಳುವದೇನಂದರೆ, ಈ ರಕಮು ವಾದಿಯ ದಾವೆಯ ರಕಮಿನ ( ಅಥವಾ ಮೇಲೆ ಹೇಳಿದ ಅಂಶವ ) ಭರಪಾಯಿಯಾಗಲಿಕ್ಕೆ ಸಾಕಾಗುವಂತಿದೆ.

**೮. ಕೊಟ್ಟ ಮಾತನ್ನು ನೆರವೇರಿಸುವದಕ್ಕೆ ಮಾಫಿಯು** ( Performance remitted )— ಯಾವ ಮಾತು ಕೊಲ್ಪಟ್ಟಿತೆಂದು ಅಂಬೋಣವಿದೆಯೋ ಅವನ್ನು ನೆರವೇರಿಸುವದು·········( ತಾರೀಖಿನ ) ದಿನ ಮಾಫು ಮಾಡಲ್ಪಟ್ಟಿತು.

**೯. ಕರಾರು ರದ್ದು ಮಾಡೋಣ** ( Rescission )— ವಾದಿ ಪ್ರತಿವಾದಿಯರೊಳಗೆ ಆದ ಕಬುಲಾಯತಿಯ ಮೇಲಿಂದ ಕರಾರು ರದ್ದಾಯಿತು.

**೧೦. ನಿರ್ಣೀತ ಪ್ರಸಕ್ತಿಗಳು** (Reojudicata) — (ದಾವೆಯು ಯಾವದೆಂಬುದನ್ನು ಬರೆಯಬೇಕು.) ದಾವೆಯೊಳಗಿನ ಹುಕುಮುನಾಮೆಯ ಮೂಲಕವಾಗಿ ವಾದಿಯ ದಾವೆಗೆ ಪ್ರತಿಬಂಧವಾಗುತ್ತದೆ.

**೧೧ ಪ್ರತಿಬಂಧವು** ( Estoppel )— ( ಯಾವ ಮಜಕೂರಿನ ಸಂಬಂಧದಿಂದ ಪ್ರತಿಬಂಧವು ಹೇಳಲ್ಪಡುತ್ತದೆಯೋ ಆ ಮಜಕೂರು ಬರೆಯಬೇಕು) ಇದರ ಸತ್ಯತೆಯನ್ನು ನಾಕಾರಿಸಲಿಕ್ಕೆ ವಾದಿಗೆ ಪ್ರತಿಬಂಧವಿದೆ; ಯಾಕಂದರೆ(ಯಾವ ಸಂಗತಿಗಳ ಆಧಾರದಿಂದ ಪ್ರತಿಬಂಧವಿದೆಯೆಂಬದನ್ನು ಬರೆಯಬೇಕು).

**೧೨. ದಾವೆಯು ಮಾಡಲ್ಪಟ್ಟ ಮೇಲೆ ಉಂಟಾದ ಉತ್ತರ ಪಕ್ಷದ ಮುದ್ದೆಯು** (Ground of defence subsequent to the institution of suit) — ದಾವೆಯು ಮಾಡಲ್ಪಟ್ಟ ಮೇಲೆ ಎಂದರೆ, ಸನ್·········ನೇ ತಾರೀಖಿನ ದಿನ (ಸಂಗತಿಗಳನ್ನು ಬರೆಯಬೇಕು).

ಈ ಸಂಗತಿಗಳ ಪೈಕಿ ಪ್ರತಿಯೊಂದು ಸಂಗತಿಯನ್ನು ವಿಶದವಾಗಿ ವಿವೇಚನ ಮಾಡೋಣ – ಪ್ರತಿವಾದಿಯು ತನ್ನ ಕೈಫಿಯತಿನಲ್ಲಿ ದಾವೆಯು ತೆಗೆದು ಕೊಳ್ಳಲ್ಪಡತಕ್ಕ ಎಲ್ಲ ಸಂಗತಿಗಳನ್ನು ಬರೆಯಬೇಕು. ಮತ್ತು ಹಾಗೆ ದಾವೆಯ ವ್ಯವಹಾರವು ಕಾಯದೆಯ ದೃಷ್ಟಿಯಿಂದ ಪೊಳ್ಳಾಗಿದೆ (void) ಅಥವಾ ಪೊಳ್ಳಾಗಬಹುದಾಗಿದೆಯೆಂದು (voidable) ತೋರಿಸತಕ್ಕಂಥ ಎಲ್ಲ ಸಂಗತಿಗಳನ್ನು

ಸಹಾ ಬರೆಯಬೇಕು. ಮತ್ತು ಯಾವ ಪ್ರತಿವಾದದ ಸಾಧನಗಳನ್ನು ಆಗಲೀ ಹೇಳದಿದ್ದಲ್ಲಿ ಪ್ರತಿಪಕ್ಷಕಾರನಿಗೆ ಅಡಚಣೆಯುಂಟಾಗಬಹುದೋ ಅಂಥ ಅಥವಾ ಅಸಲಜಿ೯ಯಿಂದ ಹೊರಡದಂಥ ವಸ್ತುಸ್ಥಿತಿಗೆ ಸಂಬಂಧಪಟ್ಟ ಮುದ್ದೆಗಳನ್ನು, ಉದಾಹರಣಾರ್ಥವಾಗಿ (೧) ಕಪಟ, (೨) ಮುದ್ದತು ಮೀರೋಣ (೩) ಬಿಡುಗಡೆ ಸಂದಾಯ (೪) ಕಡೆಗಾಣಿಸೋಣ ಅಥವಾ (೫) ಕಾಯಿದೆಯ ವಿರುದ್ಧತೆಯನ್ನು ತೋರಿಸುವ ಸಂಗತಿಗಳು, ಹೊರಡಿಸಬಹುದಾದಂಥ ಪ್ರತಿವಾದದ ಸಾಧನಗಳನ್ನು ಸಹಾ ಹೇಳಬೇಕು. (ಆ. ೮, ರೂ. ೨.)

## (೧) ನಾಕಬೂಲಿಯು

ಕೈಫಿಯತನ್ನು ಪ್ರಾರಂಭಮಾಡಬೇಕಾದರೆ ಅಸಲಜಿ೯ಯೊಳಗಿನ ವಸ್ತುಸ್ಥಿತಿಯ ಸತ್ಯತೆಯನ್ನು ಕಬೂಲು ಯಾ ನಾಕಬೂಲು ಮಾಡಬೇಕು. ಯಾ ಅದನ್ನು ಕಬೂಲು ಮಾಡಿ ಅದರಿಂದ ವಾದಿಯು ಅನ್ನುವಂತೆ ಬಾಧ್ಯತೆಯನ್ನು ಹ್ಯಾಗೆ ಉದ್ಭವಿಸುವದಿಲ್ಲ ಎಂಬ ಬಗ್ಗೆ ಹೊಸ ಸಂಗತಿಗಳನ್ನು ಹೇಳಬೇಕು. ಪ್ರತಿವಾದಿಯು ತನ್ನ ಕೈಫಿಯತಿನಲ್ಲಿ ವಾದಿಯ ಅಂಬೋಣವಿರತಕ್ಕಂಥ ಆಧಾರಗಳನ್ನು ಸಾಮಾನ್ಯವಾಗಿ ನಾಕಬೂಲು ಮಾಡಿದರೆ ಸಾಕಾಗಲಾರದು; ಆದರೆ ಪ್ರತಿವಾದಿಯು ತಾನು ಯಾವ ಯಾವ ಅಂಬೋಣಗಳ ಸತ್ಯತೆಯನ್ನು ಕಬೂಲು ಮಾಡುವದಿಲ್ಲವೋ ಆ ಪ್ರತಿಯೊಂದು ವಸ್ತುಸ್ಥಿತಿ ಸಂಬಂಧವಾದ ಅಂಬೋಣವನ್ನು, ಲುಕ್ಸಾನವನ್ನು ಹೊರತುಪಡಿಸಿ ಸ್ಪಷ್ಟವಾಗಿ ನಾಕಬೂಲು ಮಾಡಬೇಕು. (ಆ. ೮, ರೂ. ೩.)

ಅಸಲಜಿ೯ಯೊಳಗಿನ ಪ್ರತಿಯೊಂದು ವಸ್ತುಸ್ಥಿತಿಸಂಬಂಧವಾದ ಅಂಬೋಣವನ್ನು ಪ್ರತಿವಾದಿಯು ಕೈಫಿಯತಿನಲ್ಲಿ ಕಬೂಲು ಮಾಡಬೇಕು. ಯಾ ನಾಕಬೂಲು ಮಾಡಬೇಕು. ಪ್ರತಿಯೊಂದು ವಸ್ತುಸ್ಥಿತಿ ಸಂಬಂಧವಾದ ಅಂಬೋಣವನ್ನು ವಿಂಗಡಿಸಿ ಬೇರೆ ಬೇರೆಯಾಗಿ ತಕ್ಕೊಂಡು ಅದನ್ನು ಕಬೂಲ ಯಾ ನಾಕಬೂಲು ಮಾಡಬೇಕು. ಅಸಲಜಿ೯ಯೊಳಗಿನ ಯಾವದಾದರೊಂದು ವಸ್ತುಸ್ಥಿತಿಯ ಅಂಬೋಣವನ್ನು ಸ್ಪಷ್ಟವಾಗಿ ನಾಕಬೂಲು ಮಾಡದಿದ್ದರೆ ಅದರ ಪರಿಣಾಮವೇನಾಗುವದು ? ಅಸಲಜಿ೯ಯೊಳಗಿನ ಪ್ರತಿಯೊಂದು ವಸ್ತುಸ್ಥಿತಿ ಸಂಬಂಧವಾದ ಅಂಬೋಣವು, ಸ್ಪಷ್ಟವಾಗಿ ಅಥವಾ ತಪ್ಪದೆ ಆ ಅರ್ಥ ಬರು

ವಂತೆ ನಾಕಬೂಲು ಮಾಡಲ್ಪಡದಿದ್ದರೆ ಅಥವಾ ಪ್ರತಿವಾದಿಯ ಕೈಫಿಯತಿನಲ್ಲಿ ಕಬೂಲು ಮಾಡಲಿಲ್ಲವೆಂದು ಹೇಳಿರದಿದ್ದರೆ, ಅಸಮರ್ಥನಾದ ಮನುಷ್ಯನ ವಿರು ದ್ಧವಾಗಿ ಹೊರತು, ಕಬೂಲು ಮಾಡಲ್ಪಟ್ಟದೆಯಾಗಿ ಗ್ರಹಿಸಲ್ಪಡತಕ್ಕದ್ದು. (ಆ ಲ, ರು ೫.) ಸ್ವಲ್ಪವರಲ್ಲಿ ಹೇಳುವದೇನಂದರೆ–ಅಸಲರ್ಜಿಯೊಳಗಿನ ಯಾವ ದಾದರೊಂದು ವಸ್ತುಸ್ಥಿತಿಯ ಅಂಬೋಣವನ್ನು ಕೈಫಿಯತಿನಲ್ಲಿ ನಾಕಬೂಲು ಮಾಡದಿದ್ದರೆ ಅದನ್ನು ಪ್ರತಿವಾದಿಯು ಕಬೂಲು ಮಾಡಿದಂತೆ ಗ್ರಹಿಸಲ್ಪಡು ವದು. ಕಾರಣ ಕೈಫಿಯತು ತಯಾರು ಮಾಡುವ ಮುಂದೆ ಅಸಲರ್ಜಿಯೊಳ ಗಿನ ಯಾವ ಸಂಗತಿಗಳನ್ನು ನಾಕಬೂಲು ಮಾಡತಕ್ಕದ್ದಿದೆಯೊ ಅದರ ಬಗ್ಗೆ ಚೆನ್ನಾಗಿ ವಿಚಾರ ಮಾಡಬೇಕು. ಮತ್ತು ಅನುಕ್ರಮವಾಗಿ ಅವುಗಳನ್ನು ನಾಕಬೂಲು ಮಾಡಬೇಕು. ಯಾವದಾದರೂ ಸಂಗತಿಯು ನಾಕಬೂಲು ಮಾಡ ದಿದ್ದರೆ ಅದು ಕಬೂಲು ಮಾಡಿದಂತೆ ಆಗುವದು.

ಅಸಲರ್ಜಿಯೊಳಗಿನ ಯಾವದಾದರೂ ಸಂಗತಿಯು ಯಾ ವಸ್ತುಸ್ಥಿತಿಯ ಅಂಬೋಣವು ಕಬೂಲು ಮಾಡುವದೇನು ಬಿಕಟವಿಲ್ಲ. ಆದರೆ–ಈ ಬಗ್ಗೆ ಸಹ ಚೆನ್ನಾಗಿ ವಿಚಾರ ಮಾಡಬೇಕು. ಯಾಕಂದರೆ ಯಾವದಾದರೊಂದು ಸಂಗತಿಯು ಯಾ ವಸ್ತುಸ್ಥಿತಿಯ ಅಂಬೋಣವು ಕೈಫಿಯತಿನಲ್ಲಿ ಯಾ ಇತರ ರೀತಿಯಿಂದ ಕಬೂಲು ಮಾಡಿದರೆ ಅದರ ಸಂಬಂಧದಿಂದ ಚೌಕಶಿಕಾಲಕ್ಕೆ ಉಲಟ ತಪಾಸ ಮಾಡಲಿಕ್ಕೆ ಬರಲಾರದು. ಕಾರಣ ಯಾವ ಸಂಗತಿಯನ್ನು ಕಬೂಲು ಮಾಡು ವದೋ ಅದರ ಬಗ್ಗೆ ಚೆನ್ನಾಗಿ ವಿಚಾರಮಾಡಿ ಅದನ್ನಷ್ಟೇ ಕಬೂಲು ಮಾಡಬೇಕು.

ಯಾವದಾದರೂ ಸಂಗತಿಯು ನಾಕಬೂಲು ಮಾಡುವದಿದ್ದರೆ ಅದನ್ನು ಸ್ಪಷ್ಟವಾಗಿ ಮಾಡಬೇಕು. ಆದರೆ ತಪ್ಪಿಸಿಕೊಳ್ಳುವಂತೆ ನಾಕಬೂಲು ಮಾಡ ಬಾರದು. ಇದರ ಅರ್ಥವನ್ನು ಸ್ಪಷ್ಟಮಾಡೋಣ. ಯಾವನೊಬ್ಬ ಪ್ರತಿವಾದಿಯು ಅಸಲರ್ಜಿಯೊಳಗಿನ ಯಾವದೊಂದು ವಸ್ತುಸ್ಥಿತಿಯ ಸಂಬಂಧವಾದ ಅಂಬೋಣ ವನ್ನು ನಾಕಬೂಲು ಮಾಡುತ್ತಿದ್ದಲ್ಲಿ ಅವನು ಅದನ್ನು ತಪ್ಪಿಸಿಕೊಳ್ಳುವ ರೀತಿ ಯಾಗಿ ನಾಕಬೂಲು ಮಾಡದೆ ವಿಷಯದ ಮುದ್ದೆಗೆ ಉತ್ತರಕೊಡಬೇಕು. ಹ್ಯಾಗಂ ದರೆ, ಅವನು ಯಾವದೊಂದು ಹಣದ ರಕಮನ್ನು ಪಡೆದನೆಂದು ಅಂಬೋಣ ವಿದ್ದರೆ, ಅವನು ಅದೇ ರಕಮನ್ನು ಪಡೆದನೆಂಬುವನ್ನು ಮಾತ್ರ ನಾಕಬೂಲು

ಮಾಡಿದರೆ ಸಾಕಾಗಲಾರದು; ಅವನು ಆ ರಕಮನ್ನು ಅಥವಾ ಅದರ ಯಾವದಾದರು ಭಾಗವನ್ನು ಪಡೆದದ್ದನ್ನು ನಾಕಬೂಲು ಮಾಡಬೇಕು; ಅಥವಾ ಎಷ್ಟು ಪಡೆದೆನೆಂಬುದನ್ನು ತಿಳಿಸಬೇಕು.

**ಉ**– **ಅ** ಎಂಬುವವನ ಅಸಲರ್ಜಿಯಲ್ಲಿ ಪ್ರತಿವಾದಿ **ಬ** ಎಂಬುವವನು ತನ್ನ ಕಡಿಂದ ೧೦೦೦ ರೂಪಾಯಿ ಪಡೆದನು ಎಂಬ ಅಂಬೋಣವಿದೆ. ಸದರಿ ಅಂಬೋಣವನ್ನು ನಾಕಬೂಲು ಮಾಡುವದಾಗಿದ್ದರೆ ಬರೇ "ಅಸಲರ್ಜಿಯಲ್ಲಿ ಕಾಣಿಸಿದ ರಕಮು ಪ್ರತಿವಾದಿಯು ಪಡೆದದ್ದನ್ನು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ" ಅಂತಾ ಅಷ್ಟೆ ಬರೆದರೆ ಸಾಕಾಗುವದಿಲ್ಲ. ಆದರೆ ಕೆಳಗಿನಂತೆ ಸ್ಪಷ್ಟವಾಗಿ ನಾಕಬೂಲು ಮಾಡಬೇಕು.

"ಅಸಲರ್ಜಿಯಲ್ಲಿ ಕಾಣಿಸಿದ ರಕಮು ಅಥವಾ ಅದರ ಪೈಕಿ ಯಾವದಾದರೂ ಭಾಗವನ್ನು ಪ್ರತಿವಾದಿಯು ಪಡೆದದ್ದನ್ನು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ." ಅಥವಾ

"ಅಸಲರ್ಜಿಯಲ್ಲಿ ಕಾಣಿಸಿದ ರಕಮಿನ ಪೈಕಿ ೫೦೦ ರೂಪಾಯಿ ಮಾತ್ರ ಪ್ರತಿವಾದಿಯು ಪಡೆದನು, ಇದಕ್ಕಿಂತ ಹೆಚ್ಚಿಗೇನು ಪ್ರತಿವಾದಿಯು ಪಡೆಯಲಿಲ್ಲ."

ಯಾವದೊಂದು ಅಂಬೋಣವು ನಾನಾ ವಿದ್ಯಮಾನಗಳೊಂದಿಗೆ ಮಾಡಲ್ಪಟ್ಟದ್ದರೆ ಅದನ್ನು ಆ ವಿದ್ಯಮಾನಗಳೊಂದಿಗೆ ನಾಕಬೂಲು ಮಾಡಿದರೆ ಸಾಕಾಗಲಾರದು.

**ಉ**– **ಅ** ಎಂಬವನ ಅಸಲರ್ಜಿಯಲ್ಲಿ ಪ್ರತಿವಾದಿ **ಬ** ಎಂಬುವವನು ತಾರೀಖು ೧೭–೬–೧೯೩೪ನೇ ಇಸ್ವಿದಿವಸ **ಅ** ಈತನ ಗುಮಾಸ್ತನಿಗೆ ೫೦೦ ರೂಪಾಯಿ ಲಂಚಾ ಕೊಟ್ಟನು ಎಂಬ ಅಂಬೋಣವಿದೆ. ಸದರಿ ಸಂಗತಿಯು ಕೆಳಗಿನಂತೆ ನಾಕಬೂಲು ಮಾಡಿದರೆ ಸಾಕಾಗುವದಿಲ್ಲ.

"ತಾರೀಖು ೧೭–೬–೧೯೩೪ನೇ ಇಸ್ವಿದಿವಸ **ಅ** ಈತನ ಗುಮಾಸ್ತನಿಗೆ ೫೦೦ ರೂಪಾಯಿ ಲಂಚಾಕೊಟ್ಟದ್ದು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ."

ಇದಕ್ಕೆ "**ಗರ್ಭಿತನಾಕಾರಿಸೋಣ**" ಅಂತಾ ಅನ್ನುತ್ತಾರೆ. ಇದರಿಂದ ಮತ್ತೊಂದು ಯಾವದಾದರೊಂದು ದಿವಸ ಮೇಲಿನ ರಕಮು ಅಥವಾ ಅದಕ್ಕಿಂತ ಕಡಿಮೆ ರಕಮು **ಬ** ಈತನು ಕೊಟ್ಟಿರಬಹುದು ಅಂತಾ ಅರ್ಥವಾಗುವದು. ಇದರಲ್ಲಿ **ಬ** ಈತನು ಲಂಚಾ ಕೊಟ್ಟನು ಯಾ ಇಲ್ಲಾ ಎಂಬ ಮುದ್ದೇದ ವಿಷಯ ವಿರುವದು. ಸದರಿ ಮುದ್ದೇದ ವಿಷಯಕ್ಕೆ ಉತ್ತರ ಕೊಡುವದು ಅಗತ್ಯವಿದೆ. ಅದು ಕೆಳಗಿನಂತೆ ಕೊಡಬಹುದು.

" **ಅ** ಈತನ ಗುಮಾಸ್ತನಿಗೆ ಪ್ರತಿವಾದಿಯು ೫೦೦ ರುಪಾಯಿ ಅಥವಾ ಯಾವದೇ ರಕಮನ್ನು ಲಂಚದ ಬಗ್ಗೆ ಎಂದು ಕೊಟ್ಟಿಲ್ಲ. " ಅಥವಾ

" **ಅ ಈ**ತನ ಗುಮಾಸ್ತನಿಗೆ ಪ್ರತಿವಾದಿಯು ತಾರೀಖು ೧೬-೬-೧೯೨೮ ನೇ ಇಸ್ವಿ ದಿವಸ ಅಥವಾ ಇತರ ಯಾವದೇ ದಿವಸ; ೫೦೦ ರುಪಾಯಿ ಅಥವಾ ಯಾವದೇ ರಕಮನ್ನು ಲಂಚದ ಬಗ್ಗೆ ಕೊಟ್ಟಿಲ್ಲ. "

ಇವರಂತೆ "ಪ್ರತಿವಾದಿಯು ವಾದಿಯ ಮನೆಯು ಕಬಜಾ ಪಡಕೊಂಡನು" ಅಂತಾ ವಾದಿಯ ಅಂಬೋಣವಿದ್ದಲ್ಲಿ ಮತ್ತು ಪ್ರತಿವಾದಿಗೆ ಸದರಿ ಮನೆಯು ವಾದಿಯದು ಅಲ್ಲ ಅಂತಾ ಮತ್ತು ಪ್ರತಿವಾದಿಯು ಕಬಜಾ ಪಡಕೊಂಡಿಲ್ಲ ಅಂತಾ ಉತ್ತರಪಕ್ಷ ಮಾಡತಕ್ಕದ್ದಿದ್ದರೆ ಬರೇ " ಪ್ರತಿವಾದಿಯು ವಾದಿಯ ಮನೆಯ ಕಬಜಾ ಪಡಕೊಂಡದ್ದು ಪ್ರತಿವಾದಿಯು ನಾಕಬೂಲ ಮಾಡುತ್ತಾನೆ." ಅಂತಾ ಅಂದರೆ ಸಾಕಾಗುವದಿಲ್ಲ. ಆದರೆ ಕೆಳಗಿನಂತೆ ಬರಯುಬೇಕು. " ಪ್ರತಿವಾದಿಯು ಸದರಿ (ಅಥವಾ ದಾವೇದ) ಮನೆಯ ಕಬಜಾ ಪಡಕೊಂಡಿಲ್ಲಾ. ಸದರಿ (ಅಥವಾ ದಾವೇದ) ಮನೆಯು ವಾದಿಯದು ಅಲ್ಲ (ಅಥವಾ ವಾದಿಯ ಮಾಲ್ಕೀದು ಅಲ್ಲ.)

" ಅಸಲರ್ಜಿಯ ೪ನೇ ಪ್ಯಾರಾದಲ್ಲಿ ಕಂಡ ಮಜಕೂರು ಪ್ರತಿವಾದಿಯು ನಾಕಬೂಲ ಮಾಡುತ್ತಾನೆ " ಅಂತಾ ಬರೆಯುವ ಪದ್ಧತಿಯು ಸಹ ಕಂಡು ಬರುತ್ತದೆ. ಆದರೆ ಈ ರೀತಿ ನಾಕಬೂಲು ಮಾಡುವದು ಸಹ ತಪ್ಪು ಅದೆ. ಅಸಲರ್ಜಿಯ ೪ನೇ ಪ್ಯಾರಾದಲ್ಲಿ ಕಂಡ ಪ್ರತಿಯೊಂದು ಸಂಗತಿಯು ನಾಕಬೂಲು ಮಾಡತಕ್ಕದ್ದಿದ್ದರೆ ಕೆಳಗಿನಂತೆ ಬರೆಯಬೇಕು. " ಅಸಲರ್ಜಿಯ ೪ನೇ ಪ್ಯಾರಾದಲ್ಲಿ ಕಂಡ ಪ್ರತಿಯೊಂದು ಸಂಗತಿಯು ( ಯಾ ಅಂಬೋಣವು ) ಪ್ರತಿವಾದಿಯು ನಾಕಬೂಲು ಮಾಡುತ್ತಾನೆ. "

ಅಸಲರ್ಜಿಯೊಳಗಿನ ಅಂಬೋಣಗಳ ಬಗ್ಗೆ ಬರೇ ಅಜ್ಞಾನವನ್ನು ಕೈಫಿಯತಿನಲ್ಲಿ ತೋರಿಸಿದರೆ ಸಾಕಾಗುವದಿಲ್ಲ. ಅಸಲರ್ಜಿಯೊಳಗಿನ ಯಾವ ಅಂಬೋಣಗಳ ಸತ್ಯತೆಯ ಬಗ್ಗೆ ಪ್ರತಿವಾದಿಯ ಮನಸ್ಸಿನಲ್ಲಿ ಸಂಶಯವುಂಟೊ ಆ ಅಂಬೋಣಗಳನ್ನು ಸ್ಪಷ್ಟವಾಗಿ ನಾಕಬೂಲ ಮಾಡಬೇಕು. ಸದರಿ ಅಂಬೋಣವು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ ಅಂತಾ ಸ್ಪಷ್ಟವಾಗಿ ಬರೆಯಬೇಕು. "ವಾದಿಯು ಮೃತ ಶಿವಬಸಪ್ಪಾ ಈತನ ದತ್ತಕ ಮಗನಿರುತ್ತಾನೆ. ಯಾ ಇಲ್ಲಾ ಎಂಬುವದು ಪ್ರತಿವಾದಿಗೆ ಗೊತ್ತು ಇಲ್ಲಾ" ಅಥವಾ "ವಾದೀ ಕಂಪನಿಯು ರಜಿಸ್ಟರ ಆಗಿದೆ ಯಾ ಇಲ್ಲಾ ಎಂಬವು ಪ್ರತಿವಾದಿಗೆ ಮಾಹಿತಿ ಇಲ್ಲಾ" ಅಂತಾ ಬರೆಯುವದು ತಪ್ಪು. ಸದರಿ ಸಂಗತಿಗಳನ್ನು ಸ್ಪಷ್ಟವಾಗಿ ಕೆಳಗಿನಂತೆ ನಾಕಬೂಲು ಮಾಡಬೇಕು. "ವಾದಿಯು ಮೃತ ಶಿವಬಸಪ್ಪಾ ಈತನ ದತ್ತಕ ಮಗನಿರುತ್ತಾನೆಂದು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ." ಅದರಂತೆ "ವಾದಿ ಕಂಪನಿಯು ರಜಿಸ್ಟರ ಆಗಿದೆ ಎಂಬುದನ್ನು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ."

ಬರೇ "ವಾದಿಯ ಸದರಿ ಅಂಬೋಣವನ್ನು ಸಾಬೀತು ಮಾಡಬೇಕು." ಅಥವಾ

"ಸದರಿ ಅಂಬೋಣವನ್ನು ಸಾಬೀತು ಮಾಡುವ ಜವಾಬದಾರಿ ವಾದಿ ಮೇಲೆ ಅದೆ." ಅಂತಾ ಬರದರೆ ಸದರಿ ಸಂಗತಿಯನ್ನು ಯಾ ಅಂಬೋಣವನ್ನು ನಾಕಬೂಲು ಮಾಡಿದಂತೆ ಆಗುವದಿಲ್ಲಾ. ಆದರೆ ಅದು ಕಬೂಲು ಮಾಡಿದಂತೆ ಆಗುವ ಸಂಭವವಿದೆ. ಕಾರಣಾ ಬರೇ "ವಾದಿಯು ಸದರಿ ಅಂಬೋಣವನ್ನು ಸಾಬೀತು ಮಾಡಬೇಕು" ಅಂತಾ ಇಷ್ಟೇ ಬರೆಯಬಾರದು. ಆದರೆ "ಸದರಿ ಅಂಬೋಣವನ್ನು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ" ಅಂತಾ ಸ್ಪಷ್ಟವಾಗಿ ಬರೆಯಬೇಕು.

೨ **ನಿಷೇಧ**— ಅಸಲರ್ಜಿಯೊಳಗಿನ ಅಂಬೋಣದ ಸತ್ಯತೆಯನ್ನು ನಾಸಾಬೀತು ಮಾಡುವದು ತನಗೆ ಶಕ್ಯವಿದೆ ಅಂತಾ ಪ್ರತಿವಾದಿಯು ಮನಗಂಡದೆ ಅವನು ಸದರಿ ಅಂಬೋಣವು ಸ್ಪಷ್ಟವಾಗಿ ನಿಷೇಧಿಸಬೇಕು. ಯಾವದಾದರು ಸಂಗತಿಯನ್ನು ಯಾ ಅಂಬೋಣವನ್ನು ನಾಕಬೂಲು ಮಾಡುವದರಲ್ಲಿ ಯಾ ನಿಷೇ

ಧಿಸುವದರಲ್ಲಿ ಕಾಯದೆಯ ದೃಷ್ಟಿಯಿಂದ ಏನೂ ಭೇದವಿಲ್ಲಾ. ಆದರೆ ಪ್ರತಿವಾದಿಯು ತನ್ನ ಸ್ವಂತ ತಿಳುವಳಿಕೆಯ ಯಾ ಮಾಹಿತಿಯ ಮೇಲಿಂದ ಉತ್ತರ ಪಕ್ಷವನ್ನು ಮಾಡುತ್ತಾನೋ ಯಾ ಹ್ಯಾಗೆ ಎಂಬದನ್ನು ತಿಳಿಯಬೇಕೆಂಬ ಬಗ್ಗೆ ಈ ಭೇದವನ್ನು ಮಾಡಿರುತ್ತದೆ. ನಿಷೇಧವನ್ನು ಸ್ಪಷ್ಟವಾಗಿ ಮಾಡಬೇಕು.

**ಉ**— ಪ್ರತಿವಾದಿಯಾದ 'ರಾಯಚಂದ ಪ್ರತಾಪಜಿ' ಎಂಬ ಪೇಢಿಯಲ್ಲಿ ತಾನು ಒಬ್ಬ ಪಾಲಗಾರನೆಂಬುದನ್ನು ಪ್ರತಿವಾದಿಯು ನಿರಾಕರಿಸುತ್ತಾನೆ. ನಾಕಬೂಲಿಯು ಯಾ ನಿಷೇಧವು ಯಾವ ಪ್ರಕಾರ ಮಾಡಬೇಕೆಂಬುವ ಬಗ್ಗೆ ಕೆಲವು ಉದಾಹರಣೆಗಳನ್ನು ಕೆಳಗೆ ಕೊಡುತ್ತೇವೆ.

(೧) ಪ್ರತಿವಾದಿಯು ವಾದಿಯ ಕಡೆಯಿಂದ ೫೦೦ ರೂಪಾಯಿಗಳನ್ನು ಅಥವಾ ಅದರ ಪೈಕಿ ಯಾವದೇ ಭಾಗವನ್ನು ತಕ್ಕೊಂಡಿಲ್ಲಾ ಮತ್ತು ದಾವೇದ ದಸ್ತೈವಜನ್ನು ಬರೆದುಕೊಟ್ಟಿಲ್ಲಾ."

(೨) ಪ್ರತಿವಾದೇರು ಅಥವಾ ಅವರ ಪೈಕಿ ಯಾವನಾದರೊಬ್ಬನು ದಾವೇದ ದಸ್ತೈವಜನ್ನು ಬರೆದುಕೊಟ್ಟದ್ದು ಪ್ರತಿವಾದೇರು ನಾಕಬೂಲು ಮಾಡುತ್ತಾರೆ.

(೩) ಪ್ರತಿವಾದಿಯು ದಾವೇದ ದಸ್ತೈವಜನ್ನು ಬರೆದುಕೊಟ್ಟದ್ದು ಕಬೂಲು ಮಾಡುತ್ತಾನೆ. ಆದರೆ ಅಸಲರ್ಜಿಯೊಳಗಿನ ೧ನೇ ಪ್ಯಾರಾದಲ್ಲಿ ಕಂಡ ರಕಮನ್ನು ಅಥವಾ ಯಾವದೇ ರಕಮನ್ನು ಪ್ರತಿವಾದಿಗೆ ಮುಟ್ಟಿದ್ದನ್ನು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ.

(೪) ಅಸಲರ್ಜಿಯ ೧ನೇ ಪ್ಯಾರಾದಲ್ಲಿ ಕಂಡ ಬಾಡಿಗೆಯ ಕರಾರಿನನ್ವಯ ಅಥವಾ ಇತರ ಯಾವದೇ ಭಾಡಿಗೆಯ ಕರಾರಿನನ್ವಯ ಪ್ರತಿವಾದಿಯ ದಾವೇದ ಮನೆಯ ಕಬಜಾಪಡೆದದ್ದನ್ನು ಪ್ರತಿವಾದಿಯು ನಿರಾಕರಿಸುತ್ತಾನೆ.

**ಮುದ್ದತ್ತು**— ಕೋರ್ಟಿನಿಂದ ಯಾವದಾದರೂ ನ್ಯಾಯಾಶ್ರಯವನ್ನು ಪಡಕೊಳ್ಳಬೇಕಾದಲ್ಲಿ ಆ ಬಗ್ಗೆ ದಾವೆಯನ್ನು ಸನ್ನ ೧೯೦೮ನೇ ಇಸ್ವಿಯ ಹಿಂದುಸ್ಥಾನದ ಮುದ್ದತಿನ ವಿಷಯದ ಆಕ್ಟಿನ ಕಲಮುಗಳಿಗೆ ಮತ್ತು ಆರ್ಟಿಕಲ್ಲುಗಳಿಗೆ ಒಳಪಟ್ಟು ಮಾಡಬೇಕಾಗುವದು. ಮುದ್ದತ್ತಿನ ವಿಷಯದಲ್ಲಿ ಉತ್ತರ ಪಕ್ಷವನ್ನು ಸಹ ಸ್ಪಷ್ಟವಾಗಿ ತಕ್ಕೊಳ್ಳಬೇಕು. "ವಾದಿಯ ದಾವೆಗೆ ಮುದ್ದತಿ

ಬಾಧಾ ಇದೆ " ಅಂತಾ ಇಷ್ಟೇ ಬರೆಯುವ ಪದ್ಧತಿಯು ಕಂಡಬರುತ್ತದೆ. ಆದರೆ ಇಂಥ ಮೋಘಮ ಸ್ವರೂಪದಿಂದ ಉತ್ತರಪಕ್ಷವನ್ನು ಮಾಡುವದು ಚಲೋ ಅಲ್ಲಾ. ಯಾವ ಆರ್ಟಿಕಲ್ಲಿನನ್ವಯ ವಾದಿ ದಾವೆಗೆ ಮುದ್ದತಿಯ ಹರಕತ್ತು ಉಂಟೆಂಬುದನ್ನು ಸ್ಪಷ್ಟವಾಗಿ ಬರೆಯಬೇಕು. ಇದೇ ಆರ್ಟಿಕಲ್ಲು ಲಾಗು ಆಗುತ್ತದೆ ಯಾ ಇಲ್ಲಾ ಎಂಬ ಬಗ್ಗೆ ಸಂಶಯವಿದ್ದರೆ ಅದರ ಬದಲಾಗಿ ಯಾ ವಿಕಲ್ಪವಾಗಿ ಇತರ ಯೋಗ್ಯವಾದ ಆರ್ಟಿಕಲ್ಲುಗಳನ್ನು ಸಹ ಕೊಡಬೇಕು.

"೧೨೦ನೇ ಆರ್ಟಿಕಲ್ಲಿನನ್ವಯ ದಾವೆಗೆ ಮುದ್ದತಿನ ಹರಕತು ಇದೆ"

ಅಥವಾ

" ಸನ್ ೧೯೦೮ನೇ ಇಸವಿಯ ಹಿಂದುಸ್ಥಾನದ ಮುದ್ದತಿನ ವಿಷಯದ ಆಕ್ಟಿನ ೧ ನೇ ಪರಿಶಿಷ್ಟದೊಳಗಿನ ೧೨೦ ನೇ ಆರ್ಟಿಕಲ್ಲಿನನ್ವಯ ದಾವೆಗೆ ಮುದ್ದತಿನ ಹರಕತು ಇದೆ. "

ಕೆಲವು ಪ್ರಸಕ್ತಿಗಳಲ್ಲಿ ಬರೇ ಆರ್ಟಿಕಲ್ಲು ಹೇಳಿದರೆ ಸಾಕಾಗುವದಿಲ್ಲ. ಆವರೆ ಅದರ ಕೂಡ ಆ ಆರ್ಟಿಕಲ್ಲು ಹ್ಯಾಗೆ ಲಾಗು ಆಗುತ್ತದೆಂಬುವ ಬಗ್ಗೆ ಕೆಲವು ಸಂಗತಿಗಳನ್ನು ಹೇಳುವದು ಅಗತ್ಯವಿರುವದು.

**ಉ**—"ದಾವೆಯು ಆದ ಹಿಂದಿನ ೧೬ವರ್ಷದೊಳಗೆ ದಾವೆಯ ಆಸ್ತಿಯು ವಾದಿಯ ಕಬಜಾದಲ್ಲಿ ಎಂದೂ ಇದ್ದಿದ್ದಿಲ್ಲ. ಕಾರಣ ೧೪೨ನೇ ಆರ್ಟಿಕಲ್ಲಿನನ್ವಯ ದಾವೆಗೆ ಮುದ್ದತಿನ ಆತಂಕ ಉಂಟು. "

"ದಾವೆಯು ಆದ ಹಿಂದಿನ ೧೨ ವರ್ಷಗಳು ಅಥವಾ ೧೨ ವರ್ಷಕ್ಕಿಂತ ಹೆಚ್ಚು ದಿವಸ ವಾದಿಯ ವಿರುದ್ಧವಾಗಿ ಪ್ರತಿವಾದಿಯು ದಾವೇದ ಆಸ್ತಿಯ ವಹಿವಾಟ ಮಾಡುತ್ತಾ ಬಂದಿರುತ್ತಾನೆ. ಕಾರಣ ೧೪೪ ನೇ ಆರ್ಟಿಕಲ್ಲಿನನ್ವಯ ದಾವೆಗೆ ಮುದ್ದತಿನ ಆತಂಕ ಉಂಟು. " ಈ ಎರಡು ಆರ್ಟಿಕಲ್ಲುಗಳ ಪೈಕಿ ಯಾವ ಆರ್ಟಿಕಲ್ಲು ಲಾಗು ಆಗುತ್ತದೆಂಬ ಬಗ್ಗೆ ಚನ್ನಾಗಿ ವಿಚಾರಮಾಡಬೇಕು. ಮತ್ತು ಯೋಗ್ಯ ಆರ್ಟಿಕಲ್ಲು ಬರೆಯಬೇಕು. ಇವುಗಳ ಪೈಕಿ ಯಾವ ಆರ್ಟಿಕಲ್ಲು ಲಾಗು ಆಗುತ್ತದೆಂಬುವಬಗ್ಗೆ ಸಂದೇಹವಿದ್ದರೆ ಈ ಎರಡೂ ಆರ್ಟಿಕಲ್ಲುಗಳನ್ನು ಬರೆಯಬೇಕು. **ಉ**—" ೧೪೨ನೇ ಯಾ ೧೪೪ನೇ ಆರ್ಟಿಕಲ್ಲಿನನ್ವಯು ದಾವೆಗೆ ಮುದ್ದತಿನ ಹರಕತು ಇದೆ. "

ಮುದ್ದತಿಯ ಉತ್ತರಪಕ್ಷವನ್ನು ಪೂರಾ ದಾವೇವ ಸಂಬಂಧಿ ಇರದೆ ದಾವೆಯ ಯಾವದೊಂದು ಭಾಗದ ಸಂಬಂಧಿ ಇದ್ದರೆ ಅದನ್ನು ಯಾವ ಭಾಗದ ಸಂಬಂಧಿ ಅದೆ ಎಂಬುದನ್ನು ಸ್ಪಷ್ಟಮಾಡಬೇಕು. ಕೆಳಗಿನಂತೆ ಅಸ್ಪಷ್ಟವಾಗಿ ಬರೆಯಬಾರದು. **ಉ**–

"ವಾದೀ ದಾವೆ ಅಂಶತಃ ಮುದ್ದತಿಯ ಹೊರಗೆ ಇದೆ."

"ದಾವೆಯ ಕೆಲವು ಭಾಗಕ್ಕೆ ಮುದ್ದತಿಯ ಬಾಧೆ ಉಂಟು"

"ಪೂರಾ ಭಾಧ್ಯತೆಯು ಮುದ್ದತಿಯಲ್ಲಿ ಇಲ್ಲಾ. ಆದರೆ ಅದರ ಪೈಕಿ ಸ್ವಲ್ಪ ಭಾಗವು ಮಾತ್ರ ಮುದ್ದತಿಯಲ್ಲಿ ಇದೆ."

ಆದರೆ ಕೆಳಗಿನಂತೆ ಸ್ಪಷ್ಟವಾಗಿ ಬರೆಯುಬೇಕು.

**ಉ**– ೧. ೧೯೨೫ನೇ ಸಾಲಿನ ದರಮ್ಯಾನ ಉತ್ಪನ್ನದ (ಒಳಗಡೆ ಲಾಭದ) ಬಾಬತ್ತಿನ ಬಾಧ್ಯತೆಗೆ......ನೇ ಆರ್ಟಿಕಲ್ಲಿನನ್ವಯ ಮುದ್ದತ್ತಿನ ಹರಕತ್ತು ಇದೆ."

೨. "ಜಂಗಮಮಾಲಿನ ಸಂಬಂಧಿಯ ಬಾಧ್ಯತೆಗೆ......ನೇ ಆರ್ಟಿಕಲ್ಲಿನನ್ವಯ ಮುದ್ದತಿನ ಹರಕತ್ತು ಇದೆ."

**ಮುದ್ದತಿಯ ತಕರಾರುಗಳ ನಮೂನೆಗಳು**–

೧. "ಅಸಲಜರ್ಿಯ ೪ನೇ ಪ್ಯಾರಾದಲ್ಲಿ ಹೇಳಿದಂತೆ ಹಣಾ ಕೊಟ್ಟದ್ದು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ."

೨. "ಅಸಲಜರ್ಿಯ ೫ನೇ ಪ್ಯಾರಾದಲ್ಲಿ ಹೇಳಿವಂತೆ ಹಣಾ ಕೊಟ್ಟದ್ದು ಮತ್ತು ಸದರಿ ಹಣಾ ಕೊಟ್ಟ ದಾಖಲೆಯ ಬಗ್ಗೆ ಹೆಬ್ಬಟ್ಟಿನ ಗುರ್ತುಮಾಡಿದ್ದು ಪ್ರತಿವಾದಿಯು ಕಬೂಲು ಮಾಡುತ್ತಾನೆ. ಆದರೆ ಅವರಿಂದ ಮುದ್ದತು ವಾಧಾಯಿಸುವದಿಲ್ಲ ಅಂತಾ ತಕರಾರು ಮಾಡುತ್ತಾನೆ."

೩. "ಅಸಲರ್ಜಿ ೩ನೇ ಪ್ಯಾರಾದಲ್ಲಿ ಹೇಳಿಸಂತೆ ೫೦೦ ರೂಪಾಯಿಗಳನ್ನು ಕೊಟ್ಟದ್ದು ಪ್ರತಿವಾದಿಯು ಕಬೂಲು ಮಾಡುತ್ತಾನೆ. ಆದರೆ ಸದರಿ ರೂಪಾಯಿಗಳನ್ನು ಅಥವಾ ಅವರ ಪೈಕಿ ಯಾವ ಭಾಗವನ್ನು ಸಹಾ ಬಡ್ಡಿಯಂತೆ ಕೊಟ್ಟದ್ದು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ."

೪ "ಅಸಲರ್ಜಿ ೩ನೇ ಪ್ಯಾರಾದಲ್ಲಿ ಹೇಳಿದಂತೆ ೫೦೦ ರೂಪಾಯಿಗಳನ್ನು ಕೊಟ್ಟದ್ದು ಪ್ರತಿವಾದಿಯು ಕಬೂಲು ಮಾಡುತ್ತಾನೆ; ಆದರೆ ಅವುಗಳನ್ನು ಕೊಡುವ ವೇಳೆಗೆ ವಾದಿಗೆ ಅವುಗಳನ್ನು ಮುದ್ದಲಿನ ಯಾ ಬಡ್ಡಿಯ ಬಗ್ಗೆ ಕೊಟ್ಟದೆ ಅಂತಾ ಪ್ರತಿವಾದಿಯು ಸ್ಪಷ್ಟಮಾಡಿ ಹೇಳಿಲ್ಲಾ."

೪. **ಅಧಿಕಾರವು**— ಅಧಿಕಾರದ ಬಗ್ಗೆ ಮಾಡಿದ ಉತ್ತರಪಕ್ಷವು ಯಶವನ್ನು ಹೊಂದಿದ್ದರಿಂದ ವಾದಿಯ ದಾವೆಯು ರದ್ದು ಆಗುವದಿಲ್ಲ, 'ಕೋರ್ಟಿಗೆ ದಾವೆಯ ಚೌಕಶಿ ಅಧಿಕಾರವಿಲ್ಲ' ಅಂತಾ ಮಾಡಿದ ಉತ್ತರ ಪಕ್ಷಕ್ಕೆ ಯಶಸ್ಸು ಪ್ರಾಪ್ತವಾದಲ್ಲಿ ಅಂದರೆ ಕೋರ್ಟಿಗೆ ಆ ದಾವೆಯ ಚೌಕಶಿ ಮಾಡಲಿಕ್ಕೆ ಅಧಿಕಾರವಿಲ್ಲ. ಅಂತಾ ಠರಾಯಿಸಲ್ಪಟ್ಟಲ್ಲಿ ಅದರ ಪರಿಣಾಮವೇನಾಗುವದು ? (ಆ. ೭, ರೂಲ ೧೦) ಪ್ರಕಾರ ಈ ಪ್ರಸಕ್ತಿಯಲ್ಲಿ ಕೋರ್ಟಿನವರು ಅಸಲರ್ಜಿಯನ್ನು ಹಿಂದಕ್ಕೆ ಕೊಡುವರು. ದಾವೆಯ ಯಾವದೇ ಪರ್ಯಾಯದಲ್ಲಿ ಯಾವ ಕೋರ್ಟಿನಲ್ಲಿ ದಾವೆಯನ್ನು ಮಾಡಬೇಕಾಗಿತ್ತೋ ಆ ಕೋರ್ಟಿನಲ್ಲಿ ಹಾಜರು ಮಾಡುವ ಬಗ್ಗೆ ಕೋರ್ಟಿನವರು ಅಸಲರ್ಜಿಯನ್ನು ಹಿಂದಕ್ಕೆ ಕೊಡುವರು. ಈ ಉತ್ತರಪಕ್ಷದಿಂದ ಬಾಧ್ಯತೆಯು ಇಲ್ಲದಂತೆ ಆಗುವದಿಲ್ಲ. ಈ ಕೋರ್ಟಿನಲ್ಲಿದ್ದರೆ ಎರಡನೇ ಕೋರ್ಟಿನಲ್ಲಿ ವಾದಿಯು ಇದೇ ಬಾಧ್ಯತೆಯ ಬಗ್ಗೆ ದಾವೆಯನ್ನು ಮಾಡುವನು. ಸದರಿ ಉತ್ತರಪಕ್ಷವನ್ನು ಮಾಡಿದ ಪರಿಣಾಮವೇನಾಯಿಂದರೆ ದಾವೆಯು ಒಂದು ಕೋರ್ಟು ಬಿಟ್ಟು ಎರಡನೇ ಕೋರ್ಟಿಗೆ ಹೋಯಿತು. ಅಂದರೆ ವಾದಿಯು ಈ ಕೋರ್ಟು ಬಿಟ್ಟು ಎರಡನೇ ಯೋಗ್ಯವಾದ ಕೋರ್ಟಿನಲ್ಲಿ ಪುನಃ ಅದೇ ಪ್ರತಿವಾದಿಯ ಮೇಲೆ ಅದೇ ದಾವೆಯ ಕಾರಣವ ದಶೆಯಿತೆಂದ ಅದೇ ನ್ಯಾಯಾಶ್ರಯವನ್ನು ಪಡಕೊಳ್ಳುವದರ ಬಗ್ಗೆ ಅದೇ ಅಸಲರ್ಜಿಯ ಮುಖಾಂತರವಾಗಿ ಅದೇ ಸ್ಟಾಂಪಿನ ಮೇಲೆ ದಾವೆಯನ್ನು ಮಾಡಬಹುದು. ಈ ಉತ್ತರಪಕ್ಷದ ಪರಿಣಾಮವೇನಾಯಿತೆಂದರೆ, ಇದರಿಂದ ಯಾವದೇ ಬಾಧ್ಯತೆಯ ನಿರ್ಣಯವಾಗದೆ ಎರಡನೇ ಕೋರ್ಟಿಗೆ ದಾವೆಯು ಹೋದದ್ದರಿಂದ ಯಾ ಹೋಗುವಂತೆ ಆದದ್ದರಿಂದ ಬರೇ ಕಾಲಕ್ಷೇಪವಾಯಿತು. ಕಾರಣ ಈ ಉತ್ತರಪಕ್ಷಕ್ಕೆ "**ಕಾಲಹರಣ ಮಾಡುವಂಥ ಉತ್ತರವನ್ನು**" **ಅಂತಾ ಅನ್ನುತ್ತಾರೆ.**

ಅಧಿಕಾರದ ಬಗ್ಗೆ ತಕರಾರು ಮಾಡತಕ್ಕದ್ದಿದ್ದರೆ ಅದು ಆದಷ್ಟು ತ್ವರೆ ಯಾವ ವೇಳೆಯಲ್ಲಿ ಮತ್ತು ಮುದ್ದೆಗಳು ಠರಾಯಿಸಲ್ಪಟ್ಟಿರುವ ಪ್ರತಿಯೊಂದು ಪ್ರಸಂಗದಲ್ಲಿ ಇಲ್ಲವೆ ಮುದ್ದೆಗಳು ಠರಾಯಿಸಲ್ಪಡುವ ವೇಳೆಗೆ ಅಥವಾ ಅದರ ಮುಂಚೆ ಮಾಡಬೇಕು. ಅಂದರೆ ಕೈಫಿಯತಿನಲ್ಲಿ ಅಥವಾ ಕೈಫಿಯತು ಕೊಡುವ ವೇಳೆಗೆ ಈ ತಕರಾರು ಮಾಡುವದು ನೆಟ್ಟಗೆ.

ಯಾವ ಸಂಗತಿಗಳ ಮೂಲಕ ಕೋರ್ಟಿಗೆ ದಾವೆಯು ಚವಕಶಿ ಮಾಡುವ ಅಧಿಕಾರವಿಲ್ಲೆಂಬುವದನ್ನು ಸ್ಪಷ್ಟವಾಗಿ ಬರೆಯಬೇಕು. ಬರೇ "ಕೋರ್ಟಿಗೆ ಈ ದಾವೆಯ ಚೌಕಶಿ ಮಾಡಲಿಕ್ಕೆ ಅಧಿಕಾರವಿಲ್ಲ" ಅಂತಾ ಬರೆಯುವದು ಬರೋಬರಿ ಅಲ್ಲ. ಕೆಳಗಿನಂತೆ ಬರೆಯಬೇಕು —

೧. "ಪ್ರತಿವಾದಿಯು ಈ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ವಾಸಿಸುವವನ್ನು ಪ್ರತಿವಾದಿಯು ನಿರಾಕರಿಸುತ್ತಾನೆ. ಕಾರಣ ಈ ದಾವೆಯ ಚೌಕಶಿ ಮಾಡುವ ಅಧಿಕಾರವು ಈ ಕೋರ್ಟಿಗೆ ಇಲ್ಲ."

೨. "ಪ್ರತಿವಾದಿಯು ಕೋರ್ಟಿನ ಸ್ಥಳ ಸೀಮೆಯೊಳಗೆ ಇರುವದಿಲ್ಲ. (ಅಥವಾ ವಾಸ ಮಾಡುವದಿಲ್ಲ) ಕಾರಣ ಈ ದಾವೆಯ ಚೌಕಶಿ ಮಾಡುವ ಅಧಿಕಾರವು ಈ ಕೋರ್ಟಿಗೆ ಇಲ್ಲ."

೩. "ದಾವೆಯ ವ್ಯವಹಾರವು ಹುಬ್ಬಳ್ಳಿಯಲ್ಲಿ ಆಗಿಲ್ಲ. ಆದರೆ ಅದು ಗದಗಿನಲ್ಲಿ ಆಗಿದೆ. ಕಾರಣ ಈ ದಾವೆಯ ಚೌಕಶಿ ಮಾಡುವ ಅಧಿಕಾರವು ಈ ಕೋರ್ಟಿಗೆ (ಹುಬ್ಬಳ್ಳಿ ಕೋರ್ಟಿಗೆ) ಇಲ್ಲ."

೪. "ದಾವೆಯ ಆಸ್ತಿಯ ಬೆಲೆಯು ೫೦೦೦ ರೂಪಾಯಿಗಿಂತ ಹೆಚ್ಚು ಅದೆ. ಕಾರಣ ಈ ಕೋರ್ಟಿಗೆ ದಾವೆಯ ಚೌಕಶಿ ಮಾಡುವ ಅಧಿಕಾರವಿಲ್ಲ."

**೫. ನಾದಾರವು** (Insolvencys) — ಯಾವನಾದರೊಬ್ಬನು ನಾದಾರನೆಂದು ಠರಾಯಿಸಲ್ಪಟ್ಟ ಕೂಡಲೆ ಅವನ ಯಾವತ್ತು ಸ್ವತ್ತು ಸ್ವಾಮಿತ್ವವನ್ನು ಕೋರ್ಟಿನಲ್ಲಿ ಯಾ ಕೋರ್ಟಿನಿಂದ ನೇಮಿಸಲ್ಪಟ್ಟ ರಿಸೀವರನಲ್ಲಿ ನಿವಿಷ್ಟವಾಗುತ್ತದೆ. (ಕಲಮು ೨೮, ಪ್ರಾಂತಿಕ ನಾದಾರ ಆಕ್ಟ ಸನ್ನ ೧೯೨೦). ಯಾವ ಪ್ರಕರಣದಲ್ಲಿ ಅವನು ನಾದಾರನೆಂದು ಠರಾಯಿಸಲ್ಪಟ್ಟಿರುತ್ತಾನೆಯೋ ಆ

ಪ್ರಕರಣವು ಚಾಲತಿಯಲ್ಲಿ ಇದ್ದಾಗ್ಗೆ ಸದರಿ ನಾದಾರಿಯು ಸ್ವತ್ತಿನ ವಿರುದ್ಧವಾಗಿ ಯಾವದೇ ಪ್ರಕರಣವನ್ನು ಹಣದ ವಸೂಲಿಯ ಬಗ್ಗೆ ನಡಿಸಲಿಕ್ಕೆ ಬರುವದಿಲ್ಲ. ಯಾವನಾದರೊಬ್ಬನು ನಾದಾರನೆಂದು ಠರಾಯಿಸಲ್ಪಟ್ಟ ನಂತರ ಕೋರ್ಟಿನ ಅಪ್ಪಣೆಯ ಹೊರತು ಅವನ ವಿರುದ್ಧವಾಗಿ ಯಾವದೇ ದಾವೆಯನ್ನು ಅಥವಾ ಪ್ರಕರಣವನ್ನು ಅಥವಾ ಮೊಕದಮೆಯನ್ನು ಪ್ರಾರಂಭಿಸತಕ್ಕದ್ದಲ್ಲ. ಕೋರ್ಟಿನ ಈ ಬಗ್ಗೆ ಅಪ್ಪಣೆಯನ್ನು ಕೊಟ್ಟ ಮೇಲೆ ಕೋರ್ಟಿನಿಂದ ನೇಮಿಸಲ್ಪಟ್ಟ ರಿಸೀವರನ ಮುಖಾಂತರವಾಗಿ ಮಾತ್ರ ಅವನ ಮೇಲೆ ಅಂದರೆ ನಾದಾರನೆಂತಾ ಠರಾಯಿಸಲ್ಪಟ್ಟ ಮನುಷ್ಯನ ಮೇಲೆ ದಾವೆಯು ಮಾಡಬಹುದು. ಯಾ ಪ್ರಕರಣವನ್ನು ನಡಿಸಬಹುದು. ಇದು ನಾದಾರನೆಂದು ಠರಾಯಿಸಲ್ಪಟ್ಟ ಮನುಷ್ಯನ ವಿರುದ್ಧವಾಗಿ ಮಾಡತಕ್ಕ ದಾವೆಯ ಕ್ರಮವಾಯಿತು. ಆದರೆ ಅಂಥವನ ವತಿಯಿಂದ ಯಾ ಅಂಥವನಿಗೆ ದಾವೆಯು ಮಾಡಬೇಕಾಗಿದ್ದಲ್ಲಿ ಯಾವ ಕ್ರಮವನ್ನು ಅನುಸರಿಸಬೇಕು ? ಈ ಪ್ರಸಕ್ತಿಯಲ್ಲಿ ಸಹಾ ರಿಸೀವರನ ಮುಖಾಂತರವಾಗಿ ದಾವೆಯು ಮಾಡತಕ್ಕದ್ದು. ಯಾವನಾದರೊಬ್ಬನು ನಾದಾರನೆಂದು ಠರಾಯಿಸಲ್ಪಡುವ ಮೊದಲೇ ದಾವೆಯನ್ನು ಮಾಡಿದರೆ ಅಥವಾ ಯಾವದೇ ದಿವಾಣೀ ಪ್ರಕರಣವನ್ನು ನಡಸಿದ್ದರೆ ಅದನ್ನು ಕೋರ್ಟಿನವರು ತಹಕೂಬ ಇಡಬಹುದು. ಯಾ ಮುಂದೆ ಹಾಗೆ ನಡಿಸಬಹುದು. ನಾದಾರನೆಂದು ಠರಾಯಿಸಲ್ಪಟ್ಟ ಮನುಷ್ಯನ ಮೇಲೆ ಯಾ ಅವನ ವಿರುದ್ಧವಾಗಿ ಮಾಡತಕ್ಕ ದಾವೆಯಲ್ಲಿ ಸರನಾಮೆಯನ್ನು ಕೆಳಗಿನಂತೆ ಬರೆಯಬೇಕು.

**ಅ, ಬ** ( ವರ್ಣನವನ್ನು ವಾಸಸ್ಥಳವನ್ನು ಬರೆಯಬೇಕು ) ನಾದಾರನು, ರಿಸೀವರನಾದ ' ಕ್ಲಾರ್ಕ ಆಫ ದೀ ಕೊರ್ಟು ಹುಬ್ಬಳ್ಳಿ ' ಇವರ ಮುಖಾಂತರವಾಗಿ ............ವಾದಿಯು ಯಾ ಪ್ರತಿವಾದಿಯು

**೬. ಅಲ್ಪಪ್ರಾಯವು** (Minority) —ಅಪ್ರಾಯಸ್ಥನು ಅಂತಾ ಯಾರಿಗೆ ಅನ್ನಬೇಕು ? ಬ್ರಿಟಿಷ ಹಿಂದುಸ್ಥಾನದೊಳಗಿನ ಪ್ರತಿಯೊಬ್ಬ ಮನುಷ್ಯನು ತನಗೆ ೧೮ ವರ್ಷಗಳು ಮಿಕ್ಕುವವರೆಗೆ ಅಪ್ರಾಯಸ್ಥನು ಯಾ ಅಲ್ಪ ವಯಸ್ಕನಿರುವನು ಆದರೆ ಇದರಲ್ಲಿ ವಿಧಿಸಲ್ಪಡುವದೇನಂದರೆ ಯಾವನಾದರೊಬ್ಬ ಅಲ್ಪವಯಸ್ಕನ ಯಾ ಅಪ್ರಾಯಸ್ಥನ ಯಾ ಅವನ ಆಸ್ತಿಯ ಸಂಬಂಧಿ ಕೋರ್ಟಿನಿಂದ

ಪಾಲಕನನ್ನು ನೇಮಿಸಲ್ಪಟ್ಟಲ್ಲಿ ಯಾ ಅವನ ಆಸ್ತಿಯ ವ್ಯವಸ್ಥೆಯನ್ನು ಕೋರ್ಟ ಆಫವಾರ್ಡ್ಸದವರು ಮಾಡುತಿದ್ದಲ್ಲ ಅವನು ತನಗೆ ೨೧ ವರ್ಷಗಳು ಮಿಕ್ಕುವ ವರೆಗೆ ಅಲ್ಪವಯುಸ್ಕನು ಯಾ ಅಪ್ರಾಯಸ್ಥನು ಇರುವನು.

ಅಲ್ಪಯುಸ್ಕನು ಮಾಡಿದ ಯಾವದೇ ಕರಾರನ್ನು ಕಾಯದೆಯಿಂದ ಪೊಳ್ಳು ( void ) ಇರುವದು. ಕಾರಣಾ ಅಂಥ ಕರಾರಿನ ಆಧಾರಮೇಲಿಂದ ಮಾಡಿದ ಎಲ್ಲ ದಾವೆಗಳಲ್ಲಿ ಪ್ರತಿವಾದಿಯು ಕರಾರಿನ ವೇಳೆಯಲ್ಲಿ ಅಲ್ಪವಯುಸ್ಕನಿದ್ದನು ಅಂತಾ ಉತ್ತರ ಪಕ್ಷವನ್ನು ಮಾಡುವ ಅವಕಾಶವಿದ್ದಲ್ಲಿ ಅದನ್ನು ತಪ್ಪದೇ ಸ್ಪಷ್ಟ ವಾಗಿ ಮಾಡಬೇಕು. ದಾವೆಯು ಮಾಡಿದ ವೇಳೆಯಲ್ಲಿ ಅವನು ಅಲ್ಪವಯುಸ್ಕ ನಿದ್ದು ಆ ದಾವೆಯುಲ್ಲಿ ಅಲ್ಪವಯುಸ್ಕನಿದ್ದಾನೆ ಅಂತಾ ಕಾಣಿಸಿದೆ ಅವನು ಪ್ರೌಢ ವಯಸ್ಕನಿದ್ದಾನೆಂತಾ ಕಾಣಿಸಿದರೆ ಮೇಲ್ಕಂಡ ಉತ್ತರಪಕ್ಷವನ್ನು ಮಾಡಬಹುದು. ಕೆಲವು ನಮೂನೆಗಳು ಕೆಳಗೆ ಕೊಡುತ್ತೇವೆ.

೧ "ಪ್ರತಿವಾದಿಯು ತಾರೀಖು ೨೧-೬-೧೯೦೬ನೇ ಇಸ್ವಿ ದಿವಸ ಹುಟ್ಟಿದನು ಕಾರಣಾ ಯಾವ ಕರಾರು ಮಾಡಲ್ಪಟ್ಟಿತೆಂದು ಅಂಬೋಣವಿದೆಯೋ ಅದನ್ನು ಮಾಡುವ ವೇಳೆಯಲ್ಲಿ ಪ್ರತಿವಾದಿಯು ಅಪ್ರಾಯಸ್ಥನಾಗಿದ್ದನು."

೨ " ವಾದಿಗೆ ದಾವೆಯು ದಾಖಲಾದ ವೇಳೆಗೆ ಮತ್ತು ಇನ್ನಾದರೂ ೧೮ ವರ್ಷಗಳು ಮಿಕ್ಕಿಲ್ಲ ಕಾರಣಾ ಅವನು ಅಪ್ರಾಯಸ್ಥನಿರುತ್ತಾನೆ. ಆದ್ದರಿಂದ ಹಿತಚಿಂತಕನಿಲ್ಲದೇ ವಾದಿಗೆ ದಾವೆಯು ಮಾಡಲಿಕ್ಕೆ ಬರಲಾರದು."

೩ " (ಅ) ಪ್ರತಿವಾದಿಯು ತಾರೀಖು ೨೧-೮-೧೯೦೬ ನೇ ಇಸ್ವಿ ದಿವಸ ಹುಟ್ಟಿದನು.

(ಬ) ಪ್ರತಿವಾದಿಯ ಬಗ್ಗೆ ಮತ್ತು ಅವನ ಸ್ವತ್ತಿನ ಬಗ್ಗೆ ತಾರೀಖು ೧೫-೧೨-೧೯೧೭ನೇ ಇಸ್ವಿ ದಿವಸ ಧಾರವಾಡ ಡಿಸ್ಟ್ರಿಕ್ಟ ಕೋರ್ಟನಿಂದ **ಅ, ಬ** ಎಂಬುವವನಿಗೆ ಪಾಲಕನನ್ನು ನೇಮಿಸಲ್ಪಟ್ಟಿರುತ್ತದೆ.

(ಕ) ಕಾರಣಾ ದಾವೆದ ಕರಾರು ಆದ ವೇಳೆಯಲ್ಲಿ ಪ್ರತಿವಾದಿಯು ಅಪ್ರಾಯುಸ್ಥನಾಗಿದನ್ನನು.

೪ " ಪ್ರತಿವಾದಿಯು ತಾರೀಖು ೧೮-೧೨-೧೯೧೩ ನೇ ಇಸ್ವಿ ದಿವಸ ಹುಟ್ಟಿದನು. ಕಾರಣಾ ಅವನು ಅಪ್ರಾಯುಸ್ಥನಾಗಿರುತ್ತಾನೆ. ಆದ್ದರಿಂದ ಪ್ರತಿ

ವಾದಿಯು ತರ್ಫೆನಿಂದೆ ಪಾಲಕನಿಲ್ಲದೆ ಪ್ರತಿವಾದಿಯ ವಿರುದ್ಧದಾವೆಯು ನಡಿಯು ಲಾರದು. ”

**ಕೋರ್ಟನಲ್ಲಿ ಹಣವನ್ನು ಭರಣಾ ಮಾಡುವದು**—(Payment into Court) ಪ್ರತಿವಾದಿಯು (೧) ಅಪಸಾತಿನಲ್ಲಿ ಅಂದರೆ ಪ್ರತ್ಯಕ್ಷ ವಾದಿಯ ಕೈಯಲ್ಲಿ ಅಥವಾ ಅವನಿಂದ ಅಧಿಕೃತನಾದ ಅವನ ಗುಮಾಸ್ತನ ಕೈಯಲ್ಲಿ ಹಣವನ್ನು ಕೊಡಬಹುದು ಅಥವಾ (೨) ಕೋರ್ಟನಲ್ಲಿ ಹಣವನ್ನು ಭರಣಾ ಮಾಡಬಹುದು. ಈ ಎರಡು ಸಂಗತಿಗಳ ವಿದವಾಗಿ ವಿವೇಚನ ಮಾಡೋಣ.

೧. **ಪ್ರತಿವಾದಿಯು ಅಪಸಾತಿನಲ್ಲಿ ಹಣವನ್ನು ಕೊಟ್ಟಿದ್ದರೆ**—ಅಥವಾ ಪ್ರತಿವಾದಿಯ ತರ್ಫೆನಿಂದ ಮತ್ತೊಬ್ಬ ಯಾರಾದರೂ ಹಣವನ್ನು ವಾದಿಗೆ ಅಥವಾ ಅವನಿಂದ ಅಧಿಕೃತನಾದ ಅವನ ಗುಮಾಸ್ತನಿಗೆ ಕೊಟ್ಟಿದ್ದರೆ ಆ ಬಗ್ಗೆ ಉತ್ತರಪಕ್ಷವನ್ನು ಸ್ಪಷ್ಟವಾಗಿ ಮಾಡಬೇಕು. ಈ ಪ್ರಕಾರ ವಸೂಲ ಕೊಟ್ಟ ಹಣವನ್ನು ವಾದಿಯು ತನ್ನ ಅಸಲರ್ಜಿಯಲ್ಲಿ ವಜಾ ಮಾಡಿದ್ದರೆ ಆ ವಜಾ ಮಾಡಿದ ಹಣದ ಬಗ್ಗೆ ಉತ್ತರಪಕ್ಷವನ್ನು ಮಾಡುವದೇನು ಕಾರಣವಿಲ್ಲ ಮತ್ತು ಮಾಡಬಾರದು. ವಸೂಲಕೊಟ್ಟ ಹಣವನ್ನು ಅಸಲರ್ಜಿಯಲ್ಲಿ ಯಾ ದಾವೆಯಲ್ಲಿ ವಜಾ ಮಾಡದಿದ್ದ ಪಕ್ಷಕ್ಕೆ ಮಾತ್ರ ಆ ಬಗ್ಗೆ ಉತ್ತರಪಕ್ಷವನ್ನು ಮಾಡಬೇಕು. ಹಣವನ್ನು ಎಂದು ಕೊಟ್ಟನು ? ಎಷ್ಟು ಕೊಟ್ಟನು ? ಮತ್ತು ಯಾತರ ಬಗ್ಗೆ ಕೊಟ್ಟನು ? ಎಂಬುದನ್ನು ಸ್ಪಷ್ಟವಾಗಿ ಬರೆಯುಬೇಕು. ಇಂಥ ಉತ್ತರಪಕ್ಷವನ್ನು ಹ್ಯಾಗೆ ಮಾಡಬೇಕೆಂಬುವ ಬಗ್ಗೆ ಕೆಲವು ನಮೂನೆಗಳು ಕೆಳಗೆ ಕೊಡುತ್ತೇವೆ.

(ಅ) “ ದಾವೇದ ದಸ್ತೈವಜಿನ ಬಾಬತು ತಾರೀಖು ೧೬-೯-೧೯೨೮ನೇ ಇಸ್ವಿದಿವಸ ಪ್ರತಿವಾದಿಯು ೫೦೦ ರುಪಾಯಿಗಳನ್ನು ವಸೂಲಿ ಕೊಟ್ಟಿದ್ದಾನೆ. ” ಇದರ ಸಂಗಡ “ಹೀಗಿದ್ದು ವಾದಿಯು ದುಷ್ಟ ಬುದ್ಧಿಯಿಂದ ಮತ್ತು ಅಪ್ರಾಮಾಣಿಕತನದಿಂದ ಮತ್ತು ಪ್ರತಿವಾದಿಗೆ ಬುಧ್ಯಾಪೂರ್ವಕವಾಗಿ ತ್ರಾಸ ಕೊಡುವ ಇರಾದೆಯಿಂದ ಮತ್ತು ಲುಕಸಾನು ಮಾಡುವ ಉದ್ದೇಶದಿಂದ ಸದರಿ ರಕಮು ದಾವೆಯಲ್ಲಿ ವಜಾ ಮಾಡಿಲ್ಲಾ ” ಅಂತಾ ವಗೈರೆ ಬರೆಯುವ ತಪ್ಪು ಪದ್ಧತಿಯು ಕಂಡ ಬರುತ್ತದೆ. ಆದರೆ ಹೀಗೆ ಬರೆಯಬಾರದು.

(ಬ) " ಅಸಲರ್ಜಿಯ ಸಂಗಡಿಟ್ಟ ಲೆಖ್ಖದ ಪಟ್ಟಿಯಲ್ಲಿ ಜಮೇದ ಕಡೆಗೆ ಕಾಣಿಸಿದ ರಕಮುಗಳ ಹೊರತು ಪ್ರತಿವಾದಿಯು ಮೇಲಿಂದ ಮೇಲೆ ಕೆಲಕೆಲವು ರಕಮುಗಳನ್ನು ವಸೂಲು ಕೊಟ್ಟಿದ್ದಾನೆ; ಅವೆಲ್ಲ ಕೂಡಿ ಒಟ್ಟ ೧೦೦೦ ರುಪಾಯಿಗಳಾಗುತ್ತವೆ. ಅವುಗಳ ವಪಶೀಲು ಕೆಳಗಿನಂತೆ ಅದೆ:—

೧೦೦ ೮ ೦ ೮ ರೋಖು ಕೊಟ್ಟದ್ದು ತಾರೀಖು ೨೧–೩–೧೯೨೭ನೇ ಇಸ್ವಿ ದಿವಸ.

೬೦೦ ೮ ೦ ೮ ರೋಖು ಕೊಟ್ಟದ್ದು ತಾರೀಖು ೧೮–೪–೧೯೨೭ನೇ ಇಸ್ವಿ ದಿವಸ

೩೦೦ ೮ ೦ ೮ ರೋಖು ಕೊಟ್ಟದ್ದು ತಾರೀಖು ೧೬–೫–೧೯೨೭ನೇ ಇಸ್ವಿ ದಿವಸ

———

ಅಂತು ೧೦೦೦೮ ೦ ೮ ರುಪಾಯಿಗಳನ್ನು

(ಕ) "ಅಸಲರ್ಜಿಯ ಲಗತು ಇಟ್ಟ ಲೆಖ್ಖದ ಪಟ್ಟಿಯಲ್ಲಿ ಜಮೇದ ಕಡೆಗೆ ಕಾಣಿಸಿದ ರಕಮಿನ ಹೊರತು ಪ್ರತಿವಾದಿಯು ಒಟ್ಟ ೩೦೦ ರುಪಾಯಿಗಳನ್ನು ವಸೂಲ ಕೊಟ್ಟಿದ್ದಾನೆ; ಅದರ ತಪಶೀಲು ಕೆಳಗಿನಂತೆ ಇದೆ:—

೨೦೦ ೮ ೦ ದಾವೆದ ದಸ್ತೈವಜಿನ ಅಂಶತಃ ಫೇಡಿಗಾಗಿ ತಾರೀಖು ೧೨-೪–೧೯೨೮ ನೇ ಇಸ್ವಿ ದಿವಸ ಪ್ರತಿವಾದಿಯು ವಾದಿಗೆ ೨೦೦ ರುಪಾಯಿಗಳಿಗೆ ಒಂದು ಎತ್ತು ಮಾರಿದನು.

೧೦೦ ೮ ೦ ದಾವೆದ ದಸ್ತೈವಜಿನ ಅಂಶತಃ ಫೇಡಿಗಾಗಿ ತಾರೀಖು ೧೪–೫–೧೯೨೮ ನೇ ಇಸ್ವಿ ದಿವಸ ಪ್ರತಿವಾದಿಯು ವಾದಿಗೆ ೧೦೦ ರುಪಾಯಿಗಳ ಕಿಮ್ಮತ್ತಿನ ಜೋಳ ಮಾರಿದನು.

———

೩೦೦ ೮೦೮

(ಡ) " ವಾದಿಯು ಒಬ್ಬ ಮಲ್ಲಪ್ಪಾ ತಂದಿ ರಾಚಪ್ಪಾ ಪಾಟೀಲ ಸಾಕೀನ ಬಂಕಾಪುರ ಇತನಿಗೆ ೧೫ ವರ್ಷದ ಹಿಂದೆ ಪ್ರತಿವಾದಿಯ ಕಡೆಯಿಂದ ವರ್ಷಾವರ್ಷಾ ದಾವೇದ ಜಮಿನಿಯ ಬಾಬತು ಲಾವಣೀ ರಕಮು ವಸೂಲು ಮಾಡಲಿಕ್ಕೆ

ನೇಮಿಸಿದನು (ಯಾ ಅಧಿಕೃತ ಮಾಡಿದನು) ಆ ಪ್ರಕಾರ ವರ್ಷಾ ವರ್ಷಾ ಸದರಿ ಮಲ್ಲಪ್ಪಾ ರಾಚಪ್ಪಾ ಇತನು ಪ್ರತಿವಾದಿಯು ಕಡೆಯಿಂದ ಲಾವಣೀ ರಕಮು ವಸೂಲು ಮಾಡುತ್ತಾ ಬಂದಿರುತ್ತಾನೆ. ಅದರಂತೆ ಸನ್ ೧೯೨೮ನೇ ಸಾಲಿನ ಬಾಬತ್ತು ಲಾವಣೀ ರಕಮು ಪ್ರತಿವಾದಿಯು ಸದರಿ ಮಲ್ಲಪ್ಪಾ ತಂದಿ ರಾಚಪ್ಪಾ ಈತನಿಗೆ ತಾರೀಖು ೧೫-೩-೧೯೨೯ ನೇ ಇಸ್ವಿ ದಿವಸ ಕೊಟ್ಟಿದ್ದಾನೆ."

(ಇ) "ವಾದಿಯು ತಾರೀಖು ೧೯-೪-೧೯೨೮ನೇ ಇಸ್ವಿ ದಿವಸ ಪ್ರತಿ ವಾದಿಯ ಕಡೆಯಿಂದ ೪೦೦ ರುಪಾಯಿಗಳಿಗೆ ಎರಡು ಎತ್ತುಗಳನ್ನು ಖರೀದಿ ಮಾಡಿವನು ಮತ್ತು ಸದರಿ ರಕಮು ದಾವೆದ ದಸ್ತೈವಜಿನ ಫೇಡಿಗೆ ಹಚ್ಚಲಿಕ್ಕೆ ಒಪ್ಪಿಕೊಂಡನು ಕಾರಣ ಸದರಿ ರಕಮು ದಾವೆದ ರಕಮಿನಲ್ಲಿ ವಜಾ ಮಾಡಬೇಕು.

(ಫ) "ಪ್ರತಿವಾದಿಯು ದಾವೆದ ದಸ್ತೈವಜಿನ ಅಂಶತಃ ಫೇಡಿಗಾಗಿ ತಾರೀಖು ೧೪-೫-೧೯೨೮ ನೇ ಇಸ್ವಿ ದಿವಸ ವಾದಿಗೆ ಎರಡು ಎತ್ತುಗಳನ್ನು ೪೦೦ ರುಪಾಯಿಗಳಿಗೆ ಮಾರಿದನು." ಸದರಿ ಉತ್ತರಪಕ್ಷವನ್ನು ಕೆಳಗಿನಂತೆ ಮಾಡಬಾರದು. "ಪ್ರತಿವಾದಿಯು ವಾದಿಗೆ ಎರಡು ಎತ್ತುಗಳನ್ನು ೪೦೦ ರುಪಾಯಿಗಳಿಗೆ ಮಾರಿದನು ಆದರೆ ವಾದಿಯು ಸದರಿ ರಕಮು ವಜಾ ಮಾಡಿಲ್ಲ." ದಸ್ತೈವಜಿನ ಫೇಡಿಗಾಗಿ ಸದರಿ ರಕಮು ಹಚ್ಚಲಿಕ್ಕೆ ವಾದಿಯು ಒಪ್ಪಿಕೊಂಡಿದ್ದನು ಎಂಬ ಬಗ್ಗೆ ಮಜಕೂರು ಕಾಣಿಸುವದು ಅವಶ್ಯವದೆ.

೨ **ಕೋರ್ಟಿನಲ್ಲಿ ಹಣವನ್ನು ಭರಣಾ ಮಾಡುವದು:—** ಸಾಲವನ್ನು ಯಾ ಲುಕಸಾನವನ್ನು ಬೇಡುವ ದಾವೆಯಲ್ಲಿ ಪ್ರತಿವಾದಿಯು ಚೌಕಶಿಯ ಯಾವದೋದು ಪರ್ಯಾಯದಲ್ಲಿ ದಾವೆಯನ್ನು ಪೂರ್ಣವಾಗಿ ತೀರಿಸಲಿಕ್ಕೆ ಸಾಕೆಂದು ತನಗೆ ತೋರಿದಷ್ಟು ಹಣವನ್ನು ಕೋರ್ಟಿನಲ್ಲಿ ಭರಣಾ ಮಾಡಿ ಇಡಬಹುದು ( ಆ. ೨೪, ರೂಲ ೧ ) (೧) ಸಾಲವನ್ನು ಯಾ (೨) ಲುಕಸಾನವನ್ನು ಬೇಡುವ ದಾವೆಗಳಲ್ಲಿ ಮಾತ್ರ ಮೇಲಿನಂತೆ ಹಣವನ್ನು ಭರಣಾ ಮಾಡಲಿಕ್ಕೆ ಬರುವದು. ಇವುಗಳ ಹೊರತು ಬೇರೆತರಹದ ದಾವೆ ಗಳಿಗೆ ಸದರಿ ನಿಯಮವು ಲಾಗೂ ಇಲ್ಲಾ. ಪ್ರತಿವಾದಿಯು ತಾನು ಈ ಪ್ರಕಾರ ಹಣವಿಟ್ಟ ಬಗ್ಗೆ ವಾದಿಗೆ ಕೋರ್ಟಿನ ಮಾರಿಫತಿಯಿಂದ ಲೇಖೀ ನೋಟಿಸು ಕೊಡಬೇಕು; ಮತ್ತು ವಾದಿಯು ಅರ್ಜಿಯನ್ನು ಮಾಡಲಾಗಿ

ಕೋರ್ಟನವರು ಆ ಪ್ರಕಾರ ಇಟ್ಟ ಹಣವನ್ನು ಅವನಿಗೆ ಕೊಡಬೇಕು. ಸದರಿ ನೋಟಿಸು ವಾದಿಗೆ ಮುಟ್ಟಿದ ತಾರೀಖಿನಿಂದ ಮುಂದೆ ಪ್ರತಿವಾದಿಯಿಂದ ಕೋರ್ಟ ನಲ್ಲಿ ಇಡಲ್ಪಟ್ಟ ಹಣದ ಬಡ್ಡಿಯನ್ನು ವಾದಿಗೆ ಕೊಡಲಾಗದು. ಆ ಇಟ್ಟ ಹಣವು ದಾವೆಯ ಸಮಗ್ರ ರಕಮು ಆಗಿದ್ದರೂ ಅಥವಾ ಅದಕ್ಕಿಂತ ಕಡಿಮೆ ಆಗಿದ್ದರೂ ಅಡ್ಡಿ ಇಲ್ಲ. ಆದರೆ ಒಟ್ಟಿಗೆ ಇಟ್ಟ ಹಣದ ಮೇಲೆ ಮೇಲಿನಂತೆ ನೋಟೀಸು ಮುಟ್ಟಿದ ತರುವಾಯ ವಾದಿಗೆ ಬಡ್ಡಿ ದೊರೆಯಲಾಗದು. ಅಂಥ ಹಣವನ್ನು ವಾದಿಯು ತನ್ನ ದಾವೆಯ ಕೆಲವು ಅಂಶದ ಸಮಾಧಾನವೆಂದು ಮಾತ್ರ ಸ್ವೀಕರಿಸಿ ದಲ್ಲಿ ಅವನು ಉಳಿದ ಭಾಗಕ್ಕಾಗಿ ತನ್ನ ದಾವೆಯನ್ನು ನಡೆಯಿಸಬಹುದು; ಮತ್ತು ಸದರಿಯಂತೆ ಇಡಲ್ಪಟ್ಟ ಹಣದಿಂದ ವಾದಿಯ ದಾವೆಯು ಪೂರ್ಣವಾಗಿ ತೀರಿಸಲ್ಪಟ್ಟಿತೆಂದು ಕೋರ್ಟಿನ ನಿರ್ಣಯವಾದರೆ, ಆ ಹಣವನ್ನು ಇಟ್ಟ ಬಳಿಕ ದಾವೆಯನ್ನು ನಡೆಯಿಸಲಿಕ್ಕೆ ಆದ ವೆಚ್ಚವನ್ನು ಅದನ್ನು ಇಡುವ ಪೂರ್ವದಲ್ಲಿ ದಾವೆಯೊಳಗೆ ಹೆಚ್ಚಿನ ರಕಮು ಸೇರಿಸಿದ ಮೂಲಕವಾಗಿ ಮಾಡಲ್ಪಟ್ಟ ವೆಚ್ಚ ವನ್ನು ವಾದಿಯು ಸಹಿಸಬೇಕು. ಅಂಥ ರಕಮನ್ನು ವಾದಿಯು ತನ್ನ ಯಾವತ್ತು ದಾವೆಯ ಸಮಾಧಾನವೆಂದು ಸ್ವೀಕರಿಸಿದಲ್ಲಿ, ಅವನು ಅಂಥಾ ಮಜಕೂರುಳ್ಳ ದೊಂದು ಕೈಫಿಯತನ್ನು ಕೋರ್ಟನಲ್ಲಿ ಹಾಜರು ಮಾಡಬೇಕು; ಮತ್ತು ಕೋರ್ಟ ನವರು ಅದರಂತೆ ಫೈಸಲು ಮಾಡಬೇಕು; ಮತ್ತು ಪ್ರತಿಯೊಬ್ಬ ಪಕ್ಷಕಾರನ ವೆಚ್ಚವನ್ನು ಯಾರು ಸಹಿಸಬೇಕೆಂಬುದನ್ನು ಫರ್ಮಾಯಿಸುವದರಲ್ಲಿ ಕೋರ್ಟ ನವರು ಆ ವ್ಯಾಜ್ಯದಲ್ಲಿ ಯಾವನು ಹೆಚ್ಚು ದೋಷಕ್ಕೆ ಪಾತ್ರನಾಗಿರುತ್ತಾನೆಂಬ ದನ್ನು ವಿಚಾರಿಸಬೇಕು.

ಉದಾಹರಣಗಳು—

(೧) ಅ ಎಂಬುವವನು ಬ ಎಂಬುವವನಿಗೆ ೧೦೦ ರುಪಾಯಿ ಕೊಡಬೇ ಕಾಗಿದೆ. ಬ ಎಂಬುವವನು ಆ ಹಣವನ್ನು ಮೊದಲು ಬೇಡಿದೆ, ಬೇಡಿದರೆ ಅದ ರಿಂದಾಗುವ ಅವಕಾಶದಿಂದ ತನಗೆ ಲುಕಸಾನು ಬರುವದೆಂದು ನಂಬಲಿಕ್ಕೆ ಕಾರಣ ವಿಲ್ಲದೆ, ಆ ಹಣಕ್ಕಾಗಿ ಅ ಎಂಬುವವನ ಮೇಲೆ ದಾವೆಯನ್ನು ಮಾಡುತ್ತಾನೆ; ಅಸಲರ್ಜಿಯು ದಾಖಲಾದ ಬಳಿಕ ಅ ಎಂಬುವವನು ಆ ಹಣವನ್ನು ಕೋರ್ಟ ನಲ್ಲಿ ಇಡುತ್ತಾನೆ. ಬ ಎಂಬುವವನು ಅದನ್ನು ತನ್ನ ಯಾವತ್ತು ದಾವೆಯ

ಸಮಾಧಾನವೆಂದು ಸ್ವೀಕರಿಸುತ್ತಾನೆ. ಕೋರ್ಟಿನವರು ಅವನಿಗೆ ವೆಚ್ಚವನ್ನು ಕೊಡಿಸಬಾರದು, ಯಾಕಂದರೆ ಅವನು ನಿಷ್ಕಾರಣವಾಗಿ ದಾವೆಯನ್ನು ಮಾಡಿದ ನೆಂಬ ಅನುಮಾನಕ್ಕೆ ಆಸ್ಪದ ಉಂಟು.

(೨) ಮೇಲಿನ ೧ನೇ ಉದಾಹರಣೆಯಲ್ಲಿ ಹೇಳಿದಹಾಗೆ ಸಂಗತಿ ಇದ್ದು ಬ ಎಂಬುವವನು ಅ ಎಂಬುವವನ ಮೇಲೆ ದಾವೆಯನ್ನು ಮಾಡುತ್ತಾನೆ. ಅಸಲ ರ್ಜಿಯು ದಾಖಲಾದ ಬಳಿಕ ಅ ಎಂಬುವವನು ಕೆಲವು ವೇಳೆ ತಕರಾರು ನಡೆ ಯಿಸಿ ದಾವೆಯ ಹಣವನ್ನು ಕೋರ್ಟಿನಲ್ಲಿ ಇಡುತ್ತಾನೆ. ಬ ಎಂಬುವವನು ಅದನ್ನು ಸಮಗ್ರ ದಾವೆಯ ಸಮಾಧಾನವೆಂದು ಸ್ವೀಕರಿಸುತ್ತಾನೆ. ಕೋರ್ಟಿ ನವರು ಬ ಎಂಬುವನ ವೆಚ್ಚವನ್ನು ಸಹ ಅವನಿಗೆ ಕೊಡಿಸಬೇಕು. ಯಾಕಂದರೆ ಅ ಎಂಬುವವನ ವರ್ತನದಿಂದ ದಾವೆಯನ್ನು ಮಾಡುವದು ಅವಶ್ಯವಾಗಿತ್ತೆಂದು ವ್ಯಕ್ತವಾಗುತ್ತದೆ.

(೩) ಅ ಎಂಬುವವನು ಬ ಎಂಬುವವನಿಗೆ ೧೦೦ ರುಪಾಯಿ ಕೊಡಬೇ ಕಾಗಿದ್ದು ದಾವೆಯ ಹೊರತು ಆ ಹಣವನ್ನು ಕೊಡಲಿಕ್ಕೆ ಸಿದ್ಧನಾಗಿರುತ್ತಾನೆ. ಬ ಎಂಬುವವನು ೧೫೦ರುಪಾಯಿ ಬೇಡಿ ಆ ಬಗ್ಗೆ ದಾವೆಯನ್ನು ಅ ಎಂಬುವವನ ಮೇಲೆ ಮಾಡುತ್ತಾನೆ. ಅಸಲರ್ಜಿಯು ದಾಖಲಾದ ಬಳಿಕ ಅ ಎಂಬುವವನು ಕೋರ್ಟಿನಲ್ಲಿ ೧೦೦ ರುಪಾಯಿ ಇಟ್ಟು, ಉಳಿದ ೫೦ ರುಪಾಯಿಗೆ ಮಾತ್ರ ತಾನು ಜವಾಬದಾರನಲ್ಲವೆಂದು ಪ್ರತಿವಾದ ನಡೆಯಿಸುತ್ತಾನೆ. ಬ ಎಂಬುವವನು ಆ ೧೦೦ ರುಪಾಯಿಯನ್ನು ತನ್ನ ಯಾವತ್ತು ದಾವೆಯ ಸಮಾಧಾನವೆಂದು ಸ್ವೀಕರಿಸುತ್ತಾನೆ. ಕೋರ್ಟಿನವರು ಅವನ ಕೈಯಿಂದ ಅ ಎಂಬುವವನ ವೆಚ್ಚ ವನ್ನು ಕೊಡಿಸಬೇಕು.

ಮೇಲಿನ ಪ್ರಕಾರ ಕೋರ್ಟಿನಲ್ಲಿ ಹಣವನ್ನಿಟ್ಟಲ್ಲಿ ಎರಡು ಲಾಭಗಳು ಆಗುವವು. ಒಂದು ಸದರಿ ಹಣವನ್ನು ಇಟ್ಟ ಬಗ್ಗೆ ವಾದಿಗೆ ನೋಟೀಸು ಮುಟ್ಟಿದ ತರುವಾಯ ಆ ಹಣದ ಬಡ್ಡಿಯು ತಹಕೂಬ ಆಗುವದು; ಎರಡ ನೇದ್ದು ದಾವೆಯ ವೆಚ್ಚವನ್ನು ಮಾಫು ಆಗುವದು. ಹಣವನ್ನು ಭರಣಾ ಮಾಡಬೇಕಾದರೆ ಅದನ್ನು ಬಿನ್ನ ಶರ್ತಿನಿಂದ ಮಾಡಬೇಕು. ಪ್ರತಿವಾದಿಗೆ ವಾದಿಯು ಬೇಡಿದ ಹಣ ಅಥವಾ ಅದರ ಪೈಕಿ ಯಾವದಾದರೊಂದು ಭಾಗವನ್ನು

ಕೊಡಬೇಕಾಗುತ್ತದೆ; ಅಂತಾ ತೋರಿದರೆ ಅವನು ಆ ಹಣವನ್ನು ಕೋರ್ಟಿನಲ್ಲಿ ಭರಣಾ ಮಾಡುವದು ಚಲೋ ಮಾರ್ಗವು. ಈ ಪ್ರಕಾರ ಮಾಡಿದರೆ ಮುಂದಿನ ಬಡ್ಡಿಯು ತಹಕೂಬ ಆಗುವದು ಮತ್ತು ಸದರಿ ವ್ಯಾಜ್ಯದಲ್ಲಿ ಅವನು ದೋಷಕ್ಕೆ ಪಾತ್ರನಾಗದಿದ್ದರೆ ವಾದಿಯ ದಾವೆಯ ವೆಚ್ಚವನ್ನು ಮಾಫು ಆಗುವದು ಮತ್ತು ಅವನಿಗೆ ಅವನ ವೆಚ್ಚವೂ ದೊರಿಯಬಹುದು. ಕೋರ್ಟಿನಲ್ಲಿ ಹಣವನ್ನು ಭರಣಾ ಮಾಡಿದ ಬಗ್ಗೆ ಉತ್ತರಪಕ್ಷವನ್ನು ಕೆಳಗಿನಂತೆ ಮಾಡಬಹುದು ಉ—

(ಅ) (೧) ಇಡೀ ದಾವೆಯ ಸಂಬಂಧದಿಂದ ಪ್ರತಿವಾದಿಯು ಕೋರ್ಟಿನಲ್ಲಿ ೫೦೦ ರೂಪಾಯಿಗಳನ್ನು ಭರಣಾ ಮಾಡಿದ್ದಾನೆ; ಮತ್ತು

(೨) ಅವನು ಹೇಳುವದೇನಂದರೆ ಈ ರಕಮು ವಾದಿಯ ದಾವೆಯ ರಕಮಿನ ಭರಪಾಯಿಯಾಗಲಿಕ್ಕೆ ಸಾಕಾಗುವಂತೆ ಅದೆ.

(ಬ) (೧) ಅಸಲರ್ಜಿ ೧ನೇ ಪ್ಯಾರಾದಲ್ಲಿ ಹೇಳಿದಂತೆ ಬಡ್ಡಿಯು ಅಥವಾ ಯಾವದೇ ಬಡ್ಡಿಯು ಕೊಡುವ ಕರಾರು ಇತ್ತೆಂಬದನ್ನು ಪ್ರತಿವಾದಿಯು ನಿರಾಕರಿಸುತ್ತಾನೆ.

(೨) ಅಸಲ ಹಣವನ್ನು ಮಾತ್ರ ಕೊಡಬೇಕಾಗುತ್ತದೆ. ಸದರಿ ಹಣವನ್ನು ಪ್ರತಿವಾದಿಯು ಕೋರ್ಟಿನಲ್ಲಿ ಭರಣಾ ಮಾಡಿದ್ದಾನೆ. ಮತ್ತು ಸದರಿ ರಕಮಿನಿಂದ ವಾದಿಯ ಯಾವತ್ತು (ಯಾ ಪೂರಾ) ದಾವೆಯು ಸಮಾಧಾನವಾಗುತ್ತದೆಂದು ಹೇಳುತ್ತಾನೆ.

(೩) ಪ್ರತಿವಾದಿಯು ವಾದಿಗೆ ಸದರಿ ರಕಮನ್ನು ಕೊಡಲಿಕ್ಕೆ ಯಾವಾಗಲೂ ಸಿದ್ಧನಾಗಿಯೂ ಮತ್ತು ಸಮ್ಮತನಾಗಿಯೂ ಇದ್ದನು.

(೮) **ಕೊಟ್ಟ ಮಾತನ್ನು ನೆರವೇರಿಸುವದಕ್ಕೆ ಮಾಫಿಯೂ**

( Performance remitted )

ಮತ್ತು

(೯) **ಕರಾರು ರದ್ದು ಮಾಡೋಣ**—( Rescission ) **ಕಡೆಗಾಣಿಸುವದಕ್ಕೆ ಅವಶ್ಯವಿಲ್ಲ ಅಂಥಾ ಕರಾರುಗಳು**—ಯಾವದೊಂದು ಕರಾರಿನ ಪಕ್ಷಕಾರರು ಆ ಕರಾರಿನ ಬದಲಾಗಿ ಮತ್ತೊಂದು ಹೊಸ ಕರಾರನ್ನು

ಮಾಡುವದಕ್ಕೆ, ಇಲ್ಲವೆ ಅದನ್ನು ರಹಿತ ಮಾಡುವದಕ್ಕೆ, ಇಲ್ಲವೆ ಅದರಲ್ಲಿ ಹೆಚ್ಚು ಕಡಿಮೆ ಮಾಡುವದಕ್ಕೆ ಒಡಂಬಟ್ಟರೆ ಆ ಮೊದಲಿನ ಕರಾರನ್ನು ಕಡೆಗಾಣಿಸುವ ಅವಶ್ಯವಿಲ್ಲ. (ಕಲಮು ೬೨,ಕರಾರಿನ ಕಾಯಿದೆ) ಉದಾಹರಣೆಗಳು —(೧) ಅ ಎಂಬವವನು ಒಂದು ಕರಾರಿನಂತೆ ಬ ಎಂಬುವವನಿಗೆ ಕೆಲವು ಹಣಾ ಕೊಡಬೇಕಾಗಿದೆ. ಮುಂದೆ ಅ ಎಂಬುವವನಿಗೆ ಬದಲಾಗಿ ಕ ಎಂಬುವವನನ್ನು ಬ ಎಂಬುವವನು ತನ್ನ ಸಾಲಗಾರನೆಂದು ಸ್ವೀಕರಿಸಬೇಕೆಂಬುವ ಬಗ್ಗೆ ಅ ಬ ಮತ್ತು ಕ ಎಂಬುವವರು ಒಡಂಬಡುತ್ತಾರೆ. ಇಲ್ಲಿ ಅ ಎಂಬುವವನು ಬ ಎಂಬುವವನಿಗೆ ಕೊಡಬೇಕಾಗಿದ್ದ ಸಾಲವು ತೀರಿತು; ಮತ್ತು ಕ ಎಂಬುವವನು ಬ ಎಂಬುವವನಿಗೆ ಕೊಡಬೇಕಾದ್ದೊಂದು ಹೊಸ ಸಾಲದ ಕರಾರು ಮಾಡಲ್ಪಟ್ಟಿತು.

(೨) ಅ. ಎಂಬುವವನು ಬ. ಎಂಬುವವನಿಗೆ ೧೦,೦೦೦ ರೂಪಾಯಿ ಕೊಡಬೇಕಾಗಿದೆ. ಅ ಎಂಬುವವನು ಬ ಎಂಬುವವನ ಸಂಗಡ ಮಾತಾಡಿಕೊಂಡು ಆ ೧೦,೦೦೦ ರೂಪಾಯಿಗಳು ಸಾಲದ ಸ್ಥಳವಲ್ಲಿ ೫೦೦೦ ರೂಪಾಯಿಗಳಿಗಾಗಿ ತನ್ನದೊಂದು (ಅ ಎಂಬುವವನ) ಆಸ್ತಿಯನ್ನು ಬ ಎಂಬುವವನಿಗೆ ಒತ್ತೆಗೆ ಕೊಡುತ್ತಾನೆ. ಇದು ಹೊಸ ಕರಾರುಂಟು, ಮತ್ತು ಇದರಿಂದ ಹಳೇ ಕರಾರು ಲೋಪ ಹೊಂದುತ್ತದೆ.

(೩) ಅ ಎಂಬುವವನು ಒಂದು ಕರಾರಿನಂತೆ ಬ ಎಂಬುವವನಿಗೆ ೧೦೦೦ ರೂಪಾಯಿ ಕೊಡಬೇಕಾಗಿದೆ. ಬ ಎಂಬುವವನು ಕ ಎಂಬುವವನಿಗೆ ೧೦೦೦ ರೂಪಾಯಿ ಕೊಡಬೇಕಾಗಿದೆ ಆ ೧೦೦೦ ರೂಪಾಯಿಗಳನ್ನು ನಿನ್ನ ವಹಿಯಲ್ಲಿ ಕ ಎಂಬುವವನ ಲೆಕ್ಕಕ್ಕೆ ಜಮೆ ಮಾಡೆಂದು ಅ ಎಂಬುವವನಿಗೆ ಬ ಎಂಬುವವನು ಹೇಳುತ್ತಾನೆ. ಆದರೆ ಕ ಎಂಬುವವನು ಈ ವ್ಯವಸ್ಥೆಗೆ ಸಮ್ಮತಿ ಪಡುವದಿಲ್ಲ. ಬ ಎಂಬುವವನು ಕ ಎಂಬುವವನಿಗೆ ಕೊಡತಕ್ಕ ೧೦೦೦ ರೂಪಾಯಿಗಳು ಹಾಗೇ ಉಳಿದವು; ಹೊಸ ಕರಾರು ಮಾಡಲ್ಪಡಲಿಲ್ಲ.

**ವಾಗ್ದಾನ ಧಾರಕನು ವಾಗ್ದಾನವನ್ನು ಕಡೆಗಾಣಿಸುವದನ್ನು ಮಾಫು ಇಲ್ಲವೆ ಹಗುರು ಮಾಡಬಹುದು** – ಪ್ರತಿವಾಗ್ದಾನ ಧಾರಕನು ತನಗೆ ಕೊಟ್ಟ ವಾಗ್ದಾನದ ಕಡೆಗಾಣಿಸುವಿಕೆಯನ್ನು ಸಮಗ್ರವಾಗಿ ಇಲ್ಲವೆ

ಅಂಶತಃ ಮಾಫಮಾಡಬಹುದು ಅಥವಾ ಬಿಟ್ಟುಕೊಡಬಹುದು, ಇಲ್ಲದಿದ್ದರೆ ಆ ಕಡೆಗಾಣಿಸುವಿಕೆಯ ಮುದ್ದತನ್ನು ಬೆಳಿಸಬಹುದು. ಇಲ್ಲದಿದ್ದರೆ ಆ ಕಡೆಗಾಣಿಸುವಿಕೆಗೆ ಬದಲಾಗಿ ಯಾವದಾದರೂ ತನಗೆ ಯೋಗ್ಯ ತೋರಿದ ಪ್ರತಿಕಾರವನ್ನು ಸ್ವೀಕರಿಸಬಹುದು. (ಕಲಮು ೬೩ ಕರಾರಿನ ಕಾಯಿದೆ)

**ಉದಾ**— (೧) **ಅ** ಎಂಬುವವನು **ಬ** ಎಂಬುವವನಿಗೆ ಒಂದು ಚಿತ್ರಕ್ಕೆ ಬಣ್ಣಾ ಹಾಕಿಕೊಡುವ ವಾಗ್ದಾನ ಕೊಡುತ್ತಾನೆ. ಆ ತರುವಾಯ **ಬ** ಎಂಬುವವನು ಅವನಿಗೆ ಬಣ್ಣಾ ಹಾಕಬೇಡೆಂದು ಹೇಳುತ್ತಾನೆ. ಮುಂದೆ **ಅ** ಎಂಬುವವನು ತನ್ನ ವಾಗ್ದಾನವನ್ನು ಕಡೆಗಾಣಿಸಲಿಕ್ಕೆ ಬದ್ಧನಲ್ಲ.

(೨) **ಅ** ಎಂಬುವವನು **ಬ** ಎಂಬುವವನಿಗೆ ೫೦೦೦ ರೂಪಾಯಿ ಕೊಡಬೇಕಾಗಿದೆ. ಆ ಸಾಲವನ್ನು ಕೊಡತಕ್ಕ ವೇಳೆಯಲ್ಲಿ ಅದೇ ಸ್ಥಳದಲ್ಲಿ **ಅ** ಎಂಬುವವನು ೨೦೦೦ ರೂಪಾಯಿಗಳನ್ನು **ಬ** ಎಂಬುವವನಿಗೆ ಕೊಡಲಾಗಿ, **ಬ** ಎಂಬುವವನು ತನ್ನ ಸಮಗ್ರ ಸಾಲದ ಪ್ರತಿಕಾರವಾಗಿ ಆ ರೂಪಾಯಿಗಳನ್ನು ಸ್ವೀಕರಿಸುತ್ತಾನೆ. ಆ ಸಾಲ ಎಲ್ಲ ತೀರಿತು.

(೩) **ಅ** ಎಂಬುವವನು **ಬ** ಎಂಬುವವನಿಗೆ ೫೦೦೦ ರೂಪಾಯಿಗಳನ್ನು ಕೊಡಬೇಕಾಗಿದೆ. ಆ ಸಾಲದ ಪ್ರತಿಕಾರವಾಗಿ **ಕ** ಎಂಬುವವನು **ಬ** ಎಂಬುವವನಿಗೆ ೧೦೦೦ ರೂಪಾಯಿ ಕೊಡಲಾಗಿ, **ಬ** ಎಂಬುವವನು ಆ ರೂಪಾಯಿಗಳನ್ನು ಹಾಗೇ ಸ್ವೀಕರಿಸುತ್ತಾನೆ. ಈ ಋಣದಾನವು ಸಮಗ್ರಸಾಲದ ನಿರ್ಗಮವುಂಟು.

ಇವುಗಳ ಬಗ್ಗೆ ಉತ್ತರಪಕ್ಷವನ್ನು ಕೆಳಗೆ ಬರದಂತೆ ಮಾಡಬಹುದು.

(೧) "ಯಾವ ಕರಾರು ಆಯಿತೆಂದು ಅಂಬೋಣವಿದೆಯೊ ಆ ಕರಾರು ವಾದಿ ಪ್ರತಿವಾದಿಯರೊಳಗೆ ತಾರೀಖು ೧೦–೧೨–೧೯೩೨ನೇ ಇಸ್ವಿ ದಿವಸ ಆದ ಕಬುಲಾಯತಿನ ಮೇಲಿಂದ ರದ್ದಾಯಿತು."

**೧೦ ನಿರ್ಣೀತ ಪ್ರಸಕ್ತಿಗಳು**—(Res judicata S 11. C. P. C.) ನಿರ್ಣೀತ ಪ್ರಸಕ್ತಿಗಳು ಯಾವವು? ಅವುಗಳ ಸಂಬಂಧಿ ಕಾಯಿದೆ ಏನು? ಅವುಗಳ ಸಂಬಂಧಿ ಉತ್ತರ ಪಕ್ಷವನ್ನು ಯಾವಾಗ್ಗೆ ಮತ್ತು ಹ್ಯಾಗೆ ಮಾಡತಕ್ಕದ್ದು? ಎಂಬ ಪ್ರಶ್ನೆಗಳ ಸಂಬಂಧದಿಂದ ಸ್ವಲ್ಪದರಲ್ಲಿ ವಿವೇಚನೆ ಮಾಡೋಣ:—

ಯಾವದಾದರೊಂದು ದಾವೆಯನ್ನು ಯಾ ಮುದ್ದೆಯನ್ನು ನಿರ್ಣೀತ ಪ್ರಸಕ್ತಿ ಆಗಬೇಕಾಗಿದ್ದಲ್ಲಿ ಅದರ ಸಂಬಂಧಿ ಕೆಳಗೆ ಬರೆದ ಸಂಗತಿಗಳನ್ನು ಘಡಾಯಿಸಲಿಕ್ಕೇಬೇಕು. ಅಂದರೆ ಕೆಳಗೆ ಬರೆದ ಎಲ್ಲ ಸಂಗತಿಗಳನ್ನು ಘಡಾಯಿಸದಲ್ಲಿ ಮಾತ್ರ ಅದನ್ನು ನಿರ್ಣೀತ ಪ್ರಸಕ್ತಿಯಾಗುವದು ಇಲ್ಲದಿದ್ದರೆ ಇಲ್ಲ. ಅವುಗಳು ಯಾವವು ? ( ಸಿವಿಲ ಪ್ರೊ. ಕೊ. ಕಲಮು ೧೧).

(೧) ಚಾಲತಿ ದಾವೆಯಲ್ಲಿ ಅಥವಾ ಮುದ್ದೆಯಲ್ಲಿ ಸಾಕ್ಷಾತ್ತಾಗಿಯೂ ಪ್ರಾಮುಖ್ಯವಾಗಿಯೂ ತಕರಾರಿನ ವಿಷಯವಾಗಿದ್ದಂಥಾ ಸಂಗತಿಯು ಮತ್ತೊಂದು ಹಿಂದಿನ ದಾವೆಯಲ್ಲಿ ಅಥವಾ ಮುದ್ದೆಯಲ್ಲಿ ಸಾಕ್ಷಾತ್ತಾಗಿಯೂ ಮತ್ತು ಪ್ರಾಮುಖ್ಯವಾಗಿಯೂ ತಕರಾರಿನ ವಿಷಯವಾಗಿದ್ದಿರಬೇಕು; ಸದರಿ ತಕರಾರಿನ ವಿಷಯವೂ ಆ ಹಿಂದಿನ ದಾವೆಯಲ್ಲಿ ಪ್ರತ್ಯಕ್ಷವಾಗಿ ಆಗಲೀ ಯಾ ಗರ್ಭಿತರೀತಿಯಿಂದಾಗಲಿ ಕಾಣಿಸಿದ್ದಿರಬೇಕು; ಮತ್ತು

(೨) ಆ ಹಿಂದಿನ ದಾವೆಯ ಪಕ್ಷಕಾರರು, ಅಥವಾ ಅವರಾಗಲಿ ಅವರಲ್ಲಿ ಕೆಲವರಾಗಲಿ ಯಾರ ಆಶ್ರಯದಿಂದ ಹಕ್ಕತೋರಿಸುತ್ತಾರೋ ಆ ಪಕ್ಷಕಾರರು ಅವರೇ ಚಾಲತಿ ದಾವೆಯಲ್ಲಿ ಪಕ್ಷಕಾರರಾಗಿರಬೇಕು, ಮತ್ತು

(೩) ಸದರಿ ಪಕ್ಷಕಾರರು ಆ ಹಿಂದಿನ ದಾವೆಯಲ್ಲಿ ತೋರಿಸಿದ ಬಾಧ್ಯತೆಯನ್ನು ಚಾಲತಿ ದಾವೆಯಲ್ಲಿ ತೋರಿಸಿರಬೇಕು. ಮತ್ತು

(೪) ಆ ಹಿಂದಿನ ದಾವೆಯ ನಿರ್ಣಯವನ್ನು ಮಾಡಿದ ಕೋರ್ಟು ಚಾಲತಿ ದಾವೆಯ ನಿರ್ಣಯವನ್ನು ಮಾಡಲಿಕ್ಕೆ ತಕ್ಕ ಅಧಿಕಾರವುಳ್ಳದ್ದಾಗಿರಬೇಕು. ಮತ್ತು

(೫) ಚಾಲತಿ ದಾವೆಯಲ್ಲಿ ಯಾ ಮುದ್ದೆಗಳಲ್ಲಿ ಸಾಕ್ಷಾತ್ತಾಗಿಯೂ ಪ್ರತ್ಯಕ್ಷವಾಗಿಯೂ ತಕರಾರಿನ ವಿಷಯವಾಗಿದ್ದಂಥ ಸಂಗತಿಯು ಆ ಹಿಂದಿನ ದಾವೆಯು ಚೌಕಶಿಮಾಡಿದಂಥ ಕೋರ್ಟಿನವರು ವಿಚಾರಿಸಿ ಆ ಬಗ್ಗೆ ಕಡೆಯ ನಿರ್ಣಯವನ್ನು ಮಾಡಿದ್ದಿರಬೇಕು.

ಈ ಪ್ರಸಕ್ತಿಗಳಲ್ಲಿ ಚಾಲತಿ ದಾವೆಯ ಯಾ ಮುದ್ದೆಯ ಚೌಕಶಿಯನ್ನು ಯಾವ ಕೋರ್ಟಿನವರೂ ಮಾಡಲಾಗದು. ಸಂಕ್ಷೇಪವಾಗಿ ಹೇಳುವದೇನಂದರೆ: —

ಒಂದು ವೇಳೆ ಅದೇ ಪಕ್ಷಕಾರರು ಅವೇ ಹಕ್ಕಿನ ಬಗ್ಗೆ ಆ ಹಕ್ಕಿನ ಚೌಕಶಿ ಮಾಡಲಿಕ್ಕೆ ತಕ್ಕ ಅಧಿಕಾರವುಳ್ಳಂಥಾ ಕೋರ್ಟಿನಲ್ಲಿ ದಾವೆಮಾಡಿ ಆ ಕೋರ್ಟಿನ ನಿರ್ಣಯವನ್ನು ಪಡಕೊಂಡಲ್ಲಿ, ಸದರಿ ಅವರಿಗೆ ಸದರಿ ಹಕ್ಕಿನ ಸಂಬಂಧಿ ಎರಡನೆ ದಾವೆಯಲ್ಲಿ ಮತ್ತೊಮ್ಮೆ ಕೋರ್ಟಿನಿಂದ ನಿರ್ಣಯವನ್ನು ಪಡಕೊಳ್ಳಲಿಕ್ಕೆ ಬರಲಾರದು. ಪಕ್ಷಕಾರರ ನಡುವೆ ಅವರ ಹಕ್ಕಿನ ಸಂಬಂಧಿ ಕೋರ್ಟಿನಿಂದ ಚೌಕಶಿ ಆಗಿ ಒಂದು ನಿರ್ಣಯವನ್ನು ಮಾಡಲ್ಪಟ್ಟಲ್ಲಿ ಅದು ಕಾಯಮು ಅಂತಾ ಹಿಡಿಯತಕ್ಕದ್ದು. ಅದರ ಬಗ್ಗೆ ಪುನಃ ದಾವೆಯನ್ನು ಮಾಡಲಾಗದು. ಮತ್ತು ಮತ್ತೊಮ್ಮೆ ನಿರ್ಣಯವು ದೊರೆಯಲಾಗದು. ಪಕ್ಷಕಾರರು ಕೋರ್ಟಿನಿಂದ ಮಾಡಲ್ಪಟ್ಟ ನಿರ್ಣಯದ ಮೇಲೆ ತಮಗೆ ಅವಶ್ಯಕಂಡರೆ ಅಪೀಲು ಮಾಡಬಹುದು. ಆದರೆ ಅದೆ ಹಕ್ಕಿನ ಬಗ್ಗೆ ಬೇರೆ ದಾವೆಯು ಮಾಡಲಾಗದು.

ಈ ತರದ ನಿರ್ಣೀತ ಪ್ರಸಕ್ತಿಗಳ ಬಗ್ಗೆ ಅವಲದಾವೆಯಲ್ಲಿ ಕೈಫಿಯತಿನ ಮುಖಾಂತರವಾಗಿ ಉತ್ತರಪಕ್ಷವನ್ನು ಸ್ಪಷ್ಟವಾಗಿ ಮಾಡಬೇಕು. ಬರೇ "ವಾದಿ ದಾವೆಗೆ ರೆಸಜುಡಿಕೆಟಾದ (ನಿರ್ಣೀತ ಪ್ರಸಕ್ತಿಗಳ) ಬಾಧಾ ಅದೆ" ಅಂತಾ ಅಷ್ಟೇ ಬರೆಯಬಾರದು. ಯಾವ ದಾವೆಯ ಫೈಸಲಿನ ಮೂಲಕಾ ವಾದಿಯ ದಾವೆಯು ನಡೆಯಲಿಕ್ಕೆ ಹರಕತು ಇರುವದೋ ಆ ಫೈಸಲಿನ ನಂಬರವೂ ವಗೈರೆ ಸ್ಪಷ್ಟವಾಗಿ ಬರೆಯಬೇಕು. ಸದರಿ ಉತ್ತರಪಕ್ಷವನ್ನು ಕೆಳಗಿನಂತೆ ಮಾಡಬೇಕು.

**ಉ—** ೧ "ಪ್ರತಿವಾದಿಯು ಗದಗ ೨ ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ಲಾ. ಅಸಲ ನಂಬರ $\frac{೧೫೬}{೧೯೨೮}$ ನೇದ್ದು ವಾದಿಯ ಮೇಲೆ ದಾವೆಯು ಮಾಡಿ ತಾರೀಖು ೧೯-೧೧-೧೯೨೮ನೇ ಇಶ್ವಿ ದಿವಸ ಹುಕುಮನಾಮೆ ಪಡಕೊಂಡನು. ಆ ದಾವೆಯೊಳಗಿನ ಹುಕುಮನಾಮೆಯ ಮೂಲಕವಾಗಿ ವಾದಿಯ ದಾವೆಗೆ ಪ್ರತಿಬಂಧವಾಗುತ್ತದೆ."

೨ "ವಾದಿಯು ಈ ದಾವೆಯಲ್ಲಿ ಬೇಡಿದ ನ್ಯಾಯಶ್ರಯದ ಬಗ್ಗೆ ಪ್ರತಿವಾದಿಯು ಮೈತ ತಂದೆಯಾದ ರುದ್ರಪ್ಪಾ ತಂದೆ ಬಸಪ್ಪಾ ಕಡೇಮನಿ ಸಾಕೀನ ಅಣ್ಣೀಗೆರಿ ಈತನ ಮೇಲೆ ಧಾರವಾಡ ೧ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ಲಾ. ಅಸಲ ನಂಬರ $\frac{೫೨}{೧೯೨೭}$ ನೇದ್ದು ದಾವೆಯನ್ನು ಮಾಡಿದ್ದನು. ತಾ ೧೮-೧೨-೧೯೨೮ ನೇ ಇಶ್ವಿ ದಿವಸ ಸದರಿ ದಾವೆಯಲ್ಲಿ ಹುಕುಮುನಾಮೆಯು ಮಾಡಲ್ಪಟ್ಟಿತು.

ದಾವೆಯು ಆಸ್ತಿಯ ಬಗ್ಗೆ (ಬಾಧ್ಯತೆಯ ಬಗ್ಗೆ) ಮೃತ ರುದ್ರಪ್ಪಾ ತಂದಿ ಬಸಪ್ಪಾ ಕಡೇಮನಿ ಈತನ ಆಶ್ರಯದಿಂದ ಪ್ರತಿವಾದಿಯು ಹಕ್ಕನ್ನು ತೋರಿಸುತ್ತಾನೆ. ಕಾರಣಾ ಮೇಲ್ಕಂಡ ಲಾ. ಅಸಲ ನಂಬರ $\frac{೫೨}{೧೯೨೭}$ ನೇದ್ದರಲ್ಲಿ ಆದ ಹುಕುಮನಾಮೆಯ ಮೂಲಕವಾಗಿ ವಾದಿಯ ದಾವೆಗೆ ಪ್ರತಿಬಂಧವಾಗುತ್ತದೆ."

೩ "ವಾದಿಯು ಪ್ರತಿವಾದಿಯ ಮೃತ ತಂದಿಯಾದ ರುದ್ರಪ್ಪಾ ಬಸಪ್ಪಾ ಕಡೇಮನಿ ಎಂಬುವವನ ಮೇಲೆ ಧಾರವಾಡ ೧ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ ದಾವೆಯನ್ನು ಮಾಡಿದ್ದನು; ಮತ್ತು ಆ ದಾವೆಯಲ್ಲಿ ತಾರೀಖು ೧೮-೧೨-೧೯೨೮ ನೇ ಇಸ್ವಿ ದಿವಸ ಹುಕುಮನಾಮೆಯು ಮಾಡಲ್ಪಟ್ಟಿತು. ಪ್ರತಿವಾದಿಯು ಸದರಿ ರುದ್ರಪ್ಪಾ ಬಸಪ್ಪಾ ಕಡೇಮನಿ ಈತನ ವಾರಸದಾರನೆಂದು ದಾವೇದ ಆಸ್ತಿಗೆ ಹಕ್ಕನ್ನು ಹೇಳುತ್ತಾನೆ. ಕಾರಣಾ ಮೇಲೆ ಹೇಳಿದ ದಾವೆಯೊಳಗಿನ ಹುಕುಮನಾಮೆಯ ಮೂಲಕವಾಗಿ ವಾದಿಯ ದಾವೆಗೆ ಪ್ರತಿಬಂಧವಾಗುತ್ತದೆ."

**೧೧ ಪ್ರತಿಬಂಧವೂ**—(Estoppel) ಪ್ರತಿಬಂಧವೆಂದರೆ ಏನು? ಯಾವ ಸಂಗತಿಗಳ ಮೂಲಕ ಅದು ಉದ್ಭವಿಸುವದು? ಅವರ ಬಗ್ಗೆ ಉತ್ತರಪಕ್ಷವನ್ನು ಹ್ಯಾಗೆ ಮಾಡಬೇಕು? ಎಂಬ ಪ್ರಶ್ನೆಗಳ ವಿವೇಚನ ಮಾಡುವಾ.

ಪ್ರತಿಬಂಧವೆಂದರೆ ಏನು? ಒಬ್ಬ ಮನುಷ್ಯನು ತನ್ನ ಸ್ಪಷ್ಟವಾದ ಹೇಳಿಕೆಯಿಂದಾಗಲಿ ಕೃತ್ಯದಿಂದಾಗಲಿ ವರ್ಜನದಿಂದಾಗಲಿ ಬುದ್ಧಿಪೂರ್ವಕವಾಗಿ ಮತ್ತೊಬ್ಬನು ಇಂಥದೊಂದು ಸಂಗತಿಯು ನಿಜವದೆಂಮ ನಂಬುವ ಹಾಗೆ ಮಾಡಿದ್ದಲ್ಲಿ ಇಲ್ಲವೆ ನಂಬಿಸಗೊಟ್ಟಲ್ಲಿ ಮತ್ತು ಅಂಥ ನಂಬಿಗೆಯಿಂದ ವರ್ತಿಸುವ ಹಾಗೆ ಮಾಡಿದ್ದಲ್ಲಿ ವರ್ತಿಸಗೊಟ್ಟಲ್ಲಿ ಅವನು ಅವನ ಪ್ರತಿನಿಧಿಯು ಅವನಿಗೂ ಆ ನಂಬಿಕೊಂಡವನಿಗೂ ಇಲ್ಲವೆ ಅವನಿಗೂ ಆ ನಂಬಿಕೊಂಡವನ ಪ್ರತಿನಿಧಿಗೂ ನಡೆಯುವಂಥ ಯಾವದಾದರು ದಾವೆಯಲ್ಲಾಗಲಿ ಪ್ರಕರಣದಲ್ಲಾಗಲಿ ಆ ಸಂಗತಿಯ ನಿಜತನವನ್ನು ನಾಕಾರಿಸಕೂಡದು.

**ಉದಾ—ಅ** ಎಂಬುವವನು ಬುದ್ಧಿಪೂರ್ವಕವಾಗಿಯೂ ಸುಳ್ಳಾಗಿಯೂ ಇಂಥದೊಂದು ಭೂಮಿಯು ತನ್ನದೆಂದು **ಬ** ಎಂಬುವವನಿಗೆ ನಂಬಿಗೆಪಡಿಸಿ **ಬ** ಎಂಬುವವನು ಆ ಭೂಮಿಯನ್ನು ಕೊಂಡು ಅದರ ಬೆಲೆಯನ್ನು ಕೊಡುವ ಹಾಗೆ ಮಾಡುತ್ತಾನೆ.

ಆ ಮೇಲೆ ಆ ಭೂಮಿಯು ಅ ಎಂಬುವವನದಾಗುತ್ತದೆ. ಅ ಎಂಬುವನು ಅದನ್ನು ಮಾರಿದಾಗ ನನಗೆ ಅದಕ್ಕೆ ಬಾಧ್ಯತೆ ಇದ್ದಿಲ್ಲವೆಂದು ನೆವನವನ್ನು ತೋರಿಸಿ ಅದರ ವಿಕ್ರಯವನ್ನು ರಹಿತಮಾಡಿಸಲಿಕ್ಕೆ ಅಪೇಕ್ಷಿಸುತ್ತಾನೆ. ಅವನು ತನ್ನ ಬಾಧ್ಯತೆಯ ಅಭಾವವನ್ನು ಸಾಬೀತು ಮಾಡಕೂಡದು.

ಅಂದ ಮೇಲೆ ಇದರ ಮೇಲಿಂದ ಇಷ್ಟು ಸಹಜ ಕಾಣಿಸುತ್ತದಲ್ಲಾ ಕೆಳಗಿನ ಪ್ರಸಕ್ತಿಗಳಲ್ಲಿ ಮಾತ್ರ ಪ್ರತಿಬಂಧವೂ ಉದ್ಭವಿಸುತ್ತದೆ. ಅವು ಯಾವವೆಂದರೆ–

೧. ಯಾವನಾದರೊಬ್ಬ ಮನುಷ್ಯನು ತನ್ನ ಸ್ಪಷ್ಟವಾದ ಹೇಳಿಕೆಯಿಂದಾಗಲಿ ಕೃತ್ಯದಿಂದಾಗಲಿ ವರ್ಜನದಿಂದಾಗಲಿ ಬುದ್ಧಿಪೂರ್ವಕವಾಗಿ ಮತ್ತೊಬ್ಬನು ಇಂಥದೊಂದು ಸಂಗತಿಯು ನಿಜವೆಂದು ನಂಬುವ ಹಾಗೆ ಮಾಡಬೇಕು ಅಥವಾ ನಂಬಿಸಗೊಡಬೇಕು; ಮತ್ತು

೨. ಸದರೀ ಮತ್ತೊಬ್ಬನು ಹಾಗೆ ನಂಬಬೇಕು; ಮತ್ತು

೩. ಅಂಥ ನಂಬಿಗೆಯಿಂದ ಸದರೀ ಮತ್ತೊಬ್ಬನು ವರ್ತಿಸಬೇಕು ಎಂದರೆ ಮೊದಲಿನ ಮನುಷ್ಯನ ಹೇಳಿಕೆಯನ್ನು ಕೃತ್ಯವನ್ನು ಯಾ ವರ್ಜನವನ್ನು ಸದರೀ ಮತ್ತೊಬ್ಬನು ನಂಬಿಕೊಂಡು ಯಾವದಾದರು ಕೃತ್ಯವನ್ನು ಮಾಡಿರಬೇಕು.

ಈ ಪ್ರಸಕ್ತಿಗಳನ್ನೆಲ್ಲಾ ಮೇಲ್ಕಂಡ ಉದಾಹರಣೆಯಲ್ಲಿ ಹಾಜರ ಅವೆ ಯಾ ಇಲ್ಲಾ ಎಂಬುದನ್ನು ನೋಡೋಣ:—

(೧) ಅ ಎಂಬುವವನು ಬುದ್ಧಿಪೂರ್ವಕವಾಗಿಯೂ ಸುಳ್ಳಾಗಿಯೂ ಇಂಥಾದ್ದೊಂದು ಭೂಮಿಯು ತನ್ನದೆಂದು ಬ ಎಂಬುವವನ ನಂಬಿಗೆ ಪಡಿಸಿದನು; ಮತ್ತು

(೨) ಬ ಎಂಬುವವನು ಅ ಎಂಬುವವನ ಹೇಳಿಕೆಯ ಮೇಲಿಂದ ಸದರಿ ಭೂಮಿಯು ಅ ಎಂಬುವವನದು ಇರುತ್ತದೆಂದು ನಂಬಿದನು; ಮತ್ತು

(೩) ಬ ಎಂಬುವವನು, ಸದರಿ ನಂಬಿಗೆಯ ಮೇಲಿಂದ ಸದರಿ ಭೂಮಿಯನ್ನು ಅ ಎಂಬುವವನ ಅದೇ ಎಂದು ನಂಬಿ, ಆ ಭೂಮಿಯನ್ನು ಕೊಂಡನು. ಮತ್ತು ಅದರ ಬೆಲೆಯನ್ನು ಕೊಟ್ಟನು.

ಈ ಬಗ್ಗೆ ಉತ್ತರಪಕ್ಷವನ್ನು ಕೆಳಗೆ ಹೇಳಿದಂತೆ ಮಾಡಬಹುದು. "ವಾದಿಯು ದಾವೆಯ ಭೂಮಿಯನ್ನು ತನ್ನದೆಂದು ಪ್ರತಿವಾದಿಯ ನಂಬಿಗೆ ಪಡಿಸಿದ್ದರಿಂದ ಪ್ರತಿವಾದಿಯು ತಾರೀಖು ೧೫-೧೦-೧೯೨೮ ನೇ ಇಸ್ವಿ ದಿವಸ ಸದರೀ ಭೂಮಿಯನ್ನು ಖರೀದಿ ಮಾಡಿದನು ಕಾರಣಾ ಸದರಿ ಭೂಮಿಯು ತನ್ನದು ಇದ್ದಿಲ್ಲವೆಂದು ಅನ್ನುವದಕ್ಕೆ ವಾದಿಗೆ ಪ್ರತಿಬಂಧವುಂಟಾಗುತ್ತದೆ."

ಈ ಉತ್ತರ ಪಕ್ಷವನ್ನು ಕೆಳಗಿನಂತೆ ಮಾಡುವ ಪದ್ಧತಿಯು ಕಂಡಬರುತ್ತದೆ. ಯಾವೆಂದರೆ—

"ವಾದಿ ದಾವೆಗೆ ಇಸ್ಟಾಪೆಲದ ಬಾಧಾ ಅದೆ."

ಇದು ತಪ್ಪು ಪದ್ಧತಿಯು. ಕಾರಣಾ ಈ ಪ್ರಕಾರದಿಂದ ಉತ್ತರಪಕ್ಷವನ್ನು ಬರೆಯಬಾರದು; ಆದರೆ ಮೇಲೆ ಹೇಳಿದ ನಮೂನೆಯಂತೆ ಬರೆಯಬೇಕು.

**ಕೊಡಕೊಳ್ಳುವ ಹಣದ ವಜಾಬಾಕಿಯ ತಪಶೀಲನ್ನು** (Setoff) ಯಾವನಾದರೊಬ್ಬನು ಹಣ ಪಡೆಯುವ ಸಲುವಾಗಿ ದಾವೆಯನ್ನು ಮಾಡಿದ್ದಲ್ಲಿ ಪ್ರತಿವಾದಿಯು ತನ್ನ ಕೈಫಿಯತಿನ ಮುಖಾಂತರವಾಗಿ ಉತ್ತರ ಪಕ್ಷವನ್ನು ಮಾಡಬಹುದು. ಮತ್ತು ಸದರಿ ಕೈಫಿಯತಿನಲ್ಲಿ ತನಗೆ ವಾದಿಯು ಕಡಿಂದ ಸಲ್ಲತಕ್ಕ ಹಣವನ್ನು ವಜಾಬಾಕಿಯು ಮಾಡಲಿಕ್ಕೆ ಬೇಡಿಕೊಳ್ಳಬಹುದು. ವಾದಿಯು ತನ್ನ ದಾವೆಯಲ್ಲಿ ಬೇಡಿದ ರಕಮಿನಗಿಂತ ಪ್ರತಿವಾದಿಗೆ ವಾದಿಕಡಿಂದ ಸಲ್ಲತಕ್ಕ ಹಣವನ್ನು ಹೆಚ್ಚಾದರೆ ಆ ಹೆಚ್ಚಿನ ಹಣದ ಬಗ್ಗೆ ಪ್ರತಿವಾದಿಯು ವಾದಿಯ ಮೇಲೆ ಹುಕುಮುನಾಮೆ ಪಡಕೊಳ್ಳಬಹುದು. ಯಾವ ಪ್ರಸಕ್ತಿಗಳಲ್ಲಿ ವಾದಿಯು ಬೇಡಿದ ರಕಮಿನಲ್ಲಿ ಪ್ರತಿವಾದಿಗೆ ವಾದಿಕಡಿಂದ ಸಲ್ಲತಕ್ಕ ಹಣವನ್ನು ವಜಾಬಾಕಿ ಮಾಡಲಿಕ್ಕೆ ಬರುವದು ಎಂಬವನ್ನು ವಿಚಾರಮಾಡುವಾ.

ಕೆಳಗೆ ಬರೆದ ಶರ್ತುಗಳಿಗೆ ಒಳಪಟ್ಟು ಮಾತ್ರ ಪ್ರತಿವಾದಿಗೆ ವಾದಿಯು ಮಾಡಿದ ದಾವೆಯಲ್ಲಿ ತನಗೆ ದೊರೆಯತಕ್ಕ ಹಣವನ್ನು ವಜಾಬಾಕಿ ಮಾಡಲಿಕ್ಕೆ ಬರುವದು. ಸದರಿ ಶರ್ತುಗಳ ತಪಶೀಲು ಕೆಳಗಿನಂತೆ ಅದೆ:–(ಆ ೮, ರು ೬.)

೧. ವಾದಿಯು ಮಾಡಿದ ದಾವೆಯು ಹಣ ಪಡೆಯುವ ಸಲುವಾಗಿ ಮಾಡಿರಲಿಕ್ಕೆ ಬೇಕು ಮತ್ತು;

೨. ವಜಾವಟು ಮಾಡತಕ್ಕ ರಕಮು.

(ಅ) ನಿಶ್ಚಿತವಾದ ರಕಮು ಇರಬೇಕು. ಮತ್ತು ;

(ಬ) ಆ ರಕಮು ಕಾಯದೇಶೀರ ರೀತಿಯಿಂದ ಸಲ್ಲತಕ್ಕಂಥಾದ್ದಾಗಿರಬೇಕು; ಮತ್ತು

(ಕ) ಆ ರಕಮು ಪ್ರತಿವಾದಿಗೆ (ಯಾಯಲ್ಲಪ್ರತಿವಾದೇರಿಗೆ ಒಬ್ಬರಿಗಿಂತ ಹೆಚ್ಚು ಜನ ಪ್ರತಿವಾದೇರು ಇದ್ದರೆ) ಸಲ್ಲತಕ್ಕಂಥಾದ್ದಾಗಿರಬೇಕು. ಮತ್ತು ;

(ಡ) ಆ ರಕಮು ಪ್ರತಿವಾದಿಗೆ ವಾದಿ ಕಡಿಂದ (ಯಾ ಎಲ್ಲ ವಾದೇರ ಕಡಿಂದ ಒಬ್ಬರಿಗಿಂತ ಹೆಚ್ಚು ಜನ ವಾದೇರು ಇದ್ದರೆ) ಸಲ್ಲತಕ್ಕಂಥಾದ್ದಾಗಿರಬೇಕು. ಮತ್ತು

(ಇ) ಆ ರಕಮು ದಾವೆಯನ್ನು ಮಾಡಿದ ಕೋರ್ಟಿನ ಹುಕುಮತ್ತಿನ ಹಣದಸಂಬಂಧದ ಮರ್ಯಾದೆಯನ್ನು ಮೀರಬಾರದಂತಾಗಿರಬೇಕು. ಮತ್ತು;

(ಫ) ಆ ರಕಮಿನ ಸಂಬಂಧದಲ್ಲಿ ಉಭಯ ಪಕ್ಷಕಾರರು ವಾದಿಯು ದಾವೆಯಲ್ಲಿ ಧರಿಸಿದ ಸ್ವರೂಪವನ್ನೇ ಧರಿಸಿದ್ದಿರಬೇಕು.

ಸದರಿ ವಜಾಬಾಕಿಯ ತಪಶೀಲುಳ್ಳ ಲೇಖೀ ಕೈಫಿಯತನ್ನು ದಾವೆಯ ಮೊದಲನೇ ಸುನಾವಣಿಯ ಕಾಲಕ್ಕೆ ಪ್ರತಿವಾದಿಯು ಹಾಜರ ಮಾಡಬಹುದು. ಕೋರ್ಟಿನವರ ಅಪ್ಪಣೆಯನ್ನು ಪಡಕೊಂಡು ಅನಂತರದಲ್ಲಿ ಸಹಾ ಹಾಜರ ಮಾಡಬಹುದು. ಅವಲ ಹಕ್ಕನ್ನು ಮತ್ತು ವಜಾಬಾಕಿಯನ್ನು ಕುರಿತು ಕೋರ್ಟಿನವರಿಗೆ ಕೊನೆಯ ನಿರ್ಣಯವನ್ನು ಮಾಡಲಿಕ್ಕೆ ಅನುಕೂಲವಾಗಬೇಕಾಗಿ, ಆ ಕೈಫಿಯತಿನ ಪರಿಣಾಮವು ಒಂದು ದಾವೆಗೆ ವಿರುದ್ಧವಾಗಿ ಮಾಡಲ್ಪಟ್ಟ ಮತ್ತೊಂದು ದಾವೆಯ ಅಸಲರ್ಜಿಯಂತೆ ಆಗುವದು.

**ಉ— ಅ** ಎಂಬವವನು **ಬ** ಎಂಬುವವನ ಮೇಲೆ ಒಂದು ಹುಂಡಿಯ ಆಧಾರದಿಂದ ೫೦೦ರೂಪಾಯಿಯ ದಾವೆಯನ್ನು ಮಾಡುತ್ತಾನೆ. **ಬ** ಎಂಬುವವನು **ಅ** ಎಂಬುವವನ ಮೇಲೆ ೧೦೦೦ ರೂಪಾಯಿಯ ಫೈಸಲು ಪಡೆದಿರುತ್ತಾನೆ. ಈ ಎರಡು ನಿಶ್ಚಿತವಾದ ಹಣದ ಸಂಬಂಧದ ಬಾಧ್ಯತೆಗಳಾಗಿರುವ ಕಾರಣ ಒಂದರಲ್ಲಿ ಮತ್ತೊಂದನ್ನು ವಜಾ ಮಾಡಬಹುದು.

ವಜಾಬಾಕಿಯ ಉತ್ತರ ಪಕ್ಷವನ್ನು ಮಾಡುವ ನಮೂನೆಯು—"ವಾದಿಯು ಪ್ರತಿವಾದಿಯ ಬಳಿಯಲ್ಲಿ ತಾರೀಖು ೧೬–೫–೧೯೨೮ನೇ ಇಸವಿ ದಿವಸ ಎರಡು ಎತ್ತುಗಳು ೪೦೦ ರೂಪಾಯಿಗೆ ಖರೀದಿ ಮಾಡಿದನು. ಮತ್ತು ಈ ರೂಪಾಯಿಗಳನ್ನು ವಾದಿಯು ಕೊಡಬೇಕಾಗಿರುತ್ತದೆ.

ಸದರಿ ೪೦೦ ರೂಪಾಯಿಯು ದಾವೇದ ರಕಮಿನಲ್ಲಿ ವಜಾಬಾಕಿಯು ಮಾಡಬೇಕೆಂದು ಪ್ರತಿವಾದಿಯು ಬೇಡುತ್ತಾನೆ."

---

# ೮ ನೆಯ ಪ್ರಕರಣ

## ಅಸಲರ್ಜಿಯಲ್ಲಿ ಯಾ ಕೈಫಿಯತಿನಲ್ಲಿ ಯಾವ ಸಂಗತಿಗಳನ್ನು ಬರೆಯಬಾರದು.

ಪ್ರತಿಯೊಂದು ಅಸಲರ್ಜಿಯಲ್ಲಿ ಯಾ ಕೈಫಿಯತ್ತಿನಲ್ಲಿ ಯಾವ ಯಾವ ಸಂಗತಿಗಳನ್ನು ಬರೆಯಬೇಕು ಎಂಬ ಬಗ್ಗೆ ಈ ಮೊದಲು ವಿಶದವಾಗಿ ವಿವೇಚನ ವನ್ನೂ ಮಾಡಿದ್ದೇವೆ; ಮತ್ತು ಅದಕ್ಕೆ ಅನುಸರಿಸಿ ಅಸಲರ್ಜಿ ಯಾ ಕೈಫಿಯತನ್ನು ಬರೆಯಲ್ಪಟ್ಟಲ್ಲಿ ಅದನ್ನು ಸ್ವಲ್ಪದರಲ್ಲಿ ಬರೆಯುವದು ಶಕ್ಯವಿದೆ. ಉದ್ದ ಉದ್ದವಾ ದಂಥಾ ಅಸಲರ್ಜಿಯು ಯಾ ಕೈಫಿಯತು ಬರೆಯುವದರಮೇಲಿಂದ ವಕೀಲರ ಜಾಣ ತನವನ್ನು ತೋರಿಬರುತ್ತದೆಂಬುದು ತಪ್ಪು ಸಮಜೂತು ಜನರಲ್ಲಿ ಇದೆ. ಯಾವ ವಕೀಲನು ಒಳ್ಳೇ ಉದ್ದವಾದಂಥಾ ಅಸಲರ್ಜಿಯನ್ನು ಯಾ ಕೈಫಿಯತನ್ನು ಬರೆ ಯುತ್ತಾನೋ ಮತ್ತು ಅದನ್ನು ಮೂರು ನಾಲ್ಕು ಅರ್ಥಗಳನ್ನು ಉದ್ಭವಿಸುವಂತೆ ಬರೆಯುತ್ತಾನೋ ಅವನು ಒಳ್ಳೇ ಕಾಯದೆ ಪಂಡಿತನನಿರುವನು ಅಂತಾ ತಪ್ಪು ಸಮಜೂತು ಜನರಲ್ಲಿ ಇದೆ. ಕಾರಣಾ ಉದ್ದ ಉದ್ದವಾದಂಥಾ ಅಸಲರ್ಜಿಯ ಯಾ ಕೈಫಿಯತು ಬರೆಯುವ ಪದ್ಧತಿಯು ಕಂಡುಬರುತ್ತದೆ. ಅವುಗಳನ್ನು ಅಸ್ಪಷ್ಟವಾಗಿ ಬರೆಯಲ್ಪಡುತ್ತವೆ. ಅವುಗಳಲ್ಲಿ ಎಷ್ಟೋ ಅಸಂಬಂಧವಾದ ಮತ್ತು ಗೈರ ಮಹ ತ್ವದ ಸಂಗತಿಗಳು ಹೇಳಲ್ಪಡುತ್ತವೆ. ಆದ್ದರಿಂದ ಮಹತ್ವದ ಸಂಗತಿಗಳು ಯಾವವು ಮತ್ತು ಗೈರ ಮಹತ್ವದ ಸಂಗತಿಗಳು ಯಾವವು; ವಾದಿಯು ಯಾವ ಸಂಗತಿಗಳ ಮೇಲೆ ತನ್ನ ಬಾಧ್ಯತೆಯ ಬಗ್ಗೆ ಆಧರಿಸುತ್ತಾನೋ ಮತ್ತು ಯಾವ ಸಂಗತಿಗಳ ಆಧಾರದ ಮೇಲೆ ಅದಕ್ಕೆ ಉತ್ತರಪಕ್ಷವನ್ನು ಮಾಡುತ್ತಾನೋ ಎಂಬ ದನ್ನು ಸ್ಪಷ್ಟವಾಗುವದಿಲ್ಲ. ಅಸಲರ್ಜಿಯು ಅಸ್ಪಷ್ಟವಿರುತ್ತದೆ ಮತ್ತು ಹಾಗೆ ಕೈಫಿಯತು ಸಹ ಅಸ್ಪಷ್ಟವಿರುತ್ತದೆ. ಆದ್ದರಿಂದ ಕೋರ್ಟಿನವರಿಗೆ ಯೋಗ್ಯ ವಾದಂಥ ನ್ಯಾಯಾಶ್ರಯವನ್ನು ಕೊಡಲಿಕ್ಕೆ ತೊಂದರೆ ಉಂಟಾಗುತ್ತದೆ. ಕಾರಣ ಅಸಲರ್ಜಿಯಲ್ಲಿ ಯಾ ಕೈಫಿಯತಿನಲ್ಲಿ ಮಹತ್ವದ ಸಂಗತಿಗನ್ನಷ್ಟೇ ಬರೆಯಬೇಕು. ಮತ್ತು ಇತರ ಸಂಗತಿಗಳನ್ನು ಬರೆಯಬಾರದು.

ಪ್ರತಿಯೊಂದು ಅಸಲಅರ್ಜಿಯಲ್ಲಿ ಯಾ ಕೈಫಿಯತಿನಲ್ಲಿ ಅವಶ್ಯವಾಗಿ ಬರೆಯುವಂಥ ಸಂಗತಿಗಳು ಯಾವವು ಎಂಬದನ್ನು ಮತ್ತೊಮ್ಮೆ ಹೇಳುತ್ತೇವೆ. ಪ್ರತಿಯೊಂದು ಅಸಲಅರ್ಜಿಯಲ್ಲಿ ಯಾ ಕೈಫಿಯತ್ತಿನಲ್ಲಿ ದಾವೆಯನ್ನು ನಡೆಸುವ ಪಕ್ಷಕಾರನು ತನ್ನ ಹಕ್ಕಿನ ಯಾ ಉತ್ತರಪಕ್ಷದ ಬಗ್ಗೆ, ಹ್ಯಾಗಿರುವದೋ ಹಾಗೆ ಯಾವ ಮಹತ್ವದ ಸಂಗತಿಗಳ ಮೇಲೆ ಆಧರಿಸುತ್ತಾನೋ ಅವುಗಳನ್ನು ಮಾತ್ರ ಸಂಕ್ಷಿಪ್ತವಾಗಿ ಬರೆಯಲ್ಪಟ್ಟಿರಬೇಕು, ಆದರೆ ಅವನ್ನು ಯಾವರ ಮೇಲಿಂದ ಸಾಬೀತು ಮಾಡಬೇಕಾಗಿರುವದೋ ಆ ಪುರಾವೆಯನ್ನು ಕೊಟ್ಟಿರಲಾಗದು. (ಆ. ೬, ರೂ. ೨.) ಅಂದ ಮೇಲೆ ವಾದಿಯು ತನ್ನ ಹಕ್ಕಿನ ಬಗ್ಗೆ ಮತ್ತು ಪ್ರತಿವಾದಿಯು ತನ್ನ ಉತ್ತರಪಕ್ಷದ ಬಗ್ಗೆ ಯಾವ ಯಾವ ಮಹತ್ವದ ಸಂಗತಿಗಳ ಮೇಲೆ ಆಧರಿಸುತ್ತಾನೋ ಅವುಗಳನ್ನಷ್ಟೇ ಬರೆಯಬೇಕು; ಆದರೆ (೧) ಆ ಸಂಗತಿಗಳ ಮೇಲಿಂದ ಹೊರಡಬಹುದಾದ ಕಾಯದೆಯ ಅನುಮಾನಗಳು ಯಾ ಸಿದ್ಧಾಂತಗಳು ಅಥವಾ (೨) ಆ ಸಂಗತಿಗಳನ್ನು ಸಾಬೀತು ಮಾಡತಕ್ಕಂಥ ಪುರಾವೆದ ಸಂಗತಿಗಳನ್ನು ಹೇಳಬಾರದು. ಈ ಬಗ್ಗೆ ಸಂಪೂರ್ಣ ವಿವೇಚನವನ್ನು ಹಿಂದಕ್ಕೆ ಮಾಡಿರುತ್ತೇವೆ. ಕಾರಣಾ ಅದರ ಪುನರಾವೃತ್ತಿಯು ಇಲ್ಲಿ ಮಾಡುವದು ಕಾರಣವಿಲ್ಲ.

ಈಗ ಯಾವ ಸಂಗತಿಗಳನ್ನು ಬರೆಯಬಾರದೆಂಬದನ್ನು ವಿಚಾರಮಾಡತಕ್ಕದ್ದಾಗಿದೆ. ಮೇಲೆ ಹೇಳಿದಂತೆ (೧) ಕಾಯದೆಯ ಅನುಮಾನಗಳು ಯಾ ಸಿದ್ಧಾಂತಗಳು ಬರೆಯಬಾರದು ಮತ್ತು (೨) ಪುರಾವೇದ ಸಂಗತಿಗಳನ್ನು ಬರೆಯಬಾರದು. ಬರೆಯಬಾರದಂಥ ಸಂಗತಿಗಳನ್ನು ಬರೆಯಲ್ಪಟ್ಟ ಕೆಲವು ಸಾಮಾನ್ಯ ಉದಾಹರಣೆಗಳನ್ನು ಕೆಳಗೆ ಕೊಡುತ್ತೇವೆ.

**ಉದಾಹರಣಗಳು** (೧)"ವಾದಿಯು ಮೃತ ಚಿನ್ನಪ್ಪಾ ತಂದಿ ರಾಚಪ್ಪಾ ಉಳ್ಳಾಗಡ್ಡಿ ಈತನ ಸಮೀಪ ಮತ್ತು ಸರಳ ವಾರಸದಾರನು ಇರುತ್ತಾನೆ" ಇದರಲ್ಲಿ ಕಾಯದೆಯ ಅನುಮಾನವೂ ಯಾ ಸಿದ್ಧಾಂತವೂ ಹೇಳಿದಂತೆ ಆಗುವದು. "ವಾರಸದಾರನು ಇರುತ್ತಾನೆ" ಎಂಬ ಕಾಯದೆಯ ಅನುಮಾನವನ್ನು ಹೇಳಬಾರದು. ಅವನು ವಾರಸದಾರನು ಹೇಗೆ ಆಗುತ್ತಾನೆ ಎಂಬ ಸಂಗತಿಗಳು ಅಂದರೆ ಆಸ್ತತ್ವ ವಗೈರೆ ಹೇಳಬೇಕು. ಆ ಸಂಗತಿಗಳ ಆಧಾರದ ಮೇಲಿಂದ ಕೋರ್ಟಿನ

ವರು ವಾದಿಯು ವಾರಸದಾರನು ಇದ್ದಾನೆ ಯಾ ಇಲ್ಲಾ ಎಂಬ ನಿರ್ಣಯವನ್ನು ಮಾಡುವರು.

(೨) "ದಾವೇದ ಮನೆಯ ಕಬಜಾ ಪಡಕೊಳ್ಳಲಿಕ್ಕೆ ವಾದಿಗೆ ಪೂರ್ಣ ಹಕ್ಕು ಇದೆ." ಇದರಲ್ಲಿ ಸಹ ಕಾಯದೆಯ ಅನುಮಾನ ಹೇಳಿರುತ್ತದೆ. ಯಾವ ಸಂಗತಿಗಳ ಮೇಲಿಂದ ತನಗೆ ದಾವೇದ ಮನೆಯ ಕಬಜಾ ಪಡಕೊಳ್ಳುವ ಹಕುಕ ಇದೆ ಅಂತಾ ವಾದಿಯು ಅಂಬೋಣವಿದೆಯೋ ಆ ಸಂಗತಿಗಳನ್ನು ಬರೆಯಬೇಕು. ಆದರೆ ಮೇಲಿನಂತೆ ಕಾಯದೆಯ ಅನುಮಾನವನ್ನು ಬರೆಯಬಾರದು.

(೩) ದಾವೇದ ಹಣ ವಸೂಲ ಮಾಡಲಿಕ್ಕೆ ವಾದಿಯು ಸಂಪೂರ್ಣ ಹಕ್ಕದಾರನು ಯಾ ಅಧಿಕಾರಸ್ಥನು ಇರುತ್ತಾನೆ." ಇದರಲ್ಲಿ ಸಹ ಕಾಯದೆಯ ಅನುಮಾನು ಹೇಳಿರುತ್ತದೆ.

(೪) "ಪ್ರತಿವಾದಿಗೆ ದಾವೇದ ಹಣವನ್ನು ಕೊಡಲಿಕ್ಕೆ ಎಷ್ಟಾವರ್ತಿ ಕೇಳಿದರು ಮತ್ತು ಅವನು ಸದರಿ ಹಣವನ್ನು ಕೊಡಲಿಕ್ಕೆ ಸಮರ್ಥನಿದ್ದು ಕೊಡಲಿಲ್ಲ ಕಾರಣಾ ದಾವೆಮಾಡುವ ಭಾಗ ಬಿತ್ತು."

ಇವರಲ್ಲಿಯ ದೋಷಗಳು ಕೆಳಗೆ ಸ್ಪಷ್ಟ ಮಾಡುತ್ತೇವೆ.

(ಅ) "ಹಣವನ್ನು ಕೊಡಲಿಕ್ಕೆ ಎಷ್ಟಾವೃತ್ತಿ ಕೇಳಿದರು" ಅಂತಾ ಬರೆಯುವದೇನು ಕಾರಣವಿಲ್ಲ, ಮತ್ತು ಅಗತ್ಯವಿಲ್ಲ. ಬೇಡಿದಾಗ್ಗೆ ಹಣವನ್ನು ವಾಪಸ ಕೊಡುವ ಕರಾರು ಇದ್ದರೆ ಒಮ್ಮೆ ಅದನ್ನು ಬೇಡಿದಕೂಡಲೆ ವಾಪಸ ಕೊಡಬೇಕಾಗುತ್ತದೆ. ಒಮ್ಮೆ ಬೇಡಿದರೆ ಸಾಕು. ಹಲವು ಸಾರೆ ಬೇಡಲಿಕ್ಕೆ ಕಾರಣವಿಲ್ಲ. ಆದರೆ ದಾವೆಯನ್ನು ಮಾಡುವ ಮೊದಲು ಹಣವನ್ನು ವಾಪಸ ಬೇಡಿದ್ದಲ್ಲಿ ಮಾತ್ರ ದಾವೇದ ಕಾರಣವು ಉಂಟಾಗುವದು ಹೀಗೇನೂ ಇಲ್ಲ. ಸದರಿ ಕರಾರಿನಲ್ಲಿ ಹಣವನ್ನು ಕೊಟ್ಟಕೂಡಲೆ ಅದನ್ನು ವಾಪಸ ಕೊಡುವ ಜವಾಬದಾರಿಯು ಪ್ರತಿವಾದಿಯ ಮೇಲೆ ಇದೆ. ಮತ್ತು ದಾವೇದ ಕಾರಣವು ಹಣವನ್ನು ಕೊಟ್ಟ ತಾರೀಖಿಗೆ ಉದ್ಭವಿಸುವದು. ಆದರೆ ಅದನ್ನು ಬೇಡಿದ್ದರಿಂದ ಯಾ ಬೇಡಿದ ತಾರೀಖಿಗೆ ಉದ್ಭವಿಸುವದಿಲ್ಲ. ಕಾರಣಾ ಹಣವನ್ನು ಬೇಡಿತು ಅಂತಾ ಬರೆಯಲಿಕ್ಕೆ ಕಾರಣವಿಲ್ಲಾ. ಹಣವನ್ನು ಕೊಟ್ಟ ಕೆಲವು ಅವಧಿ ನಂತರ ಆ ಹಣವನ್ನು ವಾಪಸ ಕೊಡುವ ಕರಾರು ಇದ್ದಲ್ಲಿ ಆ ಅವಧಿಯು ಮೀರಿದಕೂಡಲೆ ಆ ಹಣವನ್ನು

ವಾಪಸ ಕೊಡಬೇಕಾಗುವದು, ಹಣವನ್ನು ಬೇಡಿದರೂ ಸೈ ಬೇಡದಿದ್ದರೂ ಸೈ. ಆ ಹಣವನ್ನು ಬೇಡಿದರೆ ಮಾತ್ರ ದಾವೆಯ ಕಾರಣವು ಉದ್ಭವಿಸುತ್ತದೆ ಅಂತ ಅನ್ನಲಿಕ್ಕೆ ಬರಲಾರದು. ಕರಾರಿನಲ್ಲಿ ಹೇಳಿದ ಅವಧಿಯು ಮೀರಿದ ಕೂಡಲೆ ದಾವೇದ ಕಾರಣ ಉಂಟಾಗುತ್ತದೆ. ಕಾರಣ ಹಣವನ್ನು ಬೇಡಿತು ಅಂತಾ ಹೇಳುವ ಕಾರಣವಿಲ್ಲಾ.

(ಬ) "ಹಣವನ್ನು ಕೊಡಲಿಕ್ಕೆ ಸಮರ್ಥನಿದ್ದು" ದಾವೇದ ಹಣವನ್ನು ಕೊಡಲಿಕ್ಕೆ ಪ್ರತಿವಾದಿಯು ಸಮರ್ಥನಿದ್ದಾನೆ ಯಾ ಇಲ್ಲಾ ಎಂಬುವದೇನು ಮಹತ್ವದ ಸಂಗತಿಯಲ್ಲ. ಸದರಿ ಸಂಗತಿಯನ್ನು ವಾದಿಯು ಪಡಕೊಳ್ಳಬಹುದಾದ ಹುಕುಮನಾಮೆಯ ಅಮಲ ಬಜಾವಣಿಯ ಕಾಲಕ್ಕೆ ವಿಚಾರಮಾಡತಕ್ಕಂಥಾದ್ದು ಇರುತ್ತದೆ. ವಾದಿಯ ಹಣ ಕೊಡುವ ಜವಾಬದಾರಿಯು ಪ್ರತಿವಾದಿಯ ಹಣವನ್ನು ವಾಪಸ ಕೊಡುವ ಸಾಮರ್ಥ್ಯದ ಮೇಲೆ ಅವಲಂಬಿಸಿರುವದಿಲ್ಲ. ಕಾಯದೆಯಿಂದ ಪ್ರತಿವಾದೆಯು ವಾದಿಯ ಹಣವನ್ನು ಕೊಡಲಿಕ್ಕೆ ಜವಾಬದಾರನಾಗಿದ್ದರೆ ಪ್ರತಿವಾದಿಯು ಆ ಹಣವನ್ನು ಕೊಡಲಿಕ್ಕೆ ಸಮರ್ಥನಿದ್ದರೂ ಯಾ ಅಸಮರ್ಥನಿದ್ದರೂ ಅವನ ವಿರುದ್ಧ ಆ ಹಣದ ಬಗ್ಗೆ ಹುಕಮನಾಮೆಯು ಮಾಡಲಾಗುವದು.

(ಕ) "ದಾವೆಮಾಡುವ ಭಾಗ ಬಿತ್ತು" ಯಾವ ಸಂಗತಿಗಳ ಮೂಲಕ ದಾವೆಯು ಮಾಡುವ ಭಾಗ ಬಿತ್ತು ಆ ಸಂಗತಿಗಳನ್ನು ಬರೆದರೆ ಸಾಕು; ಅವರೆ "ದಾವೆ ಮಾಡುವ ಭಾಗ ಬಿತ್ತು" ಅಂತಾ ಹೇಳಲಿಕ್ಕೆ ಕಾರಣವಿಲ್ಲ.

(ಜ) "ದಾವೇದ ಹಣವನ್ನು ಕೊಡಲಿಕ್ಕೆ ಪ್ರತಿವಾದಿಗೆ ನೋಟೀಸ ಮಾಡಿದರೂ ಅವನ್ನು ಕೊಡಲಿಲ್ಲ. ಮತ್ತು ವಿನಾಕಾರಣ ಅವನು ಹಣಕೊಡುವದು ತಪ್ಪಿಸುತ್ತಾನೆ."

(ಅ) 'ನೋಟೀಸು ಮಾಡಿದರೂ.' ನೋಟೀಸು ಮಾಡುವದು ಏನೂ ಅಗತ್ಯವಿಲ್ಲ. ಕಾರಣ ನೋಟೀಸ ಮಾಡಿತು ಅಂತಾ ಹೇಳುವ ಕಾರಣವಿಲ್ಲ.

(ಬ) 'ವಿನಾಕಾರಣಾ ಅವನು ಹಣಕೊಡುವದು ತಪ್ಪಿಸುತ್ತಾನೆ' ಪ್ರತಿವಾದಿಯು ಜವಾಬದಾರನು ಇದ್ದಾನೆ ಯಾ ಇಲ್ಲ, ಎಂಬುವದು ಮಹತ್ವದ ಸಂಗತಿಯು, ಮತ್ತು ನಿರ್ಣಯ ಮಾಡತಕ್ಕಂಥ ಸಂಗತಿಯು ಇರುತ್ತದೆ. ಪ್ರತಿವಾ

ದಿಯು ಜವಾಬದಾರನಿದ್ದರೆ ಅವನು ವಿನಾಕಾರಣ ತಪ್ಪಿಸಿದರೂ ಅವನ ವಿರುದ್ಧ ಹುಕುಮನಾಮೆಯು ಆಗುವದು. ಅವನು ಜವಾಬದಾರನು ಇಲ್ಲದಿದ್ದರೆ ಅವನು ಹಣಾ ಕೊಡುವದು ತಪ್ಪಿಸಿದ್ದು ಸಕಾರಣ ಇರುವದು. ಆದರೆ ವಿನಾಕಾರಣ ಅಲ್ಲ, ಕಾರಣ ಈ ಸಂಗತಿಯನ್ನು ಬರೆಯಬಾರದು.

(೬) (ಅ) "ಪ್ರತಿವಾದಿಯು ಪ್ರಾಮಾಣಿಕನಿದ್ದಾನೆಂದು ವಾದಿಯ ನಂಬಿಗೆ ಇತ್ತು. ಕಾರಣ ವಾದಿಯು ಅವನಿಗೆ ಹಣಾ ಕೊಟ್ಟನು."

(ಬ) "ತಾನು ಪ್ರಾಮಾಣಿಕನು ಇದ್ದಬಗ್ಗೆ ಪ್ರತಿವಾದಿಯು ವಾದಿಯ ಸಮಜೂತು ಮಾಡಿದ್ದರಿಂದ ವಾದಿಯು ಅವನಿಗೆ ಹಣ ಕೊಟ್ಟನು."

(ಕ) 'ಪ್ರತಿವಾದಿಯು ಪ್ರಾಮಾಣಿಕನು ಇದ್ದಬಗ್ಗೆ ಯಾ ದಾರನು ಇದ್ದ ಬಗ್ಗೆ ಪ್ರತಿವಾದಿಯ ಸ್ನೇಹಿತರು ವಾದಿಯ ಸಮಜೂತು ಮಾಡಿದ್ದರಿಂದ ವಾದಿಯು ಪ್ರತಿವಾದಿಗೆ ಹಣ ಕೊಟ್ಟನು."

ಪ್ರತಿವಾದಿಯು ವಾದಿಯ ಹಣವನ್ನು ಕೊಡಲಿಕ್ಕೆ ಜವಾಬದಾರನು ಇದ್ದಾನೆ ಯಾ ಇಲ್ಲೆಂಬುದು ಮಹತ್ವದ ಸಂಗತಿಯು ಇರುತ್ತದೆ. ಪ್ರತಿವಾದಿಯ ಈ ಜವಾಬದಾರಿಯು ಅವನ ಪ್ರಾಮಾಣಿಕತನದ ಮೇಲೆ ಯಾ ಅವನ ಪ್ರಾಮಾಣಿಕತನದ ಬಗ್ಗೆ ವಾದಿಯ ಸಮಜೂತಿಯ ಮೇಲೆ ಯಾವ ತರಹದಿಂದಲೂ ಅವಲಂಬಿಸಿರುವದಿಲ್ಲ. ಕಾರಣಾ ಈ ಸಂಗತಿಗಳನ್ನು ಬರೆಯಬಾರದು.

(೭) "ದಾವೇದ ಮನೆಗೆ ವಾದಿಯು ಸಂಪೂರ್ಣ ಮಾಲಕನು ಇರುತ್ತಾನೆ. ಅವನ ಹೊರ್ತು ದಾವೇದ ಮನೆಗೆ ಯಾರೂ ಮಾಲಕರು ಇರುವದಿಲ್ಲ. ಸಿಟಿ ಸರ್ವೆಯಲ್ಲಿ ಮತ್ತು ಮುನಸಿಪಾಲಿಟಿಯಲ್ಲಿ ದಾವೇದ ಮನೆಯು ವಾದಿ ಹೆಸರಲೆ ದಾಖಲು ಇದೆ. ಮುನಸಿಪಾಲಟಿಯ ಯಾವತ್ತು ಕರಗಳನ್ನು ವಾದಿಯು ಇವನೊಬ್ಬನೆ ಕೊಡುತ್ತಾ ಬಂದಿರುತ್ತಾನೆ. ಪ್ರತಿವಾದಿಯು ಎಂದೂ ಕೊಟ್ಟಿಲ್ಲಾ ಮತ್ತು ಕೊಡುವ ಕಾರಣವಿಲ್ಲ."

(ಅ) "ಸಂಪೂರ್ಣ ಮಾಲಕನು ಇರುತ್ತಾನೆ." ಇದು ಕಾಯದೆಯ ಅನುಮಾನವೂ ಇರುತ್ತದೆ."

(ಬ) "ಅವನ ಹೊರ್ತು ಯಾರೂ ಮಾಲಕರು ಇರುವದಿಲ್ಲಾ" ಇದು ಸಹ ಕಾಯದೆಯ ಅನುಮಾನವು ಇರುತ್ತದೆ. ಇದು ದೋಷದ ಸ್ವರೂಪದ್ದು ಇದ್ದು ಅಸ್ಪಷ್ಟವಾದಂಥ ತಕರಾರು ಇರುತ್ತದೆ. ದಾವೆಯಲ್ಲಿ ವಾದಿಯು ಮತ್ತು ಪ್ರತಿವಾದಿಯ ಹಕ್ಕಿನ ಸಂಬಂಧಿ ಚೌಕಸಿ ಆಗುವದು, ಮತ್ತು ಅವರ ಹೊರ್ತು ಬೇರೆ ಜನರ ಹಕ್ಕಿನ ಚೌಕಶಿ ಆ ದಾವೆಯಲ್ಲಿ ಆಗಲಾರದು.

(ಕ) "ಸಿಟಿಸರ್ವೆಯಲ್ಲಿ........ದಾಖಲು ಇದೆ." ಇವು ವಾದಿಯ ಹಕ್ಕನ್ನು ಸಾಬೀತ ಮಾಡತಕ್ಕಂಥ ಪುರಾವೆದ ಸಂಗತಿಗಳು. ಆದರೆ ವಾದಿಯ ಹಕ್ಕನ್ನುಂಟು ಮಾಡುವ ಸಂಗತಿಗಳು ಅಲ್ಲ. ಕಾರಣಾ ಈ ಪುರಾವೆಯ ಸಂಗತಿಗಳನ್ನು ಬರೆಯಬಾರದು.

(ಡ) "ಮುನಸಿಪಾಲಟಿಯು ಯಾವತ್ತು ಕರಗಳನ್ನು................ ಕೊಡುವ ಕಾರಣವಿಲ್ಲ" ಇವು ಸಹ ಪುರಾವೆಯ ಸಂಗತಿಗಳು ಇರುತ್ತವೆ; ಇದರಲ್ಲಿ ಮತ್ತೊಂದು ದೋಷವದೆ. ಅದೇನಂದರೆ:— ದಾವೆಯ ಸದ್ಯಸ್ಥಿತಿಗೆ ಅವಶ್ಯವಾದ ಮಹತ್ವದ ಸಂಗತಿಗಳನ್ನಷ್ಟೆ ಬರೆಯಬೇಕು. ಪ್ರತಿವಾದಿಯು ಯಾವ ಉತ್ತರಪಕ್ಷವನ್ನು ಮಾಡುವನೋ ಅದು ಮನಸ್ಸಿನಲ್ಲಿ ಕಲ್ಪಿಸಿ ಅದರ ಜಬಾಬಕ್ಕಾಗಿ ಯಾವದೇ ಸಂಗತಿಯನ್ನು ಬರೆಯಬಾರದು. ಇದರಲ್ಲಿ ಅಸಲಜಿಯು ಹಾಜರು ಮಾಡುವ ವೇಳೆಗೆ ಪ್ರತಿವಾದಿಯು ತಾನು ಮುನಸಿಪಾಲಟಿ ಕರಗಳನ್ನು ಕೊಟ್ಟೇನಿ ಅಂತಾ ಉತ್ತರಪಕ್ಷವನ್ನು ಆ ದಾವೆಯಲ್ಲಿ ಮಾಡುವದು ಶಕ್ಯವಿಲ್ಲ, ಕಾರಣ ಪ್ರತಿವಾದಿಯು ತಾನು ಕರಗಳನ್ನು ಕೊಟ್ಟೇನಿ ಅಂತಾ ತಕರಾರು ಮಾಡಬಹುದೆಂದು ವಾದಿಯು ಮನಸ್ಸಿನಲ್ಲಿ ಕಲ್ಪಿಸಿ ಅದರ ಜಬಾಬಕ್ಕಾಗಿ ಮೇಲಿನಂತ ಸಂಗತಿಗಳನ್ನು ಬರೆಯುವದು ತಪ್ಪು ಇದೆ.

(ಲ) "ವಾದಿ ದಾವೆ ಸುಳ್ಳದೆ ಮತ್ತು ಅದು ಕಾಯದೆಯಿಂದ ನಡೆಯಲಾರದು."

(ಅ) "ವಾದಿ ದಾವೆ ಸುಳ್ಳದೆ" ಇದರಿಂದ ಪ್ರತಿವಾದಿಯ ಅಂಬೋಣವು ಸ್ಪಷ್ಟವಾಗುವದಿಲ್ಲ. (೧) ವಾದಿಯು ದಾವೆ ಮಾಡಿದ್ದು ಸುಳ್ಳಿವೆ ಅಂತಾ ಅಂಬೋಣ ಸುಳ್ಳಿದೆಯೋ ಯಾ (೨) ವಾದಿಯ ದಾವೆಯೊಳಗಿನ ಎಲ್ಲ ಮಜಕೂರ ಸುಳ್ಳಿವೆ ಅಂತಾ ಅಂಬೋಣವಿದೆಯೋ ಯಾ (೩) ವಾದಿಯ ದಾವೆಯೊಳಗಿನ

ಕೆಲವು ಮಜಕೂರು ಮಾತ್ರ ಸುಳ್ಳದೆ ಅಂತಾ ಅಂಬೋಣವಿದೆಯೋ ಎಂಬುವನು ಸ್ಪಷ್ಟವಾಗುವದಿಲ್ಲ.

ಬರೇ ವಾದಿಯ ದಾವೆಯು ಸುಳ್ಳದೆ ಅಂತಾ ಹೇಳುವದಕ್ಕಿಂತ ಯಾವ ಸಂಗತಿಗಳ ಮೂಲಕವಾಗಿ ಅದು ಸುಳ್ಳದೆ ಅಂತಾ ಪ್ರತಿವಾದಿಯ ಅಂಬೋಣವಿದೆಯೋ ಆ ಸಂಗತಿಗಳನ್ನು ಬರೆಯಬೇಕು. ಬರೆ ಪ್ರತಿವಾದಿಯ ಅಂಬೋಣದರ ಮೇಲಿಂದ ವಾದಿಯ ದಾವೆಯು ಸುಳ್ಳಾಗುವದಿಲ್ಲ. ಪ್ರತಿವಾದಿಯ ಉತ್ತರಪಕ್ಷದ ಮೇಲಿಂದ ವಾದಿಯ ದಾವೆಯು ಸುಳ್ಳಾಗುವಂತೆ ಇದ್ದರೂ ಸಹ ಅದು ಬರೆ ಸುಳ್ಳದೆ ಅಂತ ಹೇಳುವದರಲ್ಲಿ ಏನೂ ಪ್ರಯೋಜನವಿಲ್ಲ. ವಾದಿಯ ದಾವೆಯು ಸುಳ್ಳದೆ ಅಂತ ತೋರಿಸುವ ಸಂಗತಿಗಳನ್ನು ಹೇಳಿದರೆ ಸಾಕು.

“ ಕಾಯದೆಯಿಂದ ನಡಿಯಲಾರದು ” ಇದು ಕಾಯದೆಯ ಅನುಮಾನವು ಕಾರಣ ಅದನ್ನು ಬರೆಯಬಾರದು. ವಾದಿಯ ದಾವೆಯು ಕಾಯದೆಯಿಂದ ನಡಿಯುವದು ಯಾ ಇಲ್ಲ ಎಂಬದನ್ನು ಕೋರ್ಟಿನವರು ನಿರ್ಣಯ ಮಾಡುವರು. ಸದರಿ ನಿರ್ಣಯವು ಪ್ರತಿವಾದಿಯ ಈ ರೀತಿಯ ಅಂಬೋಣದ ಮೇಲೆ ಅವಲಂಬಿಸಿರುವದಿಲ್ಲ. ವಾದಿಯ ದಾವೆಯು ಕಾಯದೆಯಿಂದ ಯಾವ ಸಂಗತಿಗಳ ಮೂಲಕ ನಡಿಯುವದಿಲ್ಲ ಆ ಸಂಗತಿಗಳನ್ನು ಬರೆಯಬೇಕು. ಆದರೆ ಮೇಲಿನ ಕಾಯದೆದ ಅನುಮಾನವನ್ನು ಹೇಳಬಾರದು.

(೯) “ ಪ್ರತಿವಾದಿಯು ತಾರೀಖು ೧೮–೩–೧೯೨೮ ನೇ ಇಸ್ವಿ ದಿವಸದ ನಂತರ ಮತ್ತು ದಾವೆಯು ಆಗುವ ಪೂರ್ವದಲ್ಲಿ ೨೦೦ ರೂಪಾಯಿಗಳನ್ನು ವಾದಿಗೆ ಕೊಟ್ಟನು. ”

ಈ ರೂಪಾಯಿಗಳನ್ನು ಇಡೀ ದಾವೆಯ ಸಂಬಂಧದಿಂದ ಅಥವಾ ದಾವೆಯ ಅಂಶದ ಸಂಬಧದಿಂದ ಕೊಟ್ಟಿದ್ದ ಪಕ್ಷಕ್ಕೆ ಹಾಗೆ ಸ್ಪಷ್ಟವಾಗಿ ಬರೆಯಬೇಕು. ಮೇಲೆ ಬರೆದ ಮಜಕೂರಿನಲ್ಲಿ ದಾವೆಯ ಸಂಬಂಧದಿಂದ ಅಥವಾ ದಾವೆಯ ಅಂಶದ ಸಂಬಂಧದಿಂದ ಕೊಟ್ಟಿದೆ ಎಂಬುವದು ಸ್ಪಷ್ಟವಾಗಿಲ್ಲ. ಯಾವದಾದರು ಹಣವನ್ನು ವಸೂಲ ಕೊಟ್ಟಿದ್ದ ಪಕ್ಷಕ್ಕೆ ಅದು ಎಂದು ಕೊಟ್ಟಿತು ? ಮತ್ತು ಹ್ಯಾಗೆ ಕೊಟ್ಟಿತು? ಮತ್ತು ಯಾತರಬಗ್ಗೆ ಕೊಟ್ಟಿತು? ಎಂಬುವದನ್ನು ಸ್ಪಷ್ಟ ಮಾಡಬೇಕು.

(೧೦) "ಪ್ರತಿವಾದಿಯು ದ್ವೇಷಿಕಜನರ ಚಿತಾವಣಿಯ ಮೇಲಿಂದ ವಾದಿಯು ಈ ದಾವೆಯನ್ನು ಮಾಡಿರುತ್ತಾನೆ."

ಪ್ರತಿವಾದಿಯ ವಿರುದ್ಧ ವಾದಿಗೆ ನ್ಯಾಯಾಶ್ರಯವು ದೊರೆಯುವಂತೆ ಇದ್ದರೆ ಅದು ಅವನಿಗೆ ಯಾರಾದರು ಚಿತಾವಣಿಯನ್ನು ಮಾಡಿದರೂ ಯಾ ಮಾಡದಿದ್ದರೂ ದೊರೆಯುವದು. ಸದರಿ ಎರಡನೆ ಜನರ ಚಿತಾವಣಿಯ ಮೇಲೆ ದಾವೆಯ ಬಾಧ್ಯತೆಯು ಅವಲಂಬಿಸಿರುವದಿಲ್ಲ. ಈ ಉತ್ತರಪಕ್ಷವು ಅಪ್ರಾಸಂಗಿಕವಿರುತ್ತದೆ. ಇದರಿಂದ ದಾವೆಗೆ ಸಂಬಂಧವಿಲ್ಲದ ಜನರ ವರ್ತನದ ಸಂಬಂಧಿ ಪುರಾವೆಯನ್ನು ಮಾಡುವ ಪ್ರಸಂಗವು ಉಪ್ಭವಿಸುವ ಸಂಭವವಿದೆ. ಈ ಉತ್ತರಪಕ್ಷವು ಅಸ್ಪಷ್ಟವಿದೆ. ಯಾಕಂದರೆ ಯಾವ ಜನರು ಚಿತಾಯಿಸಿದರು ಎಂಬುವದು ಸ್ಪಷ್ಟವಾಗಿಲ್ಲ.

(೧೧) "ವಾದಿಯು ದ್ವೇಷ ಬುದ್ಧಿಯಿಂದ ದಾವೆ ಮಾಡಿರುತ್ತಾನೆ" ವಾದಿಯು ದ್ವೇಷಬುದ್ಧಿಯಿಂದ ಯಾ ಚಲೋಬುದ್ಧಿಯಿಂದ ದಾವೆಯನ್ನು ಮಾಡಿದ್ದಾನೆ ಎಂಬುವದು ಏನೂ ಮಹತ್ವದ ಸಂಗತಿಯಲ್ಲ. ವಾದಿಯು ನಿಷ್ಕಾರಣವಾಗಿ ದಾವೆಯನ್ನು ಮಾಡಿದ ಪಕ್ಷಕ್ಕೆ ಪ್ರತಿವಾದಿಯು ಕೋರ್ಟಿನಲ್ಲಿ ದಾವೇದ ರಕಮು ಭರಣಾ ಮಾಡಬೇಕು, ಮತ್ತು ಕೋರ್ಟಿನವರಿಗೆ ದಾವೆ ನಿಕಾಲೆ ಮಾಡಲಿಕ್ಕೆ ಹೇಳಬೇಕು. ವಾದಿಯು ನಿಷ್ಕಾರಣ ದಾವೆ ಮಾಡಿದ್ದಾನೆಂದು ಕೋರ್ಟಿನವರ ಮನಗಂಡರೆ ಅವರು ವಾದಿಗೆ ಪ್ರತಿವಾದಿಯ ವೆಚ್ಚವನ್ನು ಕೊಡಿಸಬಹುದು.

(೧೨) "ವಾದಿಯು ಪ್ರತಿವಾದಿಗೆ ತ್ರಾಸ ಕೊಡುವ ಉದ್ದೇಶದಿಂದ ಮಾತ್ರ ಈ ಸುಳ್ಳು ದಾವೆಯನ್ನು ಮಾಡಿದ್ದಾನೆ."

ವಾದಿಯು ಯಾವ ಉದ್ದೇಶದಿಂದ ದಾವೆ ಮಾಡಿದ್ದಾನೆಂಬುವದು ಮಹತ್ವದ ಸಂಗತಿಯಲ್ಲ. ಪ್ರತಿವಾದಿಯ ವಿರುದ್ಧವಾಗಿ ವಾದಿಗೆ ಬಾಧ್ಯತೆಯುಂಟಾಗಿದ್ದರೆ ಸಾಕಾಗುವದು. ಕಾಯದೇಶೀರ ರೀತಿಯಿಂದ ತನಗೆ ದೊರೆಯುವ ಬಾಧ್ಯತೆಯ ಬಗ್ಗೆ ಅವನು ಬೇಕಾದ ಯೋಗ್ಯ ಮಾರ್ಗವನ್ನು ಸ್ವೀಕರಿಸಬಹುದು. ಅದರಿಂದ ಪ್ರತಿವಾದಿಗೆ ತ್ರಾಸವಾದರೆ ಅದು ಕಾಯದೆಯ ದೃಷ್ಟಿಯಿಂದ ತ್ರಾಸ ಅನಿಸುವದಿಲ್ಲ. ವಾದಿಯು ನಿಷ್ಕಾರಣ ದಾವೆ ಮಾಡಿದ ಪಕ್ಷಕ್ಕೆ ಮೇಲೆ ಹೇಳಿದಂತೆ ಕೋರ್ಟಿನವರು ಅವನಿಗೆ ವೆಚ್ಚವನ್ನು ಕೊಡಿಸಲಿಕ್ಕಿಲ್ಲ ಮತ್ತು ಪ್ರತಿವಾದಿಯು ವೆಚ್ಚವನ್ನು ಕೊಡಿಸಬಹುದು.

(೧೩) "ಯಾವದೇ ಕಾರಣದಿಂದ ವಾದಿ ಪ್ರತಿವಾದೇರು ಕೂಡಿನಡಿಯುವನು ಅಶಕ್ಯವಾದದ್ದರಿಂದ ಪ್ರತಿವಾದಿಯು ವಾದಿಗೆ ಲೆಕ್ಕವನ್ನು ಕೊಡಲಿಕ್ಕೆ ಹೇಳಿದನು, ಆದರೆ ವಾದಿಯು ಹಾಗೆ ಮಾಡದೆ ಪ್ರತಿವಾದಿಯ ದ್ವೇಷಿಕ ಜನರ ಚಿತಾವಣಿಯ ಮೇಲಿಂದ ಈ ಸುಳ್ಳದಾವೆಯನ್ನು ಮಾಡಿರುತ್ತಾನೆ."

ಮೇಲೆ ೧೧ನೇ ನಂಬರದ ಉದಾಹರಣದಲ್ಲಿ ಕಾಣಿಸಿದ ದೋಷಗಳನ್ನು ಈ ಉದಾಹರಣವಲ್ಲಿ ಕಂಡಬರುತ್ತವೆ.

(೧೪) "ಪ್ರತಿವಾದಿಯು ತಾರಿಖು ೧೪--೯—೧೯೨೮ನೇ ಇಸ್ವಿ ದಿವಸಾ ವಾದಿಗೆ ೨೦೦ ರೂಪಾಯಿಗೆ ಒಂದು ಎತ್ತು ಮಾರಿದನು. ವಾದಿಯು ದುಷ್ಟ ಬುದ್ಧಿಯಿಂದ ಮತ್ತು ಪ್ರತಿವಾದಿಗೆ ತ್ರಾಸ ಕೊಡುವ ಇರಾದೆಯಿಂದ ಮತ್ತು ಪ್ರತಿವಾದಿಯ ಲುಕ್ಸಾನ ಮಾಡುವ ಉದ್ದೇಶದಿಂದ ಈ ರಕಮು ದಾವೇದ ರಕಮಿನಲ್ಲಿ ವಜಾ ಮಾಡಿಲ್ಲಾ."

ಪ್ರತಿವಾದಿಯು ತನ್ನ ಎತ್ತನ್ನು ವಾದಿಗೆ ದಾವೇದ ರಕಮಿನ ಸಂಬಂಧಿಯಾ ಆ ರಕಮಿನ ಅಂಶವಾಗಿರುವ ೨೦೦ ರೂಪಾಯಿಗಳ ಸಂಬಂಧಿ ಖರೀದಿ ಕೊಟ್ಟನು ಅಂತಾ ಸ್ಪಷ್ಟವಾಗಿ ಹೇಳಬೇಕು. ಬರೇ ಎತ್ತು ಮಾರಿದನು ಅಂದರೆ ಸಾಕಾಗುವದಿಲ್ಲ. ದಾವೇದ ರಕಮಿನ ಸಂಬಂಧಿ ಆ ಖರೀದಿ ವ್ಯವಹಾರವಾಯಿತು ಎಂಬುವನ್ನು ಸ್ಪಷ್ಟವಾಗಿ ಬರೆಯಬೇಕು. ಮುಂದಿನ ಮಜಕೂರು ಬಹಳೇ ದೋಷಾಸ್ಪದವಿದೆ. ಆ ಮಜಕೂರು ಬರೆಯುವದರಿಂದ ಪ್ರತಿವಾದಿಗೆ ಏನೂ ಲಾಭವಾಗುವಂತೆ ಇಲ್ಲಾ. ಕೋರ್ಟಿನವರು ಆ ಮಜಕೂರು ತೆಗೆದು ಹಾಕಬಹುದು. ಕಾರಣಾ ಈ ತರಹದ ಮಜಕೂರು ಎಂದೆಂದೂ ಬರೆಯಬಾರದು.

(೧೫) "ವಾದಿಯು ದಾವೇದ ಸಂಬಂಧಿ ಪ್ರತಿವಾದಿಕಡಿಂದ ಫಕ್ತ ೨೦೦ ರೂಪಾಯಿ ಸಲ್ಲತಕ್ಕದ್ದು ಇರುತ್ತದೆಂದು ಪಂಚರ ಸಮಕ್ಷಮಾ ಕಬೂಲು ಮಾಡಿದನು."

ಕಬುಲೀಯ ಬಗ್ಗೆ ಸಂಗತಿಗಳನ್ನು ಪುರಾವೆದ ಸಂಗತಿಗಳು ಇರುತ್ತವೆ. ಕಾರಣಾ ಅವುಗಳನ್ನು ಬರೆಯಬಾರದು.

(೧೬) ಪ್ರತಿವಾದಿಯ ವಿನಂತಿ ಏನೆಂದರೆ —

“ವಾದಿಯು ದಾವೆ ರದ್ದುಪಡಿಸಿ ಪ್ರತಿವಾದಿಯು ಖರ್ಚ ಕೊಡಿಸಬೇಕು.” ಕೈಫಿಯತಿನಲ್ಲಿ ಯಾವದು ನ್ಯಾಯಾಶ್ರಯುವನ್ನು ಬೇಡತಕ್ಕದ್ದಲ್ಲ. ವಾದಿಯು ದಾವೆಗೆ ಯೋಗ್ಯವಾದ ಉತ್ತರಪಕ್ಷವನ್ನು ಮಾಡಿದರೆ ಸಾಕಾಗುವದು. ಯಾವ ಸಂಗತಿಗಳ ಆಧಾರಮೇಲಿಂದ ಪ್ರತಿವಾದಿಯು ವಾದಿಗೆ ಬಾಧ್ಯತೆಯುಂಟಾಗಿಲ್ಲಾ ಅಂತಾ ವಾದಿಸುವನೋ ಆ ಸಂಗತಿಗಳು ಕೈಫಿಯತಿನಲ್ಲಿ ಹೇಳಿದರೆ ಸಾಕಾಗುವದು.

ಎಲ್ಲ ದಾವೆಗಳ ಮತ್ತು ಅವುಗಳ ಸಂಬಂಧಿಂದಾಗುವ ವೆಚ್ಚವನ್ನು ಕೊಡಿಸುವದು ಕೋರ್ಟಿನ **ಮರ್ಜಿಯ ಮೇಲೆ** ಅವಲಂಬಿಸಿರುವದು. ಮತ್ತು ಇಂಥ ವೆಚ್ಚವನ್ನು ಯಾರು ಅಥವಾ ಯಾವ ಆಸ್ತಿಯೊಳಗಿಂದ ಮತ್ತು ಎಷ್ಟು ಕೊಡಬೇಕೆಂಬುದನ್ನು ಠರಾಯಿಸಲಿಕ್ಕೆ ಕೋರ್ಟಿಗೆ ಪೂರ್ಣ ಅಧಿಕಾರವಿರುವದೆಂದು ತಿಳಿಯಬೇಕು. (ಕಲಮು ೩೫). ಅಂದಮೇಲೆ ದಾವೇದ ವೆಚ್ಚವನ್ನು ಕೊಡಿಸುವದು ಕೋರ್ಟಿನ ಮರ್ಜಿಯ ಮೇಲೆ ಇದೆ. ಅದು ವಾದಿಯು ಯಾ ಪ್ರತಿವಾದಿಯು ಮಾಂಗಣಿ ಮಾಡಿದ ಮೇಲೆ ಅವಲಂಬಿಸಿರುವದಿಲ್ಲ. ಸಾಧಾರಣತಃ ಅದು ದಾವೇದ ನಿಕಾಲೇದ ಮೇಲಿಂದ ಠರಾಯಿಸಲಿಕ್ಕೆ ಬರುವದು. ವಾದಿಗೆ ಯಾ ಪ್ರತಿವಾದಿಗೆ ಅನುಕೂಲವಾಗಿ ದಾವೇದ ನಿಕಾಲೆ ಆದಲ್ಲಿ ಕೋರ್ಟಿನವರು ಅನುಕ್ರಮವಾಗಿ ವಾದಿಗೆ ಯಾ ಪ್ರತಿವಾದಿಗೆ ದಾವೇದ ವೆಚ್ಚವನ್ನು ಕೊಡಿಸಬಹುದು. ಮತ್ತು ಯಾವ ನ್ಯಾಯಾಶ್ರಯುವನ್ನು ಕೋರ್ಟು ತಮಗೆ ಕಂಡಮಟ್ಟಿಗೆ ಬೇಡಿದ್ದರೆ ಹ್ಯಾಗೋ ಹಾಗೆ ಬೇಡದೆ ತಾವಾಗಿಯೇ ಕೊಡುವರೋ ಆ ನ್ಯಾಯಾಶ್ರಯುವನ್ನು ಬೇಡುವ ಅಗತ್ಯವಿಲ್ಲ (ಆ. ೭, ರೂ. ೭). ಕಾರಣಾ ಮೇಲಿನ ಸಂಗತಿಯನ್ನು ಬರೆಯಬಾರದು.

(೧೭) (ಅ) “ಈ ಪ್ರಕರಣದ ಸ್ವರೂಪಕ್ಕೆ ಅವಶ್ಯವಾದ ಇನ್ನೂ ಯಾ ಬೇರೆ ನ್ಯಾಯಾಶ್ರಯುವನ್ನು ಕೊಡಬೇಕು.”

(ಬ) “ಕೋರ್ಟಿಗೆ ಅವಶ್ಯಕಂಡ ಇತರ ನಾಯಾಶ್ರಯುವನ್ನು ಕೊಡಬೇಕು.”

ಕೋರ್ಟಿನವರು ತಾವಾಗಿಯೇ ಯಾವ ನ್ಯಾಯಾಶ್ರಯುವನ್ನು ಕೊಡುವರೋ ಆ ನ್ಯಾಯಾಶ್ರಯುಗಳನ್ನು ಬೇಡುವ ಅಗತ್ಯವಿಲ್ಲ. ಕಾರಣಾ ಈ ಸಂಗತಿಗಳನ್ನು ಬರೆಯಬಾರದು.

(೧ಲ) (ಅ) "ಪ್ರಸಂಗಬಿದ್ದಲ್ಲಿ ವಾದಿಗೆ ಅಸಲರ್ಜಿಯನ್ನು ಸುಧಾರಿಸ ಲಿಕ್ಕೆ ಪರವಾನಿಗಿ ಕೊಡಬೇಕು ಅಂತಾ ವಿನಂತಿ ಅದೆ."

(ಬ) "ಪ್ರಸಂಗವಶಾತ್ ಪುರವಣಿ ಕೈಫಿಯತನ್ನು ಹಾಜರು ಮಾಡಲಿಕ್ಕೆ ಪ್ರತಿವಾದಿಗೆ ಪರವಾನಗಿ ಕೊಡಬೇಕು ಅಂತಾ ವಿನಂತಿ ಅದೆ."

ಹೀಗೆ ಪರವಾನಗಿ ಕೊಡುವದು ಕೋರ್ಟನವರಿಗೆ ಅವಶ್ಯ ಕಂಡರೆ ಮತ್ತು ಆ ಬಗ್ಗೆ ಪಕ್ಷಕಾರರು ಅರ್ಜಿಯನ್ನು ಮಾಡಿದರೆ ಕೋರ್ಟನವರು ಆ ಬಗ್ಗೆ ಪರ ವಾನಗಿ ಕೊಡಬಹುದು. ಆದರೆ ಈ ಬಗ್ಗೆ ಅಸಲರ್ಜಿಯಲ್ಲಿ ಯಾ ಕೈಫಿಯುತಿನಲ್ಲಿ ಬೇಡಿಕೊಳ್ಳುವದೇನು ಕಾರಣವಿಲ್ಲ.

---

# ೯ನೆಯ ಪ್ರಕರಣ



**ಸಮನು ಬಜಾಯಿಸಲ್ಪಟ್ಟನಂತರಾ ಮುಂದಿನ ಕ್ರಮವೂ ಪಕ್ಷಕಾರರು ಹಾಜರಾಗೋಣ ಮತ್ತು ಅವರು ಹಾಜರಾಗದಿದ್ದರೆ ಪರಿಣಾಮವೂ** —( ಆರ್ಡರು ೯. )

ಪ್ರತಿವಾದಿಯು ಹಾಜರಾಗಿ ಜಬಾಬು ಕೊಡಲಿಕ್ಕೆ ಸಮನಿನಲ್ಲಿ ನೇಮಿಸಿದ ದಿವಸ ಪಕ್ಷಕಾರರು ಸ್ವತಃ ತಾವೇ ಆಗಲೀ ತಮ್ಮ ತಮ್ಮ ವಕೀಲರ ಮುಖಾಂತರ ವಾಗಿ ಆಗಲೀ ಕೋರ್ಟಿನಲ್ಲಿ ಹಾಜರಾಗಿರಬೇಕು. ಮತ್ತು ಕೋರ್ಟಿನವರು ದಾವೆಯ ಸುನಾವಣಿಯು ಬಗ್ಗೆ ಮುಂದೊಂದು ದಿವಸವನ್ನು ನೇಮಿಸದಿದ್ದರೆ ಆ ಸುನಾವಣಿಯು ಆಗ ನಡೆಯುತಕ್ಕದ್ದು.

**ವಾದಿಯು ವೆಚ್ಚವನ್ನು ಕೊಡದಕಾರಣದಿಂದ ಸಮನ ಬಜಾಯಿಸಲ್ಪಡದಿದ್ದಲ್ಲಿ** ದಾವೆಯನ್ನು ತೆಗೆದು ಹಾಕೋಣ— ಆ ಪ್ರಕಾರಾ ನೇಮಿಸಿದ ದಿವಸ ಆ ಸಮನ ಬಜಾಯಿಸುವಗೋಸ್ಕರ ಕೊಡಲಿಕ್ಕೆ ಕೋರ್ಟಫೀಯನ್ನು ಕೊಡತಕ್ಕದ್ದಾಗಿದ್ದರೆ ಅದನ್ನು ವಾದಿಯು ಕೊಡದಕಾರಣದಿಂದ ಪ್ರತಿವಾದಿಯ ಮೇಲೆ ಸಮನು ಬಜಾಯಿಸಲ್ಪಡಲಿಲ್ಲವೆಂದು ಕಂಡುಬಂದಲ್ಲಿ ಕೋರ್ಟಿನವರು ಆ ದಾವೆಯನ್ನು ತೆಗೆದುಹಾಕಬೇಕೆಂದು ಹುಕುಮು ಮಾಡಬಹುದು. ಆದರೆ ವಿಧಿಸಲ್ಪಡುವದೇನಂದರೆ ಆ ದಿವಸ ಪ್ರತಿವಾದಿಯು ತಾನೇ ಹಾಜರಾದರೆ ಇಂಥ ಹುಕುಮನ್ನು ಮಾಡಲಾಗದು (ಆ. ೯, ರೂ. ೨).

ಯಾವದಾದರೊಂದು ಸಮನು ಪ್ರತಿವಾದಿಗೆ ಅಥವಾ ಅನೇಕ ಪ್ರತಿವಾದಿಯರ ಪೈಕಿ ಒಬ್ಬ ಪ್ರತಿವಾದಿಗೆ ಮಾಡಿ ಅದು ಬಜಾಯಿಸಲ್ಪಡದೆ ತಿರಿಗಿ ಬಂದಿದ್ದರೆ ಮತ್ತು ಅದು ಕೋರ್ಟಿಗೆ ತಿರುಗಿಬಂದಲಾಗಾಯತು ಮೂರು ತಿಂಗಳದ ಪರಿಯಂತ ವಾದಿಯು ಹೊಸ ಸಮನು ಮಾಡುವ ವಿಷಯದಲ್ಲಿ ಅರ್ಜಿಯನ್ನು ಮಾಡವದಕ್ಕೆ ತಪ್ಪಿದರೆ ಕೋರ್ಟಿನವರು ಆ ಪ್ರತಿವಾದಿಯ ಮೇಲಿನ ದಾವೆ ತೆಗೆದು ಹಾಕಬೇಕೆಂದು ಹುಕುಮು ಮಾಡಬೇಕು. ಇಂಥಾ ಪ್ರಸಕ್ತಿಯಲ್ಲಿ ( ಮುದ್ದತಿನ ಕಾಯದೆಗೆ ಒಳಪಟ್ಟು) ವಾದಿಗೆ ಹೊಸ ದಾವೆಯನ್ನು ಮಾಡುವ ಅಧಿಕಾರವಿದೆ.

ಆದರೆ ಕೆಳಗಿನ ಪ್ರಸಕ್ತಿಗಳಲ್ಲಿ ಇಂಥಾ ಹುಕುಮು ಕೋರ್ಟಿನವರು ಮಾಡಲಿಕ್ಕೆ ಇಲ್ಲಾ. ಅವುಗಳನ್ನು—

೧. ಯಾವ ಪ್ರತಿವಾದಿಯ ಮೇಲೆ ಸಮನು ಬಜಾಯಿಸಲ್ಪಡಲಿಲ್ಲವೋ ಆ ಪ್ರತಿವಾದಿಯು ಇರುವ ಸ್ಥಳವನ್ನು ಗೊತ್ತುಹಚ್ಚುವದಕ್ಕಾಗಿ ಆ ವಾದಿಯು ಆದಷ್ಟು ಪ್ರಯತ್ನವನ್ನು ಮಾಡಿರಬೇಕು. ಅಥವಾ

೨. ಸದರ ಪ್ರತಿವಾದಿಯು ಪ್ರೊಸೆಸ್ಸು ಬಜಾಯಿಸುವದನ್ನು ತಪ್ಪಿಸುತ್ತಿರಬೇಕು ಅಥವಾ

೩. ಮುಸ್ಸದ್ದತು ವಾಢಾಯಿಸಲಿಕ್ಕೆ ಮತ್ತೊಂದು ಸಮಾಧಾನವಾಗುವಂತೆ ಕಾರಣವಿರಬೇಕು. (ಆ. ೯, ರೂ. ೫.)

**ವಾದಿಯು ಮತ್ತು ಪ್ರತಿವಾದಿಯು ಇಬ್ಬರು ಹಾಜರಾಗದಿದ್ದರೆ.** ದಾವೆಯು ಸುನಾವಣೆಗಾಗಿ ತೆಗೆಯಲ್ಪಟ್ಟಾಗ ಇಬ್ಬರು ಪಕ್ಷಕಾರರು ಹಾಜರಾಗದಿದ್ದರೆ ದಾವೆಯು ತೆಗೆದುಹಾಕಬೇಕೆಂದು ಕೋರ್ಟಿನವರು ಹುಕುಮು ಮಾಡಹುದು. (ಆ. ೯, ರೂ. ೩.)

ಮೇಲೆ ಹೇಳಿದಂತೆ (೧) ವಾದಿಯು ವೆಚ್ಚವನ್ನು ಕೊಡದ ಕಾರಣದಿಂದ ಸಮನು ಬಜಾಯಿಸಲ್ಪಡದಿದ್ದಲ್ಲಿ ಅಥವಾ (೨) ಇಬ್ಬರು ಪಕ್ಷಗಾರರು ದಾವೆಯ ಸುನಾವಣಿಯ ವೇಳೆಯಲ್ಲಿ ಹಾಜರಾಗದಿದ್ದಲ್ಲಿ ವಾದಿಯ ದಾವೆಯುನ್ನು ಕೋರ್ಟಿನಿಂದ ತೆಗೆದುಹಾಕುವದರಲ್ಲಿ ಬಂದರೆ ವಾದಿಯು ಕೆಳಗೆ ಹೇಳಿದಷ್ಟರಕಿ ಯಾವದಾದರೊಂದು ಇಲಾಜು ಮಾಡಬಹುದು.

೧. ವಾದಿಯು ಹೊಸ ದಾವೆಯುನ್ನು ಮಾಡಬಹುದು. (ಅವಕ್ಕೆ ಮುದ್ದತಿಯ ಕಾಯಿದೆಯ ಆತಂಕ ಬರಬಾರದು).

೨. ಕೋರ್ಟಿನಿಂದ ವಾದಿಯ ದಾವೆಯುನ್ನು ತೆಗೆದುಹಾಕಿದಬಗ್ಗೆ ಮಾಡಲ್ಪಟ್ಟ ಹುಕುಮುನ್ನು ರದ್ದುಪಡಿಸುವದಕ್ಕೆ ಆ ಕೋರ್ಟಿಗೆ ವಾದಿಯು ಅರ್ಜಿಯುನ್ನು ಮಾಡಬಹುದು.

**ವಾದಿಯು ಒಬ್ಬನೆ ಹಾಜರಾದಲ್ಲಿ**—ದಾವೆಯುನ್ನು ಸುನಾವಣೆಗಾಗಿ ತೆಗೆದಾಗ ವಾದಿಯು ಹಾಜರಾಗಿ ಪ್ರತಿವಾದಿಯು ಹಾಜರಾಗದಿದ್ದಲ್ಲಿ --

೧. ಸಮನು ಯೋಗ್ಯವಾಗಿ ಬಜಾಯಿಸಲ್ಪಟ್ಟಿತೆಂದು ಸಾಬೀತಾದರೆ ಕೋರ್ಟಿನವರು ಏಕತರ್ಫಿ ಚೌಕಶಿಯನ್ನು ನಡೆಯಿಸಬಹುದು.

೨. ಸಮನು ಯೋಗ್ಯವಾಗಿ ಬಜಾಯಿಸಲ್ಪಡದಿದ್ದಾಗ ಪುನಃ ಕಳಿಸಲಿಕ್ಕೆ ಹುಕುಮು ಮಾಡಬಹುದು.

೩. ಸಮನು ಯೋಗ್ಯವೇಳೆಯಲ್ಲಿ ಬಜಾಯಿಸಲ್ಪಡದಿದ್ದಾಗ ಕೋರ್ಟಿನವರು ದಾವೆಯ ಸುನಾವಣಿಗಾಗಿ ಮುಂದೊಂದು ದಿವಸ ನೇಮಿಸಬಹುದು. (ಆ. ೯, ರೂ. ೬.)

ಪ್ರತಿವಾದಿಯು ಮುಂದೆ ಸುನಾವಣಿಗಾಗಿ ನೇಮಿಸಿದ ದಿವಸ ಹಾಜರಾದಲ್ಲಿ ಮತ್ತು ಹಿಂದಿನ ವೇಳೆಗೆ ಹಾಜರಾಗದಿದ್ದ ಬಗ್ಗೆ ಯೋಗ್ಯ ಕಾರಣ ಕೊಟ್ಟಲ್ಲಿ ಕೆಲಸ ನಡಿಸುವ ಕ್ರಮ—ಏಕತರ್ಫಿ ದಾವೆಯ ಸುನಾವಣಿಯನ್ನು ಕೋರ್ಟಿನವರು ಮುಂದಕ್ಕೆ ಹಾಕುತ್ತಿರಲಾಗಿ, ಪ್ರತಿವಾದಿಯು ಸುನಾವಣೆಯ ಕಾಲವಲ್ಲಾಗಲೀ ಅದರ ಪೂರ್ವದಲ್ಲಾಗಲೀ ಹಾಜರಾಗಿ ತಾನು ಮೊದಲು ಗೈರಹಾಜರಾದದ್ದಕ್ಕೆ ಸರಿಯಾದ ಕಾರಣವನ್ನು ತೋರಿಸಿದಲ್ಲಿ, ದಾವೆಗೆ ಅವನ ಜಬಾಬನ್ನು ಕೋರ್ಟಿನವರು ತೆಗೆದುಕೊಳ್ಳಬಹುದು. (ಆ. ೯, ರೂ. ೭)

**ವಾದಿಯು ಗೈರಹಾಜರಿದ್ದು ಪ್ರತಿವಾದಿಯು ಒಬ್ಬನೆ ಹಾಜರಾದಲ್ಲಿ**—ದಾವೆಯನ್ನು ಸುನಾವಣಿಗಾಗಿ ತೆಗೆದಾಗ ಪ್ರತಿವಾದಿಯು ಹಾಜರಾಗಿ ವಾದಿಯು ಹಾಜರಾಗದಿದ್ದರೆ, ಕೋರ್ಟಿನವರು ದಾವೆಯನ್ನು ತೆಗೆದುಹಾಕಬೇಕು.

ಆದರೆ ಪ್ರತಿವಾದಿಯು ಆ ದಾವೆಯನ್ನು ಯಾ ಅದರದೊಂದು ಭಾಗವನ್ನು ಒಪ್ಪಿಕೊಂಡರೆ ಆ ಆಧಾರದ ಮೇಲೆ ಪ್ರತಿವಾದಿಯ ವಿರುದ್ಧ ಹುಕುಮುನಾಮೆಯನ್ನು ಮಾಡಬೇಕು; ಮತ್ತು ಅವನು ದಾವೆಯ ಕೆಲವು ಭಾಗವನ್ನು ಮಾತ್ರ ಒಪ್ಪಿಕೊಂಡಲ್ಲಿ, ಉಳಿದ ಭಾಗಕ್ಕೆ ಸಂಬಂಧಿಸಿದ ದಾವೆಯನ್ನು ಕೋರ್ಟಿನವರು ರದ್ದುಮಾಡಬೇಕು. ಅಂದರೆ ಪ್ರತಿವಾದಿಯು ಒಪ್ಪಿಕೊಂಡಿಷ್ಟು ಭಾಗದ ಸಂಬಂಧಿ ಮಾತ್ರ ಅವನ ಮೇಲೆ ಹುಕುಮುನಾಮೆಯನ್ನು ಮಾಡಬೇಕು. ಮತ್ತು ಅವನು ಒಪ್ಪಿಕೊಳ್ಳದೆ ಇದ್ದ ಭಾಗದ ಸಂಬಂಧಿ ವಾದಿಯ ದಾವೆಯನ್ನು ರದ್ದುಮಾಡಬೇಕು. (ಆ. ೯, ರೂ. ೮.) ಬಹುಜನ ವಾದಿಗಳಿದ್ದು ಅವರಲ್ಲಿ ಒಬ್ಬನು ಯಾ

ಹೆಚ್ಚುಜನರು ಹಾಜರಾಗದಿದ್ದಲ್ಲಿ ಮತ್ತು ಒಬ್ಬನು ಯಾ ಹೆಚ್ಚುಜನರು ಹಾಜರಾದಲ್ಲಿ ಕೋರ್ಟಿನವರು ಹಾಜರಿದ್ದ ವಾದಿಗೆ ಯಾ ವಾದೇರಿಗೆ ದಾವೆಯುನ್ನು ನಡೆಸಲಿಕ್ಕೆ ಅಪ್ಪಣೆಯನ್ನು ಕೊಡಬಹುದು.

ಮೇಲೆ ಹೇಳಿದಂತೆ ವಾದಿಯು ಯಾ ಎಲ್ಲ ವಾದಿಯರು ಹಾಜರಾಗದಿದ್ದ ಮೂಲಕ ದಾವೆಯು ಸನುಗ್ರವಾಗಿ ಯಾ ಅಂಶತಃ ರದ್ದುಮಾಡಲ್ಪಟ್ಟಲ್ಲಿ, ದಾವೆಯು ಅದೇ ಕಾರಣದ ಸಂಬಂಧದಿಂದ ಹೊಸ ದಾವೆಯನ್ನು ಮಾಡಲಿಕ್ಕೆ ವಾದಿಗೆ ಯಾ ವಾದೇರಿಗೆ ಪ್ರತಿಬಂಧವಾಗುವದು. **ಈ ಪ್ರಸಕ್ತಿಯಲ್ಲಿ ವಾದಿಯು ಯಾವ ಇಲಾಜು ಮಾಡಬೇಕು ?**

ಕೋರ್ಟಿನವರು ವಾದಿಯ ಪೂರಾದಾವೆಯನ್ನು ಅಥವಾ ಅದರ ಭಾಗವನ್ನು ರದ್ದುಮಾಡಿದಬಗ್ಗೆ ಮಾಡಿದ ಹುಕಮು ತಿರುಗಿಸುವದಕ್ಕೋಸ್ಕರ ವಾದಿಯು ಕೋರ್ಟಿಗೆ ಅರ್ಜಿಯನ್ನು ಮಾಡಬೇಕು. ಆಮೇಲೆ ದಾವೆಯ ಸುನಾವಣಿ ನೇಮಿಸಿದ ದಿವಸ ಹಾಜರಾಗಲಿಕ್ಕೆ ತಕ್ಕ ಕಾರಣದಿಂದ ತನಗೆ ಅಡ್ಡಿಯಾಯಿತೆಂದು ವಾದಿಯು ಕೋರ್ಟಿಗೆ ಮನಗಾಣಿಸಿದರೆ ಕೋರ್ಟಿನವರು ವಾದೆಯ ದಾವೆಯನ್ನು ಯಾ ಅದರ ಭಾಗವನ್ನು ರದ್ದುಮಾಡಿದ ಹುಕುಮು ತಿರುಗಿಸಬಹುದು.; ಮತ್ತು ದಾವೆಯನ್ನು ನಡೆಯಿಸಲಿಕ್ಕೆ ಮುಂದೊಂದು ದಿವಸವನ್ನು ನೇಮಿಸಬಹುದು. (ಆ. ೯, ರೂ. ೯.)

ಹಾಜರಾಗಲಿಕ್ಕೆ ತಪ್ಪಿದ್ದರಿಂದ ಅಥವಾ ಪ್ರೊಸೆಸ್ಸಿನ ಬಜಾವಣಿಯ ವೆಚ್ಚ ಕೊಡಲಿಕ್ಕೆ ಅಥವಾ ವೆಚ್ಚದ ಬಗ್ಗೆ ತಾರಣ ಕೊಡಲಿಕ್ಕೆ ತಪ್ಪಿದ್ದರಿಂದ ತೆಗೆದು ಹಾಕಿದ್ದನ್ನು ರದ್ದುಮಾಡುವ ಹುಕುಮು ಆಗುವ ವಿಷಯದಲ್ಲಿ ವಾದಿಯು ಮಾಡತಕ್ಕ ಅರ್ಜಿಯು ಯಾವ ಅವಧಿಯಲ್ಲಿ ಮಾಡಬೇಕು ? ತೆಗೆದುಹಾಕಿದ ತಾರೀಖಿನಿಂದ ೩೦ ದಿವಸಗಳಲ್ಲಿ ಮಾಡಬೇಕು.

ಈ ಪ್ರಕಾರ ಮಾಡಿದ ಅರ್ಜಿಯನ್ನು ಕೋರ್ಟಿನಿಂದ ನಾಕರಿಸಲ್ಪಟ್ಟಲ್ಲಿ ಆ ಹುಕುಮಿನ ಮೇಲೆ ವಾದಿಯು ಅಪೀಲು ಮಾಡಬಹುದು. ಆದರೆ ಆ ಅರ್ಜಿಯನ್ನು ಕೋರ್ಟಿನವರು ಮಾನ್ಯಮಾಡಿ ದಾವೆಯನ್ನು ರದ್ದುಮಾಡಿದ ಹುಕುಮನ್ನು ತಿರುಗಿಸಿದರೆ ಆ ಹುಕುಮಿನ ಮೇಲೆ ಅಪೀಲು ಮಾಡಲಾಗದು.

**ಏಕತರ್ಫಿ ಹುಕುಮನಾಮೆಗಳನ್ನು ರಹಿತಮಾಡುವದು :—** ಪ್ರತಿವಾದಿಗೆ ವಿರುದ್ಧವಾಗಿ ಏಕತರ್ಫಿ ಹುಕುಮನಾಮೆಯಾದಂಥ ಯಾವದೇ ಪ್ರಸಕ್ತಿಯಲ್ಲಿ ಆ ಹುಕುಮನಾಮೆಯನ್ನು ಮಾಡಿದಂಥ ಕೋರ್ಟಿಗೆ ಅವನ್ನು ರಹಿತಮಾಡುವ ಹುಕುಮಿನ ಬಗ್ಗೆ ಪ್ರತಿವಾದಿಯು ಅರ್ಜಿಯನ್ನು ಮಾಡಬಹುದು. ಆ ಮೇಲೆ (೧) ದಾವೆಯ ಸಮನು ಯೋಗ್ಯವಾಗಿ ಬಜಾಯಿಸಲ್ಪಡಲಿಲ್ಲವೆಂದು ಅಥವಾ (೨) ದಾವೆಯು ಸುನಾವಣಿಗಾಗಿ ನೇಮಿಸಿದ ದಿವಸ ಹಾಜರಾಗಲಿಕ್ಕೆ ಯಾವದಾದರು ತಕ್ಕ ಕಾರಣದಿಂದ ತನಗೆ ಅಡ್ಡಿಯಿತ್ತೆಂದು ಪ್ರತಿವಾದಿಯು ಆ ಕೋರ್ಟಿನವರು ಮನಗಾಣುವಂತೆ ಮಾಡಿದರೆ, ಕೋರ್ಟಿನವರು ಇಂಥ ಪ್ರತಿವಾದಿಗೆ ಸಂಬಂಧಿಸುವಷ್ಟರ ಮಟ್ಟಿಗೆ ಆ ಹುಕುಮನಾಮೆಯನ್ನು ರಹಿತಮಾಡುವ ಹುಕುಮು ಮಾಡಿ ಆ ದಾವೆಯನ್ನು ನಡೆಯಿಸಲಿಕ್ಕೆ ದಿವಸವನ್ನು ನೇಮಿಸಬೇಕು. (ಆ. ೯, ರೂ. ೧೩.)

ಪ್ರತಿಪಕ್ಷಕಾರನಿಗೆ ನೋಟೀಸು ಕೊಡದೆ ಹುಕುಮನಾಮೆಯನ್ನು ಮೇಲಿನಂತೆ ರಹಿತಮಾಡಲಾಗದು. (ಆ. ೯, ರೂ. ೧೪.)

ಏಕತರ್ಫಿ ಚೌಕಶಿಯನ್ನು ಕೋರ್ಟಿನವರು ಯಾವ ಪ್ರಸಕ್ತಿಯಲ್ಲಿ ನಡೆಯಿಸಬಹುದು ? ದಾವೆಯನ್ನು ಸುನಾವಣಿಗಾಗಿ ತೆಗೆದಾಗ ವಾದಿಯು ಹಾಜರಾಗಿ ಪ್ರತಿವಾದಿಯು ಹಾಜರಾಗದಿದ್ದಲ್ಲಿ ಮತ್ತು ದಾವೆಯ ಸಮನು ಪ್ರತಿವಾದಿಯ ಮೇಲೆ ಯೋಗ್ಯವಾಗಿ ಬಜಾಯಿಸಲ್ಪಟ್ಟಲ್ಲಿ ಕೋರ್ಟಿನವರು ಏಕತರ್ಫಿ ಚೌಕಶಿಯನ್ನು ನಡೆಯಿಸಬಹುದು. (ಆ. ೯, ರೂ. ೬.)

ಈ ಪ್ರಕಾರ ಏಕತರ್ಫಿ ಚೌಕಶಿಯನ್ನು ನಡೆಯಿಸಿ ಕೋರ್ಟಿನವರು ಪ್ರತಿವಾದಿಯ ವಿರುದ್ಧವಾಗಿ ಹುಕುಮನಾಮೆಯನ್ನು ಮಾಡಿದ ಪಕ್ಷಕ್ಕೆ ಪ್ರತಿವಾದಿಯು ಮೇಲೆ ಹೇಳಿದಂತೆ ಆ ಹುಕುಮನಾಮೆಯನ್ನು ರಹಿತಮಾಡುವ ಬಗ್ಗೆ ಕೋರ್ಟಿಗೆ ಅರ್ಜಿಯನ್ನು ಮಾಡಬಹುದು. (ಆ. ೯, ರೂ. ೧೩.)

ಏಕತರ್ಫಿ ಆದಂಥ ಹುಕುಮನಾಮೆಯನ್ನು ರದ್ದುಮಾಡುವ ಹುಕುಮು ಆಗುವಗೋಸ್ಕರ ಯಾವ ಅವಧಿಯಲ್ಲಿ ಅರ್ಜಿಮಾಡಬೇಕು ? ಹುಕುಮನಾಮೆಯ ತಾರೀಖಿನಿಂದ ಅಥವಾ ಸಮನು ಯೋಗ್ಯವಾಗಿ ಬಜಾಯಿಸಲ್ಪಟ್ಟರದಿದ್ದರೆ

ಅರ್ಜಿದಾರನಿಗೆ ಹುಕುಮನಾಮೆಯು ತಿಳುವಳಿಕೆಗೆ ಬಂದಂದಿನಿಂದ ೩೦ ದಿವಸ ಗಳಲ್ಲಿ ಮಾಡಬೇಕು.

ಈ ಪ್ರಕಾರ ಅರ್ಜಿಯನ್ನು ಮಾಡಿದಾಗ ಕೋರ್ಟಿನವರು ಅದನ್ನು ಮಾನ್ಯ ಮಾಡಿ ಏಕತರ್ಫಿ ಹುಕುಮನಾಮೆಯನ್ನು ರಹಿತಮಾಡಿದರೆ ಆ ಹುಕುಮಿನ ಅಪೀಲು ಇಲ್ಲ. ಆದರೆ ಕೋರ್ಟಿನವರು ಆ ಅರ್ಜಿಯನ್ನು ನಾಕರಿಸಿ ಏಕತರ್ಫಿ ಹುಕುಮನಾಮೆಯನ್ನು ರಹಿತಮಾಡದಿದ್ದರೆ ಆ ಹುಕುಮಿನ ಮೇಲೆ ಅಪೀಲು ಅದೆ; ಮತ್ತು ಪ್ರತಿವಾದಿಯು ಅಪೀಲು ಮಾಡಬಹುದು.

ಏಕತರ್ಫಿ ಹುಕುಮನಾಮೆಯು ಮಾಡಲ್ಪಟ್ಟ ಪಕ್ಷಕ್ಕೆ ಪ್ರತಿವಾದಿಯು ಕೆಳಗೆ ಹೇಳಿದ ಇಲಾಜುಗಳನ್ನು ಮಾಡಬಹುದು. ಅವುಗಳನ್ನು—

೧. ಏಕತರ್ಫಿ ಹುಕುಮನಾಮೆಯ ಮೇಲೆ ಪ್ರತಿವಾದಿಯು ಅಪೀಲು ಮಾಡಬಹುದು. (ಕಲಮು ೯೬).

೨. ಫೈಸಲಿನ ತಪಾಸಿಗಾಗಿ ಅರ್ಜಿಯನ್ನು ಮಾಡಬಹುದು (ಆ. ೪೭, ರೂ. ೧)

(Application for a review of Judgement.)

೩. ಏಕತರ್ಫಿ ಹುಕುಮನಾಮೆಯನ್ನು ರಹಿತಮಾಡುವಬಗ್ಗೆ ಮೇಲೆ ಹೇಳಿದಂತೆ ಅರ್ಜಿಯನ್ನು ಮಾಡಬಹುದು.

ಪ್ರತಿವಾದಿಯು ಈ ಮೂರು ಇಲಾಜುಗಳನ್ನು ಮಾಡಬಹುದು. ಅಥವಾ ಇವುಗಳ ಪೈಕಿ ಯಾವದಾದರೊಂದು ಇಲಾಜು ಮಾಡಬಹುದು.

---

# ೧೦ನೆಯ ಪ್ರಕರಣ

## ಪಕ್ಷಕಾರರ ಜಬಾನಿಗಳು ಮತ್ತು ಮುದ್ದೆಗಳು

ಅಸಲರ್ಜಿಯಲ್ಲಿ ಅಥವಾ ಕೈಫಿಯತಿನಲ್ಲಿ ಬರೆದ ಸಂಗತಿಗಳು ಯಾವ ಪಕ್ಷಕಾರನಿಗೆ ವಿರುದ್ಧವಾಗಿ ಬರೆಯಲ್ಪಟ್ಟಿರುತ್ತವೆಯೋ ಆ ಪಕ್ಷಕಾರನು ಆ ಸಂಗತಿಗಳನ್ನು ಸಾಕ್ಷಾತ್ತಾಗಿಯಾಗಲೀ ಅಪರಿಹಾರ್ಯವಾದ ಗರ್ಭಿತ ರೀತಿಯಿಂದಾಗಲೀ ಕಬೂಲು ಯಾ ನಾಕಬೂಲುಮಾಡದಿದ್ದರೆ, ಕೋರ್ಟಿನವರು ಪ್ರತಿಯೊಬ್ಬ ಪಕ್ಷಕಾರನನ್ನು ಯಾ ಅವನ ವಕೀಲನನ್ನು ಕೇಳಿ ಅವರು ಆ ಸಂಗತಿಗಳನ್ನು ಕಬೂಲು ಮಾಡುತ್ತಾರೋ ನಾಕಬೂಲು ಮಾಡುತ್ತಾರೋ ಎಂಬದನ್ನು ದಾವೆಯ ಮೊದಲನೇ ಸುನಾವಣಿಯ ಸಮಯದಲ್ಲಿ ನಿಶ್ಚಯಿಸಿಕೊಳ್ಳಬೇಕು. ಮೇಲಿನಂತೆ ಜವಾಬು ಕೊಡಲಿಕ್ಕೆ ವಕೀಲನು ನಾಕಾರಿಸಿದರೆ ಯಾ ಅಸಮರ್ಥನಾದರೆ ಕೋರ್ಟಿನವರು ಆ ದಾವೆಯ ವಿಚಾರಣೆಯ ಬಗ್ಗೆ ಮುಂದೊಂದು ದಿವಸ ನೇಮಿಸಿ ಆ ದಿವಸ ಪಕ್ಷಕಾರನಿಗೆ ಸ್ವತಃ ಹಾಜರಾಗಲಿಕ್ಕೆ ಹುಕುಮು ಮಾಡಬಹುದು. ಈ ಹುಕುಮಿನ ಪ್ರಕಾರ ಅವನು ಹಾಜರಾಗದಿದ್ದರೆ ಕೋರ್ಟಿನವರು ಅವನಿಗೆ ವಿರುದ್ಧವಾಗಿ ಫೈಸಲು ಮಾಡಬಹುದು. ಅಥವಾ ದಾವೆಯ ಸಂಬಂಧವಲ್ಲಿ ತಮಗೆ ಯೋಗ್ಯವಾಗಿ ತೋರುವಂಥ ಹುಕುಮು ಮಾಡಬಹುದು.

**ಮುದ್ದೆಗಳು**—ಮುದ್ದೆಗಳಲ್ಲಿ ಎರಡು ಭೇದ ಉಂಟು. ಎಂದು ವಸ್ತುಸ್ಥಿತಿಯ ಮುದ್ದೆ; ಎರಡನೇದ್ದು ಕಾಯದೆಯಮುದ್ದೆ. ಯಾವದೊಂದು ವಸ್ತುಸ್ಥಿತಿಯ ಯಾ ಕಾಯದೆಯ ಮಹತ್ವದ ಸಿದ್ಧಾಂತವನ್ನು ಒಬ್ಬ ಪಕ್ಷಕಾರನು ಸ್ಥಾಪಿಸಲಾಗಿ ಅವನ್ನು ಮತ್ತೊಬ್ಬನು ನಾಕಾರಿಸಿದರೆ ಮುದ್ದೆಗಳು ಹುಟ್ಟುತ್ತವೆ. ಒಬ್ಬ ಪಕ್ಷಕಾರನಿಂದ ಸ್ಥಾಪಿಸಲ್ಪಟ್ಟು ಮತ್ತೊಬ್ಬನಿಂದ ನಾಕಾರಿಸಲ್ಪಟ್ಟಂಥ ಪ್ರತಿಯೊಂದು ಜರೂರಿನ ಸಿದ್ಧಾಂತವೂ ಸ್ವತಂತ್ರವಾದದ್ದೊಂದು ಮುದ್ದೆಯ ವಿಷಯವಾಗತಕ್ಕದ್ದು. ದಾವೆಯ ಮೊದಲನೇ ಸುನಾವಣಿಯ ಸಮಯದಲ್ಲಿ ಅಸಲರ್ಜಿಯನ್ನು ಮತ್ತು ಕೈಫಿಯತನ್ನು (ಇದ್ದರೆ) ಓದಿ ಅವಶ್ಯವಾಗಿ ತೋರಿದಂತೆ ಪಕ್ಷಕಾರರ ಜಬಾನಿಗಳನ್ನು ತೆಗೆದುಕೊಂಡ ಬಳಿಕ ವಸ್ತುಸ್ಥಿತಿಯ ಯಾ ಕಾಯ

ದೆಯ ಯಾವ ಮಹತ್ವದ ಸಿದ್ಧಾಂತವಲ್ಲಿ ಪಕ್ಷಕಾರರು ಒಬ್ಬರಿಗೊಬ್ಬರು ವಿರೋಧಿಗಳಾಗಿರುತ್ತಾರೆ ಎಂಬದನ್ನು ಕೋರ್ಟಿನವರು ನಿಶ್ಚಯಗೊಳಿಸಬೇಕು; ತರುವಾಯ ವ್ಯಾಜ್ಯದ ಯಥಾರ್ಥವಾದ ನಿರ್ಣಯಕ್ಕೆ ಆಧಾರಭೂತವಾಗಿ ತನಗೆ ತೋರಿದಂಥ ಮುದ್ದೆಗಳನ್ನು ಕೋರ್ಟಿನವರು ತೆಗೆದು ಬರೆದಿಡಬೇಕು. ಕೋರ್ಟಿನವರಿಗೆ ಅವಶ್ಯಕಂಡರೆ ಕಾಯದೆಯ ಮುದ್ದೆಗಳ ಚೌಕಶಿಯನ್ನು ಅವರು ಮೊದಲು ಮಾಡಬಹುದು.

---

# ೧೧ನೆಯ ಪ್ರಕರಣ



## ವ್ಯಕ್ತಪಡಿಸುವದು ಮತ್ತು ತಪಾಸಿಸುವದು

## Discovery and Inspection

ಪ್ರತಿಯೊಬ್ಬ ಪಕ್ಷಕಾರನಿಗೆ ತನ್ನ ಪ್ರತಿಪಕ್ಷದವನ ಹಕ್ಕಿನ ಯಾ ಬಾಧ್ಯತೆಯ ಯಾ ಉತ್ತರಪಕ್ಷದ ಪೂರ್ಣ ಸ್ವರೂಪವನ್ನು ಚನ್ನಾಗಿ ಗೊತ್ತು ಪಡಿಸಿಕೊಂಬುವ ಅಧಿಕಾರ ಉಂಟು. ಸವಾಲಗಳ ಮೂಲಕವಾಗಿ ಅವನು ಪ್ರತಿಪಕ್ಷದವನ ಹಕ್ಕುವನ್ನು ವಗೈರೆ ವ್ಯಕ್ತಪಡಿಸಿಕೊಳ್ಳಬಹುದು. ಮತ್ತು ದಸ್ತೈವಜುಗಳನ್ನು ವ್ಯಕ್ತಪಡಿಸುವ ಬಗ್ಗೆ ಅವನು ಅರ್ಜಿಯನ್ನು ಮಾಡಿ ಪ್ರತಿಪಕ್ಷದವನ ತಾಬೆಯಲ್ಲಿ ಇದ್ದ ದಸ್ತೈವಜುಗಳನ್ನು ಸಹಾ ಅವನು ವ್ಯಕ್ತಪಡಿಸಿಕೊಳ್ಳಬಹುದು. ಇವುಗಳ ಬಗ್ಗೆ ನಿಯಮಗಳನ್ನು ಕೆಳಗೆ ಕೊಡುತ್ತೇವೆ.

ಯಾವದಾದರು ದಾವೆಯಲ್ಲಿ ವಾದಿಯಾಗಲೀ ಪ್ರತಿವಾದಿಯಾಗಲೀ ವಿರುದ್ಧ ಪಕ್ಷಕಾರರ ಅಥವಾ ಅಂಥ ಪಕ್ಷಕಾರರಲ್ಲಿ ಯಾವನೊಬ್ಬನ ಅಥವಾ ಹೆಚ್ಚುಜನರ ಜಬಾಬು ತೆಗೆದುಕೊಳ್ಳುವದಕ್ಕೋಸ್ಕರ ಲೇಖಿ ಸವಾಲಗಳನ್ನು ಕೋರ್ಟಿನವರ ಅಪ್ಪಣೆಯಿಂದ ಕೊಡಬಹುದು; ವಿವಕ್ಷಿತ ಸವಾಲಗಳನ್ನು ಕೊರ್ಟಿನಲ್ಲಿ ಸಾದರ ಮಾಡಬೇಕು; ಅಂಥ ಸವಾಲಗಳನ್ನು ಕೊಡಲಾಗಿ ಅವರಲ್ಲಿ ಆ ಸವಾಲಗಳ ಕೆಳಗೆ ಯಾವ ಪ್ರಶ್ನೆಗೆ ಆ ಪ್ರತಿಯೊಬ್ಬ ಪಕ್ಷಕಾರನು ಜಬಾಬು ಕೊಡಬೇಕೆಂಬ ಬಗ್ಗೆ ಸೂಚನೆಯನ್ನು ಅದರ ಅಡಿಗೆ ಬರೆದು ಕೊಡಬೇಕು; ಯಾವನಾದರು ಪಕ್ಷಕಾರನು ಆ ಬಗ್ಗೆ ಕೋರ್ಟಿನವರ ಅಪ್ಪಣೆಯ ಹೊರತು ಒಬ್ಬನೇ ಮನುಷ್ಯನಿಗೆ ಒಂದಕ್ಕಿಂತ ಹೆಚ್ಚು ಸವಾಲು ಪಟ್ಟಿಗಳನ್ನು ಕೊಡಲಾಗದು; ಮತ್ತು ದಾವೆಯೊಳಗಿನ ಯಾವದಾದರು ಪ್ರಸಕ್ತಿಗೆ ಸಂಬಂಧಿಸಿದಂಥ ಸವಾಲಗಳು ಕೊಡಬಾರದು. ಇಷ್ಟೆ ಅಲ್ಲಾ. ಅವುಗಳನ್ನು ಪ್ರಾಮಾಣಿಕತನದಿಂದ, ಮತ್ತು ನ್ಯಾಯಾತ್ರಯವನ್ನು ದೊರಿಯುವ ಉದ್ದೇಶದಿಂದ ಮಾತ್ರ ಕೊಡಬೇಕು ಅವುಗಳನ್ನು ಗೈರವಾಜವೀ ಯಾ ತ್ರಾಸದಾಯಕ ಯಾ ಅನಾವಶ್ಯವಾದ ಯಾ ನಿಂದಾಸ್ಪದವಾದದ್ದು ಇರತಕ್ಕದಲ್ಲ. ಸವಾಲಗಳು ಕೆಳಗೆ ಬರೆದ ನಮೂನೆಯಂತೆ ಇರಬೇಕು.

ಶಾ. ಅಸಲ. ನಂಬರ—

... ... ... ... ... ... ಇವರ ಕೋರ್ಟಿನಲ್ಲಿ

ಅ ಬ, ... ... ... ... ವಾದಿ

**ವಿರುದ್ಧ**

**ಕ, ಡ,** ಇ, **ಫ,** ಮತ್ತು **ಗ, ಹ,** ... ... ಪ್ರತಿವಾದಿಗಳು

ಮೇಲೆ ಹೇಳಿದ (ವಾದಿಯಾದ ಯಾ ಪ್ರತಿವಾದಿಯಾದ **ಕ, ಡ** ಎಂಬು ವನ) ತರ್ಫಿನಿಂದ ಸದರಿ ಪ್ರತಿವಾದಿಗಳು **ಇ, ಫ** ಮತ್ತು ವಾದಿಯು) ಜಬಾಬು ತೆಗೆದು ಕೊಳ್ಳುವದಕ್ಕಾಗಿ ಸವಾಲಗಳು: —

೧ ... ... ... ... ಮಾಡಲಿಲ್ಲವೆ ?

೨ ... ... ... ... ಇಲ್ಲವೆ ?

ಮುಂತಾಗಿ ಮುಂತಾಗಿ

[ ... ... ನಂಬರಗಳ ಸವಾಲುಗಳಿಗೆ **ಈ, ಫ** ಪ್ರತಿವಾದಿಯ ಜಬಾಬು ಕೊಡಬೇಕು ]

[ ... ... ನಂಬರಗಳ ಸವಾಲುಗಳಿಗೆ **ಗ, ಹ** ಪ್ರತಿವಾದಿಯು ಜಬಾಬು ಕೊಡಬೇಕು. ]

ಸವಾಲುಗಳು ಬಜಾಯಿಸಲ್ಪಟ್ಟ ಬಳಿಕ ಹತ್ತು ದಿವಸಗಳೊಳಗೆ ಅಥವಾ ಕೋರ್ಟಿನಿಂದ ಕೊಡಲ್ಪಟ್ಟ ಹೆಚ್ಚಿನ ಮುದ್ದತಿನೊಳಗೆ ಅವುಗಳಿಗೆ ಜಬಾಬುಗಳನ್ನು ಪ್ರತಿಜ್ಞಾಲೇಖದಿಂದ (Affidavit ಅಫೀಡೆವಿಟದಿಂದ) ಬರೆದು ದಾಖಲು ಮಾಡಬೇಕು. ಸವಾಲುಗಳಿಗೆ ಜಬಾಬಾಗಿ ಕೊಟ್ಟ ಪ್ರತಿಜ್ಞಾಲೇಖವೂ ಕೆಳಗಿನ ನಮೂನೆಯಂತೆ ಆಯಾ ವಿದ್ಯಮಾನಗಳಿಗೆ ಬೇಕಾದ ಬಹುದಾದ ಅದಲು ಬದಲುಗಳೊಡನೆ ಇರತಕ್ಕದ್ದು.

ಸವಾಲು ಪಟ್ಟಿಗೆ ಜಬಾಬು (ಆ. ೧೧, ರೂ. ೯,)

( ಸರನಾಮೆ ಮೇಲಿನಂತೆ ಬರೆಯಬೇಕು. )

ಮೇಲೆ ಹೇಳದ ವಾದಿಯು ಮೇಲೆ **ಇ, ಫ** ಪ್ರತಿವಾದಿಯ ಜಬಾಬಿಗಾಗಿ ಕೊಟ್ಟ ಸವಾಲುಗಳಿಗೆ ಪ್ರತಿವಾದಿಯಾದ **ಇ, ಫ** ನ ಉತ್ತರ: —

ಸದರಿ ಸವಾಲುಗಳಿಗೆ ಉತ್ತರವಾಗಿ; ಮೇಲೆ ಹೇಳಿದ **ಇ, ಫ** ಎಂಬ ನಾನು ಪ್ರಮಾಣ ಮಾಡಿ ಹೇಳುವದೇನಂದರೆ:—

೧ } ಅನುಕ್ರಮ ನಂಬರಗಳನ್ನು ಕೊಟ್ಟು ಪ್ಯಾರಾಗ್ರಾಫಮಾಡಿ ಸವಾ-
೨ } ಲುಗಳಿಗೆ ಜಬಾಬುಗಳನ್ನು ಬರೆಯಬೇಕು.

೩ ... ... ನಂಬರಗಳ ಸವಾಲುಗಳಿಗೆ ಜಬಾಬು ಕೊಡಲಿಕ್ಕೆ ನಾನು ಆಕ್ಷೇಪಿಸುತ್ತೇನೆ; ಯಾಕಂದರೆ ( ಆಕ್ಷೇಪಣೆಯ ಕಾರಣಗಳನ್ನು ಕೊಡು. )

ಜವಾಬಿಗಾಗಿ ಕೊಟ್ಟ ಯಾವದಾದರು ಪ್ರತಿಜ್ಞಾಲೇಖಕ್ಕೆ ಯಾವದಾದರು ಆಕ್ಷೇಪಣೆಗಳನ್ನು ತೆಗೆಯಲಾಗದು, ಆದರೆ ಹಾಗೆ ಅಪೂರ್ಣವೆಂದು ಆಕ್ಷೇಪಿಸಲ್ಪಟ್ಟಂಥ ಯಾವದಾದರು ಪ್ರತಿಜ್ಞಾಲೇಖವು ಪೂರ್ಣವೋ ಅಪೂರ್ಣವೋ ಎಂಬದನ್ನು ಕೋರ್ಟು ನಿರ್ಣಯಗೊಳಿಸತಕ್ಕದ್ದು. ಯಾವನೊಬ್ಬ ಮನುಷ್ಯನು ಸವಾಲಿಗೆ ಜವಾಬ ಕೊಡುವದನ್ನು ತಪ್ಪಿಸಿದರೆ ಯಾ ಅಪೂರ್ಣವಾಗಿ ಜಬಾಬು ಕೊಟ್ಟರೆ, ಪ್ರಸಕ್ತಿ ಇದ್ದಂತೆ ಅದಕ್ಕೆ ಜಬಾಬು ಕೊಡಲಿಕ್ಕೆ ಯಾ ಹೆಚ್ಚಿಗೆ ಜಬಾಬು ಕೊಡಲಿಕ್ಕೆ ಕೋರ್ಟಿನವರು ಹುಕುಮು ಮಾಡಬಹುದು.

**ದಸ್ತೈವಜುಗಳನ್ನು ವ್ಯಕ್ತಪಡಿಸುವ ಬಗ್ಗೆ ಅರ್ಜಿ ಮಾಡೋಣ—** ಯಾವನೊಬ್ಬ ಪಕ್ಷಕಾರನು ಪ್ರತಿಜ್ಞಾಲೇಖವನ್ನು ದಾಖಲು ಮಾಡದೆ ದಾವೆಯ ಬೇರೆ ಯಾವನೊಬ್ಬ ಪಕ್ಷಕಾರನಿಗೆ, ಆ ದಾವೆಯ ಯಾವದೊಂದು ಸಂಗತಿಗೆ ಸಂಬಂಧಿಸಿದಂಥವುಗಳಾಗಿ, ಅವನ ವಶದಲ್ಲಾಗಲಿ ಅಧಿಕಾರದೊಳಗಾಗಲಿ ಇರುವಂಥವುಗಳಾದ ಯಾ ಪೂರ್ವದಲ್ಲಿ ಇದ್ದಂಥವುಗಳಾದ ದಸ್ತೈವಜುಗಳನ್ನೆಲ್ಲ ಪ್ರತಿಜ್ಞಾಲೇಖದಿಂದ ವ್ಯಕ್ತಪಡಿಸುವ ಬಗ್ಗೆ ಹುಕುಮು ದೊರೆಯಬೇಕೆಂದು ಕೋರ್ಟಿಗೆ ಅರ್ಜಿಮಾಡಬಹುದು; ಇಂಥ ಅರ್ಜಿಯ ಸುನಾವಣಿಯ ತರುವಾಯ ಕೋರ್ಟು ಯೋಗ್ಯವಾದ ಹುಕುಮು ಮಾಡಬಹುದು.

ಮೇಲೆ ಹೇಳಿದಂತೆ ದಸ್ತೈವಜುಗಳ ಸಂಬಂಧಿ ಪ್ರತಿಜ್ಞಾಲೇಖವನ್ನು ಮಾಡುವ ಬಗ್ಗೆ ಕೋರ್ಟಿನವರು ಹುಕುಮು ಮಾಡಿದ ಪಕ್ಷಕ್ಕೆ ಯಾವ ಪಕ್ಷಕಾರನ ವಿರುದ್ಧವಾಗಿ ಅಂಥ ಹುಕುಮು ಮಾಡಲ್ಪಟ್ಟಿದೋ ಆ ಪಕ್ಷಕಾರನ ವಿರುದ್ಧವಾಗಿ

ಅಂಥ ಹುಕುಮು ಮಾಡಲ್ಪಟ್ಟದೆಯೋ ಆ ಪಕ್ಷಕಾರನು ತಾನು ಬರೆದ ಕೊಡುವ ಪ್ರತಿಜ್ಞಾಲೇಖದಲ್ಲಿ ವಿವರಿಸಿದ ದಸ್ತೈವಜುಗಳಲ್ಲಿ ಯಾವವನ್ನು ಹಾಜರು ಮಾಡ ಲಿಕ್ಕೆ ಅವನ ಹರಕತ್ತು ಇರುವದೆಂಬುದನ್ನು ಸ್ಪಷ್ಟಗೊಳಿಸಬೇಕು; ಮತ್ತು ಅದು ವಿದ್ಯಮಾನಗಳಿಗೆ ಬೇಕಾದಂಥ ಬದಲಾವಣೆಗಳೊಡನೆ ಕೆಳಗೆ ಬರೆದ ನಮೂನೆ ಯಂತೆ ಇರತಕ್ಕದ್ದು.

ದಸ್ತೈವಜುಗಳ ಬಗ್ಗೆ ಪ್ರತಿಜ್ಞಾಲೇಖವೂ (ಆ. ೧೧, ರೂ. ೧೩.)

(ಸರನಾಮೇ ಮೇಲಿನಂತೆ ಬರೆಯಬೇಕು.)

ಮೇಲೆ ಹೇಳಿದ ಪ್ರತಿವಾದಿಯಾದ **ಕ, ಡ** ಎಂಬ ನಾನು ಪ್ರಮಾಣ ಮಾಡಿ ಹೇಳುವದೇನಂದರೆ:—

೧. ನನ್ನ ಕಬಜೆ ಅಥವಾ ತಾಬೆಯಲ್ಲಿ ಇರುವ ಒಂದನೇ ಪರಿಶಿಷ್ಟದ ಒಂದನೇ ಮತ್ತು ಎರಡನೇ ಭಾಗಗಳಲ್ಲಿ ತೋರಿಸಿರುವ ಈ ದಾವೆಯೊಳಗಿನ ವಿವಾ ದಗಳಿಗೆ ಸಂಬಂಧಿಸುವ ದಸ್ತೈವಜುಗಳು ಇರುತ್ತವೆ.

೨. ಇದರ ಒಂದನೇ ಪರಿಶಿಷ್ಟದ ಎರಡನೇ ಭಾಗದಲ್ಲಿ ತೋರಿಸಿರುವ ಸದರೀ ದಸ್ತೈವಜುಗಳನ್ನು ಹಾಜರು ಪಡಿಸಲಿಕ್ಕೆ ನಾನು ಅಪೇಕ್ಷಿಸುತ್ತೇನೆ. (ಆಕ್ಷೇ ಪಣೆಯ ಕಾರಣಗಳನ್ನು ಕೊಡು).

೩. ಇದರ ಎರಡನೇ ಪರಿಶಿಷ್ಟದಲ್ಲಿ ತೋರಿಸಿರುವ ಈ ದಾವೆಯೊಳಗಿನ ವಿವಾದಗಳಿಗೆ ಸಂಬಂಧಿಸುವ ದಸ್ತೈವಜುಗಳು ನನ್ನ ಕಬಜೆ ಅಥವಾ ತಾಬೆಯಲ್ಲಿ ಇದ್ದವು. ಆದರೆ ಈಗ ಇಲ್ಲ.

೪. ಕಡೆಯಲ್ಲಿ ಹೇಳಿದ ದಸ್ತೈವಜುಗಳು ನನ್ನ ಕಬಜೆ ಅಥವಾ ತಾಬೆ ಯಲ್ಲಿ ಕೊನೆಗೆ (ಯಾವಾಗ ಇದ್ದವೆಂಬುದನ್ನು ಹೇಳು) ಇದ್ದವು (ಮತ್ತು ಅವು ಗಳು ಏನಾದವು ಮತ್ತು ಈಗ ಅವು ಯಾರ ತಾಬೆಯಲ್ಲಿವೆ ಎಂಬುದನ್ನು ಹೇಳು.)

೫. ನನ್ನ ಉತ್ತಮವಾದ ಜ್ಞಾನ ತಿಳುವಳಿಕೆ ಮತ್ತು ನಂಬಿಗೆಯ ಮಟ್ಟಿಗೆ ನನ್ನ ಕಬಜೆ, ಕಾವಲು ಅಥವಾ ತಾಬೆಯಲ್ಲಿ; ಅಥವಾ ನನ್ನ ವಕೀಲನ ಅಥವಾ

ಏಜಂಟನ ಕಬಜೆ, ಕಾವಲು ಅಥವಾ ತಾಬೆಯಲ್ಲಿ ಅಥವಾ ನನ್ನ ತರ್ಫನಿಂದ ಬೇರೆ ಯಾವನೊಬ್ಬನ ಕಬಜೆ, ಕಾವಲು ಅಥವಾ ತಾಬೆಯಲ್ಲಿ, ಈ ದಾವೆಯೊಳಗಿನ ವಿವಾದದ ಸಂಗತಿಗಳಿಗೆ ಅಥವಾ ಅವುಗಳ ಪೈಕಿ ಯಾವದೊಂದಕ್ಕೆ ಸಂಬಂಧಿಸುವ ಅಥವಾ ಅಂಥಾ ಸಂಗತಿಗಳಿಗೆ ಅಥವಾ ಅವುಗಳಪೈಕಿ ಯಾವದೊಂದರ ಸಂಬಂಧದಿಂದ ಯಾವದೊಂದು ನೋಂದು ಮಾಡಿದ, ಇದರ ಸದರಿ ಒಂದನೇ ಮತ್ತು ಎರಡನೇ ಪರಿಶಿಷ್ಟಗಳಲ್ಲಿ ತೋರಿಸಿರುವ ದಸ್ತಾವೇಜುಗಳನ್ನು ಹೊರತುಪಡಿಸಿ ಇನ್ನು ಬೇರೆ ಯಾವನೊಂದು ಲೆಖ್ಖ,ಲೆಖ್ಖದ ಪುಸ್ತಕ, ಪೌಚರು, ಪತ್ರ ಯಾದಿ, ಕಾಗದ ಅಥವಾ ಲೇಖ ಅಥವಾ ಅಂಥಾ ಯಾವದೊಂದು ದಸ್ತೈವಜಿನ ಯಾವದೊಂದು ನಕಲು ಅಥವಾ ಅದರೊಳಗಿನ ಯಾವದೊಂದು ಉತಾರು ಅಥವಾ ಬೇರೆ ಯಾವ ದಸ್ತೈವಜಾವರೂ, ಈಗ ಇರುವದಿಲ್ಲ ಅಥವಾ ಹಿಂದೆ ಎಂದೂ ಇರಲಿಲ್ಲ.

ದಾವೆಯ ಯಾವದೊಂದು ಸಂಗತಿಗೆ ಸಂಬಂಧಿಸಿದಂಥ ದಸ್ತೈವಜುಗಳು ಹಾಜರು ಮಾಡಲಿಕ್ಕೆ ಆ ಪಕ್ಷಕಾರನಿಗೆ ಕೋರ್ಟಿನವರು ಹುಕುಮು ಮಾಡಬಹುದು.

ದಾವೆಯೊಳಗಿನ ಪ್ರತಿಯೊಬ್ಬ ಪಕ್ಷಕಾರನು ಅಸಲರ್ಜಿಯಲ್ಲಿ ಯಾ ಕೈಫಿಯತಿನಲ್ಲಿ ಯಾ ಪ್ರತಿಜ್ಞಾಲೇಖಗಳಲ್ಲಿ ಹೇಳಿದ ಯಾವವಾದರು ದಸ್ತೈವಜುಗಳನ್ನು ತಾನಾಗಲಿ ತನ್ನ ವಕೀಲನಾಗಲಿ ತಪಾಸಿಸುವದರ ದಸೆಯಿಂದ ಹಾಜರು ಮಾಡಲಿಕ್ಕೆ ಮತ್ತು ತನ್ನನ್ನು ಯಾ ತನ್ನ ವಕೀಲನನ್ನು ಅದರ ನಕಲು ತೆಗೆದುಕೊಳ್ಳಗೊಡಲಿಕ್ಕೆ ಯಾವದಾದರು ವೇಳೆಯಲ್ಲಿ ಬೇರೆ ಯಾವನೊಬ್ಬ ಪಕ್ಷಕಾರನಿಗೆ ನೋಟೀಸು ಕೊಡಬಹುದು. ಮತ್ತು ಆ ನೋಟಿಸಿನಂತೆ ದಸ್ತೈವಜನ್ನು ಹಾಜರುಮಾಡದಂಥ ಯಾವನಾದರು ಪಕ್ಷಕಾರನು ಅದನ್ನು ಮುಂದೆ ತನ್ನ ಪಕ್ಷದ ಪುರಾವೆಗಾಗಿ ಆ ದಾವೆಯಲ್ಲಿ ಸೇರಿಸಲಾಗದು.

ಮೊದಲು ಯಾವನೊಬ್ಬ ಪಕ್ಷಕಾರನಿಗೆ ದಾವೆಯ ಯಾವದೊಂದು ಸಂಗತಿಗೆ ಸಂಬಂಧಿಸಿದಂಥವುಗಳಾಗಿ ಅವನ ವಶವಲ್ಲಾಗಲಿ ಯಾ ಅಧಿಕಾರದೊಳಗಾಗಲಿ ಇದ್ದ ದಸ್ತೈವಜಿನ ಸಂಬಂಧದಿಂದ ಪ್ರತಿಜ್ಞಾಲೇಖವನ್ನು ಮಾಡಲಿಕ್ಕೆ ಅರ್ಜಿಯನ್ನು ಮತ್ತೊಬ್ಬ ಪಕ್ಷಕಾರನು ಮಾಡಬಹುದು. ಈ ಪ್ರಕಾರ ಪ್ರತಿಜ್ಞಾಲೇಖವನ್ನು ಮಾಡಿದ ನಂತರ ಆ ದಸ್ತೈವಜುಗಳನ್ನು ಮತ್ತು ಅಸಲರ್ಜಿಯಲ್ಲಿ ಯಾ

ಕೈಫಿಯತಿನಲ್ಲಿ ನಮೂದ ಮಾಡಿದ ಯಾ ಹೇಳಿದ ದಸ್ತೈವಜುಗಳನ್ನು ಹಾಜರು ಮಾಡುವ ನೋಟೀಸು ಮಾಡಬೇಕೆಂಬುವ ಬಗ್ಗೆ ಹುಕುಮು ಪಡಕೊಳ್ಳಬಹುದು. ಕೋರ್ಟನವರು ಆ ಪ್ರಕಾರ ದಸ್ತೈವಜುಗಳನ್ನು ಹಾಜರು ಮಾಡುವ ಬಗ್ಗೆ ನೋಟೀಸು ಮಾಡಬಹುದು.

ದಸ್ತೈವಜುಗಳನ್ನು ಹಾಜರು ಮಾಡುವ ವಿಷಯವಾಗಿ ನೋಟೀಸು (ಆ. ೧೧, ರೂ. ೧೬.)

( ಸರನಾಮೆ ಮೇಲಿನಂತೆ ಬರೆಯಬೇಕು. )

ನಿಮಗೆ ನೋಟೀಸು ಕೊಡುವದೇನಂದರೆ, ನಿಮ್ಮ (ಸನ್ ೧೯... ತಿಂಗಳಿನ ತಾರೀಖಿನ ಅಸಲರ್ಜಿಯಲ್ಲಿ ಯಾ ಕೈಫಿಯತಿನಲ್ಲಿ ಯಾ ಪ್ರತಿಜ್ಞಾಲೇಖದಲ್ಲಿ ಉಲ್ಲೇಖಿಸಿದ ಈ ಕೆಳಗಿನ ದಸ್ತೈವಜುಗಳನ್ನು (ವಾದಿಯು ಯಾ ಪ್ರತಿವಾದಿಯು) ತಾನು ನೋಡಬೇಕಾಗಿ ನೀವು ಹಾಜರು ಮಾಡಬೇಕೆಂದು ಅಪೇಕ್ಷಿಸುತ್ತಾನೆ.

( ಬೇಡಿದ ದಸ್ತೈವಜುಗಳನ್ನು ವಿವರಿಸು )

ಕ್ಷ, ಯ
ಇವನ ಬಗ್ಗೆ ವಕೀಲನು

ಜ್ಞ ನ ವಕೀಲನಾದ
ವವನಿಗೆ

ಇಂಥ ನೋಟೀಸು ಬಜಾಯಿಸಲ್ಪಟ್ಟಂಥ ಪಕ್ಷಕಾರನು, ಅದು ತನಗೆ ಮುಟ್ಟಿದ ೧೦ ದಿವಸಗಳೊಳಗೆ ಅದನ್ನು ಕೊಟ್ಟ ಪಕ್ಷಕಾರನಿಗೆ ಒಂದು ನೋಟೀಸನ್ನು ಕೊಟ್ಟು ಆ ತನ್ನ ನೋಟೀಸನ್ನು ಕೊಟ್ಟ ದಿವಸದಿಂದ ಮೂರುದಿವಸಗಳೊಳಗೆ ಯಾವದೊಂದು ಮುದ್ದತಿನಲ್ಲಿ ತನ್ನ ವಕೀಲನ ಆಫೀಸಿನಲ್ಲಿ ಅಥವಾ ಬರೆ ಜಾಗಾದಲ್ಲಿ ತನಗೆ ಅಡ್ಡಿ ಇಲ್ಲದಂಥ ಯಾವವಾದರು ದಸ್ತೈವಜಗಳನ್ನು ತಪಾಸಿಸಬಹುದೆಂದು ತಿಳಿಸಬೇಕು. ಈ ಪ್ರಕಾರ ಮಾಡುವ ನೋಟೀಸದ ನಮೂನೆ ಕೆಳಗೆ ಕೊಡುತ್ತೇವೆ.

ದಸ್ತೈವಜುಗಳು ತಪಾಸಿಸುವ ಬಗ್ಗೆ ನೋಟೀಸು (ಆ. ೧೧, ರೂ. ೧೭).

( ಸರನಾಮೆ ಮೇಲಿನಂತೆ ಬರೆಯಬೇಕು )

ನಿನಗೆ ನೋಟೀಸು ಕೊಡುವದೇನಂದರೆ, ನೀನು ನಿನ್ನ ಸನ್ ೧೯... ತಿಂಗಳಿನ ದಿನದ ನೋಟೀಸಿನಲ್ಲಿ ಹೇಳಿದ ದಸ್ತೈವಜುಗಳ [ಆ ನೋಟೀಸಿನಲ್ಲಿ ಇರುವ ನಂಬರಗಳ ದಸ್ತೈವಜುಗಳನ್ನು ಹೊರತುಪಡಿಸಿ] ತಪಾಸಣಿಯನ್ನೂ (ತಪಾಸಣಿ ಮಾಡುವ ಸ್ಥಳವನ್ನು ಬರೆಯುಬೇಕು). ಇಲ್ಲಿ ಬರುವ ಗುರುವಾರ ತಾರೀಖು ...... ಸನ್ ...... ದಿವಸ ೧೨ ಮತ್ತು ೪ ಗಂಟೆಗಳೊಳಗಿನ ಸಮಯದಲ್ಲಿ ಮಾಡಬಹುದು.

ಅಥವಾ ಸದರೀ (ವಾದಿಯು ಅಥವಾ ಪ್ರತಿವಾದಿಯು) ನಿನ್ನ ಸನ್ ೧೯............ತಿಂಗಳಿನ ದಿನದ ನೋಟೀಸಿನಲ್ಲಿ ಹೇಳಿದ ದಸ್ತೈವಜುಗಳನ್ನು ನಿನಗೆ ತಪಾಸಣಿ ಮಾಡುವಬಗ್ಗೆ ಕೊಡಲಿಕ್ಕೆ ಆಕ್ಷೇಪಿಸುತ್ತಾನೆ. ಯಾಕಂದರೆ (ಕಾರಣವನ್ನು ಕೊಡು)—

ವ್ಯಕ್ತಪಡಿಸುವ ಬಗ್ಗೆ ಕೊಟ್ಟ ಹುಕುಮನ್ನು ಮನ್ನಿಸದಿದ್ದರೆ ಅದರ ಪರಿಣಾಮವೂ—ಸವಾಲುಗಳಿಗೆ ಜವಾಬುಕೊಡುವದಕ್ಕಾಗಿ ಯಾ ದಸ್ತೈವಜುಗಳನ್ನು ವ್ಯಕ್ತಪಡಿಸುವದಕ್ಕಾಗಿ ಯಾ ತಪಾಸಣಿಗಾಗಿ ಮಾಡಲ್ಪಟ್ಟ ಯಾವದೊಂದು ಹುಕುಮಿನಂತೆ ನಡೆಯುವದಕ್ಕೆ ಯಾವನೊಬ್ಬ ಪಕ್ಷಕಾರನು ತಪ್ಪಿದ್ದಲ್ಲಿ ಅವನು ವಾದಿಯಾಗಿದ್ದರೆ ದಾವೆಯನ್ನು ಸಾಗಿಸಲಿಲ್ಲವೆಂಬ ಕಾರಣದಿಂದ ತನ್ನ ದಾವೆಯನ್ನು ರದ್ದುಮಾಡಿಸಿಕೊಳ್ಳಲಿಕ್ಕೆ ಪಾತ್ರನಾಗುವನು ಮತ್ತು ಪ್ರತಿವಾದಿಯಾಗಿದ್ದರೆ ತನ್ನ ಪ್ರತಿವಾದವನ್ನು (ಕೊಟ್ಟಿದ್ದರೆ) ರದ್ದುಮಾಡಿಸಿಕೊಳ್ಳಲಿಕ್ಕೆ ಮತ್ತು ಅವನು ಹಾಜರು ಆಗದೆ ವ ಜವಾಬುಕೊಡದೆ ಇದ್ದರೆ ಹ್ಯಾಗೋ ಹಾಗೆ ಇಡಲ್ಪಡಲಿಕ್ಕೆ ಪಾತ್ರನಾಗುವನು.

**ಕಬೂಲು ಮಾಡೋಣ** –ದಾವೆಯ ಯಾವನೊಬ್ಬ ಪಕ್ಷಕಾರನು ತನ್ನ ಅಸಲರ್ಜಿಯಿಂದಾಗಲೀ ಅಥವಾ ಕೈಫಿಯತಿನಿಂದಾಗಲೀ ಅಥವಾ ಇತರ ರೀತಿಯಿಂದಾಗಲೀ ಇತರ ಯಾವವಾದರು ಪಕ್ಷಕಾರನ ದಾವೆಯನ್ನು ಪೂರ್ತಯಾಗಿ ಅಥವಾ ಅಂಶತಃ ತಾನು ಕಬೂಲುಮಾಡುತ್ತೇನೆಂದು ಲೇಖೀಯಾಗಿ ನೋಟೀಸು ಕೊಡಬಹುದು (ಆ. ೧೨, ರೂ. ೧).

ಪಕ್ಷಕಾರರೊಳಗೆ ಯಾವನೊಬ್ಬ ಪಕ್ಷಕಾರನು ಯಾವದಾವರು ದಸ್ತೈವಜನ್ನು ಕಬೂಲು ಮಾಡೆಂದು ಇನ್ನೊಬ್ಬ ಪಕ್ಷಕಾರನನ್ನು ಕೇಳಬಹುದು; ಮತ್ತು

ಇಂಥ ನೋಟೀಸು ಮಾಡಿದ್ದರೂ ಸಹಿತ ಅವನು ಕಬೂಲು ಮಾಡದಿದ್ದರೆ ಅದನ್ನು ಸಾಬೀತು ಮಾಡುವ ವೆಚ್ಚವನ್ನು ಅವನಿಗೆ ಕೊಡಬೇಕಾಗುವದು.

ದಸ್ತೈವಜುಗಳನ್ನು ಕಬೂಲುಮಾಡುವ ಬಗ್ಗೆ ಕೊಡತಕ್ಕ ನೋಟೀಸಿನ ನಮೂನೆಯು —

ದಸ್ತೈವಜುಗಳನ್ನು ಕಬೂಲುಮಾಡುವ ಬಗ್ಗೆ ನೋಟೀಸು. (ಆ. ೧೨, ರೂ. ೩.)

( ಸರನಾಮೆ ಮೇಲಿನಂತೆ ಬರೆಯಬೇಕು ).

ನಿಮಗೆ ನೋಟೀಸು ಕೊಡುವದೇನಂದರೆ, ಈ ದಾವೆಯೊಳಗಿನ ವಾದಿಯು (ಅಥವಾ ಪ್ರತಿವಾದಿಯು) ಈ ಕೆಳಗೆ ನಿರ್ದಿಷ್ಟಗೊಳಿಸಿದ ಹಲವು ದಸ್ತೈವಜುಗಳನ್ನು ಪುರಾವೆಯಾಗಿ ಉಪಯೋಗಿಸಲಿಕ್ಕೆ ಇಚ್ಛಿಸುತ್ತಾನೆ; ಮತ್ತು ಅವನು ಪ್ರತಿವಾದಿಯು (ಅಥವಾ ವಾದಿಯು) ಅವನ ವಕೀಲನು ಅಥವಾ ಏಜಂಟನು, ಲ್ಲಿ ದಿವಸ ಗಂಟೆಗಳೊಳಗಿನ ಸಮಯದಲ್ಲಿ ತಪಾಸಿಸಬಹುದು; ಮತ್ತು ಸದರಿ ಪ್ರತಿವಾದಿಯು (ಅಥವಾ ವಾದಿಯು) ಕಡೆಗೆ ಹೇಳಿದ ಗಂಟೆಯಿಂದ ನಾಲ್ವತ್ತೆಂಟು ತಾಸುಗಳೊಳಗೆ, ಸದರಿ ದಸ್ತೈವಜುಗಳ ಪೈಕಿ ಅಸಲುಗಳೆಂದು ನಿರ್ದಿಷ್ಟಗೊಳಿಸಿದ ದಸ್ತೈವಜುಗಳು ಅವುಗಳ ಮೇಲಿಂದ ಯಾರಿಂದ ಬರೆಯಲ್ಪಟ್ಟವೂ, ಸಹಿಮಾಡಲ್ಪಟ್ಟವೂ ಅಥವಾ ಮಾಡಿಕೊಡಲ್ಪಟ್ಟವೂ ಎಂದು ತೋರಿಸುವದೋ ಅವೂ ಅದರಿಂದಲೇ ಆದವುಗಳೆಂದು ಮತ್ತು ಯಾವವೂ ನಕಲುಗಳೆಂದು ನಿರ್ದಿಷ್ಟಗೊಳಿಸಲ್ಪಟ್ಟಿರುವವೋ ಅವು ಖರೇ ನಕಲುಗಳು ಎಂದು. ಮತ್ತು ಯಾವ ದಸ್ತೈವಜುಗಳು ಬಜಾಯಿಸಲ್ಪಟ್ಟವೂ, ಕಳುಹಿಸಲ್ಪಟ್ಟವೂ ಅಥವಾ ಕೊಡಲ್ಪಟ್ಟವೂ ಎಂದು ಹೇಳುವದೋ ಆ ದಸ್ತೈವಜುಗಳು ಹಾಗೆ ಬಜಾಯಿಸಲ್ಪಟ್ಟವೂ, ಕಳುಹಿಸಲ್ಪಟ್ಟವೂ ಅಥವಾ ಕೊಡಲ್ಪಟ್ಟವೂ ಎಂದು ಈ ದಾವೆಯಲ್ಲಿ ಅಂಥ ಎಲ್ಲ ದಸ್ತೈವಜುಗಳನ್ನು ಪುರಾವೆಯಾಗಿ ಉಪಯೋಗಿಸಲಿಕ್ಕೆ ಇರುವ ಎಲ್ಲ ನ್ಯಾಯವಾದ ಆಕ್ಷೇಪಣೆಗಳನ್ನು ಹೊರತುಪಡಿಸಿ ಕಬೂಲು ಮಾಡಬೇಕು.

**ಗ, ಹ** ವಾದಿಯ (ಅಥವಾ ಪ್ರತಿವಾದಿಯ) ವಕೀಲ (ಅಥವಾ ಏಜಂಟನು ಪ್ರತಿವಾದಿಯ (ಅಥವಾ ವಾದಿಯ) ವಕೀಲ (ಅಥವಾ ಏಜಂಟ) **ಇ, ಪ** ಇವರಿಗೆ—

[ಇಲ್ಲಿ ದಸ್ತೈವಜುಗಳ ವರ್ಣನೆ ಕೊಡಬೇಕು ಮತ್ತು ಪ್ರತಿಯೊಂದು ದಸ್ತೈವಜಿನ ಸಂಬಂಧದಿಂದ ಅದು ಮೂಲ ಪ್ರತಿಯೋ ನಕಲೋ ಎಂಬುದನ್ನು ನಿರ್ದಿಷ್ಟಗೊಳಿಸಬೇಕು.]

**ವಸ್ತುಸ್ಥಿತಿಯ ಸಂಬಂಧವಾದ ಸಂಗತಿಗಳನ್ನು ಕಬೂಲ ಮಾಡುವ ಬಗ್ಗೆ ನೋಟೀಸು—**

ಯಾವನೊಬ್ಬ ಪಕ್ಷಕಾರನು, ಸುನಾವಣಿಗಾಗಿ ಗೊತ್ತುಪಡಿಸಿದ ದಿನಕ್ಕಿಂತ ಒಂಬತ್ತು ದಿನಕ್ಕೆ ಕಡಿಮೆಯಲ್ಲದಂಥ ಯಾವದಾದರು ವೇಳೆಯೊಳಗಾಗಿ ಲೇಖೀ ನೋಟೀಸು ಕೊಟ್ಟು ದಾವೆಯ ಕಾರಣಗಳ ಬಗ್ಗೆ ಮಾತ್ರ ಅಂಥ ನೋಟೀಸಿನಲ್ಲಿ ನಮೂದಿಸಿದ ಯಾವದಾದರು ವಿಶಿಷ್ಟ ಸಂಗತಿಯನ್ನು ಸಂಗತಿಗಳನ್ನು ಕಬೂಲು ಮಾಡೆಂದು ಬೇರೆ ಯಾವನಾದರು ಪಕ್ಷಕಾರನನ್ನು ಕೇಳಬಹುದು; ಮತ್ತು ಇಂಥ ಮಾಡಿದರು ಸಹಿತ ಅದನ್ನು ಅಥವಾ ಅವನ್ನು ಅವನು ಕಬೂಲು ಮಾಡದಿದ್ದರೆ ಅದನ್ನು ಅಥವಾ ಅವನ್ನು ಸಾಬೀತು ಮಾಡುವ ವೆಚ್ಚವನ್ನು ಅವನಿಗೆ ಕೊಡಬೇಕಾಗುವದು.

ವಸ್ತುಸ್ಥಿತಿಯ ಸಂಬಂಧವಾದ ಸಂಗತಿಗಳನ್ನು ಕಬೂಲು ಮಾಡುವ ಬಗ್ಗೆ ಕೊಡತಕ್ಕ ನೋಟೀಸಿನ ನಮೂನೆಯು—

ವಸ್ತುಸ್ಥಿತಿ ಸಂಬಂಧವ ಸಂಗತಿಗಳನ್ನು ಕಬೂಲುಮಾಡುವ ಬಗ್ಗೆ ನೋಟೀಸು. (ಆ. ೧೨, ರೂ. ೫.)

(ಸರನಾಮೆ ಮೇಲಿನಂತೆ ಬರೆಯಬೇಕು).

ನಿಮಗೆ ನೋಟೀಸು ಕೊಡುವದೇನಂದರೆ, ಪ್ರತಿವಾದಿಯು (ಅಥವಾ ವಾದಿಯು), ಈ ದಾವೆಯ ಪ್ರಯೋಜನಗಳ ಬಗ್ಗೆ ಮಾತ್ರ, ಈ ಕೆಳಗೆ ನಿರ್ದಿಷ್ಟಗೊಳಿಸಿದ ಹಲವು ಸಂಗತಿಗಳನ್ನು ಕಬೂಲುಮಾಡಬೇಕಾಗಿ ಈ ದಾವೆಯೊಳಗಿನ ವಾದಿಯು (ಅಥವಾ ಪ್ರತಿವಾದಿಯು) ಇಚ್ಛಿಸುತ್ತಾನೆ; ಮತ್ತು ಸದರಿ ಪ್ರತಿವಾದಿಯು (ಅಥವಾ ವಾದಿಯು) ಈ ನೋಟೀಸು ಅವನ ಮೇಲೆ ಲಾಗು ಆದಂದಿನಿಂದ ಆರು ದಿವಸಗಳೊಳಗೆ ಸದರಿ ಹಲವು ಸಂಗತಿಗಳನ್ನು ಈ ದಾವೆಯಲ್ಲಿ ಅಂಥಾ ಎಲ್ಲ ಸಂಗತಿಗಳನ್ನು ಪುರಾವೆಯಾಗಿ ಉಪಯೋಗಿಸಲಿಕ್ಕೆ ಇರುವ

ಎಲ್ಲ ನ್ಯಾಯುವಾದ ಆಕ್ಷೇಪಣೆಗಳನ್ನು ಹೊರತುಪಡಿಸಿ, ಕಬೂಲು ಮಾಡಬೇಕೆಂದು ಈ ಮೂಲಕವಾಗಿ ಫರ್ಮಾಯಿಸಲಾಗಿದೆ.

**ಗ, ಹ** ವಾದಿಯ (ಅಥವಾ ಪ್ರತಿವಾದಿಯ) ವಕೀಲ (ಅಥವಾ ಏಜಂಟ)

ಪ್ರತಿವಾದಿಯ ( ಅಥವಾ ವಾದಿಯ ) ವಕೀಲನಾದ ( ಅಥವಾ ಏಜಂಟನಾದ ) **ಇ, ಪ** ಇವರಿಗೆ –

ಯಾವವುಗಳ ಕಬೂಲಿ ಆಗಬೇಕೋ ಆ ಸಂಗತಿಗಳು ಯಾವವೇನಂದರೆ–

೧. **ಮ** ನು ಸನ್ ೧೮೯೦ನೇ ಇಸ್ವಿಯ ಜನವರಿ ತಿಂಗಳಿನ ೧ನೇ ತಾರೀಖಿನ ದಿವಸ ಮೃತಪಟ್ಟನು.

೨. ಸದರಿಯವನು ಮೃತ್ಯುಪತ್ರವನ್ನು ಮಾಡದೆ ಮೃತಪಟ್ಟನು.

೩. **ನ** ನು ಅವನಿಗೆ ಒಬ್ಬನೇ ಕಾಯದೇಶೀರ ಮಗನಾಗಿದ್ದನು.

೪. **ಓ** ನು ಸನ್ ೧೮೯೬ನೇ ಇಸ್ವಿಯ ಎಪ್ರೀಲ ತಿಂಗಳಿನ ೧ನೇ ತಾರೀಖಿನ ದಿವಸ ಮೃತಪಟ್ಟನು.

೫ **ಓ** ನಿಗೆ ಮದುವೆಯಾಗಿದ್ದಿಲ್ಲ.

ಮೇಲಿನಂತೆ ಮಾಡಿದ ನೋಟೀಸಿನ ಪ್ರಕಾರ ವಸ್ತುಸ್ಥಿತಿ ಸಂಬಂಧದ ಸಂಗತಿಗಳ ಕಬೂಲಿಯ ನಮೂನೆಯು—

ನೋಟೀಸಿನ ಪ್ರಕಾರ ವಸ್ತುಸ್ಥಿತಿಯ ಸಂಬಂಧದ ಸಂಗತಿಗಳ ಕಬೂಲಿ ( ಆ. ೧೨, ರೂ. ೫. )

( ಸರನಾಮೆ ಮೇಲಿನಂತೆ ಬರೆಯುಬೇಕು. )

ಈ ದಾವೆಯೊಳಗಿನ ಪ್ರತಿವಾದಿಯು [ ಅಥವಾ ವಾದಿಯು ] ಈ ದಾವೆಯ ಪ್ರಯೋಜನಗಳ ಬಗ್ಗೆ ಮಾತ್ರ ಈ ಕೆಳಗೆ ನಿರ್ದಿಷ್ಟಗೊಳಿಸಿದ ಹಲವು ಸಂಗತಿಗಳನ್ನು; ಈ ದಾವೆಯಲ್ಲಿ ಇವುಗಳನ್ನು ಅಥವಾ ಇವುಗಳಲ್ಲಿ ಯಾವವಾದರು ಸಂಗತಿಗಳನ್ನು ಪುರಾವೆಯಾಗಿ ಉಪಯೋಗಿಸಲಿಕ್ಕೆ ಇರುವ ಎಲ್ಲ ಯೋಗ್ಯ ಆಕ್ಷೇಪಣೆಗಳನ್ನು ಹೊರತು ಪಡಿಸಿ, ಈ ಮೂಲಕ ಕಬೂಲು ಮಾಡುತ್ತಾನೆ.

ಆದರೆ ಈ ಕಬೂಲಿಯು ಈ ದಾವೆಯ ಪ್ರಯೋಜನಗಳ ಬಗ್ಗೆ ಮಾತ್ರ ಕೊಟ್ಟದ್ದಾಗಿದ್ದು ಆ ಕಬೂಲಯನ್ನು ಪ್ರತಿವಾದಿಯ (ಅಥವಾ ವಾದಿಯ) ವಿರುದ್ಧವಾಗಿ ಯಾವದೊಂದು ಬೇರೆ ಪ್ರಸಂಗದಲ್ಲಿಯಾಗಲೀ ವಾದಿಯ (ಅಥವಾ ಪ್ರತಿವಾದಿಯ ಅಥವಾ ಈ ಕಬೂಲಿಯನ್ನು ಬೇಡುವ ಪಕ್ಷಕಾರನ) ವಿನಹಾ ಬೇರೆ ಯಾವ ಮನುಷ್ಯನಾಗಲೀ ಉಪಯೋಗಿಸತಕ್ಕಂಥಾದ್ದಾಗಿದೆ.

**ಇ, ಪ** ಪ್ರತಿವಾದಿಯ (ಅಥವಾ ವಾದಿಯ) ವಕೀಲ (ಅಥವಾ ಏಜಂಟನು)

ವಾದಿಯ (ಅಥವಾ ಪ್ರತಿವಾದಿಯ) ವಕೀಲ (ಅಥವಾ ಎಜಂಟನಾದ) **ಗ, ಹ.** ಇವನಿಗೆ

| ಕಬೂಲಮಾಡಿದ ಸಂಗತಿಗಳು | ಅವುಗಳನ್ನು ವಳಪಡಿಸಿದ ಯಾವದಾದರೂ ಮಿತಿಗಳು ಅಥವಾ ಮರ್ಯಾದೆಗಳು ಇದ್ದರೆ ಅವುಗಳು |
|---|---|
| ೧. **ಮ,** ನು ಸನ್ ೧೮೯೦ನೇ ಇಸ್ವಿಯ ಜನವರಿ ತಿಂಗಳಿನ ೧ನೇ ತಾರೀಖಿನಲ್ಲಿ ಸತ್ತನು | ೧. |
| ೨. ಅವನು ಮೃತ್ಯುಪತ್ರವನ್ನು ಮಾಡದೇ ಸತ್ತನು. | ೨. |
| ೩. **ಸ,** ಸು. ಅವನ ಕಾಯದೇಶೀರ ಮಗನಾಗಿದ್ದನು. | ೩. ಆದರೆ ಅವನು ಒಬ್ಬನೇ ಕಾಯದೇಶೀರ ಮಗನಾಗಿರಲಿಲ್ಲ. |
| ೪. **ಓ,** ನು ಮೃತನಾದನು. | ೪. ಆದರೆ ಅವನು ಸನ್ ೧೮೯೬ನೇ ಇಸ್ವಿಯ ಎಪ್ರೀಲ ತಿಂಗಳಿನ ೧ನೇ ತಾರೀಖಿನಲ್ಲಿ ಮೃತನಾಗಲಿಲ್ಲ. |
| ೫. **ಒ,** ಸಿಗೆ ಎಂದೂ ಮದುವೆಯಾಗಿರಲಿಲ್ಲ. | ೫. |

# ೧೨ನೆಯ ಪ್ರಕರಣ

## ದಸ್ತೈವಜುಗಳನ್ನು (೧) ಹಾಜರು ಮಾಡೋಣ (೨) ಅತಂಕಿಸಿಡೋಣ (೩) ತಿರಿಗಿ ಕೊಡೋಣ, ಮತ್ತು (೪) ಬೇಡೋಣ ( ಆರ್ಡರು ೧೩ )

**ದಸ್ತೈವಜಿನ ಪುರಾವೆಯನ್ನು ಮೊದಲನೇ ಸುನಾವಣಿಯ ವೇಳಿಗೆ ಹಾಜರು ಮಾಡಬೇಕು:—** ಪಕ್ಷಕಾರರು ಯಾ ಅವರ ವಕೀಲರು ಮೊದಲೇ ಕೋರ್ಟಿನಲ್ಲಿ ದಾಖಲು ಮಾಡದೆ ತಾವೂ ತಮ್ಮ ಪಕ್ಷವನ್ನು ಬಲಪಡಿಸುವಂಥಾ ಪುರಾವೆ ಎಂದು ಆಶ್ರಯಸಲಿಕ್ಕೆ ಅಪೇಕ್ಷಿಸುವಂಥವುಗಳಾಗಿ ತಮ್ಮ ವಶದಲ್ಲಾಗಲೀ ಅಧಿಕಾರದೊಳಗಾಗಲೀ ಇರುವಂಥವುಗಳಾದ ಎಲ್ಲಬಗೆಯ ಯಾವತ್ತು ದಸ್ತೈವಜು ರೂಪವಾದ ಪುರಾವೆಯನ್ನು ಕೋರ್ಟಿನವರಿಂದ ಮಾಡಲ್ಪಟ್ಟ ಹುಕುಮಿನಂತೆ ಹಾಜರು ಮಾಡತಕ್ಕ ಯಾವತ್ತು ದಸ್ತೈವಜುಗಳನ್ನು ಮೊದಲನೇ ಸುನಾವಣಿಯ ಕಾಲದಲ್ಲಿ ಹಾಜರು ಮಾಡಬೇಕು. ಹೀಗೆ ಹಾಜರು ಮಾಡಲ್ಪಟ್ಟ ದಸ್ತೈವಜುಗಳನ್ನು ಕೋರ್ಟಿನವರು ಸ್ವೀಕರಿಸಬೇಕು; ಅದರೆ ಅವುಗಳ ಸಂಗಡ ಹೈಕೋರ್ಟಿನವರಿಂದ ಫರ್ಮಾಯಿಸಲ್ಪಟ್ಟ ನಮೂನೆಯಂತೆ ತಯಾರ ಮಾಡಲ್ಪಟ್ಟ ಅವುಗಳ ಯಥಾರ್ಥವಾದ ಯಾದಿಗಳಿರಬೇಕು. ದಸ್ತೈವಜುಗಳನ್ನು ಈ ಪ್ರಕಾರ ಹಾಜರು ಮಾಡದಿದ್ದರೆ ಅದರ ಪರಿಣಾಮವು ಏನಾಗುವದು? ಯಾವನೊಬ್ಬ ಪಕ್ಷಕಾರನ ವಶದಲ್ಲಾಗಲೀ ಅಧಿಕಾರದೊಳಗಾಗಲೀ ಇರುವಂಥ ದಸ್ತೈವಜಿನ ಪುರಾವೆಯನ್ನು ಮೇಲೆ ಹೇಳಿದಂತೆ ಹಾಜರು ಮಾಡಬೇಕಾಗಿದ್ದು ಹಾಜರು ಮಾಡದಿದ್ದರೆ ಅದನ್ನು ಆ ದಾವೆಯ ಕೆಲಸದಲ್ಲಿ ಮುಂದೆ ಯಾವಾಗಲು ಸ್ವೀಕರಿಸಲಾಗದು; ಆದರೆ ಅದನ್ನು ಹಾಜರು ಮಾಡದಿದ್ದ ಬಗ್ಗೆ ಯೋಗ್ಯ ಕಾರಣವನ್ನು ತೋರಿಸಿದರೆ ಕೋರ್ಟಿನವರು ಆ ಪುರಾವೆಯನ್ನು ಸ್ವೀಕರಿಸಬಹುದು. ಸಾರಾಂಶ ಎಲ್ಲ ದಸ್ತೈವಜಿನ ಪುರಾವೆಯು ತಪ್ಪಿದೆ. ದಾವೆಯ ಮೊದಲನೇ ಸುನಾವಣಿಯ ವೇಳಿಗೆ ಹಾಜರು ಮಾಡತಕ್ಕದ್ದು ಹೀಗೆ ಮಾಡ

ದ್ದರೆ ಮುಂದೆ ಯಾವದೋ ದಸ್ತೈವಜನ್ನು ಆ ದಾವೆಯ ಕೆಲಸವಲ್ಲಿ ಸ್ವೀಕರಿಸ ಲಾಗದು. ವಿಶೇಷತಃ ಅಸಲ ದಸ್ತೈವಜುಗಳನ್ನು ಮೊದಲನೇ ಸುನಾವಣಿಯೊಳಗೆ ಹಾಜರು ಮಾಡಲಿಕ್ಕೆ ತಪ್ಪಬಾರದು. ಕೋರ್ಟನವರು ತಮ್ಮ ಇಚ್ಛೆಯಂತೆ ಸರಟಿಫಾಯಿಡ ನಕಲುಗಳು ಮುಂದೆ ಸಹಾ ಹಾಜರ ಮಾಡಲಿಕ್ಕೆ ಬಿಡ ಬಹುದು. ಆದರೆ ಮೊದಲಿನ ಸುನಾವಣಿಯೊಳಗಾಗಿ ಎಲ್ಲ ದಸ್ತೈವಜುಗಳನ್ನು ಹಾಜರು ಮಾಡುವದು ಸುರಕ್ಷಿತ ಮತ್ತು ಕಾಯಿದೇಶೀರ ಮಾರ್ಗವೂ. ಪುರಾವೆ ಯಲ್ಲಿ ತೆಗೆದುಕೊಂಡ ದಸ್ತೈವಜುಗಳ ಮೇಲೆ ಕೆಳಗೆ ಬರೆದ ತಪಶೀಲುಗಳನ್ನು ಬರೆಯಬೇಕು.

(ಅ) ದಾವೆಯ ನಂಬರು ಮತ್ತು ಹೆಸರು,

(ಬ) ದಸ್ತೈವಜನ್ನು ಹಾಜರುಮಾಡಿದ ಮನುಷ್ಯನ ಹೆಸರು

(ಕ) ಅದನ್ನು ಹಾಜರು ಮಾಡಿದ ತಾರೀಖು, ಮತ್ತು

(ಡ) ಸದರಿ ಪ್ರಕಾರ ಅದನ್ನು ತೆಗೆದಕೊಂಡ ಸಂಗತಿಯ ಬಗ್ಗೆ ಒಂದು ಲೇಖವೂ

ಸದರಿ ಪ್ರಕಾರ ತೆಗೆದುಕೊಂಡು ದಸ್ತೈವಜು ಯಾವದೊಂದು ವಹಿಯೊಳ ಗಿನ, ಲೆಕ್ಕದೊಳಗಿನ ಅಥವಾ ದಪ್ತರಿನೊಳಗಿನ ನೋಂದಾಗಿದ್ದಲ್ಲಿ ಮತ್ತು ಅಸಲು ನೋಂದಿನ ಬದಲು ಅದರ ನಕಲನ್ನು ದಾಖಲು ಮಾಡಿದ್ದಲ್ಲಿ ಸದರಿ ಮೇಲೆ ಹೇಳಿದ ತಪಶೀಲುಗಳನ್ನು ಸದರಿ ನಕಲಿನ ಹಿಂಭಾಗದ ಮೇಲೆ ಬರೆಯಬೇಕು.

ಯಾವದೊಂದು ದಸ್ತೈವಜನ್ನು ಪ್ರತಿಬಂಧದೊಳಗಿಡಲಿಕ್ಕೆ ಕೋರ್ಟ ನವರು ಹುಕುಮು ಮಾಡಬಹುದು,– ಕೋರ್ಟನವರಿಗೆ ತಕ್ಕಕಾರಣವೂ ತೋರಿ ದರೆ ಅವರು ಯಾವದೊಂದು ದಾವೆಯಲ್ಲಿ ತಮ್ಮಮುಂದೆ ಹಾಜರು ಮಾಡಲ್ಪಟ್ಟ ಯಾವದೊಂದು ದಸ್ತೈವಜುಗಳನ್ನಾಗಲೀ ವಹಿಯನ್ನಾಗಲಿ ಕೋರ್ಟಿನ ಪ್ರತಿಬಂಧ ದಲ್ಲಿ ಇಡಿಸಬಹುದು. ( ಆ. ೧೩, ರೂ. ೮. )

ಯೋಗ್ಯ ಸ್ಟಾಂಪ ಹಚ್ಚಿದಿದ್ದ ದಸ್ತೈವಜುಗಳನ್ನು ಕೋರ್ಟನವರು ಈ ಪ್ರಕಾರ ಪ್ರತಿಬಂಧದಲ್ಲಿ ಇಡಿಸಬಹುದು. ಖೊಟ್ಟಿ ದಸ್ತೈವಜುಗಳನ್ನು ಸಹಾ ಈ ಪ್ರಕಾರ ಪ್ರತಿಬಂಧದಲ್ಲಿ ಇಡಬಹುದು. ( ಆ. ೧೩, ರೂ. ೯. )

**ಪುರಾವೆಗಾಗಿ ಸ್ವೀಕರಿಸದಂಥ ದಸ್ತೈವಜುಗಳನ್ನು ಹಿಂದಕ್ಕೆ ಕೊಡೋಣ:—** ಯಾವನೊಬ್ಬ ಮನುಷ್ಯನು ತಾನು ಆ ವ್ಯಾಜ್ಯದಲ್ಲಿ ಹಾಜರು ಮಾಡಿ ಕೋರ್ಟಿನ ದಪ್ತರಿಗೆ ದಾಖಲು ಮಾಡಿದಂಥಾ ಯಾವದೊಂದು ದಸ್ತೈವಜನ್ನು ಹಿಂದಕ್ಕೆ ಬೇಡಲಾಗಿ ಆ ದಸ್ತೈವಜನ್ನು ಮೇಲೆ ಹೇಳಿದಂತೆ ಪ್ರತಿಬಂಧದಲ್ಲಿ ಇಡಿಸಲ್ಪಟ್ಟಿದಿದ್ದರೆ, ಅವನು ದಾವೆಗೆ ಪಕ್ಷಕಾರನಾಗಿರಲಿ ಇಲ್ಲದಿರಲಿ ಆ ದಸ್ತೈವಜನ್ನು ಕೆಳಗೆ ಹೇಳಿದ ಪ್ರಸಕ್ತಿಗಳಲ್ಲಿ ಹಿಂದಕ್ಕೆ ಪಡೆಯಲಿಕ್ಕೆ ಬಾಧ್ಯನಾಗಿರುತ್ತಾನೆ.

(ಅ) ಆ ದಾವೆಯ ಅಪೀಲನ್ನು ಮಾಡಕೂಡದಂಥಾದ್ದಾಗಿದ್ದಲ್ಲಿ ಅದರ ನಿರ್ಣಯವಾದ ಬಳಿಕ, ಮತ್ತು

(ಬ) ಆ ದಾವೆಯು ಅಪೀಲನ್ನು ಮಾಡಬಹುದಂಥಾದ್ದಾಗಿದ್ದಲ್ಲಿ ಅಪೀಲಿನ ಅರ್ಜಿಮಾಡುವ ಮುದ್ದತು ತೀರಿದ್ದು, ಅಪೀಲನ್ನು ಮಾಡಲಿಲ್ಲವೆಂದು ಕೋರ್ಟಿಗೆ ಖಾತ್ರಿಯಾದ ಬಳಿಕ, ಅಥವಾ ಅಪೀಲು ಮಾಡಲ್ಪಟ್ಟಲ್ಲಿ ಆ ಅಪೀಲಿನ ನಿರ್ಣಯವಾದಬಳಿಕ—

ಆದರೆ ವಿಧಿಸಲ್ಪಡುವದೇನಂದರೆ, ಯಾವದೊಂದು ದಸ್ತೈವಜನ್ನು ಹಿಂದಕ್ಕೆ ಬೇಡುವವನು ಸತ್ಯತ್ವದ ಸರ್ಟಿಫಿಕೇಟುಳ್ಳದ್ದೊಂದು ಈ ದಸ್ತೈವಜಿನ ನಕಲನ್ನು ಅಸಲಿಗೆ ಬದಲಾಗಿ ಇಡಲಿಕ್ಕೆ ತಕ್ಕ ಅಮಲದಾರನ ಕೈಯ್ಯಲ್ಲಿ ತಂದುಕೊಟ್ಟಲ್ಲಿ ಮತ್ತು ಅಸಲು ದಸ್ತೈವಜನ್ನು ಹಾಜರು ಮಾಡಲಿಕ್ಕೆ ಅವನಿಗೆ ಹೇಳಿದರೆ ಅವನ್ನು ಆ ಪ್ರಕಾರ ಹಾಜರು ಮಾಡಲಿಕ್ಕೆ ಅಂಗೀಕರಿಸಿದ್ದಲ್ಲಿ ಆ ಅಸಲು ದಸ್ತೈವಜನ್ನು ಅವನಿಗೆ ಬೇಕಾದಾಗ ಹಿಂದಕ್ಕೆ ಕೊಡಬಹುದು. ದಾವೆಯು ಯಾವದೇ ಪರ್ಯಾಯದಲ್ಲಿ ಈ ಪ್ರಕಾರ ದಸ್ತೈವಜನ್ನು ಹಿಂದಕ್ಕೆ ಕೊಡಬಹುದು.

ಆದರೆ ಹುಕುಮುನಾಮೆಯ ಬಲದಿಂದ ಪೂರ್ಣವಾಗಿ ರದ್ದಾದಂಥ ಯಾ ನಿರರ್ಥಕವಾದಂಥ ದಸ್ತೈವಜನ್ನು ಹಿಂದಕ್ಕೆ ಕೊಡಲಾಗದು.

**ಉ**: —.ಯಾವದಾದರೊಂದು ಸಾಲದ ಕತಿಬೆಯ ಆಧಾರಮೇಲೆ ದಾವೆಯನ್ನು ಮಾಡಿ ಅದರಲ್ಲಿ ಹುಕುಮುನಾಮೆಯನ್ನು ಪಡಕೊಂಡ ಪಕ್ಷಕ್ಕೆ ಆ ದಸ್ತೈವಜು ಆ ಹುಕುಮುನಾಮೆಯಲ್ಲಿ ನಿವಿಷ್ಟವಾಗುವದು. ಅಂದರೆ ಹುಕುಮು

ನಾಮೆಯಿಂದ ಅದನ್ನು ರದ್ದು ಯಾ ನಿರರ್ಥಕವಾಗುವದು. ಕಾರಣ ಆ ದಸ್ತೈವಜನ್ನು ಹಿಂದಕ್ಕೆ ಕೊಡಲಾಗದು. ಪುರಾವೆಯಾಗಿ ಸ್ವೀಕರಿಸಲ್ಪಟ್ಟಂಥ ದಸ್ತೈವಜನ್ನು ಹಿಂದಕ್ಕೆ ಕೊಡುವಾಗ, ಅದದ್ನು ತೆಗೆದುಕೊಳ್ಳುವ ಮನುಷ್ಯನು ಒಂದು ಪಾವತಿಯನ್ನು ಕೊಡಬೇಕು. ( ಆ ೧೩, ರೂ. ೯. )

**ಕೋರ್ಟನವರು ತಮ್ಮ ಸ್ವಂತ ದಪ್ತರಿನಿಂದಾಗಲಿ ಬೇರೊಂದು ಕೋರ್ಟನಿಂದಾಗಲಿ ಕಾಗದಗಳನ್ನು ಬೇಡಬಹುದು:**—( ಆ. ೧೩, ರೂ. ೧೦.) ಕೋರ್ಟನವರು ತಮ್ಮ ಸ್ವಂತ ಆಲೋಚನೆಯಿಂದ ಮತ್ತು ದಾವೆಯ ಪಕ್ಷಕಾರರಲ್ಲಿ ಯಾವನೊಬ್ಬನು ಅರ್ಜಿಯನ್ನು ಮಾಡಲಾಗಿ ತಮ್ಮ ವಿವೇಕಾನುಸಾರವಾಗಿ (೧) ತಮ್ಮ ಸ್ವಂತ ದಪ್ತರಿನಿಂದಾಗಲಿ (೨) ಮತ್ತೊಂದು ಕೋರ್ಟನಿಂದಾಗಲಿ ಬೇರೊಂದು ದಾವೆಯ ಯಾ ನಡೆಯಿಸಿದ ಕಾಗದಗಳನ್ನು ತರಿಸಿಕೊಂಡು ತಪಾಸಿಸಬಹುದು.

ಈ ಕಾನೂನಿನಂತೆ ಮಾಡತಕ್ಕ ಪ್ರತಿಯೊಂದು ಅರ್ಜಿಯು ಪ್ರತಿಜ್ಞಾಲೇಖದ ಆಧಾರದಿಂದ ಮಾಡಲ್ಪಡಬೇಕು. ಮತ್ತು ಆ ಪ್ರತಿಜ್ಞಾಲೇಖದಲ್ಲಿ ಕೆಳಗಿನ ಸಂಗತಿಗಳನ್ನು ಅವಶ್ಯವಾಗಿ ತೋರಿಸಲ್ಪಟ್ಟಿರಬೇಕು. ಸದರಿ ಸಂಗತಿಗಳನ್ನು:—

(೧) ಬೇಡತಕ್ಕ ಕಾಗದಗಳು ಅರ್ಜಿ ಮಾಡಲ್ಪಟ್ಟ ದಾವೆಯಲ್ಲಿ ಅವಶ್ಯಕವಾದದ್ದು ಹ್ಯಾಗೆಂಬದು, ಮತ್ತು

(೨) (ಅ) ಅರ್ಜಿದಾರನು ನಿಷ್ಕಾರಣವಾದ ವೆಚ್ಚದ ಯಾ ವಿಲಂಬದ ಹೊರತು ಯೋಗ್ಯವಾಗಿ ಸಹಿಯಿಂದ ನಿಜಮಾಡಿಸಲ್ಪಟ್ಟ ಆ ಕಾಗದಗಳ ಯಾ ತನಗೆ ಬೇಕಾಗಿದ್ದ ಅವುಗಳ ಭಾಗದ ನಕಲುಗಳನ್ನು ಪಡೆಯಲಾರನೆಂಬುದು ಅಥವಾ

(ಬ) ನ್ಯಾಯದ ಉದ್ದೇಶಗಳಿಗಾಗಿ ಅಸಲು ಕಾಗದಗಳೇ ಹಾಜರಾಗುವ ಅಗತ್ಯವಿರುತ್ತದೆಂಬುದು. ತೋರಿಸಲ್ಪಟ್ಟಿರಬೇಕು.

———·———

# ೧೩ನೆಯ ಪ್ರಕರಣ

**ಸಾಕ್ಷಿದಾರರಿಗೆ ಸಮನು ಕಳುಹುವದು ಮತ್ತು ಅವರು ಹಾಜರಾಗುವದು** (ಆರ್ಡರ ೧೬)

ದಾವೆಯನ್ನು ಮಾಡಿದ ತರುವಾಯ ಯಾವದಾದರು ವೇಳೆಯಲ್ಲಿ ಪಕ್ಷಕಾರರು ಕೋರ್ಟಿಗೆ ಅರ್ಜಿಯನ್ನು ಮಾಡಿ ಸಾಕ್ಷಿಯನ್ನು ಕೊಡಲಿಕ್ಕೆ ಯಾ ದಸ್ತೈವಜನ್ನು ಹಾಜರು ಮಾಡಲಿಕ್ಕೆ ಹಾಜರಾಗಬೇಕಾದಂಥಾ ಮನುಷ್ಯರ ಸಲುವಾಗಿ ಸಮನನ್ನು ಪಡೆಯಬಹುದು. ಸಮನಿನಿಂದ ಕರೆಯಿಸಲ್ಪಡುವ ಮನುಷ್ಯನು ಹಾಜರಾಗಿ ಬೇಕಾಗಿದ್ದ ಕೋರ್ಟಿಗೆ ಅವನು ಬರುವದಕ್ಕೂ ಅಲ್ಲಿಂದ ತಿರಿಗಿ ಹೋಗಲಿಕ್ಕೂ ಅಲ್ಲಿ ಒಂದದಿವಸ ಇರಲಿಕ್ಕೂ ಅವನ ಹಾದಿಯ ಮುಂತಾದ ವೆಚ್ಚದ ಬಗ್ಗೆ ಕೋರ್ಟಿನವರ ಅಭಿಪ್ರಾಯದಂತೆ ತಕ್ಕಷ್ಟು ಹಣವನ್ನು ಆ ಸಮನಿಗಾಗಿ ಅರ್ಜಿಯನ್ನು ಮಾಡುವ ಪಕ್ಷಕಾರನು, ಆ ಸಮನು ದೊರೆಯುವ ಪೂರ್ವದಲ್ಲಿ ಕೋರ್ಟಿನವರಿಂದ ನೇಮಿಸಲ್ಪಟ್ಟ ಮುದ್ದತಿನೊಳಗೆ ಕೋರ್ಟಿನಲ್ಲಿ ತುಂಬಬೇಕು. ಕೋರ್ಟಿನವರು ಪ್ರವೀಣರಿಗೆ ಯೋಗ್ಯ ವೇತನವನ್ನು ಕೊಡಿಸಬಹುದು. ವೆಚ್ಚದ ಪ್ರಮಾಣವು ಹ್ಯಾಗೆ ಠರಾಯಿಸಬಹುದು ? ಆ ಕೋರ್ಟು ಹೈಕೋರ್ಟಿನ ಕೈಕೆಳಗಿನ ಕೋರ್ಟಾಗಿದ್ದರೆ, ಅದು ಆ ವೆಚ್ಚವನ್ನು ಗೊತ್ತು ಮಾಡುವಾಗ ಆ ಬಗ್ಗೆ ಮಾಡಲ್ಪಟ್ಟ ಯಾವದಾದರು ನಿಯಮಗಳನ್ವಯ ಠರಾಯಿಸಬೇಕು. ಹೀಗೆ ಕೋರ್ಟಿನಲ್ಲಿ ಹಾಜರಾದಂಥ ಹಣವನ್ನು ಕರೆಯಿಸಲ್ಪಟ್ಟ ಮನುಷ್ಯನ ಮೇಲೆಯೇ ಸಮನು ಬಜಾಯಿಸಬಹುದಾಗಿದ್ದರೆ ಆ ಬಜಾವಣೆಯ ಕಾಲದಲ್ಲಿ ಅವನಿಗೆ ಕೊಡಬೇಕು. ಸಾಕ್ಷಿಯನ್ನು ಕೊಡಲಿಕ್ಕೆ ಯಾ ದಸ್ತೈವಜನ್ನು ಹಾಜರು ಮಾಡಲಿಕ್ಕೆ ಯಾವನೊಬ್ಬ ಮನುಷ್ಯನನ್ನು ಹಾಜರು ಪಡಿಸುವದಕ್ಕೋಸ್ಕರವಾಗಿ ಕಳುಹಿಸಲ್ಪಟ್ಟ ಪ್ರತಿಯೊಂದು ಸಮನಿನಲ್ಲಿ ಅವನು ಹಾಜರಾಗತಕ್ಕ ವೇಳೆಯನ್ನು ಸ್ಥಳವನ್ನು ಬರೆಯಬೇಕು. ಮತ್ತು ಯಾವದೊಂದು ವಿಶೇಷವಾದ ದಸ್ತೈವಜನ್ನು ಹಾಜರು ಮಾಡಲಿಕ್ಕೆ ಅವನು ಕರೆಯಿಸಲ್ಪಟ್ಟಿದ್ದರೆ ಆ **ದಸ್ತೈವಜಿನ ವರ್ಣನೆಯನ್ನು** ಆದಷ್ಟು ಮಟ್ಟಿಗೆ ಸರಿಯಾಗಿ ಆ ಸಮನಿನಲ್ಲಿ ಬರೆಯಬೇಕು.

ಸಾಕ್ಷಿಯನ್ನು ಕೊಡಲಿಕ್ಕೆ ಕಳುಹಿಸಲ್ಪಟ್ಟಂಥಾ ಸಾಕ್ಷಿದಾರನು ಸರಕಾರಿ ನೌಕರನು ಯಾ ರೇಲ್ವೆ ಕಂಪನಿಯ ನೌಕರನು ಇದ್ದಲ್ಲಿ ಅವನ ವರಿಷ್ಠನಾದ ಸ್ಥಾನಿಕ ಅಧಿಕಾರಿಯ ಮುಖಾಂತರವಾಗಿ ಆ ಸಾಕ್ಷಿದಾರನ ಮೇಲೆ ಆ ಸಾಕ್ಷಿ ಸಮನು ಬಜಾಯಿಸಲ್ಪಡಬಹುದು.

ಸಾಕ್ಷಿದಾರನು ಸಮನಿನಲ್ಲಿ ಹೇಳಿದಂತೆ ನಡೆಯಲಿಕ್ಕೆ ತಪ್ಪಿದಲ್ಲಿ ಕೋರ್ಟಿನವರು ಅವನಿಗೆ ಹಾಜರಾಗಲಿಕ್ಕೆ ಒಂದು ಜಾಹೀರನಾಮೆಯನ್ನು ಪ್ರಸಿದ್ಧಿಸಬಹುದು, ಮತ್ತು ಅಂಥ ಮನುಷ್ಯನಿಗೆ ದಸ್ತಗೀರು ಮಾಡುವದಕ್ಕೆ ವಾರಂಟನ್ನು ತೆಗೆಯಬಹುದು, ಮತ್ತು ಅವನ ಸ್ವತ್ತನ್ನು ಜಪ್ತುಮಾಡಲಿಕ್ಕೆ ಹುಕುಮು ಮಾಡಬಹುದು. ಯಾವನೊಬ್ಬ ಮನುಷ್ಯನು,

(ಅ) ಕೋರ್ಟಿನ ವಾಡಿಕೆಯ ಅಸಲ್ ಅಧಿಕಾರ ಹದ್ದಿನೊಳಗೆ ವಾಸಿಸುತಿದ್ದ ಹೊರತು, ಅಥವಾ

(ಬ) ಆ ಹದ್ದಿನ ಹೊರಗೆ ಆದರೆ ಕೋರ್ಟಿನ ಕಚೇರಿಯಿಂದ ೫೦ ಮೈಲುಗಳೊಳಗೆ (ಅಥವಾ ಅವನು ರೇಲ್ವೇದ ಹಾದಿಯ ಮೇಲೆ ವಾಸಿಸುತ್ತಿದ್ದರೆ ೨೦೦ ಮೈಲುಗಳೊಳಗೆ) ವಾಸಿಸುತ್ತಿದ್ದ ಹೊರತು, ಅವನು ಆ ಕೋರ್ಟಿನಲ್ಲಿ ಸಾಕ್ಷಿಯನ್ನು ಕೊಡುವದಕ್ಕೋಸ್ಕರ ಸ್ವತಃ ಹಾಜರಾಗಲಿಕ್ಕೆ ಬದ್ಧನಾಗಲಿಕ್ಕಿಲ್ಲ.

**ತಹಕೂಬಿಗಳು** ( ಆರ್ಡರ ೧೭. )

ಯೋಗ್ಯಕಾರಣವು ತೋರಿಸಲ್ಪಟ್ಟಿದ್ದರೆ, ಪಕ್ಷಕಾರರಿಗೆ ಯಾ ಅವರಲ್ಲಿ ಯಾವನೊಬ್ಬನಿಗೆ ಚೌಕಶಿಯ ಕ್ರಮದಲ್ಲಿ ಬೇಕಾದಾಗ ಕೋರ್ಟಿನವರು ಮುದ್ದತು ಕೊಡಬಹುದು, ಮತ್ತು ಆಗಾಗ್ಗೆ ದಾವೆಯ ಸುನಾವಣಿಯನ್ನು ತಹಕೂಬು ಮಾಡಬಹುದು. ಆ ತಹಕೂಬಿಯಿಂದ ಉಂಟಾದ ವೆಚ್ಚವನ್ನು ಕುರಿತು ತಮಗೆ ಯೋಗ್ಯವಾಗಿ ತೋರಿದಂತೆ ಹುಕುಮು ಮಾಡಬಹುದು. ಯಾವ ಕಾರಣದ ಮೂಲಕಾ ಮುದ್ದತು ಬೇಕಗಿವೆಂಬುವನ್ನು ಪಕ್ಷಕಾರರು ಅಥವಾ ಅವರ ವಕೀಲರು ಸ್ಪಷ್ಟವಾಗಿ ಬರೆಯಬೇಕು. ಅವಶ್ಯವಿದ್ದರೆ ಡಾಕ್ಟರ ಸರ್ಟಿಫಿಕೇಟು ಅಥವಾ ಪ್ರತಿಜ್ಞಾಲೇಖವೂ ಆ ಅರ್ಜಿಯ ಸಂಗಡ ಹಾಜರು ಮಾಡಬೇಕು. ಪುರಾವೆಗಳ ಸುನಾವಣಿಯು ಒಮ್ಮೆ ಆರಂಭವಾದ ಬಳಿಕ ಹಾಜರಿದ್ದ ಎಲ್ಲ ಸಾಕ್ಷಿದಾರರ

ಜಬಾನಿಗಳು ತೀರುವವರೆಗೂ ದಾವೆಯ ಸುನಾವಣಿಯನ್ನು ಎಡಬಿಡದೆ ಪ್ರತಿದಿವಸ ನಡೆಯಿಸತಕ್ಕದ್ದು. ದಾವೆಯ ಸುನಾವಣೆಯು ಮುಂದೆ ನೇಮಿಸಲ್ಪಟ್ಟಂಥ ಯಾವದೊಂದು ದಿವಸ ಪಕ್ಷಕಾರರು ಯಾ ಅವರಲ್ಲಿ ಯಾರೊಬ್ಬರು ಹಾಜರಾಗದಿದ್ದರೆ ಕೋರ್ಟಿನವರು ಸದರಿ ಅವರು ಮೊದಲಿನ ಸುನಾವಣಿಯ ಕಾಲಕ್ಕೆ ಹಾಜರಾಗದಿದ್ದಲ್ಲಿ ಯಾವ ಹುಕುಮು ಮಾಡುವರೊ ಅದೆ ಹುಕುಮು ಈ ಪ್ರಸಕ್ತಿಯಲ್ಲಿ ಸಹಾ ಮಾಡಬಹುದು. ಅಂದರೆ ಸುನಾವಣಿಯ ವೇಳೆಯಲ್ಲಿ ವಾದಿಯು ಹಾಜರಾಗದಿದ್ದಲ್ಲಿ ವಾದಿಯ ದಾವೆಯು ತೆಗೆದು ಹಾಕಬೇಕೆಂದು ಕೋರ್ಟಿನವರು ಹುಕುಮು ಮಾಡಬಹುದು ಮತ್ತು ಸದರಿ ವೇಳೆಯಲ್ಲಿ ಪ್ರತಿವಾದಿಯು ಹಾಜರಾಗದಿದ್ದಲ್ಲಿ ಕೋರ್ಟಿನವರು ದಾವೆಯ ಏಕತರ್ಫಿ ಚೌಕಶಿಯನ್ನು ನಡೆಯಿಸಬಹುದು ವಗೈರೆ.

---

# ೧೪ನೆಯ ಪ್ರಕರಣ



**ದಾವೆಯ ಸುನಾವಣಿಯ** ( ಆರ್ಡರು ೧೪. )

ಸಾಮಾನ್ಯತಃ ಸುನಾವಣಿಯು ಪ್ರಾರಂಭಮಾಡುವ ಹಕ್ಕು ವಾದಿಗೆ ಇರುತ್ತದೆ; ಆದರೆ ವಾದಿಯಿಂದ ಹೇಳಲ್ಪಟ್ಟ ಸಂಗತಿಗಳನ್ನು ಪ್ರತಿವಾದಿಯು ಒಪ್ಪಿಕೊಂಡು ಬೇರೆ ಸಂಗತಿಗಳನ್ನು ಹೇಳಿ ಅವುಗಳ ಮೂಲಕ ತನ್ನ ವಿರುದ್ಧ ವಾದಿಗೆ ಬಾಧ್ಯತೆ ಯುಂಟಾಗಿಲ್ಲ ಅಂತಾ ಅವನು ಉತ್ತರಪಕ್ಷವನ್ನು ಮಾಡಿದಪಕ್ಷಕ್ಕೆ ಪ್ರತಿವಾದಿಗೆ ಸುನಾವಣಿಯು ಪ್ರಾರಂಭಮಾಡುವ ಹಕ್ಕು ಪ್ರಾಪ್ತವಾಗುವದು. ಸಾರಾಂಶ ದಾವೆಯಲ್ಲಿಯ ಮುದ್ದೆಯು ಸಾಬೀತು ಮಾಡುವ ಬೋಜಾ ಅಥವಾ ಜಬಾಬದಾರಿಯು ಯಾವ ಪಕ್ಷಕಾರನ ಮೇಲೆ ಇರುತ್ತದೆಯೋ ಅವನು ಸುನಾವಣೆಯನ್ನು ಪ್ರಾರಂಭ ಮಾಡಬೇಕು.

**ಉ:—ಅ** ಎಂಬವವನು **ಬ** ಎಂಬುವವನ ಮೇಲೆ ಸಾಲದ ಕತಿಬೆಯ ಆಧಾರಮೇಲೆ ದಾವೆಯನ್ನು ಮಾಡುತ್ತಾನೆ. ಇದಕ್ಕೆ **ಬ** ಈತನು ಆ ಕತಿಬೆಯನ್ನು ಬರೆದುಕೊಟ್ಟಿಲ್ಲಾ ಅಂತಾ ಉತ್ತರಪಕ್ಷವನ್ನು ಮಾಡುತ್ತಾನೆ. ಈ ಪ್ರಸಕ್ತಿಯಲ್ಲಿ **ಅ** ಈತನಿಗೆ **ಬ** ಈತನು ಆ ಕತಿಬೆಯನ್ನು ಬರೆದು ಕೊಟ್ಟನು ಅಂತಾ ಸಾಬೀತು ಮಾಡಬೇಕಾಗುತ್ತದೆ. ಅವನು ಹೀಗೆ ಮಾಡದಿದ್ದರೆ ಅವನ ದಾವೆಯು ರದ್ದಾಗುವದು. **ಬ** ಈತನು ಆ ಕತಿಬೆಯನ್ನು ಬರೆದುಕೊಟ್ಟದ್ದು ಸಾಬೀತುಮಾಡುವ ಬೋಜಾ ಯಾ ಜಬಾಬದಾರಿಯು **ಅ** ಈತನ ಮೇಲೆ ಅದೆ. ಕಾರಣಾ ಈ ಪ್ರಸಕ್ತಿಯಲ್ಲಿ **ಅ** ಈತನು ಸುನಾವಣೆಯನ್ನು ಪ್ರಾರಂಭ ಮಾಡಬೇಕು.

ಆದರೆ **ಬ** ಈತನು ಆ ಕತಿಬೆಯನ್ನು ಬರೆದು ಕೊಟ್ಟದ್ದು ಒಪ್ಪಿಕೊಂಡು ಅದರ ಬಾಬತ್ತು ಎಲ್ಲ ಹಣವನ್ನು **ಅ** ಈತನಿಗೆ ವಾಪಸಕೊಟ್ಟಿದ್ದೇನೆಂದು ಉತ್ತರಪಕ್ಷವನ್ನು ಮಾಡಿದ ಪಕ್ಷಕ್ಕೆ ಆ ಕತಿಬೆಯ ಬಾಬತ್ತು ಹಣವನ್ನು ವಾಪಸ ಕೊಟ್ಟದ್ದು **ಬ** ಈತನು ಸಾಬೀತು ಮಾಡಬೇಕಾಗುವದು. ಇಲ್ಲದಿದ್ದರೆ ಅವನ ಮೇಲೆ ದಾವೆಯು ಸಾಬೀತು ಆಗುವದು. ಕಾರಣಾ ಈ ಪ್ರಸಕ್ತಿಯಲ್ಲಿ ಅ ಈತ

ನಿಗೆ ಬ ಈತನು ಕತಿಬೆಯನ್ನು ಬರೆದುಕೊಟ್ಟದ್ದು ಸಾಬೀತು ಮಾಡುವದು ಕಾರಣವಿಲ್ಲ. ಯಾಕಂದರೆ ಬ ಈತನು ಆ ಕತಿಬೆಯನ್ನು ಬರೆದು ಕೊಟ್ಟದ್ದು ಕಬೂಲು ಮಾಡುತ್ತಾನೆ. ಆದರೆ ಆ ಕತಿಬೆಯು ಬಾಬತ್ತು ಹಣವನ್ನು ಅ ಈತನಿಗೆ ವಾಪಸ ಕೊಟ್ಟದ್ದು ಸಾಬೀತು ಮಾಡುವ ಬೋಜಾ ಯಾ ಜಬಾಬದಾರಿಯು ಬ ಈತನ ಮೇಲೆ ಅದೆ. ಕಾರಣಾ ಈ ಪ್ರಸಕ್ತಿಯಲ್ಲ ಬ ಈತನು ಸುನಾವಣೆಯನ್ನು ಪ್ರಾರಂಭಮಾಡಬೇಕು.

ಪ್ರಾರಂಭ ಮಾಡುವದು ಅಂದರೆ ಏನು ? ಪಕ್ಷಕಾರನು ಯಾ ಅವನ ವಕೀಲನು ಕೋರ್ಟಿಗೆ ದಾವೆಯು ಯಾತರ ಬಗ್ಗೆ ಅದೆ. ಆದರ ಸ್ವರೂಪ ಏನು ಎಂಬ ಬಗ್ಗೆ ಎಲ್ಲ ಹಕೀಕತ್ತು ಹೇಳಬೇಕು ಮತ್ತು ಆ ಬಗ್ಗೆ ಪುರಾವೆಯನ್ನು ಹಾಜರು ಮಾಡಲಿಕ್ಕೆ ಸುರು ಮಾಡಬೇಕು.

ಅದೇ ಪ್ರಕಾರವಾಗಿ ಪ್ರತಿಪಕ್ಷದವನು ತನ್ನ ಉತ್ತರಪಕ್ಷವನ್ನು ಏನು ಇದೆಂಬುದು ಕೋರ್ಟಿಗೆ ಹೇಳಬೇಕು ಮತ್ತು ತನ್ನ ಪುರಾವೆಯನ್ನು ಹಾಜರು ಮಾಡಲಿಕ್ಕೆ ಸುರು ಮಾಡಬೇಕು.

**ಫೈಸಲು ಮತ್ತು ಹುಕುಮನಾಮೆಯು** (ಆರ್ಡರು ೨೦.) ಸುನಾವಣೆ ಮುಗದನಂತರ ಕೂಡಲೇ ಅಥವಾ ಯಾವ ಮುಂದಿನ ದಿನದ ನೋಟೀಸನ್ನು ಯೋಗ್ಯ ರೀತಿಯಿಂದ ಪಕ್ಷಕಾರನಿಗೆ ಅಥವಾ ಅವರ ವಕೀಲರಿಗೆ ಕೊಟ್ಟದ್ದೀತೋ ಅಂಥದಿನ ಫೈಸಲನುನ್ನು ಭರ ಕೋರ್ಟಿನಲ್ಲಿ ಕೋರ್ಟಿನವರು ಕೊಡಬೇಕು.

**ಹುಕುಮನಾಮೆಯಲ್ಲಿ ಇರಬೇಕಾದ ಮಜಕೂರು**:—ಹುಕುಮನಾಮೆಯು ಫೈಸಲಿಗೆ ಹೊಂದಿರಬೇಕು; ಅದರಲ್ಲಿ ದಾವೆಯ ನಂಬರು, ಪಕ್ಷಕಾರರ ಹೆಸರುಗಳು, ವರ್ಣನೆಯು ಹಕ್ಕಿನ ತಪಶೀಲು ಕೊಟ್ಟು ನ್ಯಾಯಾಶ್ರಯದ ಯಾ ಇತರ ಠರಾವಿನ ಸ್ಪಷ್ಟ ತಪಶೀಲುಗಳು ಇರಬೇಕು. ಇದಲ್ಲದೆ ದಾವೆಯಲ್ಲಿ ಆದ ವೆಚ್ಚವೂ ಮತ್ತು ಆ ವೆಚ್ಚವನ್ನು ಯಾ ಪಕ್ಷಕಾರರು ಯಾವ ಆಸ್ತಿಯೊಳಗಿಂದ ಮತ್ತು ಎಷ್ಟೆಷ್ಟು ಕೊಡಬೇಕೆಂಬುದು ಸಹ ಹುಕುಮನಾಮೆಯಲ್ಲಿ ಹೇಳಿರಬೇಕು. ಹುಕುಮನಾಮೆಯು ಮೇಲೆ ಯಾವ ದಿವಸ ಫೈಸಲು ಕೊಡಲ್ಪಟ್ಟಿತೋ ಆ ತಾರೀಖು ಇರಬೇಕು.

**ಹುಕುಮನಾಮೆಯಲ್ಲಿ ಹಪ್ತೆಬಂದಿಯಿಂದ ಹಣ ಕೊಡುವ ದಕ್ಕೆ ಹೇಳಬಹುದು.** (ಆ. ೨೦, ರೂ. ೧೧).

ಕೋರ್ಟಿನವರು ಹಣ ಕೊಡುವ ಬಗ್ಗೆ ಹುಕುಮನಾಮೆಯನ್ನು ಮಾಡಿದ ಪಕ್ಷಕ್ಕೆ ಯಾವದೊಂದು ತಕ್ಕಕಾರಣದ ಮೂಲಕವಾಗಿ ಹುಕುಮನಾಮೆಯನ್ನು ಮಾಡುವ ವೇಳೆಗೆ, ಕೋರ್ಟಿನವರು ಹುಕುಮನಾಮೆಯಿಂದ ಠರಾಯಿಸಿದ ಹಣ ವನ್ನು ಕೊಡುವದನ್ನು ಮುಂದೆ ಹಾಕಲಿಕ್ಕೆ ಅಥವಾ ಬಡ್ಡಿ ಸಹಿತವಾಗಿ ಯಾ ಬಡ್ಡಿ ಇಲ್ಲದೆ ಹಪ್ತೆಬಂದಿಯಿಂದ ಅಂದರೆ ಕಂತಿನಿಂದ ಕೊಡಲಿಕ್ಕೆ ಹುಕುಮ ಮಾಡಬಹುದು.

ಹುಕುಮನಾಮೆಯ ತರುವಾಯ ಹಪ್ತೆಯಿಂದ ಅಥವಾ ಕಂತಿನಿಂದ ಕೊಡುವಬಗ್ಗೆ ಹುಕುಮು ಮಾಡೋಣ—

ಯಾವದಾದರು ಹಣಾ ವಸೂಲ ಮಾಡುವ ಬಗ್ಗೆ ಹುಕುಮನಾಮೆಯನ್ನು ಮಾಡಿದಬಳಿಕ ಫೈಸಲಿನ ಋಣಿಯು ಅಂದರೆ ಯಾವ ಮನುಷ್ಯನ ವಿರುದ್ಧ ಹುಕುಮನಾಮೆಯು ಮಾಡಿರುತ್ತದೆಯೋ ಅವನು ಕೋರ್ಟಿಗೆ ಅರ್ಜಿಯನ್ನು ಮಾಡಲಾಗಿ ಮತ್ತು ಅದಕ್ಕೆ ಹುಕುಮನಾಮೆಯನ್ನು ಪಡದವನು ಸಮ್ಮತಿಯನ್ನು ಕೊಟ್ಟಲ್ಲಿ ಹುಕುಮನಾಮೆಯಿಂದ ಕೊಡತಕ್ಕ ರಕಮು ಕೊಡಲಿಕ್ಕೆ ಕೋರ್ಟಿನವರು ಕಂತುಗಳನ್ನು ಮಾಡಿಕೊಡಬಹುದು.

ಕೋರ್ಟಿನವರು ಹುಕುಮನಾಮೆಯಲ್ಲಿ ಬಡ್ಡಿಕೊಡಿಸಬಹುದು. ಬಡ್ಡಿಯಲ್ಲಿ ಕಾಲದ ದೃಷ್ಟಿಯಿಂದ ಮೂರು ಭೇದಗಳು ಆಗುವವು. ಅವುಗಳು—

೧. ದಾವೆಯಾಗುವ ಮುಂಚಿನ ಯಾವದಾದರೂ ಮುದ್ದತಿನ ಬಡ್ಡಿಯು.

೨. ದಾವೆಯ ತಾರೀಖಿನಿಂದ ಹುಕುಮನಾಮೆಯು ತಾರೀಖಿನವರೆಗೆ ಆಗುವ ಬಡ್ಡಿಯು.

೩. ಹುಕುಮನಾಮೆಯು ತಾರೀಖಿನಿಂದ ಹಣ ವಸೂಲಾಗುವ ತಾರೀಖಿನ ವರೆಗೆ ಆಗತಕ್ಕ ಬಡ್ಡಿಯು.

ಇವರಪೈಕಿ ಪ್ರತಿಯೊಂದು ಸಂಗತಿಯ ವಿವೇಚನವನ್ನು ಮಾಡೋಣ —

೧. ದಾವೆಯಾಗುವ ಮುಂಚಿನ ಯಾವದಾದರು ಮುದ್ದತಿನ ಬಡ್ಡಿಯು ಅಸಲರ್ಜಿಯಲ್ಲಿ ಸ್ಪಷ್ಟವಾಗಿ ಬೇಡಬೇಕು. ಮತ್ತು ಅದು ಯಾವ ಆಧಾರದ ಮೇಲೆ ಬೇಡಿರುತ್ತದೆಂಬದನ್ನು ಸ್ಪಷ್ಟವಾಗಿ ಹೇಳಬೇಕು. ಪಕ್ಷಕಾರನಡುವೆ (ಅ) ಇಂತಿಷ್ಟು ಬಡ್ಡಿಕೊಡುವದು ಕರಾರು ಇರುವದು ಅಥವಾ (ಬ) ಅವರ ನಡುವೆ ಬಡ್ಡಿಸಂಬಂಧಿ ಯಾವದು ಕರಾರ ಇರಲಿಕ್ಕಿಲ್ಲಾ.

(ಅ) ಬಡ್ಡಿಸಂಬಂಧಿ ಕರಾರು ಇದ್ದಪಕ್ಷಕ್ಕೆ ಆ ಬಡ್ಡಿ ಆಕಾರ ಭಾರಿ ಇಲ್ಲ ದಿದ್ದರೆ ಕೋರ್ಟಿನವರು ದಾವೆಯಾಗುವ ಮುಂಚಿನ ಮುದ್ದತಿನ ಆಗುವ ಬಡ್ಡಿಯು ಕರಾರಿನ ಪ್ರಕಾರ ಕೊಡಸಬಹುದು.

(ಬ) ಬಡ್ಡಿಸಂಬಂಧಿ ಕರಾರು ಇಲ್ಲದ್ದರೆ—

೧. ದೇಶ ರಿವಾಜ ಇದ್ದಲ್ಲಿ ಆ ಪ್ರಕಾರ ಬಡ್ಡಿಯು ಕೊಡಸಬಹುದು.

೨. ಬಡ್ಡಿಯು ಕೊಡುವ ಬಗ್ಗೆ ಕಾಯದೆಯ ಅನುಮಾನ ಹೊರಡುತ್ತಿದ್ದಲ್ಲಿ ಅದರಂತೆ ಕೊಡಸಬಹುದು. ಉ—ಪ್ರಾಮಿಸರಿ ನೋಟಿನಲ್ಲಿ ಬಡ್ಡಿಸಂಬಂಧಿ ಯಾವದೇ ಕರಾರು ಕಾಣಿಸದಿದ್ದಲ್ಲಿ ಕಾಯದೆ ಪ್ರಕಾರ ದರಸಾಲ ದರಶೇಕಡಾ ಆರು ರೂಪಾಯಿದಂತೆ ಬಡ್ಡಿಯು ಕೊಡಿಸಬಹುದು.

(೨) ದಾವೆಯ ತಾರೀಖಿನಿಂದ ಹುಕುಮನಾಮೆಯ ತಾರೀಖಿನವರೆಗೆ ಆಗುವ ಬಡ್ಡಿಯು ಕೊಡಿಸುವದು ಕೋರ್ಟಿನವರ ಮರ್ಜಿಯಮೇಲೆ ಅವಲಂಬಿಸಿರುತ್ತದೆ. ಅಸಲರ್ಜಿಯಲ್ಲಿ ಈ ಬಡ್ಡಿಯು ಬೇಡದಿದ್ದರು ಕೋರ್ಟಿನವರು ಅದು ಕೊಡಿಸಬಹುದು.

(೩) ಹುಕುಮನಾಮೆಯ ತಾರೀಖಿನಿಂದ ಹಣಾ ವಸೂಲು ಆಗುವ ತಾರೀಖಿನವರೆಗೆ ಆಗಬಹುದಾದ ಬಡ್ಡಿಯು ಸಹ ಕೊಡುಸುವದು ಕೋರ್ಟಿನ ಮರ್ಜಿಯ ಮೇಲೆ ಅವಲಂಬಿಸಿರುತ್ತದೆ. ಈ ಬಡ್ಡಿಯು ಅಸಲರ್ಜಿಯಲ್ಲಿ ಬೇಡ ದಿದ್ದರು ಕೋರ್ಟಿನವರು ಕೊಡಿಸಬಹುದು.

**ದಾವೆಯ ವೆಚ್ಚವು**—ಎಲ್ಲ ದಾವೆಗಳ ಮತ್ತು ಅವುಗಳ ಸಂಬಂಧದಿಂದಾಗುವ ವೆಚ್ಚವನ್ನು ಕೊಡಿಸುವದು ಕೋರ್ಟಿನ ಮರ್ಜಿಯ ಮೇಲೆ ಅವಲಂಬಿಸಿರುವದು. ಮತ್ತು ಇಂಥ ವೆಚ್ಚವನ್ನು ಯಾರು ಮತ್ತು ಎಷ್ಟು ಕೊಡಬೇಕೆಂಬುದನ್ನು ಠರಾಯಿಸಲಿಕ್ಕೆ ಕೋರ್ಟಿಗೆ ಅಧಿಕಾರ ಉಂಟು. ಕೋರ್ಟಿನವರು ದಾವೆಯ ವೆಚ್ಚದ ಮೇಲೆ ಬಡ್ಡಿ ಸಹ ಕೊಡಿಸಬಹುದು. ಸಾಮಾನ್ಯವಾಗಿ ದಾವೆಯ ನಿಕಾಲೆಗೆ ಅನುಸರಿಸಿ ದಾವೆಯ ವೆಚ್ಚವನ್ನು ಕೋರ್ಟಿನವರು ಕೊಡಿಸಬಹುದು. ಅಂದರೆ ವಾದಿಗೆ ಅನುಕೂಲವಾಗಿ ದಾವೆಯ ನಿಕಾಲೆಯಾದರೆ ವಾದಿಗೆ ದಾವೆಯ ವೆಚ್ಚವನ್ನು ಕೊಡಿಸಬಹುದು. ಮತ್ತು ಪ್ರತಿವಾದಿಗೆ ಅನುಕೂಲವಾಗಿ ದಾವೆಯ ನಿಕಾಲೆಯಾದರೆ ಪ್ರತಿವಾದಿಗೆ ದಾವೆಯ ವೆಚ್ಚವನ್ನು ಕೊಡಿಸಬಹುದು. ಮತ್ತು ಅನುಕ್ರಮವಾಗಿ ಪ್ರತಿವಾದಿಗೆ ಅಥವಾ ವಾದಿಗೆ ವೆಚ್ಚವನ್ನು ಕೊಡಲಿಕ್ಕೆ ಹೇಳಬಹುದು. ವೆಚ್ಚದಬಗ್ಗೆ ಅಸಲರ್ಜಿಯಲ್ಲಿ ಮಾಗಣಿ ಮಾಡುವದು ಕಾಯದೆಯಿಂದ ಅಗತ್ಯವಿಲ್ಲ. ನಿಷ್ಕಾರಣವಾಗಿ ವಾದಿಯು ದಾವೆಯು ಮಾಡಿದಪಕ್ಷಕ್ಕೆ ಅವನ ಅನುಕೂಲವಾಗಿ ದಾವೆಯ ನಿಕಾಲೆಯಾದರು ಸಹಿತ ಕೋರ್ಟಿನವರು ವಾದಿಗೆ ದಾವೆಯ ವೆಚ್ಚವನ್ನು ಕೊಡಿಸಲಿಕ್ಕಿಲ್ಲ.

———

# ೧ನೆಯ ಪ್ರಕರಣ

---

## ಅಸಲಜಿ೯ಗಳ ನಮೂನೆಗಳು

ಅಸಲರ್ಜಿಯಲ್ಲಿ ಯಾವಯಾವ ಸಂಗತಿಗಳನ್ನೂ ಮತ್ತು ತಪಶೀಲಗಳನ್ನೂ ಅವಶ್ಯವಾಗಿ ಬರೆಯಬೇಕೆಂಬುದನ್ನು ಈ ಮೊದಲು ವಿಸ್ತರಿಸಿ ಹೇಳಿದ್ದೇವೆ. ಅಸಲರ್ಜಿಯಲ್ಲಿ ಯಾ ಕೈಫಿಯತಿನಲ್ಲಿ ಸರನಾಮೆಗಳನ್ನೂಯಾವ ಪ್ರಕಾರ ಬರೆಯಬೇಕೆಂಬುದನ್ನು ಸಹ ವಿಶದವಾಗಿ ಹೇಳಿದ್ದೇವೆ. ದಾವೆಯೊಳಗಿನ ಸರನಾಮೆಯನ್ನೂ ಮುಖ್ಯವಾದ ಕೆಲವು ನಮೂನೆಗಳನ್ನೂ ಈ ಕೆಳಗೆ ಕೊಡುತ್ತೇವೆ.

## ದಾವೆಗಳ ಸರನಾಮೆಗಳು

... ... ... ... ... ... ...ಇವರ ಕೋರ್ಟಿನಲ್ಲಿ

೧. ಅ, ಬ ( ವರ್ಣನವನ್ನು ವಾಸಸ್ಥಳವನ್ನು ಬರೆಯಬೇಕು. )

... ... ... ... ... ... **ವಾದಿ**

**ವಿರುದ್ಧ**

(೧) ಕ, ಡ ( ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು. )

... ... ... ... ... ... ಪ್ರತಿವಾದಿ

**ವಿವಕ್ಷಿತ ದಾವೆಗಳಲ್ಲಿ ಪಕ್ಷಕಾರರ ವರ್ಣನವೂ**—ವಿವಕ್ಷಿತ ದಾವೆಗಳಲ್ಲಿ ಪಕ್ಷಕಾರರ ವರ್ಣನವನ್ನು ಹ್ಯಾಗೆ ಬರೆಯಬೇಕೆಂಬುದನ್ನು ಸಹ ಈ ಮೊದಲು ವಿಶದವಾಗಿ ಹೇಳಿದ್ದೇವೆ. ಅದನ್ನು ಲಕ್ಷದಲ್ಲಿ ತಂದು ವಿದ್ಯಮಾನಕ್ಕೆ ಯೋಗ್ಯವಾದ ವರ್ಣನವನ್ನು ಬರೆಯಬೇಕು. ಅವುಗಳ ಕೆಲವು ನಮೂನೆಗಳನ್ನು ಈ ಕೆಳಗೆ ಕೊಡುತ್ತೇವೆ.

ಸೆಕ್ರೆಟರಿ ಆಫ್ ಸ್ಟೇಟ ಫಾರ ಇಂಡಿಯಾ ಇನ್‌ಕೌನ್ಸಿಲ

---

... ... ... ... ದಿ. ಅಡವೋಕೇಟ ಜನರಲ್

---

... ... ... ... ದಿ. ಕಲೆಕ್ಟರ

... ... ... ... ದಿ. ಸ್ಟೇಟ

**ಅ, ಬ** ಕಂಪನಿ ಲಿಮಿಟೆಡ್, ಇವರ ರಜಿಸ್ಟರ್ಡ
ಆಫೀಸು ... ... ... ಎಂಬಲ್ಲಿ ಇದೆ.

**ಅ, ಬ, ಕ, ಡ** ಕಂಪನಿಯ ಪಬ್ಲಿಕ್ ಆಫೀಸರನು

**ಅ, ಬ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು), ತನ್ನ ಸ್ವಂತದಬಗ್ಗೆ ಮತ್ತು ಮೃತಪಟ್ಟ, **ಕ, ಡ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು) ಎಂಬುವವನ ಬೇರೆ ಎಲ್ಲ ಸಾವುಕಾರರ ಬಗ್ಗೆ

**ಅ, ಬ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು.) ತನ್ನ ಸ್ವಂತದಬಗ್ಗೆ ಮತ್ತು ... ... ... ... ಕಂಪನಿ ಲಿಮಿಟೆಡ್ ಎಂಬ ಕಂಪನಿಯಿಂದ ತೆಗೆಯಲ್ಪಟ್ಟ ಡಿಬೆಂಚರಗಳನ್ನು ಧಾರಣ ಮಾಡುವ ಬೇರೆ ಎಲ್ಲರ ಬಗ್ಗೆ

## ಆಫಿಶಿಯಲ್ ರಿಸೀವರ

**ಅ, ಬ** ಎಂಬ ಅಪ್ರಾಯಸ್ಥನ (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು.) ಬಗ್ಗೆ, ಅವನ ಹಿತಚಿಂತಕನಾದ **ಕ, ಡ** ಎಂಬುವನ (ಅಥವಾ ಕೋರ್ಟ ಆಫ್‌ವಾರ್ಡ್ಸನ) ಮುಖಾಂತರವಾಗಿ—

**ಅ, ಬ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು), ಹುಚ್ಚನು (ಅಥವಾ ದುರ್ಬಲ ಮನಸ್ಸಿನವನು), ಅವನ ಹಿತಚಿಂತಕನಾದ **ಕ, ಡ** ಎಂಬುವವನ ಮುಖಾಂತರವಾಗಿ

**ಅ, ಬ** ... ... .... ಎಂಬಲ್ಲಿ ಪಾಲುಗಾರಿಕೆಯಿಂದ ಉದ್ಯೋಗ ನಡಿಸುವ ಪೇಢಿಯು

**ಅ, ಬ** ( ವರ್ಣನವನ್ನು ವಾಸಸ್ಥಳವನ್ನು ಬರೆಯುಬೇಕು. ) ಅವನ ಅಧಿಕಾರ ಕೊಡಲ್ಪಟ್ಟ ಅಟರ್ನಿಯಾದ ಕ. ಡ ( ವರ್ಣನವನ್ನೂ ವಾಸಸ್ಥಳವನ್ನೂ ಬರೆಯುಬೇಕು.) ಎಂಬುವವನ ಮುಖಾಂತರವಾಗಿ—

---

**ಅ, ಬ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು ),

... ... ... ... ಠಾಕೂರನ ಶೆಬಾಯಿತ

---

**ಅ, ಬ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯಬೇಕು); ಮೃತಪಟ್ಟ **ಕ, ಡ** ಎಂಬುವವನ ಮೃತ್ಯಪತ್ರ ನಡಿಸುವವನು.

---

**ಅ, ಬ** (ವರ್ಣನವನ್ನೂ ವಾಸಸ್ಥಳವನ್ನೂ ಬರೆಯುಬೇಕು ); ಮೃತಪಟ್ಟ **ಕ, ಡ** ಎಂಬುವವನ ವಾರಸದಾರನು

---

ಇನ್ನುಮುಂದೆ ನಾವು ಅಸಲರ್ಜಿಗಳ ಕೆಲವು ನಮೂನೆಗಳನ್ನು ಇಲ್ಲಿ ಕೊಡುತ್ತೇವೆ. ಅದರ ಪೈಕಿ ಮೂರು ನಾಲ್ಕು ನಮೂನೆಗಳಲ್ಲಿ ಅಸಲರ್ಜಿಯಲ್ಲಿ ಅವಶ್ಯವಾಗಿ ಬರೆಯುವ ಎಲ್ಲ ಸಂಗತಿಗಳನ್ನೂ ಮತ್ತು ತಪಶೀಲುಗಳನ್ನೂ ಕೊಡುತ್ತೇವೆ. ಉಳಿದ ನಮೂನೆಗಳಲ್ಲಿ ವಿವಕ್ಷಿತ ದಾವೆಗೆ ಅವಶ್ಯವಿದ್ದ ಸಂಗತಿಗಳನ್ನಷ್ಟೇ ಹೇಳುತ್ತೇವೆ. ಹೊರ್ತಾಗಿ ಅಸಲರ್ಜಿಗೆ ಅವಶ್ಯವಿದ್ದ ಎಲ್ಲ ತಪಶೀಲುಗಳನ್ನು ಕೊಡುವದಿಲ್ಲ. ದಾವೆಯೊಳಗಿನ ಸರನಾಮೆಗಳೂ, ಪಕ್ಷಕಾರರ ವರ್ಣನೆಗಳನ್ನೂ ನಾವು ಕೊಡುವದಿಲ್ಲ; ಪ್ರಸಕ್ತಿಯಿದ್ದಂತೆ ಅವಗಳನ್ನೂಬರೆಯುಬೇಕು. ಯಾ ತುಂಬಿಕೊಳ್ಳಬೇಕು. ಇದರಂತೆ ದಾವೆಯ ಕಾರಣವು ಯಾವಾಗ ಉಂಟಾಯಿತೆಂಬುದನ್ನೂ ಮತ್ತು ಕೋರ್ಟಿಗೆ ಹುಕುಮತ್ತು ಇರುವದಾಗಿ ತೋರಿಸುವ ಸಂಗತಿಗಳು ಮತ್ತು ಹುಕುಮತ್ತಿನ ಬಗ್ಗೆ ಮತ್ತು ಕೋರ್ಟ ಫೀ ಬಗ್ಗೆ ಮಾಡುವ ದಾವೆಯ ಆಕಾರ

ವಗೈರೆ ತಪಶೀಲುಗಳನ್ನೂ ಕೆಳಗೆ ಬರೆದ ನಮೂನೆಗಳಲ್ಲಿ ಕೊಡುವದಿಲ್ಲ. ಪ್ರತಿಯೊಂದು ದಾವೆಯಲ್ಲಿ ಅವುಗಳನ್ನು ಬರೆಯುವದು ಅಗತ್ಯವಿದೆ. ಆದರೆ ದಾವೆಯ ಸ್ವರೂಪವಿದ್ದಂತೆ ಅವುಗಳು ಬದಲಾಗುವವು. ದಾವೆಯ ಸ್ವರೂಪದ ಮೇಲೆ ಅವುಗಳನ್ನು ಅವಲಂಬಿಸಿರುವವು; ಅವುಗಳನ್ನು ಹ್ಯಾಗೆ ಬರೆಯಬೇಕೆಂಬುದನ್ನು ವಿಶದವಾಗಿ ನಾವು ಹಿಂದಕ್ಕೆ ಹೇಳಿದ್ದೇವೆ. ಅದನ್ನು ಲಕ್ಷದಲ್ಲಿ ತಂದು ಪ್ರಸಕ್ತಿಯಿದ್ದಂತೆ ಸದರೀ ತಪಶೀಲುಗಳನ್ನು ಬರೆಯಬೇಕು. **ವಾದಿಯು ಪ್ರತಿನಿಧಿ ರೂಪದಿಂದ ದಾವೆಯನ್ನು ಮಾಡುತ್ತಿದ್ದಲ್ಲಿ ಅಥವಾ ಪಕ್ಷಕಾರರ ಪೈಕಿ ಯಾರಾದರೂ ಅಪ್ರಾಯಸ್ಥರೂ ದುರ್ಬಲ ಮನಸ್ಸಿನವರೂ ಇದ್ದಲ್ಲಿ ಅಥವಾ ದಾವೆಯು ಮುದ್ದತಿನ ಹೊರಗೆ ಇದ್ದಲ್ಲಿ ಆ ಬಗ್ಗೆ ತೋರಿಸುವ ಮಜಕೂರುಗಳನ್ನೂ ಮತ್ತು ಬರೆಯುವ ತಪಶೀಲುಗಳನ್ನೂ ತಪ್ಪದೆ ಅಸಲಜರ್ಜಿಯಲ್ಲಿ ಬರೆಯಬೇಕು.**

---

## ನಂಬರು ೧.

### ಸಾಲಕೊಟ್ಟ ಹಣದಬಾಬತು

ಲಾ. ಅಸಲ ನಂ. ______ ೧೯೨೯

ಹುಬ್ಬಳ್ಳಿ ೨ನೇ ವರ್ಗ ಸಬಜಜ್ಜಕೋರ್ಟನಲ್ಲಿ

(೧) ಹಸನಸಾಹೇಬ ವಲ್ಲದ ಇಬ್ರಾಹಿಮಸಾಹೇಬ ಕುಮತಾಕರ ವಯಾ ೪೦ ಜಾತಿ ಮುಸಲ್ಮಾನ ಉದ್ಯೋಗ ವ್ಯಾಪಾರ ಸಾಕೀನ ಹುಬ್ಬಳ್ಳಿ } ವಾದಿ

**ವಿರುದ್ಧ**

(೧) ಕಲ್ಲಪ್ಪಾ ತಂದಿ ಭೀಮಪ್ಪಾ ಸುಂಕದ ವಯಾ ೩೫ ಜಾತಿ ಲಿಂಗಾಯತ ಉದ್ಯೋಗ ಖಾಸಗಿ ನೌಕರಿ ಸಾಕಿನ ಯರಗುಪ್ಪಿ ತಾಲೂಕ ಹುಬ್ಬಳ್ಳಿ. } ಪ್ರತಿವಾದಿ

## ದಾವೆ ರೂಪಾಯಿ

ಇದರಲ್ಲಿ ವಾದಿಯು ತಿಳಿಸುವ ವಿವರ—

(೧) ವಾದಿಯು ತಾರೀಖು ೨೬–೭–೧೯೨೪ನೇ ಇಸ್ವಿ ದಿವಸ ಪ್ರತಿವಾದಿಗೆ ೨೫೦೦ ರೂಪಾಯಿ ಸಾಲವಾಗಿ ಕೊಟ್ಟಿದ್ದು ಅವು ೨೬–೧೨–೧೯೨೪ನೇ ಇಸ್ವಿದಿವಸ ತಿರುಗಿ ಕೊಡತಕ್ಕದ್ದಾಗಿದ್ದವು.

(೨) ಇದರಲ್ಲಿ ಪ್ರತಿವಾದಿಯು ಏನೂ ಕೊಟ್ಟಿಲ್ಲ.

(೩) ದಾವೆಯು ಕಾರಣವು ತಾರೀಖು ೨೬–೧೨–೧೯೨೪ನೇ ಇಸ್ವಿದಿವಸ ಉಂಟಾಯಿತು.

(೪) ಪ್ರತಿವಾದಿಯು ಎರಗುಪ್ಪಿ ಗ್ರಾಮದಲ್ಲಿ ಈ ಕೋರ್ಟಿನ ಹುಕುಮತ್ತಿನ ಹದ್ದಿಯಲ್ಲಿ ವಾಸಿಸುತ್ತಾನೆ.

(೫) ದಾವೆಯು ಒಡವೆಯ ಬೆಲೆಯು ಹುಕುಮತ್ತಿನ ಕಾರಣದ ಬಗ್ಗೆ ೨೫೦೦ ರೂಪಾಯಿಯಾಗಿಯೂ ಕೋರ್ಟ ಫೀಯ ಕಾರಣದ ಬಗ್ಗೆ ೨೫೦೦ ರೂಪಾಯಿಯಾಗಿಯೂ ಇರುತ್ತದೆ.

(೬) ದಾವೆಯುನ್ನು ದಾಖಲು ಮಾಡುವ ಮುದ್ದತು ತಾರೀಖು ೨೫-೧೨-೨೭ನೆಇಸ್ವಿದಿವಸ ಮೀರಿತ್ತು. ಆದರೆ ಆ ದಿವಸ ಮತ್ತುಮುಂದೆ ತಾರೀಖು ೪-೧-೨೮ನೇ ಇಸ್ವಿ ದಿವಸದ ವರೆಗೆ ಕೋರ್ಟು ಬಂದ ಇತ್ತು.

(೭) ವಾದಿ ವಿನಂತಿ ಏನಂದರೆ—

ಮೇಲ್ಕಂಡ ೨೫೦೦ ರೂಪಾಯಿಗಳನ್ನು ಸಿಕ್ಕಬೇಕೆಂದು ವಾದಿಯು ಬೇಡುತ್ತಾನೆ.

(ಸಹಿ) ಹಸನಸಾಹೇಬ ವ॥ ಇಬ್ರಾಹಿಮಸಾಹೇಬ
ಕಮತಾಕಾರ ದ. ಖು.

ನಾನು ಹಸನಸಾಹೇಬ ವಲ್ಲದ ಇಬ್ರಾಹಿಮಸಾಹೇಬ ಕುಮತಾಕರ ಮಾಡುವ ಇಕರಾರು ಏನಂದರೆ, ಮೇಲೆ ಅಸಲರ್ಜಿಯ ೧. ೨ ಮತ್ತು ೩ನೇ ಪ್ಯಾರಾಗ್ರಾಫುಗಳೊಳಗಿನ ಮಜಕೂರು ನನ್ನ ಸ್ವಂತ ಮಾಹಿತಿಯಿಂದ ನಿಜವಾದದ್ದಾಗಿದೆ. ಮತ್ತು ೪ನೇ ಪ್ಯಾರಾಗ್ರಾಫುಗಳೊಳಗಿನ ಮಜಕೂರು ನನ್ನ ದೊರೆತ

ಮತ್ತು ನಿಜವೆಂದು ನಂಬಲ್ಪಟ್ಟ ಮಾಹಿತಿ ಮೇಲಿಂದ ನಿಜವಾದದ್ದಾಗಿದೆ. ಇದಕ್ಕೆ ನಾನು ರಾ. ರಾ. ಗೋಪಾಳರಾವ ಭಾಟೆ ವಕೀಲ ಇವರ ಕಚೇರಿಯಲ್ಲಿ ತಾರೀಖು ೪-೧-೨೮ನೇ ಇಶ್ವಿದಿವಸಾ ನನ್ನ ಸಹಿ ಮಾಡಿದ್ದೇನೆ.

(ಸಹಿ) ಹಸನಸಾಹೇಬ ವ॥ ಇಬ್ರಾಹಿಮಸಾಹೇಬ
ಕುಮಠಾಕರ ( ದಸ್ತುರ ಖುದ್ದ )

Drafted and presented by

(Sd.) **G. V. BHATE,**
*Pleader.*

## ನಂಬರು ೨

### ಮೂಲ ಋಣಕೊ ಮತ್ತು ಜಮೀನದಾರನ ಮೇಲೆ ಸರನಾಮೆ

(೧) ೧ನೇ ಪ್ರತಿವಾದಿಯು ವಾದಿಯ ಬಳಿಯಲ್ಲಿ ತಾರೀಖು ೫-೪-೧೯೨೭ನೇ ಇಶ್ವಿ ದಿವಸ ೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡು ಆ ಬಗ್ಗೆ ವಾದಿಗೆ ಒಂದು ಕತಿಬೆಯನ್ನು ಬರೆದು ಕೊಟ್ಟು ದರಸಾಲು ದರಸೇಕಡಾ ೧೨ರೂಪಾಯಿಯ ದರದಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಆರು ತಿಂಗಳದಲ್ಲಿ ಸದರೀ ಹಣವನ್ನು ತಿರುಗಿಕೊಡಲಿಕ್ಕೆ ಒಪ್ಪಿಕೊಂಡನು. ಸದರೀ ದಸ್ತೈವಜಿಗೆ ೨ ಮತ್ತು ೩ನೇ ಪ್ರತಿವಾದೇರು ಉಗಾವಣಿ ಹಾಕಿ ಕರಾರಿನ ಪ್ರಕಾರ ೧ನೇ ಪ್ರತಿವಾದಿಯು ಸದರೀ ಹಣವನ್ನು ಕೊಡದಿದ್ದರೆ ತಾವು ಅದನ್ನು ಕೊಡುವರೆಂದು ವಾದಿಯ ಕೂಡಾ ಕರಾರು ಮಾಡಿಕೊಂಡರು.

(೨) ಇದರಲ್ಲಿ ಏನೂ ವಸೂಲ ಬಂದಿಲ್ಲ.

(೩) ದಾವೆಯ ಕಾರಣವು ತಾರೀಖು ೫-೧೦-೧೯೨೭ನೇ ಇಶ್ವಿ ದಿವಸ ಉಂಟಾಯಿತು.

(೪) ಇದರಲ್ಲಿ ೧ನೇ ಪ್ರತಿವಾದಿಯು ಗದಗಿನಲ್ಲಿ ಈ ಕೋರ್ಟಿನ ಸ್ಥಳ ಸೀಮೆಯಲ್ಲಿ ಇರುತ್ತಾನೆ; ಮತ್ತು ೨ನೇ ಮತ್ತು ೩ನೇ ಪ್ರತಿವಾದೇರು ಈ

ಕೋರ್ಟಿನ ಸ್ಥಳ ಸೀಮೆಯಲ್ಲಿ ಇರದಿದ್ದರೂ, ಅವರ ಮೇಲೆ ಈ ಕೋರ್ಟಿನಲ್ಲಿ ದಾವೆ ಮಾಡುವದಕ್ಕಾಗಿ ಅಪ್ಪಣೆಯನ್ನು ಪಡಕೊಳ್ಳುವ ಬಗ್ಗೆ ಅರ್ಜಿಯನ್ನು ಮಾಡಿರುತ್ತದೆ.

(೫) ದಾವೆಯು ಆಕಾರ ಕೋರ್ಟಫೀಯ ಕಾರಣದ ಬಗ್ಗೆ ಮತ್ತು ಹುಕ ಮತ್ತಿನ ಕಾರಣದ ಬಗ್ಗೆ ೬೨೦ ರೂಪಾಯಿ ಮಾಡಿರುತ್ತದೆ.

(೬) ವಾದಿಯು ಬೇಡುವದೇನಂದರೆ—

ಪ್ರತಿವಾದೇರ ಕಡೆಯಿಂದ ಅಸಲು ೫೮೦ ರೂಪಾಯಿ ಮತ್ತು ಬಡ್ಡಿ ೧೨೦ ರೂಪಾಯಿ ಅಂತು ೬೨೦ ರೂಪಾಯಿಗಳನ್ನು ಕೊಡಿಸಬೇಕು.

## ನಂಬರು ೩

## ಠೇವು ಹಿಂದಕ್ಕೆ ಪಡೆಯುವದಕ್ಕಾಗಿ

## ಸರನಾಮೆ

೧. ಪ್ರತಿವಾದಿಯು ಬೆಳಗಾಂವಿಯಲ್ಲಿ ಬಡ್ಡಿಯ ವ್ಯವಹಾರ ಮಾಡುತ್ತಾನೆ.

೨. ತಾರೀಖು ೧೦–೨–೧೯೬೦ನೇ ಇಸ್ವಿ ದಿವಸ ವಾದಿಯು ಪ್ರತಿವಾದಿಯು ಕಡಿಗೆ ೨೦೦೦ ರೂಪಾಯಿಗಳನ್ನು ಠೇವೆಂದು ಇಟ್ಟನು ಮತ್ತು ಸದರೀ ರಕಮನ್ನು ವಾದಿಯು ಬೇಡಿದಾಗ್ಗೆ ದರಸಾಲು ದರಸೇಕಡಾ ೬ ರೂಪಾಯಿಯ ದರದಂತೆ ಬಡ್ಡಿ ಸಹಿತವಾಗಿ ಅವನಿಗೆ ಪ್ರತಿವಾದಿಯು ತಿರುಗಿ ಕೊಡಬೇಕೆಂತಲೂ ವಾದಿ ಪ್ರತಿವಾದಿಗಳು ತಮ್ಮೊಳಗೆ (ಬಾಯಿಮಾತಿನಿಂದ ಯಾ) ಬರಹ ಮೂಲಕವಾಗಿ ಕರಾರು ಮಾಡಿಕೊಂಡರು.

೩. ವಾದಿಯು ತಾರೀಖು ೧೫–೧೦–೧೯೬೨ನೇ ಇಸ್ವಿದಿವಸ ಬಡ್ಡಿ ಸಹಿತವಾಗಿ ಸದರೀ ಹಣವನ್ನು ಬೇಡಿದನು. ಆದರೆ ಪ್ರತಿವಾದಿಯು ಅದನ್ನು ಅಥವಾ ಅದರ ಪೈಕಿ ಯಾವದೇ ಭಾಗವನ್ನು ಕೊಟ್ಟಿಲ್ಲ.

೪. ದಾವೆಯು ಕಾರಣವು ತಾರೀಖು ೧೫–೧೦–೧೯೬೨ನೇ ಇಸ್ವಿ ದಿವಸ ಉಂಟಾಯಿತು.

೫. ಪ್ರತಿವಾದಿಯು ಬೆಳಗಾಂವಿಯಲ್ಲಿ ಈ ಕೋರ್ಟಿನ ಅಧಿಕಾರದ ಹದ್ದಿ ಯಲ್ಲಿ ಇರುತ್ತಾನೆ.

೬. ದಾವೆಯ ಆಕಾರ ಕೋರ್ಟಫೀಯ ಕಾರಣವ ಬಗ್ಗೆ ಮತ್ತು ಹುಕ ಮತ್ತಿನ ಕಾರಣದ ಬಗ್ಗೆ ೩೧೨೪ ರೂಪಾಯಿ ಮಾಡಿರುತ್ತದೆ.

೭. ವಾದಿಯು ಬೇಡುವದೇನಂದರೆ —

ಪ್ರತಿವಾದಿ ಕಡೆಯಿಂದ ಅಸಲು ೨೦೦೦ ರೂಪಾಯಿ ಮತ್ತು ಬಡ್ಡಿ ೧೧೨೪ ರೂಪಾಯಿ ಅಂತು ೩೧೨೪ ರೂಪಾಯಿಗಳನ್ನು ವಾದಿಗೆ ಕೊಡಿಸಬೇಕು.

## ನಂಬರು ೪

ಲಾಂ. ಅಸಲು ನಂ. ೧೯೨೯

| | |
|---|---|
| ೧. ಜೋಹಾರಮಲ್ಲ ಧೂಳಾಜಿ ಎಂಬ ಹುಬ್ಬಳ್ಳಿಯಲ್ಲಿ ಪಾಲುಗಾರಕೆಯಿಂದ ವ್ಯವಹಾರ ಮಾಡತಕ್ಕ ಪೇಢಿಯು | ವಾದಿ |

## ವಿರುದ್ಧ

| | |
|---|---|
| ೧. ಜವಾನಮಲ್ಲ ತೇಜಾಜಿ ಮಾರವಾಡಿ ವಯಾ ೩೦ ಜಾತಿ ಜೈನ ಉದ್ಯೋಗ ನೌಕರಿ ಸಾಕೀನ ಹುಬ್ಬಳ್ಳಿ. | ಪ್ರತಿ ವಾದಿ |

## ದಾವಾ ರೂಪಾಯಿ

ಇದರಲ್ಲಿ ವಾದಿ ಪೇಢಿಯ ಪಾಲುಗಾರನಾದ ಗಣೇಶಮಲ್ಲ ಕುಂಭಾಜಿ ಮಾರವಾಡಿ ಇವನು ತಿಳಿಸುವ ವಿವರ: —

೧. ಪ್ರತಿವಾದಿಯು ವಾದಿಯ ಬಳಿಯಲ್ಲಿ ತಾರೀಖು ೧೦–೨–೨೬ನೇ ಇಸ್ವಿ ದಿವಸ ೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡು ಆ ಬಗ್ಗೆ ವಾದಿಗೆ ಒಂದು ಕತಿಬೆಯನ್ನು ಬರೆದುಕೊಟ್ಟು ದರಸಾಲು ದರಸೇಕಡಾ ೧೨ರೂಪಾಯಿಯಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಆರು ತಿಂಗಳದಲ್ಲಿ ಸದರೀ ಹಣವನ್ನು ಕೊಡುವದಕ್ಕೆ ಒಪ್ಪಿಕೊಂಡನು.

ಸವರೀಸಾಲಿಗೆ ಅಡವಾಗಿ ಪ್ರತಿವಾದಿಯು ಕೆಳಗೆ ವಿವರಿಸಿದ ಸರಕುಗಳನ್ನು ವಾದಿ ಪೇಢಿಯಲ್ಲಿ ಒತ್ತೆ ಇಟ್ಟನು.

ಸದರೀ ಸರಕುಗಳ ತಪಶೀಲು—

... ... ... ...

... ... ... ...

೨. ಇದರಲ್ಲಿ ಪ್ರತಿವಾದಿಯು ಏನೂ ಕೊಟ್ಟಿಲ್ಲ.

೩. ವಾದಿಯು ಸದರೀ ಸರಕುಗಳನ್ನು ತಾರೀಖು ೧೪–೧೨–೧೯೨೮ನೇ ಇಸ್ವಿ ದಿವಸ ಹುಬ್ಬಳ್ಳಿಯಲ್ಲಿರುವ ಮಾಣೀಕಚಂದ ಹೀರಾಜಿ ಎಂಬ ಪೇಡಿಯಲ್ಲಿ ೪೫೦ ರೂಪಾಯಿಗಳಿಗೆ ಮಾರಿದನು. ಈ ಹಣವನ್ನು ವಜಾಹೋಗಲಾಗಿ ಇನ್ನೂ, ಕೆಳಗೆ ವಿವರಿಸಿದಂತೆ...... ರೂಪಾಯಿಗಳನ್ನು ಪ್ರತಿವಾದಿಯು ವಾದಿಗೆ ಕೊಡ ತಕ್ಕದ್ದಾಗುತ್ತದೆ.

೪. ದಾವೆಯು ಕಾರಣವು ತಾರೀಖು ೧೦–೮–೧೯೨೬ನೇ ಇಸ್ವಿ ದಿವಸ ಉಂಟಾಯಿತು.

೫. ಪ್ರತಿವಾದಿಯು ಹುಬ್ಬಳ್ಳಿಯಲ್ಲಿ ಈ ಕೋರ್ಟಿನ ಸ್ಥಲ ಸೀಮೆಯಲ್ಲಿ ಇರುತ್ತಾನೆ.

೬. ದಾವೆಯು ಆಕಾರ ಕೋರ್ಟಫೀ ಬಗ್ಗೆ ಮತ್ತು ಹುಕುಮತ್ತಿನ ಬಗ್ಗೆ ರೂಪಾಯಿ ಮಾಡಿರುತ್ತದೆ.

೭. ವಾದಿಯು ಬೇಡುವದೇನಂದರೆ—

ಪ್ರತಿವಾದಿ ಕಡೆಯಿಂದ ರೂಪಾಯಿಗಳನ್ನು ಕೊಡಿಸಬೇಕು.

ಸಹಿ— ಗಣೇಶಮಲ್ಲ ಕುಂಭಾಜಿ ಮಾರವಾಡಿ.

ನಾನು ವಾದಿ ಪೇಢಿಯ ಪಾಲುಗಾರನಾದ ಗಣೇಶಮಲ್ಲ ಕುಂಭಾಜಿ ಮಾರವಾಡಿ, ಮಾಡುವ ಇಕರಾರು ಏನಂದರೆ—

ಮೇಲೆ ಅಸಲೀ ಅರ್ಜಿಯ ೧ ರಿಂದ ೫ನೇ ಪ್ಯಾರಾಗ್ರಾಫಿನೊಳಗಿನ ಮಜಕೂರು ನನ್ನ ತಿಳುವಳಿಕೆಯಿಂದ ನಿಜವಾದದ್ದಾಗಿದೆ. ಇದಕ್ಕೆ ನಾನು ರಾ. ಭಗವಂತರಾವ

ಆಪಟೆ ವಕೀಲ ಇವರ ಕಚೇರಿಯಲ್ಲಿ ತಾರೀಖು ... ... ಇಸ್ವಿ ದಿವಸ ನನ್ನ ಸಹಿ ಮಾಡಿದ್ದೇನೆ.

ಸಹಿ— ಗಣೇಶಮಲ್ಲ ಕುಂಭಾಜಿ ಮಾರವಾಡಿ.

Darfted and presented by

Sd. B. V. APTE,
*Pleader.*

## ನಂಬರು ೫

### ಸಾಲವನ್ನು ಕೊಟ್ಟಹಣದ ಬಾಬತು

### ( ಸರನಾಮೆ )

೧. ತಾರೀಖು ೧೫–೩–೧೯೨೮ನೇ ಇಸ್ವಿ ದಿವಸ ವಾದಿ ಬಳಿಯಲ್ಲಿ ಪ್ರತಿವಾದಿಯು ೪೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡು ಸದರೀ ರೂಪಾಯಿಗಳನ್ನು ಬೇಡಿದಾಗ್ಗೆ (ಅಥವಾ ಆರು ತಿಂಗಳದಲ್ಲಿ) ದರಸಾಲು ದರ ಸೇಕಡಾ ೧೨ ರೂಪಾಯಿಯಂತೆ ಬಡ್ಡಿ ಸಹಿತವಾಗಿ ತಿರುಗಿ ಕೊಡಲಿಕ್ಕೆ ಒಪ್ಪಿಕೊಂಡನು.

೨. ಇವರಲ್ಲಿ ಪ್ರತಿವಾದಿಯು ಏನೂ ವಸೂಲ ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ ಏನಂದರೆ—**

ಅಸಲು ೪೦೦ ರೂಪಾಯಿ ಮತ್ತು ಬಡ್ಡಿ ೧೦೦ ರೂಪಾಯಿ ಅಂತು ೫೦೦ ರೂಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಪ್ರತಿವಾದಿಯ ಕಡೆಯಿಂದ ಕೊಡಿಸಬೇಕು.

## ನಂಬರು ೬

### ಸಾಲವನ್ನು ಕೊಟ್ಟ ಹಣದ ವಿಷಯದಲ್ಲಿ

(೧) ತಾರೀಖು ೧೬–೩–೧೯೨೮ನೇ ಇಸ್ವಿ ದಿವಸದಿಂದ ತಾರೀಖು ೨೬–೧೦–೧೯೨೮ನೇ ಇಸ್ವಿ ದಿವಸದ ವರೆಗೆ ವಾದಿ ಬಳಿಯಲ್ಲಿ ಪ್ರತಿವಾದಿಯು ಮೇಲಿಂದ ಮೇಲೆ ಒಟ್ಟು ೪೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡು

ಸದರೀ ರುಪಾಯಿಗಳನ್ನು ಪರಸಾಲು ದರಸೇಕಡಾ ೧೨ ರೂಪಾಯಿಗಳ ದರದಂತೆ ಬಡ್ಡಿ ಸಹಿತವಾಗಿ ಬೇಡಿದಾಗ್ಗೆ ಕೊಡಲಿಕ್ಕೆ ಒಡಂಬಟ್ಟನು.

ಸದರೀ ಸಾಲವ ತಪಶೀಲು ಈ ಕೆಳಗಿನಂತೆ ಇದೆ.

ತಾರೀಖು ೧೬-೩-೧೯೨೮ನೇ ಇಶ್ವಿ ದಿವಸ ರೂಪಾಯಿ ೧೦೦ ೦-೦-೦
ತಾರೀಖು ೨೫-೪-೧೯೨೮ನೇ ಇಶ್ವಿ ದಿವಸ ರೂಪಾಯಿ ೭೦ ೦-೦-೦
ತಾರೀಖು ೨೬-೫-೧೯೨೮ನೇ ಇಶ್ವಿ ದಿವಸ ರೂಪಾಯಿ ೧೫೦ ೦-೦-೦
ತಾರೀಖು ೨೬-೧೦-೧೯೨೮ನೇ ಇಶ್ವಿ ದಿವಸ ರೂಪಾಯಿ ೫೦ ೦-೦-೦

ಅಂತೂ ರೂಪಾಯಿ ೪೨೦ ೦-೦-೦

(೨) ಇದರಲ್ಲಿ ಪ್ರತಿವಾದಿಯು ಈ ಕೆಳಗೆ ವಿವರಿಸಿದಂತೆ ವಸೂಲು ಕೊಟ್ಟಿದ್ದಾನೆ.

ತಾರೀಖು ೧೫-೧೨-೧೯೨೮ನೇ ಇಶ್ವಿ ದಿವಸ ಮುದ್ದಲಿನ ಸಂಬಂಧ ದಿಂದ ೫೦ ರುಪಾಯಿ ಮತ್ತು ಬಡ್ಡಿಯು ಸಂಬಂಧದಿಂದ ೧೦ ರೂಪಾಯಿ ಅಂತೂ ೬೦ ರೂಪಾಯಿಗಳನ್ನು ಕೊಟ್ಟಿದ್ದಾನೆ.

ತಾರೀಖು ೨೨-೧-೧೯೨೯ನೇ ಇಶ್ವಿ ದಿವಸ ಬಡ್ಡಿಯು ಸಂಬಂಧದಿಂದ ೧೫ ರುಪಾಯಿಗಳನ್ನು ಕೊಟ್ಟಿದ್ದಾನೆ. ಇಷ್ಟರ ಹೊರ್ತು ಹೆಚ್ಚಿಗೇನು ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ ಏನಂದರೆ: —**

ಮುದ್ದಲು ರುಪಾಯಿ ೩೫೦ ಮತ್ತು ಬಡ್ಡೀ ರೂಪಾಯಿ ೧೦೦ ಅಂತು ೪೦೦ ರೂಪಾಯಿಗಳನ್ನು ಪ್ರತಿವಾದಿ ಕಡೆಯಿಂದ ಕೊಡಿಸಬೇಕು.

## ನಂಬರು ೭

## ಖಾತೆ ಬಾಕಿ ಬಾಬತು

## ಸರನಾಮೆ

(೧) ತಾರೀಖು ೧೦-೩-೧೯೨೬ನೇ ಇಶ್ವಿ ದಿದಸ ಪ್ರತಿವಾದಿಯು ವಾದಿ ಅಂಗಡಿಯಲ್ಲಿ ತನ್ನ ಹೆಸರಲೆ ಖಾತೆ ಇಡಿಸಿ ಅಂದಿನಿಂದ ತಾರೀಖು ೧೫-೫-೧೯೨೮ನೇ

ಇಸ್ವಿ ದಿವಸದ ವರೆಗೆ ಲಗತಿಟ್ಟ ಲೆಕ್ಕದ ಉತಾರಗಳಲ್ಲಿ ತೋರಿಸದಂತೆ ವ್ಯವಹಾರಗಳನ್ನು ಮಾಡಿದನು. ಸದರೀ ವ್ಯವಹಾರಗಳ ಸಂಬಂಧದಿಂದ ಪ್ರತಿವಾದಿಯ ಮೇಲೆ ೧೨೪೦ ರೂಪಾಯಿಗಳನ್ನು ಖಾತೆಬಾಕಿ ಹೊರಡುತ್ತದೆ. ಮತ್ತು ಅವನ್ನು ಪ್ರತಿವಾದಿ ಕಡಿಂದ ಸಲ್ಲತಕ್ಕದ್ದಿದೆ. ದೇಶ ರಿವಾಜ ಪ್ರಕಾರ ಸದರೀ ಬಾಕಿಯ ಮೇಲೆ ದರಸಾಲು ದರ ಶೇಕಡಾ ೧೨ ರೂಪಾಯಿಯಂತೆ ಬಡ್ಡಿ ಕೊಡಬೇಕಾಗುತ್ತದೆ.

(೨) ಇದರಲ್ಲಿ ಪ್ರತಿವಾದಿ ಕಡಿಂದ ಲಗತಿಟ್ಟ ಉತಾರದಲ್ಲಿ ಜಮೇದ ಕಡೆ ತೋರಿಸಿದ ರಕಮಿನ ವಿನಃ ಹೆಚ್ಚಿಗೇನೂ ವಸೂಲ ಬಂದಿಲ್ಲ.

... ... ... ...

**ವಾದಿ ವಿನಂತಿ ಏನಂದರೆ: –**

ಖಾತೆಬಾಕಿ ಬಾಬತು ೧೨೪೦ ರುಪಾಯಿ ಮತ್ತು ಬಡ್ಡಿ ಬಾಬತ್ತು ೧೨೪ ರುಪಾಯಿ ಅಂತು ೧೩೬೪ ರುಪಾಯಿಗಳನ್ನು ಸಿಕ್ಕ ಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೮

## ಪ್ರಾಮಿಸರಿ ನೋಟಿನ ಬಾಬತು

## ಸರನಾಮೆ

(೧) ಬೇಡಿದಾಗ್ಗೆ ದರಮುಹಾ ದರ ಸೇಕಡಾ ೧ ರೂಪಾಯಿಯಂತೆ ಬಡ್ಡಿ ಸಹಿತವಾಗಿ ಹಣ ಕೊಡುವ ಕರಾರಿನಿಂದ ತಾರೀಖು ೧೬–೩–೧೯೨೭ನೇ ಇಸ್ವಿ ದಿವಸ ೧೦೦೦ ರೂಪಾಯಿಗಳಿಗೆ ಪ್ರತಿವಾದಿಯು ವಾದಿಗೆ ಒಂದು ಪ್ರಾಮಿಸರಿ ನೋಟು ಬರೆದು ಕೊಟ್ಟನು.

[ಅಥವಾ (೧) ಬೇಡಿದಾಗ್ಗೆ ದರಮುಹಾ ದರ ಸೇಕಡಾ ೧ ರುಪಾಯಿವಂತೆ ಬಡ್ಡಿ ಸಹಿತವಾಗಿ ಹಣ ಕೊಡತಕ್ಕಂಥ ೧೦೦೦ ರುಪಾಯಿಯ ಪ್ರಾಮಿಸರಿ ನೋಟು ತಾರೀಖು ೧೬–೩–೧೯೨೭ನೇ ಇಸ್ವಿ ದಿವಸ ಪ್ರತಿವಾದಿಯು ವಾದಿಗೆ ಬರೆದು ಕೊಟ್ಟನು.]

[ಅಥವಾ (೧) ಪ್ರತಿವಾದಿಯು ತಾರೀಖು ೧೬–೩–೧೯೨೭ನೇ ಇಸ್ವಿ ದಿವಸ ವಾದಿಗೆ ೧೦೦೦ ರುಪಾಯಿಗಳ ಬಗ್ಗೆ ಒಂದು ಪ್ರಾಮಿಸರಿ ನೋಟು ಬರೆದು

ಕೊಟ್ಟು ಸದರಿ ಹಣವನ್ನು ದರಮಹಾ ಸೇಕಡಾ ೧ ರೂಪಾಯಿಯಂತೆ ಬಡ್ಡಿ ಸಹಿತ ಬೇಡಿದಾಗ್ಗೆ ಕೊಡಲಿಕ್ಕೆ ಒಪ್ಪಿಕೊಂಡನು]

(೨) ಇದರಲ್ಲಿ ಪ್ರತಿವಾದಿಯು ಮುದ್ದಲು ಬಗ್ಗೆ ೫೦೦ ರುಪಾಯಿಗಳನ್ನು ಮತ್ತು ಬಡ್ಡಿ ಬಗ್ಗೆ ೫೦ ರೂಪಾಯಿಗಳನ್ನು ಅಂತೂ ೫೫೦ ರೂಪಾಯಿಗಳನ್ನು ತಾರೀಖು ೧೬–೮–೧೯೬೭ನೇ ಇಸ್ವಿ ದಿವಸ ಕೊಟ್ಟನು; ಇಷ್ಟರ ಹೊರತು ಏನೂ ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ ಏನಂದರೆ: —**

ಮುದ್ದಲು ರುಪಾಯಿ ೫೦೦ ಮತ್ತು ಬಡ್ಡಿ ರುಪಾಯಿ ೩೦ ಅಂತು ೫೩೦ ರೂಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೯

## ಪ್ರಾಮಿಸರಿ ನೋಟು ಬೇಚನ ಮಾಡಿಕೊಟ್ಟ ಮೇಲೆ ಸರನಾಮೆ

(೧) ಬೇಡಿದಾಗ್ಗೆ ದರಮಹಾ ದರ ಸೇಕಡಾ ೧ ರುಪಾಯಿದಂತೆ ಬಡ್ಡಿ ಸಹಿತವಾಗಿ ಹಣ ಕೊಡತಕ್ಕಂಥ ೧೦೦೦ರುಪಾಯಿಯ ಪ್ರಾಮಿಸರಿ ನೋಟು ತಾರೀಖು ೧೬–೩–೧೯೬೭ನೇ ಇಸ್ವಿ ದಿವಸ ಪ್ರತಿವಾದಿಯು ಅನಂತ ಶಂಕರ ನರಗುಂದ ಎಂಬುವನಿಗೆ ಬರೆದು ಕೊಟ್ಟನು.

(೨) ಸದರಿ ಅನಂತ ಶಂಕರ ನರಗುಂದ ಎಂಬುವನು ಸದರಿ ಪ್ರಾಮಿಸರಿ ನೋಟು ತಾರೀಖು ೬೬–೧೦–೧೯೨೮ನೇ ಇಸ್ವಿ ದಿವಸ ವಾದಿಗೆ ಬೇಚನ ಮಾಡಿ ಕೊಟ್ಟನು.

(೩) ಇದರಲ್ಲಿ ಪ್ರತಿವಾದಿಯು ಏನೂ ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ ಏನಂದರೆ: —**

ಮುದ್ದಲು ರುಪಾಯಿ ೧೦೦೦ ಮತ್ತು ಬಡ್ಡಿ ರುಪಾಯಿ ೬೫೦ ಅಂತೂ ೧೬೫೦ ರೂಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

# ನಂಬರು ೧೦

## ಪ್ರಾಮಿಸರಿ ನೋಟಿನ ಮೇಲೆ ಅದರ ಬದಲಾಗಿ ಮೂಲ ಋಣದ ಮೇಲೆ

## ಸರನಾಮೆ

(೧) ಪ್ರತಿವಾದಿಯು ತಾರೀಖು ೧೬–೪–೧೯೨೭ನೇ ಇಸ್ವಿ ದಿವಸ ವಾದಿ ಬಳಿಯಲ್ಲಿ ೫೦೦ ರುಪಾಯಿಗಳನ್ನು ಸಾಲವಾಗಿ ತೆಗೆದುಕೊಂಡು ದರವು ಮಹಾ ದರ ಶೇಕಡಾ ೧ ರುಪಾಯಿದಂತೆ ಬಡ್ಡಿ ಸಹಿತವಾಗಿ ಬೇಡಿದಾಗ್ಗೆ ವಾದಿಗೆ ಸದರಿ ಹಣವನ್ನು ತಿರುಗಿ ಕೊಡಲಿಕ್ಕೆ ಒಪ್ಪಿಕೊಂಡನು.

(೨) ಮೇಲ್ಕಂಡ ಸಾಲದ ಬಗ್ಗೆ ಪ್ರತಿವಾದಿಯು ಮೇಲ್ಕಂಡ ತಾರೀಖಿನ ದಿವಸ ವಾದಿಗೆ ಒಂದು ಪ್ರಾಮಿಸರಿ ನೋಟು ಬರೆದುಕೊಟ್ಟು ಸದರಿ ಹಣವನ್ನು ದರಮಹಾ ದರ ಶೇಕಡಾ ೧ ರುಪಾಯಿದಂತೆ ಬಡ್ಡಿ ಸಹಿತವಾಗಿ ಬೇಡಿದಾಗ್ಗೆ ತಿರುಗಿ ಕೊಡಲಿಕ್ಕೆ ಒಪ್ಪಿಕೊಂಡನು.

(೩) ಇದರಲ್ಲಿ ಪ್ರತಿವಾದಿಯು ಏನೂ ಕೊಟ್ಟಿಲ್ಲ.

(೪) ಪ್ರತಿವಾದಿ ಕಡಿಂದ ಬರತಕ್ಕ ಹಣವ ತಪಶೀಲು

೫೦೦ ೦-೦-೦ ಅಸಲು
೧೨೦ ೦-೦-೦ ಬಡ್ಡಿಯು

ಅಂತು ೬೨೦ ರುಪಾಯಿಗಳನ್ನು

... ... ... ... ...

**ವಾದಿ ವಿನಂತಿ ಏನಂದರೆ:—**

(ಅ) ೬೨೦ ರುಪಾಯಿಗಳನ್ನು ಪ್ರಾಮಿಸರಿ ನೋಟಿನ ಆಧಾರದ ಮೇಲಿಂದ;

(ಬ) ಅದರ ಬದಲಾಗಿ ಇದೇ ರಕಮು ಮೂಲ ಋಣವ (ಅಥವಾ ಸಾಲದ) ಅಧಾರದ ಮೇಲಿಂದ;

(ಕ) ಮುಂದಿನ ಬಡ್ಡಿ ಸಹಿತವಾಗಿ, ಸಿಗಬೇಕೆಂದು ವಾದಿಯು ಬೇಡು ತ್ತಾನೆ.

## ನಂಬರು ೧೧

## ಹೆಚ್ಚಾಗಿ ಸಂದ ಹಣದ ಬಾಬತು

### ಸರನಾಮೆ

(೧) ತಾರೀಖು ೧೩–೪–೧೯೨೨ನೇ ಇಸ್ವಿ ದಿವಸ ಚೊಕ್ಕ ಬೆಳ್ಳಿ ತೊಲೆಗೆ ೧೨ ಆಣೆಯಂತೆ ಬೆಳ್ಳಿಯ ಗಟ್ಟಿಗಳನ್ನು ಕೊಂಡುಕೊಳ್ಳಲಿಕ್ಕೆ ವಾದಿಯೂ ಮಾರ ಲಿಕ್ಕೆ ಪ್ರತಿವಾದಿಯೂ ಒಡಂಬಟ್ಟರು.

(೨) ಆ ಗಟ್ಟಿಗಳನ್ನು ವಾದಿಯು ಮಹಾದೇವಪ್ಪಾ ಸವಣೂರ ಎಂಬುವ ವನ ಕೈಯಿಂದ ಪರೀಕ್ಷಿಸಿಕೊಂಡನು ಅದಕ್ಕಾಗಿ ಪ್ರತಿವಾದಿಯು ಮಹಾದೇವಪ್ಪಾ ಸವಣೂರನಿಗೆ ಕೂಲಿಯನ್ನು ಕೊಟ್ಟನು. ಸದರೀ ಮಹಾದೇವಪ್ಪ ಸವಣೂರ ಎಂಬುವವನು ಪ್ರತಿಯೊಂದು ಗಟ್ಟಿಯಲ್ಲಿ ೧೫೦೦ ತೊಲೆ ಚೊಕ್ಕ ಬೆಳ್ಳಿಯುಂ ಟೆಂದು ಹೇಳಿದ ಪ್ರಕಾರ ವಾದಿಯು ಪ್ರತಿವಾದಿಗೆ ... ... ರುಪಾಯಿ ಕೊಟ್ಟನು.

(೩) ಸದರೀ ಪ್ರತಿಯೊಂದು ಗಟ್ಟಿಯಲ್ಲಿ ೧೨೦೦ ತೊಲೆ ಚೊಕ್ಕ ಬೆಳ್ಳಿ ಮಾತ್ರ ಇತ್ತು ಮತ್ತು ಈ ಸಂಗತಿಯು ಹಣ ಕೊಡುವಾಗ ವಾದಿಗೆ ತಿಳಿಯಲಿಲ್ಲ.

(೪) ಈ ರೀತಿಯಿಂದ ಹೆಚ್ಚಿಗೆ ತೆಗೆದುಕೊಂಡು ... ... ರುಪಾಯಿಗಳನ್ನು ಪ್ರತಿವಾದಿಯು ಹಿಂದಕ್ಕೆ ಕೊಡಲಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಪ್ರವಾದಿಗೆ ಹೆಚ್ಚಿಗೆ ಕೊಟ್ಟ ... ... ರುಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ವಾದಿಗೆ ಕೊಡಿಸಬೇಕು.

## ನಂಬರು ೧೨

### ಹೆಚ್ಚಾಗಿ ಹಣ ವಸೂಲು ಮಾಡಿದ ಬಗ್ಗೆ

### ಸರನಾಮೆ

(೧) ವಾದಿಯು ಈ ಕೋರ್ಟಿನ ಲಾ. ಅಸಲುನಂಬರ $\frac{೫೬೨}{೧೯೨೬}$ ನೇದ್ದರಲ್ಲಿಯ ಹುಕುಮನಾಮೆಯು ಪೂರ್ತಿಯಾಗಿ ಭರಪಾಯಿ ಮಾಡುವದಕ್ಕಾಗಿ ೨೫೦೦ ರುಪಾಯಿಗಳನ್ನು ತಾರೀಖು ೧೬-೪-೧೯೨೨ನೇ ಇಶ್ವಿ ದಿವಸ ಪ್ರತಿವಾದಿಗೆ ಕೊಟ್ಟನು ಮತ್ತು ಅವುಗಳನ್ನು ಅವನು ಸ್ವೀಕರಿಸಿದನು; ಮತ್ತು ಆ ವೇಳೆಗೆ ಅವನು ಸದರಿ ಹುಕುಮನಾಮೆಯು ಪೂರ್ತಿಯಾಗಿ ಭರಪಾಯಿಯಾಗದೆಂಬುದನ್ನು ಕೋರ್ಟಿಗೆ ಜಾಹೀರು ಮಾಡಲಿಕ್ಕೆ ಒಪ್ಪಿಕೊಂಡನು.

(೨) ಹೀಗಿದ್ದು ಪ್ರತಿವಾದಿಯು ಸದರಿ ಹುಕುಮನಾಮೆಯು ಅಮಲುಬಜಾವಣಿಯನ್ನು ವಾದಿ ವಿರುದ್ಧ ನಡಿಸಿ ವಾದಿಯು ಜಂಗಮ ಆಸ್ತಿಗಳನ್ನು ಜಪ್ತಿಮಾಡಿಸುವದಕ್ಕಾಗಿ ಕೋರ್ಟಿನಿಂದ ಹುಕುಮು ಪಡಕೊಂಡನು. ಕಾರಣಾ ಈ ಹುಕುಮನಾಮೆಯೂ ಭರಪಾಯಿ ಬಗ್ಗೆ ಮತ್ತು ಅದರ ಅಮಲು ಬಜಾವಣಿಯ ವೆಚ್ಚದ ಬಗ್ಗೆ ವಾದಿಗೆ ತಾರೀಖು ೬-೬-೧೯೨೨ನೇ ಇಶ್ವಿ ದಿವಸ ೩೧೦೦ ರುಪಾಯಿಗಳನ್ನು ಕೊಡಬೇಕಾಗಿತ್ತು ಮತ್ತು ಅವನು ಅವುಗಳನ್ನು ಕೊಟ್ಟನು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಪ್ರತಿವಾದಿ ಕಡಿಂದ ಲುಕ್ಸಾನ ತರೀಕ ೩೧೦೦ ರುಪಾಯಿಗಳನ್ನು ಕೊಡಿಸಬೇಕು.

## ನಂಬರು ೧೩

### ಕೊಟ್ಟ ಹಣ ಹಿಂದಕ್ಕೆ ಪಡೆಯುವ ಬಗ್ಗೆ

### ಸರನಾಮೆ

(೧) ವಾದಿಯು ಈ ಕೋರ್ಟಿನ ಲಾ. ಅಸಲು ನಂಬರು $\frac{೫}{೧೯}$ ನೇದ್ದರಲ್ಲಿಯ ಹುಕುಮನಾಮೆಯು ಅಂಶತಃ ಭರಪಾಯಿ ಮಾಡುವದಕ್ಕೋ ತಾರೀಖು

೧೨-೧೦-೧೯೩೭ನೇ ಇಸ್ವಿ ದಿವಸ ೧೫೦೦ ರುಪಾಯಿಗಳನ್ನು ಪ್ರತಿವಾದಿಗೆ ಕೊಟ್ಟನು ಮತ್ತು ಪ್ರತಿವಾದಿಯು ಸದರಿ ರಕಮು ಹುಕುಮನಾಮೆಯ ರಕಮಿನಲ್ಲಿ ವಜಾ ಮಾಡಲಿಕ್ಕೆ ಒಪ್ಪಿಕೊಂಡನು.

(೨) ಹೀಗಿದ್ದು ಮೇಲಿನಂತೆ ಹುಕುಮನಾಮೆಯ ರಕಮಿನಲ್ಲಿ ಮೇಲಿನ ರಕಮು ವಜಾಮಾಡಿದೆ. ಪ್ರತಿವಾದಿಯು ಆ ಹುಕುಮನಾಮೆಯ ಪೂರಾ ರಕಮಿನ ಬಗ್ಗೆ ತಾರೀಖು ೪-೧-೧೯೩೮ನೇ ಇಸ್ವಿ ದಿವಸ ದರಖಾಸ್ತು ಕೊಟ್ಟನು.

(೩) ವಾದಿಯು ಮೇಲ್ಕಂಡ ೧೫೦೦ ರುಪಾಯಿಗಳನ್ನು ಗಣಪತೆಪ್ಪಾ ಏಕನಾಥಪ್ಪಾ ಜಂಬುರೆ ಎಂಬುವವನ ಕಡಿಂದ ದರಸಾಲು ದರಶೇಕಡಾ ೧೨ ರುಪಾಯಿ ದಂತೆ ಬಡ್ಡಿ ಕೊಡುವ ಕರಾರಿನಿಂದ ಸಾಲವಾಗಿ ಇಸಕೊಂಡಿರುತ್ತಾನೆ. ಕಾರಣಾ ಸದರಿ ರಕಮಿಗೆ ಪ್ರತಿವಾದಿಯು ದರ ಸಾಲು ದರಶೇಕಡಾ ೧೨ ರುಪಾಯಿದಂತೆ ಬಡ್ಡಿ ಕೊಡಬೇಕೆಂದು ವಾದಿಯು ಬೇಡುತ್ತಾನೆ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಅಸಲು ರುಪಾಯಿ ೧೫೦೦ ಮತ್ತು ಬಡ್ಡಿ ರುಪಾಯಿ ೩೦೦ ಅಂತು ೧೮೦೦ ರುಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೧೪

## ಸಾಲದ ಕತಿಬೆಯ ಮೇಲೆ ಸರನಾಮೆ

(೧) ಪ್ರತಿವಾದಿಯು ವಾದಿ ಬಳಿಯಲ್ಲಿ ತಾರೀಖು ೧೬-೭-೧೯೨೭ನೇ ಇಸ್ವಿ ದಿವಸ ೫೦೦ ರುಪಾಯಿಗಳನ್ನು ಸಾಲವಾಗಿ ತೆಗೆದುಕೊಂಡು ಅದರ ಬಗ್ಗೆ ವಾದಿಗೆ ಒಂದು ಕತಿಬೆಯನ್ನು ಬರೆದುಕೊಟ್ಟು, ಪರಸಾಲ ದರಸೇಕಡಾ ೧೨ ರುಪಾಯಿದಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಆರು ತಿಂಗಳದಲ್ಲಿ ಸದರೀ ಹಣವನ್ನು ತಿರಿಗಿ ಕೊಡಲಿಕ್ಕೆ ಒಪ್ಪಿಕೊಂಡನು.

(೨) ಪ್ರತಿವಾದಿಯು ತಾರೀಖು ೧೬–೧೨–೧೯೨೭ನೇ ಇಸ್ವಿ ದಿವಸ ಬಡ್ಡಿಯ ಬಗ್ಗೆ ೨೫ ರುಪಾಯಿಗಳನ್ನು ಕೊಟ್ಟನು; ಇಷ್ಟರ ಹೊರತು ಏನೂ ಕೊಟ್ಟಿಲ್ಲ.

(೩) ದಾವೆಯ ಕಾರಣವೂ ತಾರೀಖು ೧೬–೧–೧೯೨೮ನೇ ಇಸ್ವಿದಿವಸ ಉದ್ಭವಿಸಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಮುದ್ದಲು ರುಪಾಯಿ ೫೦೦ ಮತ್ತು ಬಡ್ಡಿ ರುಪಾಯಿ ೫೦ ಅಂತು ೫೫೦ ರುಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೧೫

### ಸಾಲದ ಕತಿಬೆಯ ಮೇಲೆ

### ಸರನಾಮೆ

(೧) ಪ್ರತಿವಾದಿಯು ವಾದಿ ಅಂಗಡಿಯಲ್ಲಿ ವ್ಯವಹಾರ ಮಾಡಿದ ಬಾಬತು ಅವನ ಕಡಿಂದ ೧೦೦೦ ರುಪಾಯಿಗಳನ್ನು ವಾದಿಗೆ ಸಲ್ಲತಕ್ಕದ್ದಾಗಿತ್ತು; ಸದರಿ ಹಣವ ಬಗ್ಗೆ ಅವನು, ದರಮಹಾ ದರ ಸೇಕಡಾ ೧ ರುಪಾಯಿದಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಮೇಲ್ಕಂಡ ೧೦೦೦ ರುಪಾಯಿಗಳನ್ನು ಒಂದು ವರ್ಷದಲ್ಲಿ ಕೊಡಲಿಕ್ಕೆ ಒಪ್ಪಿಕೊಂಡು, ತಾರೀಖು ೨೫–೧೨–೧೯೨೩ನೇ ಇಸ್ವಿ ದಿವಸ ವಾದಿಗೆ ಒಂದು ಕತಿಬೆಯನ್ನು ಬರೆದು ಕೊಟ್ಟನು.

(೨) ಇದರಲ್ಲಿ ಪ್ರತಿವಾದಿಯು ಏನೂ ಕೊಟ್ಟಿಲ್ಲ.

(೩) ದಾವೆಯ ಕಾರಣವು ತಾರೀಖು ೨೫–೧೨–೧೯೨೪ನೇ ಇಸ್ವಿ ದಿವಸ ಉಂಟಾಯಿತು.

(೪) ದಾವೆ ಮಾಡುವ ಮುದ್ದತು ತಾರೀಖು ೨೫-೧೨-೧೯೬೭ನೇ ಇಸ್ವಿ ದಿವಸ ಮೀರಿತ್ತು. ಆದರೆ ಆ ದಿನ ಮತ್ತು ಅಂದನಿಂದ ಮುಂದೆ ತಾರೀಖು. ೪-೧-೧೯೨೮ನೇ ಇಸ್ವಿ ದಿವಸದ ವರೆಗೆ ಕೋರ್ಟು ಬಂದು ಇತ್ತು.

**ವಾದಿ ವಿನಂತಿ ಏನಂದರೆ:—**

ಅಸಲು ರುಪಾಯಿ ೧೦೦೦ ಮತ್ತು ಬಡ್ಡಿ ರುಪಾಯಿ ಅಂತು ರುಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೧೬

## ಸಾಲವೂ ತಬದಿಲು ಮಾಡಿಕೊಟ್ಟ ಮೇಲೆ

## ಸರನಾಮೆ

(೧) ಪ್ರತಿವಾದಿಯು ವಾದಿಯ ಬಳಿಯಲ್ಲಿ ತಾರೀಖು ೧೬-೭-೧೯೨೫ನೇ ಇಸ್ವಿ ದಿವಸ ೫೦೦ ರುಪಾಯಿಗಳನ್ನು ಸಾಲವಾಗಿ ತಕ್ಕೊಂಡು, ಅದರ ಬಗ್ಗೆ ಮಾಣಿಕಜಿ ಪಿತಾಂಬರ ಎಂಬುವವನಿಗೆ ಒಂದುಕತೆಜಿಯನ್ನು ಬರೆದು ಕೊಟ್ಟು, ದರ ಸಾಲು ದರ ಸೇಕಡಾ ೧೨ ರುಪಾಯಿಯಂತೆ ಬಡ್ಡಿಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಆರು ತಿಂಗಳದಲ್ಲಿ ಸದರಿ ಹಣವನ್ನು ತಿರಿಗಿ ಕೊಡಲಿಕ್ಕೆ ಒಪ್ಪಿಕೊಂಡನು.

(೨) ಸದರಿ ಕತಿಬೆಯ ಮೂಲಕಾ ಸಲ್ಲತಕ್ಕ ಯಾವತ್ತು ಸಾಲವನ್ನು ಸದರಿ ಮಾಣಿಕಜಿ ಪೀತಾಂಬರ ಎಂಬುವನು ತಾರೀಖು ೨೭-೨-೧೯೬೭ನೇ ದಿವಸ ದಸ್ತೈವಜುದಿಂದ ವಾದಿಗೆ ಪೂರ್ಣವಾಗಿ ತಬದಿಲು ಮಾಡಿಕೊಟ್ಟನು.

(೩) ಇದರಲ್ಲಿ ಪ್ರತಿವಾದಿಯು ಏನೂ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಅಸಲು ರುಪಾಯಿ ೫೦೦ ಮತ್ತು ಬಡ್ಡಿ ರುಪಾಯಿ ೧೫೦ ಅಂತು ೬೫೦ ರುಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

# ನಂಬರು ೧೭

## ಸಾಲವೂ ತಬದಿಲು ಮಾಡಿಕೊಟ್ಟ ಮೇಲೆ

## ಸರನಾಮೆ

(೧) ಇದರಲ್ಲಿ ೧ನೇ ಪ್ರತಿವಾದಿಯು ೨ನೇ ಪ್ರತಿವಾದಿಯ ಬಳಿಯಲ್ಲಿ ತಾರೀಖು ೧೬–೭–೧೯೨೬ನೇ ಇಸ್ವಿ ದಿವಸ ೫೦೦ ರೂಪಾಯಿಗಳನ್ನು ಸಾಲವಾಗಿ ತಕ್ಕೊಂಡು ಅದರ ಬಗ್ಗೆ ೨ನೇ ಪ್ರತಿವಾದಿಗೆ ಒಂದು ಕತಿಬೆಯನ್ನು ಬರೆದು ಕೊಟ್ಟು, ದರಸಾಲು ದರಶೇಕಡಾ ೧೨ ರುಪಾಯಿದಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಆರು ತಿಂಗಳದಲ್ಲಿ ಸದರಿ ಹಣ ತಿರಿಗಿ ಕೊಡಲಿಕ್ಕೆ ಒಪ್ಪಿಕೊಂಡನು.

(೨) ಸದರಿ ಕತಿಬೆಯ ಮೂಲಕ ಸಲ್ಲತಕ್ಕ ಯಾವತ್ತು ಸಾಲವನ್ನು ೨ನೇ ಪ್ರತಿವಾದಿಯು ತಾರೀಖು ೬–೮–೧೯೨೭ ನೇ ಇಸ್ವಿ ದಿವಸ ವಾದಿಗೆ ಪೂರ್ಣವಾಗಿ ತಬದಿಲು ಮಾಡಿಕೊಟ್ಟನು.

(೩) ಇದರಲ್ಲಿ ೧ ನೇ ಪ್ರತಿವಾದಿಯು ಏನೂ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

(ಅ) ಮುದ್ದಲು ರುಪಾಯಿ ೫೦೦ ಮತ್ತು ಬಡ್ಡಿ ರುಪಾಯಿ ೧೨೦ ಅಂತು ೬೨೦ ರುಪಾಯಿಗಳನ್ನು ೧ನೇ ಪ್ರತಿವಾದಿಯು ವಾದಿಗೆ ಕೊಡಬೇಕೆಂದು ಹುಕುಮು ಮಾಡಬೇಕು.

(ಬ) ಒಂದು ವೇಳೆ ಸದರಿ ಹಣದ ಪೈಕಿ ಯಾವದೇ ಭಾಗವನ್ನು ೧ನೇ ಪ್ರತಿವಾದಿಯು ೨ ನೇ ಪ್ರತಿವಾದಿಗೆ ಕೊಟ್ಟದ್ದು ಅವನು ಸಾಬೀತು ಮಾಡಿದ್ದಲ್ಲಿ; ಆ ಭಾಗವೂ ೨ ನೇ ಪ್ರತಿವಾದಿಗೆ ಕೊಟ್ಟ ತಾರೀಖಿನಿಂದ ದರಸಾಲು ದರಶೇಕಡಾ ೧೨ ರುಪಾಯಿದಂತೆ ಅದನ್ನು ಬಡ್ಡಿ ಸಹಿತವಾಗಿ ೨ ನೇ ಪ್ರತಿವಾದಿಯು

ವಾದಿಗೆ ಕೊಡಬೇಕಂತಾ ಹುಕುಮು ಮಾಡಬೇಕು. ಮತ್ತು ಅಷ್ಟು ರಕಮು ಮೇಲೆ (೨) ಕಲಮಿನಲ್ಲಿ ಬೇಡಿದ ರಕಮಿನಲ್ಲಿ ವಜಾ ಕಳಿಯುಬೇಕು.

## ನಂಬರು ೧೮

### ಪಂಚಾಯತಿಯ ನಿವಾಡೆಯ ಆಧಾರದಿಂದ

### ಸರನಾಮೆ

(೧) ವಾದಿಯು ಎಣ್ಣಿಯ ೧೫೦೦ ಪೀಪುಗಳ ಕ್ರಯವನ್ನು ತಾರೀಖು ೧೫-೪-೧೯೨೮ ನೇ ಇಶ್ವಿ ದಿವಸ ಬೇಡಲಾಗಿ ಅದನ್ನು ಪ್ರತಿವಾದಿಯು ಕೊಡಲಿಕ್ಕೆ ನಿರಾಕರಿಸಿದ್ದರಿಂದ ವಾದಿ ಪ್ರತಿವಾದಿಗಳಲ್ಲಿ ತಕರಾರು ಉಂಟಾಗಿ, ಅವರಿಬ್ಬರು ಆ ತಕರಾರನ್ನು ಭೀಮರಾವ ಅನಂತ ದೇಸಾಯಿ ಮತ್ತು ಧೀರೇಂದ್ರ ಕೃಷ್ಣ ಆಲೂರ ಎಂಬ ಇಬ್ಬರು ಪಂಚರ ನಿವಾಡೆಗಾಗಿ ನೇಮಿಸಿಕೊಡಲಿಕ್ಕೆ ಬರಹ ಮೂಲಕವಾಗಿ ಒಡಂಬಟ್ಟರು.

(೨) ಪ್ರತಿವಾದಿಯು ವಾದಿಗೆ ೨೫೦೦ ರುಪಾಯಿಗಳನ್ನು ಕೊಡಬೇಕೆಂದು ಸದರೀ ಪಂಚರು ತಾರೀಖು ೧೫-೫-೧೯೨೮ ನೇ ಇಶ್ವಿ ದಿವಸ ನಿವಾಡೆಯನ್ನು ಮಾಡಿದರು.

(೩) ಪ್ರತಿವಾದಿಯು ಆ ಹಣ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

ಪ್ರತಿವಾದಿಯ ಕಡಿಂದ ೨೫೦೦ ರೂಪಾಯಿಗಳನ್ನು ಕೊಡಿಸಬೇಕು.

## ನಂಬರು ೧೯

### ಪಂಚಾಯತಿಯ ನಿವಾಡೆಯ ಆಧಾರದಿಂದ

### ( ಸರನಾಮೆ )

(೧) ವಾದಿ ಪ್ರತಿವಾದೀಯು ಅವಿಭಕ್ತ ಹಿಂದು ಕುಟುಂಬದ ದಾಯಾದಿಗಳಿದ್ದು ಯಾವದೋ ಕಾರಣದಿಂದ ಅವರಲ್ಲಿ ಕಲಹ ಉಂಟಾಗಿದ್ದರಿಂದ ಅವರವರು

ಕೂಡಿ ನಡೆಯುವದು ಅಶಕ್ಯವಾಯಿತು. ಮತ್ತು ಅವರ ಫೌರಾಣೇದ ಸ್ಥಾವರ ಜಂಗಮ ಆಸ್ತಿಗಳಲ್ಲಿ ಹಿಶೆ ಮಾಡುವದರಲ್ಲಿ ಅವರಲ್ಲಿ ತಕರಾರು ಉದ್ಭವಿಸಿತು. ವಾದಿ ಪ್ರತಿವಾದೇರು ಆ ತಕರಾರನ್ನು ನರಸಿಂಗರಾವ ಗೋಖಲೆ ಮತ್ತು ನರಶಿಂಗ ರಾವ ದೇಸಾಯಿ ಮತ್ತು ಗೋಪಾಳರಾವ ಭಾಟೆ ಎಂಬ ಪಂಚರ ನಿವಾಡೆಗಾಗಿ ನೇಮಿಸಿ ಕೊಡಲಿಕ್ಕೆ ತಾರೀಖು ೧೫–೩–೧೯೨೭ನೇ ಇಶ್ವಿ ದಿವಸ ಬರಹ ಮೂಲಕವಾಗಿ ಒಡಂಬಟ್ಟರು.

(೨) ವಾದಿಯ ಹಿಶೇಕ್ಕೆ ಕೆಳಗೆ ವರ್ಣಿಸಿದ ಆಸ್ತಿಗಳನ್ನು ಕೊಟ್ಟಿದೆಂದು ಮತ್ತು ಪ್ರತಿವಾದಿಯು ವಾದಿಗೆ ಅವುಗಳ ಕಬಜೆಯನ್ನು ಕೊಡಬೇಕೆಂದು ಸದರೀ ಪಂಚರು ತಾರೀಖು ೧೪–೪೧೯೨೭ನೇ ಇಶ್ವಿದಿವಸ ನಿವಾಡೆಯನ್ನು ಮಾಡಿದರು.

ಸದರಿ ಆಸ್ತಿಗಳ ವರ್ಣನೆ:—

೧. . . . . .

೨. . . . . .

(೩) ಪ್ರತಿವಾದಿಯು ಸದರಿ ಆಸ್ತಿಗಳ ಕಬಜಿಯನ್ನು ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

ಪ್ರತಿವಾದಿಯು ಕಡಿಂದ ಮೇಲ್ಕಂಡ ಆಸ್ತಿಗಳ ಕಬಜೆಯನ್ನು ಮತ್ತು ಸದರಿ ಆಸ್ತಿಗಳ ಕಬ್ಜಾ ಆಗುವವರೆಗೆ ದರಮ್ಯಾನ ಉತ್ಪನ್ನವನ್ನು ವಾದಿಗೆ ಕೊಡಿಸಬೇಕು.

## ನಂಬರು ೨೦

## ಪರಕೀಯ ಫೈಸಲಿನ ಆಧಾರದಿಂದ

## ಸರನಾಮೆ

(೧) ಜಮಖಂಡಿ ಸಂಸ್ಥಾನದ ಕುಂದಗೋಳ ಮುನಸಫ್ ಕೋರ್ಟಿನಲ್ಲಿ ವಾದಿಗೂ ಪ್ರತಿವಾದಿಗೂ ನಡೆದ ದಾವೆಯಲ್ಲಿ (ಲಾ. ಅಸಲು ನ. ೩೪೫/೧೯೨೭ ನೇದರಲ್ಲಿ)

ಸದರೀ ಕೋರ್ಟಿನವರು ತಾರೀಖು ೧೨–೧೦–೧೯೨೮ನೇ ಇಶ್ವಿ ದಿವಸ ಪ್ರತಿ ವಾದಿಯು ವಾದಿಗೆ ೧೫೦೦ ರೂಪಾಯಿಗಳನ್ನು ಸದರೀ ತಾರೀಖಿನಿಂದ ದರಮಹಾ ದರಶೇಕಡಾ ೧ ರುಪಾಯಿದಂತೆ ಬಡ್ಡಿ ಸಹಿತವಾಗಿ ಕೊಡಬೇಕೆಂದು ನಿರ್ಣಯಿ ಸಿದರು.

(೨) ಪ್ರತಿವಾದಿಯು ಆ ಹಣ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

ಪ್ರತಿವಾದಿ ಕಡಿಂದ ಮೇಲ್ಕಂಡ ೧೫೦೦ ರೂಪಾಯಿಗಳನ್ನು ಮತ್ತು ಬಡ್ಡಿ ಬಾಬತು ೩೦೦ ರೂಪಾಯಿಗಳನ್ನು ಅಂತು ೧೮೦೦ ರೂಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ವಾದಿಗೆ ಕೊಡಿಸಬೇಕು.

## ನಂಬರು ೨೧

### ವಾರಸದಾರನ ಮೇಲೆ ದಾವೆಯು

### ಸರನಾಮೆ

(೧) ಪ್ರತಿವಾದಿಯು ಮಯತ **ಅ, ಬ** ಎಂಬುವವನ ಖಾಸ ಮಗನಾಗಿರುತ್ತಾನೆ. ಸದರೀ ಮಯತ **ಅ, ಬ** ಎಂಬುವವನು ಮತ್ತು ಪ್ರತಿವಾದಿಯು ಅವಿಭಕ್ತ ಹಿಂದು ಕುಟುಂಬದ ದಾಯಾದಿ ಗಳಾಗಿದ್ದರು. ಮತ್ತು ಸದರೀ ಅವರು ಅವಿಭಕ್ತತನದಲ್ಲಿರುತ್ತಾ ಸದರೀ **ಅ, ಬ** ಇವನು ತಾರೀಖು ... ಇಶ್ವಿ ದಿವಸ ಮೃತಪಟ್ಟನು. ಸದರೀ ಅವಿಭಕ್ತ ಕುಟುಂಬದ ಸೊತ್ತನ್ನು ಪ್ರತಿವಾದಿಯು ವಶವಲ್ಲಿದೆ.

(೨) ತಾರೀಖು ೧೮–೪–೧೯೨೮ನೇ ಇಶ್ವಿ ದಿವಸ ಸದರೀ **ಅ, ಬ** ಎಂಬುವವನು ವಾದಿ ಬಳಿಯಲ್ಲಿ ೫೦೦ ರುಪಾಯಿಗಳನ್ನು ಸಾಲವಾಗಿ ತೆಗೆದು ಕೊಂಡು ಆ ಬಗ್ಗೆ ಒಂದು ದಸ್ತೈವಜನ್ನು ಬರೆದುಕೊಟ್ಟು ಸದರೀ ರಕಮನ್ನು

ದರಸಾಲು ದರಶೇಕಡಾ ೧೨ ರುಪಾಯಿಯಂತೆ ಬಡ್ಡಿ ಸಹಿತವಾಗಿ ಆರು ತಿಂಗಳನಲ್ಲಿ ಪೆರತ ಕೊಡಲಿಕ್ಕೆ ವಾದಿ ಕೂಡಾ ಕರಾರು ಮಾಡಿಕೊಂಡನು.

(೩) ಇದರಲ್ಲಿ ಏನೂ ವಸೂಲ ಬಂದಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

ಮುದ್ದಲು ೫೦೦ ರುಪಾಯಿ ಮತ್ತು ಬಡ್ಡಿ ೧೨೦ ರುಪಾಯಿ ಅಂತು ೬೨೦ ರುಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಪ್ರತಿವಾದಿ ವಶದಲ್ಲಿರುವ ಅವನ ಮತ್ತು ಮಯುತ **ಅ, ಬ** ಎಂಬುವವನ ಅವಿಭಕ್ತ ಘರಾಣೇದ ಸೊತ್ತಿನ ಮೇಲಿಂದ ವಾದಿಯು ವಸೂಲು ಮಾಡಬೇಕೆಂದು ಹುಕುಮನಾಮೆ ಮಾಡಬೇಕು.

## ನಂಬರು ೨೨

### ವಾರಸದಾರನ ಮೇಲೆ ದಾವೆಯು

### ಫರನಾಮೆ

(೧) ೧ನೇ ಪ್ರತಿವಾದಿಯು ಮಯುತ ... ಎಂಬುವವನ ಮಗನಾಗಿರುತ್ತಾನೆ. ಮತ್ತು ೨ನೇ ಪ್ರತಿವಾದಿಯನ್ನು ಸದರೀ ಎಂಬುವವನ ಮಯುತ ಮಗನಾದ ... ಎಂಬುವವನ ವಿಧವೆಯಾಗಿ ದ್ದಾಳೆ.

(೨) ಸದರೀ ಮಯುತ ಎಂಬುವವನು ವಾದಿ ಬಳಿಯಲ್ಲಿ ೫೦೦ ರೂಪಾಯಿಗಳನ್ನು ತಾರೀಖು ೧೬-೭-೧೯೨೭ನೇ ಇಸ್ವಿ ದಿವಸ ತೆಗೆದು ಕೊಂಡು ಆ ಬಗ್ಗೆ ವಾದಿಗೆ ಒಂದು ಕತಿಬೆಯನ್ನು ಬರೆದು ಕೊಟ್ಟು ದರಸಾಲು ದರಸೇಕಡಾ ೧೨ ರುಪಾಯಿಯಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಆರು ತಿಂಗಳಲ್ಲಿ ಸದರೀ ಹಣ ತಿರುಗಿ ಕೊಡಲಿಕ್ಕೆ ಒಪ್ಪಿಕೊಂಡನು.

(೩) ಸದರೀ ... ಎಂಬುವವನು ತಾರೀಖು ೨೮-೩-೧೯೨೯ ನೇ ಇಶ್ವಿ ದಿವಸ ಮೃತಪಟ್ಟನು. ಸದರೀ ಅವನು ಮೃತವಾದ ನಂತರ ಅವನ ಸೊತ್ತನ್ನು ಪ್ರತಿವಾದೇರ ವಶಕ್ಕೆ ಸೇರಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ಮುದ್ದಲು ರೂಪಾಯಿ ೫೦೦ ಬಡ್ಡಿ ರುಪಾಯಿ ೧೨೦ ಅಂತು ೬೨೦ ರೂಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಪ್ರತಿವಾದೇರ ವಶದಲ್ಲಿರುವ ಮೇಲ್ಕಂಡ ಮಯತ ... ಎಂಬುವವನ ಸ್ವತ್ತಿನ ಮೇಲಿಂದ ವಾದಿಯು ವಸೂಲ ಮಾಡಬೇಕೆಂದು ಹುಕುಮನಾಮೆ ಮಾಡಬೇಕು.

## ನಂಬರು ೨೩

## ಅನ್ಯಾಯವಾಗಿ ನೌಕರಿಯೊಳಗಿಂದ ತೆಗೆದ ಬಾಬತು

## ಸರನಾಮೆ,

(೧) ವಾದಿಯು (ಲೆಕ್ಕವಿಡುವ ಕಾರಕೂನನಾಗಲೀ ಯಾ ಫೋರಮನನಾಗಲೀ ಯಾ ಪ್ರಸಕ್ತಿ ಇದ್ದಂತೆ) ಪ್ರತಿವಾದಿಯು ನೌಕರಿಯನ್ನು ಮಾಡಬೇಕೆಂತಲೂ, ಪ್ರತಿವಾದಿಯು ವಾದಿಯನ್ನು ಸದರೀ ಪ್ರಕಾರ ಒಂದು ವರ್ಷದ ಮುದ್ದತಿನ ವರೆಗೆ ನೌಕರಿಗೆ ಇಟ್ಟುಕೊಂಡು, ಅವನಿಗೆ ತಿಂಗಳಿಗೆ ೫೦ ರುಪಾಯಿಯಂತೆ ಸಂಬಳ ಕೊಡಬೇಕೆಂತಲೂ, ತಾರೀಖು ೧೦-೪-೧೯೨೮ನೇ ಇಶ್ವಿ ದಿವಸ ವಾದಿ ಪ್ರತಿವಾದಿಗಳು ತಮ್ಮೊಳಗೆ ಕರಾರು ಮಾಡಿಕೊಂಡರು.

(೨) ವಾದಿಯು ತಾರೀಖ ೧೫-೪-೧೯೨೮ ನೇ ಇಶ್ವಿ ದಿವಸ ಪ್ರತಿವಾದಿಯು ನೌಕರನಾದನು. ಮತ್ತು ಸದರೀ ವರ್ಷದ ಉಳಿದ ಮುದ್ದತು ತೀರುವ ವರೆಗೆ ಆ ನೌಕರಿಯನ್ನು ಮಾಡಲಿಕ್ಕೆ ಅಂದಿನಿಂದ ಯಾವಾಗಲೂ ಮತ್ತು ಈಗಲೂ ಸಿದ್ಧನಾಗಿಯೂ ಸಮ್ಮತಿಯುಳ್ಳವನಾಗಿಯೂ ಇರುತ್ತಾನೆ; ಈ ಸಂಗತಿಯು ಪ್ರತಿವಾದಿಗೆ ಯಾವಾಗಲೂ ತಿಳಿದಿತ್ತು.

(೩) ಪ್ರತಿವಾದಿಯು ತಾರೀಖು ೧೫-೧೦-೧೯೨೮ನೇ ಇಸ್ವಿ ದಿವಸ ಅನ್ಯಾಯದಿಂದ ವಾದಿಯನ್ನು ನೌಕರಿಯಿಂದ ತೆಗೆದು, ಮೇಲೆ ಹೇಳಿದಂತೆ ಮುಂದೆ ನೌಕರಿಯನ್ನು ಮಾಡಿಸಿಕೊಳ್ಳಲಿಕ್ಕೂ ಆ ನೌಕರಿಗಾಗಿ ಸಂಬಳ ಕೊಡಲಿಕ್ಕೂ ನಾಕಾರಿಸಿದನು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಪ್ರತಿವಾದಿ ಕಡಿಂದ        ರುಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಕೊಡಿಸಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೨೪

## ನೌಕರಿಯೂ ಸಾಹಿತ್ಯಗಳೂ ಇವುಗಳ ಯೋಗ್ಯವಾದ ಬೆಲೆಯ ಬಾಬತು.

### ಸರನಾಮೆ

(೧) ತಾರೀಖು ೧೬-೫-೧೯೨೭ನೇ ಇಸ್ವಿ ದಿವಸ ವಾದಿಯು ಪ್ರತಿವಾದಿಯ ಹೇಳಿಕೆಯಿಂದ ಪ್ರತಿವಾದಿಗಾಗಿ ( ... ಊರಲ್ಲಿ ನಂಬರಿನ ಮನೆಯೆಂದು ಪ್ರಸಿದ್ಧವಾದ) ಒಂದು ಮನೆಯನ್ನು ಕಟ್ಟಿದನು, ಮತ್ತು ಅದಕ್ಕೆ ಬೇಕಾದ ಸಾಹಿತ್ಯಗಳನ್ನು ತಂದು ಕೊಟ್ಟನು; ಅವರೆ ಈ ಕೆಲಸಕ್ಕಾಗಿಯೂ ಸಾಹಿತ್ಯಗಳಿಗಾಗಿಯೂ ಕೊಡತಕ್ಕ ರಕಮಿನ ಬಾಬತು ಸ್ಪಷ್ಟವಾದ ಕರಾರು ಆಗಿರಲಿಲ್ಲ.

(೨) ಮಾಡಿದ ಕೆಲಸಕ್ಕಾಗಿಯೂ ತಂದುಕೊಟ್ಟ ಸಾಹಿತ್ಯಗಳಿಗಾಗಿಯೂ ಸಲ್ಲತಕ್ಕ ಯೋಗ್ಯವಾದ ಬೆಲೆಯು ೨೫೦೦ ರುಪಾಯಿಯಾಗಿದೆ.

(೩) ಪ್ರತಿವಾದಿಯು ಆ ಹಣವನ್ನು ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಪ್ರತಿವಾದಿ ಕಡಿಂದ ೨೫೦ ರೂಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಕೊಡಿಸಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೨೫

## ಯೋಗ್ಯ ಕಿಮ್ಮತ್ತಿಗೆ ಮಾಡಿದ ನೌಕರಿಯ ಬಾಬತು

### ಸರನಾಮೆ

(೧) ತಾರೀಖು ೧೪–೪–೧೯೨೫ನೇ ಇಸ್ವಿ ದಿವಸದಿಂದ ತಾರೀಖು ೨೪–೧೦–೧೯೨೫ನೇ ಇಸ್ವಿ ದಿವಸದ ವರೆಗೆ ವಾದಿಯು ಪ್ರತಿವಾದಿಯ ಹೇಳಿಕೆಯಿಂದ ಪ್ರತಿವಾದಿಗಾಗಿ ಕಿರುಕುಳ ಚಿತ್ರಗಳನ್ನೂ, ನಕ್ಷೆಗಳನ್ನೂ, ಆಕೃತಿಗಳನ್ನೂ ಬರೆದನು. ಆವರೆ ನೌಕರಿಗಾಗಿ ಕೊಡತಕ್ಕ ಹಣದ ಬಾಬತು ಸ್ಪಷ್ಟವಾದ ಕರಾರು ಮಾಡಿರಲಿಲ್ಲ.

(೨) ಸದರಿ ನೌಕರಿಯ ಯೋಗ್ಯ ಕಿಮ್ಮತ್ತು ೧೮೦ ರೂಪಾಯಿ ಆಗಿದೆ.

(೩) ಪ್ರತಿವಾದಿಯು ಆ ಹಣ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ಪ್ರತಿವಾದಿ ಕಡಿಂದ ೧೮೦ ರೂಪಾಯಿಗಳನ್ನು ಬಡ್ಡಿ ಸಹಿತವಾಗಿ ಕೊಡಿಸಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೨೬

## ನೌಕರಿಯನ್ನು ಮಾಡುವ ಕರಾರು ಮುರಿದ ಬಾಬತು

### ಸರನಾಮೆ

(೧) ವಾದಿಯು ಪ್ರತಿವಾದಿಗೆ ವರ್ಷಕ್ಕೆ ೩೬೦ ರೂಪಾಯಿಯಂತೆ ಮುಟ್ಟಿಸಿ ಅವನನ್ನು ನೌಕರಿಗೆ ಇಟ್ಟುಕೊಳ್ಳಬೇಕೆಂತಲೂ, ಪ್ರತಿವಾದಿಯು

(ಕೈಗಾರಿಕೆಯುವನು) ಆಗಿ ಒಂದು ವರ್ಷದವರೆಗೆ ವಾದಿಯ ನೌಕರಿಯನ್ನು ಮಾಡ ಬೇಕೆಂತಲೂ ತಾರೀಖು ೧–೨–೧೯೨೮ನೇ ಇಸ್ವಿ ದಿವಸ ವಾದಿ ಪ್ರತಿವಾದಿಗಳು ತಮ್ಮೊಳಗೆ ಕರಾರು ಮಾಡಿಕೊಂಡರು.

(೨) ವಾದಿಯು ತನಗೆ ಸಂಬಂಧಿಸಿದಷ್ಟು ಸದರಿ ಕರಾರಿನ ಭಾಗವನ್ನು ಕಡೆಗಾಣಿಸಲಿಕ್ಕೆ ಯಾವಾಗಲೂ ಸಿದ್ಧನಾಗಿಯೂ ಸಮ್ಮತಿಯುಳ್ಳವನಾಗಿಯೂ ಇರುತ್ತಾನೆ. ಮತ್ತು ತಾರೀಖು ೧–೨–೧೯೨೯ನೇ ಇಸ್ವಿ ದಿವಸ ಹಾಗೆ ಮಾಡು ತ್ತೇನೆಂದು ಪ್ರತಿವಾದಿಗೆ ಹೇಳಿದನು.

(೩) ಪ್ರತಿವಾದಿಯು ಸದರೀ ದಿವಸ ವಾದಿಯ ನೌಕರಿಯನ್ನು ಆರಂಭಿ ಸಿದನು. ಆದರೆ ಆ ಮೇಲೆ ತಾರೀಖು ೧೫–೫–೧೯೨೮ನೇ ಇಸ್ವಿ ದಿವಸ ಅವನು ಮೇಲೆ ಬರದಂತೆ ವಾದಿಯ ನೌಕರಿಯನ್ನು ಮಾಡಲಿಕ್ಕೆ ನಾಕಾರಿಸಿದನು.

( ಬೇಡತಕ್ಕ ನ್ಯಾಯಾಶ್ರಯವು ಬರೆಯಬೇಕು ).

## ನಂಬರು ೨೬

### ಗೊತ್ತುಪಡಿಸಿದ ಬೆಲೆಗೆ ಮಾರಿ ಒಪ್ಪಿಸಲ್ಪಟ್ಟ ಮಾಲಿನ ಬಾಬತು

### ಸರನಾಮೆ

(೧) ವಾದಿಯು ತಾರೀಖು ೧೬–೭–೧೯೨೭ನೇ ಇಸ್ವಿ ದಿವಸ ಹಿಟ್ಟಿನ ೧೦೦ ಪೀಪುಗಳನ್ನು ( ಅಥವಾ ಇದಕ್ಕೆ ಜೋಡಿಸಿದ ಫೇರಿಸ್ತನಲ್ಲಿ ಕಾಣಿಸಿದ ಮಾಲನ್ನು ಯಾ ಕಿರಕುಳ ಮಾಲನ್ನು ) ಪ್ರತಿವಾದಿಗೆ ಮಾರಿ ಒಪ್ಪಿಸಿದನು.

(೨) ಸದರಿ ಮಾಲು ಒಪ್ಪಿಸಿಕೊಂಡ ಕೂಡಲೇ ( ಯಾ ತಾರೀಖು ... ... ... ... ದಿವಸ ಎಂದರೆ ಅಸಲರ್ಜಿಯನ್ನು ದಾಖಲುಮಾ ಡುವ ಪೂರ್ವದಲ್ಲಿ ಯಾವದೊಂದು ದಿವಸ ) ಅದರ ಬಗ್ಗೆ ೫೦೦ ರೂಪಾಯಿಗ ಳನ್ನು ಕೊಡಲಿಕ್ಕೆ ಪ್ರತಿವಾದಿಯು ಒಡಂಬಟ್ಟನು.

(೩) ಆ ಹಣವನ್ನು ಅವನು ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಅಸಲು ೫೦೦ ರೂಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಸಿಗಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೨೮

## ಗೊತ್ತುಪಡಿಸಿದ ಬೆಲೆಗೆ ಮಾರಿ ಒಪ್ಪಿಸಲ್ಪಟ್ಟ ಮಾಲಿನ ಬಾಬತು ಸರನಾಮೆ

(೧) ತಾರೀಖು ೧೬–೭–೧೯೨೭ನೇ ಇಸ್ವಿ ದಿವಸ ದಾನಪ್ಪಾ ಗಂಗಪ್ಪಾ ಕೆಲಸಂಗದ ಎಂಬುವವನು ಇದಕ್ಕೆ ಜೋಡಿಸಿದ ಫೇರಿಸ್ತಿನಲ್ಲಿ ಕಾಣಿಸಿದ ಮಾಲನ್ನು ಪ್ರತಿವಾದಿಗೆ ಮಾರಿ ಒಪ್ಪಿದನು.

(೨) ಸದರಿ ಮಾಲು ಒಪ್ಪಿಸಿಕೊಂಡ ಕೂಡಲೇ ಅದರ ಬಗ್ಗೆ ೫೦೦ ರೂಪಾಯಿಗಳನ್ನು ಕೊಡಲಿಕ್ಕೆ ಪ್ರತಿವಾದಿಯು ಒಡಂಬಟ್ಟನು.

(೩) ಆ ಹಣವನ್ನು ಅವನು ಕೊಟ್ಟಿಲ್ಲ.

(೪) ದಾನಪ್ಪಾ ಗಂಗಪ್ಪಾ ಕೆಲಸಂಗದ ಎಂಬುವವನು ತಾರೀಖು ... ದಿವಸ ತೀರಿಕೊಂಡನು; ಅವನು ತನ್ನ ಕೊನೆಯ ಮೃತ್ಯುಪತ್ರದ ಮೇಲಿಂದ ತನ್ನ ಅಣ್ಣನನ್ನು ಎಂದರೆ ವಾದಿಯನ್ನು ಆ ಮೃತ್ಯುಪತ್ರ ನಡೆಯಿಸುವ ಕೆಲಸಕ್ಕೆ ನೇಮಿಸಿದನು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಸದರೀ ದಾನಪ್ಪಾ ಗಂಗಪ್ಪಾ ಕೆಲಸಂಗದ ಎಂಬುವವನ ಮೃತ್ಯುಪತ್ರ ನಡೆಯಿಸುವವನಾಗಿ, ವಾದಿಯು ೫೦೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೨೯

### ಯೋಗ್ಯ ಬೆಲೆಗೆ ಮಾರಿ ಒಪ್ಪಿಸಲ್ಪಟ್ಟ ಮಾಲಿನ ಬಾಬತು

ಸರನಾಮೆ

(೧) ವಾದಿಯು ತಾರೀಖು ೧೮–೪–೧೯೨೫ನೇ ಇಶ್ವಿ ದಿವಸ ಮನೆತನದ ಕಿರುಕುಳ ಸಾಮಾನಗಳನ್ನು ಪ್ರತಿವಾದಿಗೆ ಮಾರಿ ಒಪ್ಪಿಸಿದನು; ಆದರೆ ಬೆಲೆಯು ವಿಷಯವಾಗಿ ಸ್ಪಷ್ಟವಾದ ಕರಾರು ಆಗಲಿಲ್ಲ.

(೨) ಆ ಸಾಮಾನುಗಳ ಯೋಗ್ಯ ಕ್ರಯವು ೬೭೫ ರೂಪಾಯಿ ಆಗಿತ್ತು.

(೩) ಪ್ರತಿವಾದಿಯು ಆ ಹಣವನ್ನು ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೬೭೫ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೦

### ಪ್ರತಿವಾದಿಯ ಹೇಳಿಕೆಯಿಂದ ತಯಾರು ಮಾಡಲ್ಪಟ್ಟು ಅವನಿಂದ ಸ್ವೀಕರಿಸಲ್ಪಡದಂಥ ಮಾಲಿನ ಬಾಬತು

ಸರನಾಮೆ

(೧) ತಾರೀಖು ೧೬–೮–೧೯೨೫ನೇ ಇಶ್ವಿ ದಿವಸ ಪ್ರತಿವಾದಿಯು ತನ್ನ ಸಲುವಾಗಿ ವಾದಿಗೆ ಆರು ಟೇಬಲ್‌ಗಳನ್ನು, ಐವತ್ತು ಖುರ್ಚಿಗಳನ್ನು ಮಾಡ ಹೇಳಿ ಅವುಗಳನ್ನು ತನಗೆ ಒಪ್ಪಿಸಿದ ಕೂಡಲೇ ಅವುಗಳ ಬಗ್ಗೆ ೪೦೦ ರೂಪಾಯಿ ಗಳನ್ನು ಕೊಡುತ್ತೇನೆಂದು ವಾದಿಯ ಸಂಗಡ ಕರಾರು ಮಾಡಿದನು.

(೨) ವಾದಿಯು ಸದರೀ ಸಾಮಾನು ಮಾಡಿ, ತಾರೀಖು ೧೫–೯–೧೯೨೫ ನೇ ಇಶ್ವಿ ದಿವಸ ಪ್ರತಿವಾದಿಗೆ ಒಪ್ಪಿಸಲಿಕ್ಕೆ ಹೋದನು, ಮತ್ತು ಅಂದಿನಿಂದ

ಬೇಕಾದಾಗ ಅದನ್ನು ಒಪ್ಪಿಸಲಿಕ್ಕೆ ಸಿದ್ಧನಾಗಿಯೂ ಸಮ್ಮತಿಯುಳ್ಳವನಾಗಿಯೂ ಇರುತ್ತಾನೆ.

(೩) ಪ್ರತಿವಾದಿಯು ಆ ಸಾಮಾನು ತೆಗೆದುಕೊಳ್ಳಲಿಲ್ಲ, ಅಥವಾ ಅದರ ಬೆಲೆಯನ್ನು ಕೊಡಲಿಲ್ಲ. ಇದರ ಮೂಲಕ ವಾದಿಗೆ ೧೦೫ ರೂಪಾಯಿ ಲುಕ್ಸಾನವಾಯಿತು. ಅದರ ತಪಶೀಲು.

೧೦೦ ॥ ೦ ॥ ಮೇಲಿನ ಮಾಲು ೩೦೦ ರೂಪಾಯಿಗಳಿಗೆ ಕ್ರಯವಾಯಿತು; ಕಾರಣ ಅದರಿಂದ ೧೦೦ ರೂಪಾಯಿಗಳ ಲುಕ್ಸಾನವಾಯಿತು.

೫ ॥ ೦ । ಸದರಿ ಮಾಲು ಪ್ರತಿವಾದಿಗೆ ಒಪ್ಪಿಸಲಿಕ್ಕೆ ಒಯ್ಯುವ ವೇಳೆಗೆ ಆದ ವೆಚ್ಚ.

ಅಂತು ೧೦೫ ರೂಪಾಯಿಗಳನ್ನು

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೧೦೫ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೧

## ( ಲಿಲಾವಿನಲ್ಲಿ ಮಾರಿದ ಮಾಲು ) ಪುನಃ ಮಾರಿದಲ್ಲಿ ಬಂದ ಕಡಿಮೆಯ ಬಾಬತು

## ಸರನಾಮೆ

(೧) ತಾರೀಖು ೧೬–೮–೧೯೨೫ನೇ ಇಸ್ವಿ ದಿವಸ ವಾದಿಯು ಕಿರುಕುಳ (ಜಿನಸುಗಳನ್ನು) ಲಿಲಾವಿಗೆ ಹಾಕಿದನು. ಕೊಳ್ಳುವವನು ಹತ್ತು ದಿವಸಗಳಲ್ಲಿ ಕ್ರಯ ಕೊಟ್ಟು ಕೊಂಡ ಜಿನಸುಗಳನ್ನು ಒಯ್ಯದಿದ್ದರೆ ಆ ಜಿನಸುಗಳು

ಅವನ ಲೆಕ್ಕದಲ್ಲಿ ಪುನಃ ಲಿಲಾವಿನಿಂದ ಮಾರಲ್ಪಡುವವೆಂಬ ಶರತು ಆ ಲಿಲಾವಿನಲ್ಲಿ ಮಾಡಲ್ಪಟ್ಟಿರುತ್ತಿದ್ದು, ಪ್ರತಿವಾದಿಗೆ ಈ ಶರತು ತಿಳಿದಿತ್ತು.

(೨) ಪ್ರತಿವಾದಿಯು ಸದರೀ ಲಿಲಾವಿನಲ್ಲಿ ೧೫೦ ರೂಪಾಯಿಗೆ ಒಂದು ಸುಣ್ಣಿನ ಪಾತ್ರೆಗಳ ಬುಟ್ಟಿಯನ್ನು ಕೊಂಡನು.

(೩) ಅದನ್ನು ವಾದಿಯು ಮಾರಾಟದ ದಿವಸ ಮತ್ತು ಅಂದಿನಿಂದ ಹತ್ತು ದಿವಸಗಳ ವರೆಗೆ ಪ್ರತಿವಾದಿಯ ಕೈಗೆ ಕೊಡಲಿಕ್ಕೆ ಸಿದ್ಧನಾಗಿಯೂ ಸಮ್ಮತಿಯುಳ್ಳವನಾಗಿಯೂ ಇದ್ದನು.

(೪) ಪ್ರತಿವಾದಿಯು ತಾನು ಕೊಂಡ ಸದರೀ ಜಿನಸನ್ನು ಒಯ್ಯಲಿಲ್ಲ. ಮತ್ತು ವಿಕ್ರಯವಾದಂದಿನಿಂದ ಹತ್ತು ದಿವಸಗಳಲ್ಲಿ ಯಾ ಅದರ ಅನಂತರ ಅವುಗಳ ಬಗ್ಗೆ ಕ್ರಯ ಕೊಡಲಿಲ್ಲ.

(೫) ವಾದಿಯು ತಾರೀಖು ೧-೯-೧೯೨೫ನೇ ಇಸ್ವಿ ದಿವಸ ಸದರೀ ಜಿನಸುಗಳನ್ನು ಪ್ರತಿವಾದಿಯ ಲೆಕ್ಕದಲ್ಲಿ ೧೦೦ ರೂಪಾಯಿಗೆ ಜಾಹೀರ ಲಿಲಾವಿನಲ್ಲಿ ಪುನಃ ಮಾರಿದನು.

(೬) ಆ ಎರಡನೇ ಲಿಲಾವಿಗೆ ೧೫ ರೂಪಾಯಿ ವೆಚ್ಚವಾಯಿತು.

(೭) ಈ ಪ್ರಕಾರ ಉಂಟಾದ ಕಡಿಮೆಯು [ಅಥವಾ ನ್ಯೂನತ್ವವನ್ನು ೬೫ ರೂಪಾಯಿಯಾಗುತ್ತಿದ್ದು, ಪ್ರತಿವಾದಿಯು ಆ ಹಣವನ್ನು ಕೊಡಲಿಲ್ಲ

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೬೫ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೨

## ಮಾರಿದ ಮಾಲು ಒಪ್ಪಿಸದಿದ್ದ ಬಾಬತು

## ಸರನಾಮೆ

(೧) ಪ್ರತಿವಾದಿಯು ತಾರೀಖು ೧೯-೫-೧೯೨೪ನೇ ಇಸ್ವಿ ದಿವಸ ಹಿಟ್ಟಿನ ನೂರು ಪೀಪುಗಳನ್ನು ಒಪ್ಪಿಸಬೇಕೆಂತಲೂ ವಾದಿಯು ಅವುಗಳಿಗಾಗಿ ೫೦೦

ರೂಪಾಯಿಗಳನ್ನು, ಆ ಪೀಪುಗಳನ್ನು ಒಪ್ಪಿಸಿಕೊಂಡ ಬಳಿಕ ಕೊಡಬೇಕೆಂತಲೂ ತಾರೀಖು ೫-೫-೧೯೨೮ನೇ ಇಸ್ವಿ ದಿವಸ ವಾದಿ ಪ್ರತಿವಾದಿಗಳು ತಮ್ಮೊಳಗೆ ಕರಾರು ಮಾಡಿಕೊಂಡರು.

(೨) ಸದರಿ ಮಾಲನ್ನು ಒಪ್ಪಿಸಲಾಗಿ ಪ್ರತಿವಾದಿಗೆ ಸದರೀ ಹಣವನ್ನು ಕೊಡಲಿಕ್ಕೆ ಸದರೀ ದಿವಸ ವಾದಿಯು ಸಿದ್ಧನಾಗಿಯೂ ರಾಜಿಯುಳ್ಳವನಾಗಿಯೂ ಇದ್ದನು; ಮತ್ತು ತೆಗೆದುಕೊ ಎಂದು ಹೇಳಿದನು.

(೩) ಪ್ರತಿವಾದಿಯು ಸದರಿ ಮಾಲು ಒಪ್ಪಿಸಲಿಲ್ಲ, ಮತ್ತು ಅಂಥ ಒಪ್ಪಿಸೋಣದಿಂದ ವಾದಿಗೆ ಆಗಬಹುದಾಗಿರುತ್ತಿದ್ದ ಲಾಭವೂ ನಷ್ಟವಾಯಿತು.

ಲುಕ್ಸಾನಿಯ ತಪಶೀಲು:—

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ವಾದಿಯ ಲುಕ್ಸಾನಿಯ ಬಗ್ಗೆ ೧೦೦ ರೂಪಾಯಿಗಳು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೩

## ಉಪಭೋಗಿಸಿದ ಮತ್ತು ವಹಿವಾಟಿಸಿದ ಬಾಬತು

## ಸರನಾಮೆ

(೧) ಪ್ರತಿವಾದಿಯು ವಾದಿಯ ಅಪ್ಪಣೆಯಿಂದ ತಾರೀಖು ೧೬-೩-೨೫ನೇ ಇಸ್ವಿಯಿಂದ ತಾರೀಖು ೧೫-೩-೧೯೨೬ನೇ ಇಸ್ವಿಯ ವರೆಗೆ (ಆಸ್ತಿಯ ವರ್ಣನೆಯು ಕೊಡಬೇಕು.)

ಜಿಲ್ಹಾ ತಾಲೂಕ ಪೈಕಿ ಗ್ರಾಮ-ದಲ್ಲಿರುವ ಮನೆಯು ಇದರ ಸಿಟಿಸರ್ವೆ ನಂಬರು ವಹಿವಾಟು ಮಾಡಿದನು; ಆದರೆ ಆ ಮನೆಯು ವಹಿವಾಟಿಗಾಗಿ ಇಷ್ಟು ಭಾಡಿಗೆಯನ್ನು ಕೊಡಬೇಕೆಂದು ಕರಾರು ಆಗಿರಲಿಲ್ಲ.

[ ಅಥವಾ [೧] ಪ್ರತಿವಾದಿಯು ವಾದಿಯ ಅಪ್ಪಣೆಯಿಂದ ತಾರೀಖು ೧೬–೩–೧೯೨೫ನೇ ಇಸ್ವಿ ದಿವಸ ಕೆಳಗೆ ವರ್ಣಿಸಿದ ಮನೆಯ ಕಬಜಾ ಪಡಕೊಂಡನು ಮತ್ತು ತಾರೀಖು ೧೬–೩–೧೯೨೬ನೇ ಇಸ್ವಿ ದಿವಸದ ವರೆಗೆ ಅದರ ವಹಿವಾಟು ಮಾಡಿದನು; ಆದರೆ ಆ ಮನೆಯ ವಹಿವಟಗಾಗಿ ಇಷ್ಟು ಭಾಡಿಗೆಯನ್ನು ಕೊಡಬೇಕೆಂದು ಕರಾರು ಆಗಿರಲಿಲ್ಲ. ಸದರಿ ಮನೆಯ ವರ್ಣನೆಯು: –

... ... ... ...
... ... ... ...

(೨) ಸದರೀ ಮನೆಯನ್ನು ಸದರೀ ಮದ್ಧತಿನಲ್ಲಿ ವಹಿವಾಟಿಸಿದ ಬಾಬತು ಯೋಗ್ಯವಾದ ಬಾಡಿಗೆಯು ೩೬೦ ರೂಪಾಯಿಯಾಗುತ್ತದೆ.

(೩) ಪ್ರತಿವಾದಿಯು ಆ ಹಣ ಕೊಟ್ಟಿಲ್ಲ.

... ... ... ...
... ... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೩೬೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೪

## ಉಪಭೋಗಿಸಿದ ಮತ್ತು ವಹಿವಾಟಿಸಿದ ಬಾಬತು ಅಥವಾ ಅದರ ಬದಲಾಗಿ ಬಾಡಿಗೆಯ ಬಾಬತು

## ಸರನಾಮೆ

(೧) ವಾದಿಯು ಕೆಳಗೆ ವರ್ಣಿಸಿದ ಆಸ್ತಿಯು ತಾರೀಖು ೧೬–೭–೨೫ನೇ ಇಸ್ವಿ ದಿವಸ ಪ್ರತಿವಾದಿಗೆ ಬಾಡಿಗೆಯಿಂದ ಕೊಟ್ಟನು. ಸದರೀ ಆಸ್ತಿಯ ಬಗ್ಗೆ ತಿಂಗಳಿಗೆ ೩೦ ರೂಪಾಯಿಯು ಪ್ರಕಾರಂತೆ ಬಾಡಿಗೆಯನ್ನು ಕೊಡಲಿಕ್ಕೆ ಪ್ರತಿವಾದಿಯು ಬಾಯಿಮಾತಿನಿಂದ ಒಪ್ಪಿಕೊಂಡನು.

ಇದರ ಬದಲಾಗಿ ಹೇಳುವದೇನಂದರೆ, ಸದರೀ ಆಸ್ತಿಯ ಉಪಭೋಗದ ಮತ್ತು ವಹಿವಾಟಿಯ ಬೆಲೆಯು ತಿಂಗಳಿಗೆ ೩೦ ರೂಪಾಯಿಯಾಗುವದು.

ಸದರೀ ಆಸ್ತಿಯ ವರ್ಣನೆ: —

(೨) ಪ್ರತಿವಾದಿಯು ತಾರೀಖು ೧೬–೭–೧೯೨೫ ನೇ ಇಸ್ವಿಯಿಂದ ತಾರೀಖು ೧೬–೭–೧೯೨೬ನೇ ಇಸ್ವಿಯ ವರೆಗೆ ಸದರೀ ಆಸ್ತಿಯ ವಹಿವಾಟು ಮಾಡಿದನು.

(೩) ಸದರೀ ಆಸ್ತಿಯು ವಹಿವಾಟು ಮಾಡಿದ ಬಗ್ಗೆ ಪ್ರತಿವಾದಿಯು ಏನೂ ಕೊಟ್ಟಿಲ್ಲ.

... ... ... ...
... ... ... ...

**ವಾದಿ ವಿನಂತಿ ಏನಂದರೆ: —**

(೧) ಸದರೀ ಆಸ್ತಿಯ ಬಾಬತು ಬಾಡಿಗೆಯು ಅಂತಾ ವಾದಿಯು ೩೬೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

(೨) ಅದರ ಬದಲಾಗಿ ಪ್ರತಿವಾದಿಯು ಸದರೀ ಆಸ್ತಿಯ ಉಪಭೋಗವೂ ಮತ್ತು ವಹಿವಾಟು ಮಾಡಿದ್ದಾನೆಂತಾ ವಾದಿಯು ಇದೇ ರಕಮು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೫

## ಉಪಭೋಗಿಸಿದ ಮತ್ತು ವಹಿವಾಟಿಸಿದ ಬಾಬತು ಅದರ ಬದಲಾಗಿ ಒಳಗಡೆಯ ಲಾಭದ ಸಲುವಾಗಿ

## ಸರನಾಮೆ

(೧) ವಾದಿಯು ಕೆಳಗೆ ವರ್ಣಿಸಿದ ಆಸ್ತಿಯ ಪೂರ್ಣ ಮಾಲಕನಾಗಿರುತ್ತಾನೆ.

ಸದರಿ ಆಸ್ತಿಯ ವರ್ಣನೆಯು: —

ಧಾರವಾಡ ಜಿಲ್ಹಾ ಹುಬ್ಬಳ್ಳಿ ತಾಲೂಕ ಪೈಕಿ ಮಹಿಜೇದಪುರ ಗ್ರಾಮದಲ್ಲಿರುವ ಮನೆಯು ಇದರ ಸಿಟಿಸರ್ವೇ ನಂಬರು

ಮು. ನ.

(೨) ಪ್ರತಿವಾದಿಯು ವಾದಿಯ ಅಪ್ಪಣೆಯಿಂದ ತಾರೀಖು ೪-೫-೧೯೨೬ನೇ ಇಸ್ವಿ ದಿವಸ ಮೇಲ್ಕಂಡ ಆಸ್ತಿಯ ಕಬಜಾ ಪಡಕೊಂಡನು. ಮತ್ತು ತಾರೀಖು ೩-೫-೧೯೨೭ನೇ ಇಸ್ವಿ ದಿವಸದ ವರೆಗೆ ಅದರ ವಹಿವಾಟು ಮಾಡಿದನು. ಆದರೆ ಬಾಡಿಗೆಯ ಸಂಬಂಧಿ ಯಾವದು ಕರಾರು ಆಗಲಿಲ್ಲ.

(೩) ಇವರ ಬದಲಾಗಿ ಹೇಳುವದೇನಂದರೆ, ಬೇಕಾಯಿದೆಶೀರ ರೀತಿಯಿಂದ ಪ್ರತಿವಾದಿಯು ಮೇಲ್ಕಂಡ ಆಸ್ತಿಯ ಕಬಜಾ ಪಡಕೊಂಡು, ಅದೇ ರೀತಿಯಿಂದ ಮೇಲ್ಕಂಡ ಅವಧಿಯ ವರೆಗೆ ಅದರ ವಹಿವಾಟು ಮಾಡಿದನು.

(೪) ಮೇಲ್ಕಂಡ ಆಸ್ತಿಗೆ ತಿಂಗಳಿಗೆ ೩೦ ರೂಪಾಯಿ ದರದಂತೆ ಬಾಡಿಗೆಯು ದೊರಿಯುವದು.

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

(೧) ಪ್ರತಿವಾದಿಯು ಮೇಲ್ಕಂಡ ಆಸ್ತಿಯ ಉಪಭೋಗವೂ ಮತ್ತು ವಹಿವಾಟು ಮಾಡಿದ್ದಾನೆ ಎಂಬುವದರ ಬಗ್ಗೆ ವಾದಿಯು ೩೬೦ ರೂಪಾಯಿಗಳನ್ನು ಸಿಕ್ಕಬೇಕೆಂದು ಬೇಡುತ್ತಾನೆ.

(೨) ಅದರ ಬದಲಾಗಿ ಪ್ರತಿವಾದಿಯು ಮೇಲ್ಕಂಡ ಆಸ್ತಿಯ ವಹಿವಾಟು ಬೇಕಾಯಿದೇಶೀರ ರೀತಿಯಿಂದ ಮಾಡಿದ್ದಾನೆಂಬುವದರ ಬಗ್ಗೆ ಒಳಗಡೆಯ ಲಾಭವೆಂದು ವಾದಿಯು ೩೬೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೬

## ಬಾಡಿಗೆಯ ಹಣವನ್ನು ಪಡೆಯುವದಕ್ಕಾಗಿ

### ಸರನಾಮೆ

[೧] ಕೆಳಗೆ ವರ್ಣಿಸಿವ ಮನೆಯನ್ನು ವರ್ಷಕ್ಕೆ ೨೪೦ ರೂಪಾಯಿಯಂತೆ ಬಾಡಿಗೆಯು ಕೊಡುವ ಕರಾರಿನಿಂದ ತಾರೀಖು ೧೫-೮-೧೯೨೬ನೇ ಇಸ್ವಿ ದಿವಸ ಪ್ರತಿವಾದಿಯು ವಾದಿಯ ಕಡಿಯಿಂದ ೫ ವರ್ಷಗಳ ಬಗ್ಗೆ ಬಾಡಿಗೆಯಿಂದ ತೆಗೆ

ದುಕೊಂಡನು, ಬಾಡಿಗೆಯು ಪ್ರತಿ ತಿಂಗಳಿಗೆ ಕೊಡತಕ್ಕದ್ದಾಗಿತ್ತು. ಮನೆಯ ವರ್ಣನೆ: —

[೨] ತಾರೀಖು ೧೫-೮-೧೯೨೭ನೇ ಇಸ್ವಿಯಿಂದ ತಾರಿಖು ೧೫-೮-೧೯೨೮ ನೇ ಇಸ್ವಿಯ ವರೆಗೆ ಆಗುವ ಬಾಡಿಗೆಯು ಹಣ ೨೪೦ ರೂಪಾಯಿ ಸಲ್ಲತಕ್ಕದ್ದಾಗಿದ್ದು, ಅದನ್ನು ಪ್ರತಿವಾದಿಯು ಕೊಟ್ಟಿಲ್ಲ.

... ... ... ...
... .... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೨೪೦ ರೂಪಾಯಿಗಳನ್ನು ಬೇಡುತ್ತಾನೆ.

## ನಂಬರು ೩೭

## ಬಾಡಿಗೆಯ ಹಣವನ್ನು ಪಡೆಯುದಕ್ಕಾಗಿ

## ಸರನಾಮೆ

[೧] ಧಾರವಾಡ ಜಿಲ್ಹಾ ಹುಬ್ಬಳ್ಳಿ ಶಹರ ಪೈಕಿ ಕಿಲ್ಲೆದಲ್ಲಿರುವ ಸಿಟಿಸ. ನ. ೧೧೩೦ನೇದ್ದು ಮನೆಯನ್ನು ವರ್ಷಕ್ಕೆ ೪೮೦ ರೂಪಾಯಿದಂತೆ ಬಾಡಿಗೆಯನ್ನು ಕೊಡುವ ಕರಾರಿನಿಂದ ಮತ್ತು ತಿಂಗತಿಂಗಳಿಗೆ ಬಾಡಿಗೆಯನ್ನು ಕೊಡುವ ಕರಾರಿನಿಂದ ತಾರೀಖು ೨೧-೨-೧೯೨೫ನೇ ಇಸ್ವಿ ದಿವಸ ಪ್ರತಿವಾದಿಯು ವಾದಿ ಕಡಿಂದ ೧ ವರ್ಷದ ಬಗ್ಗೆ ಮಾತ್ರ ಬಾಡಿಗೆಯಿಂದ ತೆಗೆದುಕೊಂಡನು ಮತ್ತು ಆ ಬಗ್ಗೆ ಅವನು ವಾದಿಗೆ ಒಂದು ದಸ್ತೈವಜು ಬರೆದುಕೊಟ್ಟನು.

(೨) ಮಾರ್ಚ, ಎಪ್ರೀಲ ಮತ್ತು ಮೇ ತಿಂಗಳಗಳ ಬಾಬತು ಬಾಡಿಗೆಯ ಹಣ ೧೨೦ ರೂಪಾಯಿ ಸಲ್ಲತಕ್ಕದ್ದಾಗಿದ್ದು, ಅದನ್ನು ಪ್ರತಿವಾದಿಯು ಕೊಟ್ಟಿಲ್ಲ.

... ... ... ...
... ... ... ...

**ವಾದಿಯ ವಿನಂತಿ ಏನಂದರೆ:—**

ವಾದಿಯು ೧೨೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೩೮

## ಬಾಡಿಗೆಯ ಹಣವನ್ನು ಪಡೆಯುವದಕ್ಕಾಗಿ ಜಾಮೀನು ದಾರನ ಮೇಲೆ

## ಸರನಾಮೆ

(೧) ಕೆಳಗೆ ವರ್ಣಿಸಿದ ಮನೆಯನ್ನು ವರ್ಷಕ್ಕೆ ೩೬೦ ರೂಪಾಯಿಯಂತೆ ಬಾಡಿಗೆಯನ್ನು ಕೊಡುವ ಕರಾರಿನಿಂದ ತಾರೀಖು ೧-೩-೧೯೨೫ನೇ ಇಸ್ವಿ ದಿವಸ ರಾಮಚಂದ್ರ ಲಿಂಗೋ ಕುಲಕರ್ಣಿ ಎಂಬುವವನು ವಾದಿಯ ಕಡೆಯಿಂದ ೩ ವರ್ಷಗಳ ಬಗ್ಗೆ ಬಾಡಿಗೆಯಿಂದ ತಗೆದುಕೊಂಡನು. ಬಾಡಿಗೆಯು ಪ್ರತಿ ತಿಂಗಳಿಗೆ ಕೊಡತಕ್ಕದ್ದಾಗಿತ್ತು. ಮನೆಯ ವರ್ಣನೆ:— ... ...

(೨) ಸದರೀ ಮನೆಯನ್ನು ರಾಮಚಂದ್ರ ಲಿಂಗೋ ಕುಲಕರ್ಣಿ ಎಂಬುವವನಿಗೆ ಬಾಡಿಗೆಗೆ ಕೊಟ್ಟದ್ದರ ಮೊಬದಲಿಗಾಗಿ ಪ್ರತಿವಾದಿಯು ಸದರಿ ಬಾಡಿಗೆಯನ್ನು ವೇಳೆಯಲ್ಲಿ ಕೊಡುವಬಗ್ಗೆ ಜಾಮೀನು ಆಗಲಿಕ್ಕೆ ಮಾತುಕೊಟ್ಟನು.

(೩) ಸನ ೧೯೨೬ನೇ ಸಾಲಿನ ಮೇ, ಜೂನ, ಜುಲೈ ಮತ್ತು ಆಗಸ್ಟ ತಿಂಗಳುಗಳ ಬಾಬತು ಬಾಡಿಗೆಯು ಹಣ ೪೮ ರೂಪಾಯಿ ಸಲ್ಲತಕ್ಕವಾಗಿದ್ದು ಅದನ್ನು ಕೊಟ್ಟಿಲ್ಲ. ( ಕರಾರಿನ ಶರತಿನಂತೆ ಜಾಮೀನುದಾರನಿಗೆ ನೋಟೀಸು ಕೊಡಬೇಕಾಗಿದ್ದರೆ ಕೆಳಗಿನಂತೆ ಬರೆ:— )

(೪) ತಾರೀಖು ೧೫-೯-೧೯೨೬ನೇ ಇಸ್ವಿ ದಿವಸ ವಾದಿಯು ಸದರಿ ಬಾಡಿಗೆಯು ತಲುಪಲಿಲ್ಲವೆಂಬ ಬಗ್ಗೆ ಪ್ರತಿವಾದಿಗೆ ನೋಟೀಸುಕೊಟ್ಟು, ಆ ಹಣವನ್ನು ಬೇಡಿದನು.

(೫) ಪ್ರತಿವಾದಿಯು ಅದನ್ನು ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ** -

ವಾದಿಯು ಬಾಡಿಗೆಯ ೪೮ ರೂಪಾಯಿಗಳನ್ನು ಸಿಗಬೇಕೆಂದುಬೇಡುತ್ತಾನೆ.

## ನಂಬರು ೩೯

## ಮನೆಯ ಮಾಲೀಕನ ಮೇಲೆ ಒಕ್ಕಲಿದ್ದವನ ದಾವೆಯು ವಿಶೇಷ ವಾದ ಲುಕ್ಸಾನಿನ ಸಹಿತವಾಗಿ

### ಸರನಾಮೆ

(೧) ಪ್ರತಿವಾದಿಯು ನೋಂದಿಸಿದ ದಸ್ತೈವಜಿನಿಂದ ವಾದಿಗೆ ತಾರೀಖು ೧-೪-೧೯೨೫ನೇ ಇಸ್ವಿ ದಿವಸ ಕೆಳಗೆ ವರ್ಣಿಸಿದ ಮನೆಯನ್ನು ೫ ವರ್ಷಗಳ ವರೆಗೆ ಬಾಡಿಗೆಗೆ ಕೊಟ್ಟನು; ಆ ದಸ್ತೈವಜಿನಲ್ಲಿ ವಾದಿಯೊಡನೆ ಮಾಡಿದ ಕರಾರು ಏನಂದರೆ, ವಾದಿಯು ಅವನ ಕಾಯದೇಶೀರ ಪ್ರತಿನಿಧಿಗಳು ಸದರೀ ಮುದ್ದತಿನಲ್ಲಿ ನಿರಾತಂಕವಾಗಿ ಸದರಿ ಮನೆಯ ಕಬಜೆಯನ್ನು ಅನುಭೋಗಿಸ ಬೇಕು. ಸದರಿ ಮನೆಯ ವರ್ಣನೆ:— ... ... ...

(೨) ಈ ದಾವೆಯನ್ನು ನಡಿಸುವ ಹಕ್ಕು ವಾದಿಗೆ ಬರಲಿಕ್ಕೆ ಅವಶ್ಯಕ ವಾದ ಶರತುಗಳೆಲ್ಲ ಪೂರ್ಣವಾದವೂ ಮತ್ತು ವರ್ತಿಸತಕ್ಕ ಸಂಗತಿಗಳೆಲ್ಲ ವರ್ತಿ ಸಿದವೂ.

(೩) ಸದರಿ ಮುದ್ದತಿನಲ್ಲಿ ತಾರೀಖು ೧೦-೧೦-೧೯೨೫ನೇ ಇಸ್ವಿ ದಿವಸ ಸದರೀ ಮನೆಯ ಕಾಯದೇಶೀರ ಮಾಲೀಕನಾದ ಮಲ್ಲಪ್ಪಾ ಅರಳಿಕಟ್ಟಿ ಎಂಬವವನು ವಾದಿಯನ್ನು ಕಾಯಿದೆಶೀರ ರೀತಿಯಿಂದ ಆ ಮನೆಯಿಂದ ಹೊರಗೆ ಹಾಕಿ, ಇದೂ ವರೆಗೂ ಅದರ ಕಬಜವನ್ನು ವಾದಿಗೆ ಕೊಟ್ಟಿಲ್ಲ.

(೪) ಆ ಕಾರಣದಿಂದ ವಾದಿಗೆ ದಲಾಲಿಯ ಉದ್ಯೋಗವನ್ನು ಆ ಸ್ಥಳ ದಲ್ಲಿ ನಡೆಯಿಸಲಿಕ್ಕೆ ಅಡ್ಡಿಯಾಯಿತು.

ಅವನು ಮತ್ತೊಂದು ಸ್ಥಳಕ್ಕೆ ಹೋಗಲಿಕ್ಕೆ ೨೫ ರೂಪಾಯಿಗಳನ್ನು ವೆಚ್ಚ ಮಾಡಬೇಕಾಯಿತು. ಮತ್ತು ಹಾಗೆ ಹೋದ್ದರಿಂದ ಅವನು ವಿಠೋಬಾ ಲಕ್ಷ್ಮಪ್ಪಾ ಮಾಳವದೆ ಮತ್ತು ಗಣಪತೆಪ್ಪಾ ಏಕನಾಥಪ್ಪಾ ಜಂಬುರೆ ಎಂಬ ಗಿರಾಕಿಗಳನ್ನು ಕಳೆದು ಕೊಂಡನು. ಅದರಿಂದ ವಾದಿಗೆ ೫೦೦ ರೂಪಾಯಿಗಳ ಲುಕ್ಸಾನವಾಯಿತು. ... ... ...

**ವಾದಿ ವಿನಂತಿ ಏನಂದರೆ:—**

ವಾದಿಯು ೫೨೫ ರುಪಾಯಿಗಳು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೪೦

## ಜಂಗಮ ಮಾಲು ಅನ್ಯಾಯದಿಂದ ಹಿಡದಿಟ್ಟ ಬಾಬತು

## ಸರನಾಮೆ

(೧) ತಾರೀಖು ೧೬–೨–೧೯೨೪ನೇ ಇಶ್ವಿ ದಿವಸ ವಾದಿಯು ಈ ಅರ್ಜಿಗೆ ಜೋಡಿಸಿದ ಯಾದಿಯಲ್ಲಿ ಬರೆದ ಮಾಲಿನ (ಅಥವಾ ಕೆಳಗೆ ಬರೆದ ಮಾಲಿನ) ಮಾಲಕನಾಗಿದ್ದನು, ಸದರೀ ಮಾಲಿನ ಅಂದಾಜು ಬೆಲೆಯು ೫೨೫ ರೂಪಾಯಿ ಆಗಿದೆ.

(೨) ಸದರಿ ಮಾಲನ್ನು ಪ್ರತಿವಾದಿಯು ಸದರಿ ತಾರೀಖಿನಿಂದ ಈ ದಾವೆಯು ಆರಂಭವಾಗುವವರೆಗೆ ವಾದಿಗೆ ಕೊಡದೆ ತಡೆಹಾಕಿ ಇಟ್ಟುಕೊಂಡಿರುತ್ತಾನೆ.

(೩) ಈ ದಾವೆಯು ಆರಂಭವಾಗುವ ಪೂರ್ವದಲ್ಲಿ ಅಂದರೆ ತಾರೀಖು ೨೭–೫–೧೯೨೬ನೇ ಇಶ್ವಿ ದಿವಸ ವಾದಿಯು ಪ್ರತಿವಾದಿಯಿಂದ ಆ ಮಾಲನ್ನು ಬೇಡಿದನು, ಆದರೆ ಅವನು ಅದನ್ನು ವಾದಿಯ ಸ್ವಾಧೀನಮಾಡಲಿಕ್ಕೆ ಒಪ್ಪಲಿಲ್ಲ.

(೪) ದಾವೆಯ ಕಾರಣವೂ ತಾರೀಖು ೨೭–೫–೧೯೨೬ನೇ ಇಶ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

(೧) ಸದರಿ ಮಾಲಿನ ಕಬಜವನ್ನು ಕೊಡಿಸಬೇಕು, ಅಥವಾ ಆ ಕಬಜವನ್ನು ಕೊಡಿಸಕೂಡದಿದ್ದರೆ ೫೨೫ ರೂಪಾಯಿಗಳನ್ನು ಕೊಡಿಸಬೇಕು.

(೨) ಆ ಮಾಲು ಇಟ್ಟುಕೊಂಡ ಬಾಬತು ಲುಕ್ಸಾನು ೧೦೦ ರೂಪಾಯಿ ಕೊಡಿಸಬೇಕು.

## ನಂಬರು ೪೧

## ಜಂಗಮ ಮಾಲು ಕೆಡಿಸಲ್ಪಡುವದೆಂದು ಹೆದರಿಸಲ್ಪಟ್ಟಲ್ಲಿ ಅದನ್ನು ಹಿಂದಕ್ಕೆ ಪಡೆಯುವದಕ್ಕಾಗಿಯೂ, ತಾಕೀದಿಗಾಗಿಯೂ ದಾವೆಯು

## ಸರನಾಮೆ

(೧) ವಾದಿಯು ಬಹು ಕುಶಲನಾದ ಒಬ್ಬ ಚಿತ್ರಗಾರನಿಂದ ಬರೆಯಲ್ಪಟ್ಟ ದೊಂದು ತನ್ನ ಅಜ್ಜನ ತಸಬೀರಿನ ಮಾಲಕನಾಗಿರುತ್ತಾನೆ. ಮತ್ತು ಈ ಅರ್ಜಿ ಯಲ್ಲಿ ಕೆಳಗೆ ಬರೆದ ಎಲ್ಲಾ ಕಾಲಗಳಲ್ಲಿದ್ದನು, ಆ ತಸಬೀರಿನ ಎರಡನೇ ಪ್ರತಿಯು ಇಲ್ಲಿ (ಅಥವಾ ಹಣ ವೆಚ್ಚಮಾಡಿ ಅದರಂಥ ಮಾಲು ಪಡೆಯುವದು ಅಸಾಧ್ಯವೆಂದು ತೋರಿಸುವಂಥ ಸಂಗತಿಗಳೇನಾದರೂ ಇದ್ದರೆ ಬರೆ).

(೨) ತಾರೀಖು ೧೨–೪–೧೯೨೨ನೇ ಇಸ್ವಿ ದಿವಸ ವಾದಿಯು ಸದರಿ ತಸಬೀರನ್ನು ಸುರಕ್ಷಿತವಾಗಿ ಇಡಲಿಕ್ಕೆ ಪ್ರತಿವಾದಿಯ ವಶಕ್ಕೆ ಕೊಟ್ಟನು.

(೩) ತಾರೀಖು ೧೯–೫–೧೯೨೭ನೇ ಇಸ್ವಿ ದಿವಸ ವಾದಿಯು ಅದನ್ನು ಪ್ರತಿವಾದಿಯಿಂದ ಬೇಡಿ ಅದರ ಸಂರಕ್ಷಣೆಗಾಗಿ ಮಾಡಿದ ಯಾವತ್ತು ಯೋಗ್ಯ ವಾದ ವೆಚ್ಚವನ್ನು ತೆಗೆದುಕೋ ಎಂದು ಹೇಳಿದನು.

(೪) ಪ್ರತಿವಾದಿಯು ಅದನ್ನು ವಾದಿಗೆ ಕೊಡುವದಿಲ್ಲ; ಪುನಃ ಬೇಡಿ ದರೆ ಅದನ್ನು ಮುಚ್ಚಿಡುತ್ತೇನೆಂದು ಯಾರಿಗಾದರು ಕೊಡುತ್ತೇನೆಂದು ಯಾ ಮಾರಿ ರುತ್ತೇನೆಂದು ಯಾ ಅದಕ್ಕೆ ಅಪಾಯ ಮಾಡುತ್ತೇನೆಂದು ಹೆದರಿಸುತ್ತಾನೆ.

(೫) ಸದರೀ ತಸಬೀರು ನಾಶವಾದಲ್ಲಿ ಹಣದಿಂದ ಅದರಬಗ್ಗೆ ಯೋಗ್ಯ ವಾದ ಪ್ರತಿಫಲವನ್ನು ದೊರಿಯುವಂತೆ ಇಲ್ಲ.

(೬) ದಾವೆಯ ಕಾರಣವು ತಾರೀಖು ೧೫–೫–೧೯೨೭ನೇ ಇಸ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

(೧) ಸದರಿ ತಸಬೀರನ್ನು ಯಾರಿಗೂ ಕೊಡದ ಹಾಗೆ ಯಾ ಮುಚ್ಚಿಡದ ಹಾಗೆ ಯಾ ಅದಕ್ಕೆ ಅಪಾಯ ಮಾಡದಹಾಗೆ ಪ್ರತಿವಾದಿಗೆ ತಾಕೀದು ಮಾಡಬೇಕು.

(೨) ಅವನ ಕಡೆಯಿಂದ ಅದನ್ನು ವಾದಿಗೆ ಹಿಂದಕ್ಕೆ ಕೊಡಿಸಬೇಕು.

## ನಂಬರ ೪೨

## ಜಂಗಮ ಮಾಲು ಪಡೆಯುವದಕ್ಕಾಗಿ ವಾರಸದಾರನ ದಾವೆಯು

### ಸರನಾಮೆ

(೧) ಈ ಅರ್ಜಿಗೆ ಜೋಡಿಸಿದ ಯಾದಿಯಲ್ಲಿ ಬರೆದ ಮಾಲಿನ (ಅಥವಾ ಕೆಳಗೆ ವರ್ಣಿಸಿದ ಮಾಲಿನ) ಗೋವಿಂದ ರಾಮಚಂದ್ರ ಕಾಳೆ ಎಂಬವವನು ತಾನು ಸಾಯುವ ಕಾಲಕ್ಕೆ ಮಾಲಕನಾಗಿದ್ದನು.

(ಮಾಲಿನ ಯಾದಿಯು ಕೊಡಬೇಕು.)

(೨) ಸದರಿ ಗೋವಿಂದ ರಾಮಚಂದ್ರ ಕಾಳೆ ಎಂಬವವನು ತಾರೀಖು ೧೨-೩-೧೯೨೬ನೇ ಇಸ್ವಿ ದಿವಸ ತೀರಿಕೊಂಡನು, ವಾದಿಯು ಸದರಿ ಮೃತನ ಮಗನಾಗಬೇಕು ಮತ್ತು ವಾದಿಯ ಹೊರತು ಸದರಿ ಮೃತನಿಗೆ ಯಾರೂ ಸಮೀಪದ ಸಂಬಂಧಿಕರು ಇರೋದಿಲ್ಲ. ಪ್ರತಿವಾದಿಯು ಮೃತನು ಇಟ್ಟುಕೊಂಡಿದ್ದ ಹೆಂಗಸು ಇರುತ್ತಾಳೆ.

(೩) ಸದರಿ ಗೋವಿಂದ ರಾಮಚಂದ್ರ ಕಾಳೆ ಎಂಬುವವನು ಸಾಯುವ ಕಾಲಕ್ಕೆ ಪ್ರತಿವಾದಿಯು ಮೇಲ್ಕಂಡ ಮಾಲು ತನ್ನ ವಶಕ್ಕೆ ತಗೆದುಕೊಂಡಳು ಮತ್ತು ಅದನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುತ್ತಾಳೆ, ಅದರ ಉಪಯೋಗವೂ ಮಾಡಲಿಕ್ಕೆ ವಾದಿಗೆ ಕೊಡವಲ್ಲಳು ಮತ್ತು ಅದನ್ನು ವಾದಿಗೆ ಒಪ್ಪಲಿಕ್ಕೆ ನಾಕಾರಿಸುತ್ತಾಳೆ.

(೪) ತಾರೀಖು ೧೦-೪-೧೯೨೪ನೇ ಇಸ್ವಿ ದಿವಸ ಮಾಡಿದ ನೋಟೀಸಿನ ಮುಖಾಂತರವಾಗಿ ವಾದಿಯು ಸದರಿ ಮಾಲು ಬೇಡಿದನು. ಆದರೆ ಪ್ರತಿವಾದಿಯಳು ಅದನ್ನು ಅವನ ಸ್ವಾಧೀನ ಮಾಡಲಿಕ್ಕೆ ಒಪ್ಪಲಿಲ್ಲ.

(೫) ಇದರಿಂದ ವಾದಿಗೆ ಕೆಳಗಿನಂತೆ ಲುಕ್ಸಾನು ಆಗಿದೆ.

೧೦೦೦-೦-೦ ಸದರಿ ಮಾಲಿನ ಬೆಲೆಯು.

೨೦-೦-೦ ಸದರಿ ಮಾಲನ್ನು ವಾದಿಯ ಉಪಯೋಗಕ್ಕೆ ಕೊಡದಿದ್ದರಿಂದ ಆದ ಲುಕ್ಸಾನು.

೧೦೨೦-೦-೦ ರೂಪಾಯಿಗಳನ್ನು.

(೬) ದಾವೆಯ ಕಾರಣವು ೧೦-೪-೧೯೨೪ನೇ ಇಸ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

(೧) ಸದರಿ ಮಾಲಿನ ಕಬಜವನ್ನು ಕೊಡಿಸಬೇಕು ಅಥವಾ ಆ ಕಬಜವನ್ನು ಕೊಡಿಸದಿದ್ದರೆ ೧೦೦೦ ರುಪಾಯಿಗಳನ್ನು ಕೊಡಿಸಬೇಕು.

(೨) ಆ ಮಾಲು ಇಟ್ಟುಕೊಂಡ ಬಾಬತು ಲುಕ್ಸಾನು ೨೦ ರೂಪಾಯಿಗಳನ್ನು ಕೊಡಿಸಬೇಕು.

'ಇದರ ಬದಲಾಗಿ ಲುಕ್ಸಾನವೆಂತಾ ೧೦೨೦ ರೂಪಾಯಿಗಳನ್ನು ಕೊಡಿಸಬೇಕು.

## ನಂಬರು ೪೩

## ಬಾಡಿಗೆಯಿಂದ ಕೊಟ್ಟ ಮಾಲು ಅನ್ಯಾಯದಿಂದ ಹಿಡಿದ ಬಾಬತು

## ಸರನಾಮೆ

(೧) ತಾರೀಖು ೧೧-೧-೧೯೨೫ನೇ ಇಸ್ವಿ ದಿವಸ ಪ್ರತಿವಾದಿಯು ವಾದಿ ಕಡೆಯಿಂದ ಒಂದು ಕಬ್ಬಿನ ಗಾಣವೂ ಬಾಡಿಗೆಗೆ ತೆಗೆದುಕೊಂಡನು. ಆ

ವೇಳೆಗೆ ಬಾಯಿಮಾತಿನಿಂದ ವಾದಿ ಪ್ರತಿವಾದಿಗಳು ತಮ್ಮೊಳಗೆ ಕರಾರು ಮಾಡಿ ಕೊಂಡದ್ದೇನಂದರೆ, ಪ್ರತಿವಾದಿಯು ತಾರೀಖು ೧೧–೧–೧೯೨೫ನೇ ಇಶ್ವಿಯಿಂದ ತಾರೀಖು ೩೧–೫–೧೯೨೫ನೇ ಇಶ್ವಿಯ ವರೆಗೆ ಸದರಿ ಗಾಣದ ಉಪಯೋಗ ಮಾಡಬೇಕು ಅನಂತರದಲ್ಲಿ ತಾರೀಖು ೩–೬–೧೯೨೫ನೇ ಇಶ್ವಿ ದಿವಸದ ವಳ ಗಾಗಿ ಸದರಿ ಗಾಣವೂ ಪ್ರತಿವಾದಿಯು ವಾದಿಗೆ ಹಿಂದಕ್ಕೆ ಕೊಡಬೇಕು.

(೨) ಇವತ್ತಿನ ವರೆಗೆ ಪ್ರತಿವಾದಿಯು ಸದರಿ ಗಾಣವೂ ಹಿಂದಕ್ಕೆ ಕೊಡ ಲ್ಲ ಮತ್ತು ಇನ್ನೂ ತೆಡೆಹಾಕಿ ಇಟ್ಟುಕೊಂಡಿರುತ್ತಾನೆ.

(೩) ಇದರಿಂದ ಸದರಿ ಗಾಣವು ಎರಡನೆ ಗಿರಾಕಿಗೆ ಬಾಡಿಗೆಗೆ ಕೊಡ ಲಿಕ್ಕೆ ಮತ್ತು ಅದರಿಂದ ಲಾಭವೂ ಪಡಕೊಳ್ಳಲಿಕ್ಕೆ ವಾದಿಗೆ ಅಡ್ಡಿಯಾಯಿತು.

(೪) ದಾವೆಯ ಕಾರಣವು ತಾರೀಖು ೩–೬–೧೯೨೫ನೇ ಇಶ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

(೧) ಸದರಿ ಗಾಣವು ಹಿಂದಕ್ಕೆ ಕೊಡಿಸಬೇಕು ಅಥವಾ ಅದರ ಬೆಲೆ ಯಾದ ೧೫೦ ರುಪಾಯಿಗಳನ್ನು ಕೊಡಿಸಬೇಕು ಮತ್ತು

(೨) ಸದರಿ ಗಾಣವೂ ಇಟ್ಟುಕೊಂಡ ಬಾಬತು ಲುಕ್ಸಾನು ೨೫ ರೂಪಾಯಿಗಳನ್ನು ಕೊಡಿಸಬೇಕು.

## ನಂಬರು ೪೪

## ಉಪಯೋಗಿಸಲಿಕ್ಕೆ ಕೊಟ್ಟ ಮಾಲು ಅನ್ಯಾಯದಿಂದ ಹಿಡದ ಬಾಬತು

## ಸರನಾಮೆ

(೧) ತಾರೀಖು ೧೦–೪–೧೯೨೭ನೇ ಇಶ್ವಿ ದಿವಸ ವಾದಿಯು ಕೆಳಗೆ ವಿಸರಿಸಿದ ಮಾಲನ್ನು ೮ ದಿನಸದ ವರೆಗೆ ಪ್ರತಿವಾದಿಗೆ ಉಪಯೋಗಿಸಲಿಕ್ಕೆ ಕೊಟ್ಟನು.

ಸದರಿ ಮಾಲಿನ ವಿವರ :—

೪ ಗುಡಾರಗಳು ಇವುಗಳ ಅಂದಾಜು ಬೆಲೆಯು ರು. ೫೦೮೦ ೧೦೦ ಮಣಿಗಳು ಇವುಗಳ ಅಂದಾಜ ಬೆಲೆಯು ೨೦೦ ರುಪಾಯಿ.

(೨) ಸದರಿ ಮಾಲನ್ನು ವಾದಿಗೆ ಕೊಡದೆ ಪ್ರತಿವಾದಿಯು ತಡೆಹಾಕಿ ಇಟ್ಟುಕೊಂಡಿರುತ್ತಾನೆ.

(೩) ತಾರೀಖು ೧೫–೫–೧೯೨೭ನೇ ಇಸ್ವಿ ದಿವಸ ನೋಟೀಸು ಕೊಟ್ಟು ವಾದಿಯು ಪ್ರತಿವಾದಿಯಿಂದ ಆ ಮಾಲು ಬೇಡಿದನು. ಆದರೆ ಅದನ್ನು ಅವನ ಸ್ವಾಧೀನಮಾಡಲಿಕ್ಕೆ ಒಪ್ಪಲಿಲ್ಲ.

(೪) ದಾವೆಯ ಕಾರಣವು ತಾರೀಖು ೧೫–೫–೧೯೨೭ನೇ ಇಸ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಸದರಿ ಮಾಲನ್ನು ಹಿಂದಕ್ಕೆ ಕೊಡಿಸಬೇಕೆಂದು ಅಥವಾ ಅದರ ಬೆಲೆಯಾದ ೨೫೦ ರುಪಾಯಿಗಳನ್ನು ಕೊಡಿಸಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೪೫

## ಬಾಡಿಗೆಯ ಹಣವನ್ನು ಪಡೆಯುವದಕ್ಕಾಗಿ

## ಸರನಾಮೆ

(೧) ತಾರೀಖು ೧೧–೬–೧೯೨೭ನೇ ಇಸ್ವಿ ದಿವಸ ಪ್ರತಿವಾದಿಯು ವಾದಿ ಕಡಿಂದ ೬ ಎತ್ತುಗಳನ್ನು ಬಾಡಿಗೆಯಿಂದ ತೆಗೆದುಕೊಂಡನು. ಆ ವೇಳೆಗೆ ಬಾಯಿ ಮಾತಿನಿಂದ ವಾದಿ ಪ್ರತಿವಾದಿಗಳು ತಮ್ಮೊಳಗೆ ಕರಾರು ಮಾಡಿಕೊಂಡದ್ದೇನಂದರೆ, ೧೫ ದಿವಸಡ ವರೆಗೆ ಸದರಿ ಎತ್ತುಗಳನ್ನು ಪ್ರತಿವಾದಿಯು ಉಪಯೋಗಿಸಬೇಕು. ಮತ್ತು ದಿನಕ್ಕೆ ೧ ರುಪಾಯಿಯಂತೆ ಬಾಡಿಗೆಯನ್ನು ಕೊಡಬೇಕು ಮತ್ತು ಸದರಿ ಮುದ್ದತು ಮೀರಿದ ಕೂಡಲೇ ಸದರಿ ಎತ್ತುಗಳನ್ನು ವಾದಿಗೆ ತಿರಿಗಿ ಕೊಡಬೇಕು.

(೨) ಪ್ರತಿವಾದಿಯು ೩೦ ದಿವಸದ ವರೆಗೆ ಸದರಿ ಎತ್ತುಗಳನ್ನು ಉಪಯೋಗಿಸುತ್ತಾನೆ. ಸದರಿ ಎತ್ತುಗಳು ನಿಷ್ಕಾಳಜಿತನದಿಂದ ಮತ್ತು ದುರ್ಲಕ್ಷ್ಯದಿಂದ ಪ್ರತಿವಾದಿಯು ಉಪಯೋಗಿಸಿದ್ದರಿಂದ ಅದರ ಪೈಕಿ ಒಂದು ಎತ್ತಿನ ಕಾಲು ಮುರಿದಿರುತ್ತದೆ. ಇದರಿಂದ ವಾದಿಗೆ ೧೦೦ ರೂಪಾಯಿ ಲುಕ್ಸಾನು ಆಗಿರುತ್ತದೆ.

(೩) ಪ್ರತಿವಾದಿಯು ಏನೂ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಬಾಡಿಗೆಯ ಬಾಬತು ೧೫ ರೂಪಾಯಿ, ಲುಕ್ಸಾನಿಯ ಬಾಬತು ೧೦೦ ರೂಪಾಯಿ ಮತ್ತು ೧೫ ರೂಪಾಯಿ ಅಂತು ೧೩೦ ರೂಪಾಯಿಗಳನ್ನು ವಾದಿಗೆ ಕೊಡಿಸಬೇಕು.

## ನಂಬರು ೪೬

## ಹೊಣೆಯ ಕರಾರಿನ ಆಧಾರದಿಂದ

## ಸರನಾಮೆ

(೧) ವಾದಿ ಪ್ರತಿವಾದಿಗಳು **ಅ, ಬ** ಮತ್ತು **ಕ, ಡ** ಎಂಬ ಹೆಸರಿಂದ ವ್ಯಾಪಾರದಲ್ಲಿ ಪಾಲುಗಾರರಾಗಿದ್ದರು. ಅವರು ಆ ಪಾಲುಗಾರಕೆಯನ್ನು ತಾರೀಖು ೧೪–೪–೧೯೨೫ನೇ ಇಸ್ವಿ ದಿವಸ ಮುರಿದು ತಮ್ಮೊಳಗೆ ಕರಾರು ಮಾಡಿಕೊಂಡಿದ್ದೇನೆಂದರೆ:— ಪ್ರತಿವಾದಿಯು ಆ ಪಾಲುಗಾರಿಕೆಯ ಸೊತ್ತನ್ನೆಲ್ಲ ತಾನು ತೆಗೆದುಕೊಂಡು ಇಟ್ಟುಕೊಳ್ಳಬೇಕು, ಮತ್ತು ಆ ಪೇಢಿಯ ಸಾಲವನ್ನೆಲ್ಲ ತೀರಿಸಿ ಸದರಿ ಪೇಢಿಯ ಸಂಬಂಧವ ಯಾವದೊಂದು ಬಗೆಯ ಸಾಲವನ್ನು ವಾದಿಗೆ ಯಾರಾದರು ಕೇಳಿದರೆ ವಾದಿಯ ಲುಕ್ಸಾನನ್ನು ತಾನು ತುಂಬಿಸಿ ಕೊಡಬೇಕು.

(೨) ವಾದಿಯು ತನಗೆ ಸಂಬಂಧಿಸಿವಷ್ಟು ಮಟ್ಟಿಗೆ ಆ ಕರಾರಿನ ಶರತುಗಳನ್ನು ಯೋಗ್ಯವಾಗಿ ಕಡೆಗಾಣಿಸಿದನು.

(೩) ಸದರಿ ಪೇಢಿಯಿಂದ ಗಣೇಶ ವಿನಾಯಕ ಎಂಬುವವನಿಗೆ ಸಲ್ಲತಕ್ಕ ಸಾಲಕ್ಕಾಗಿ ಸದರಿ ಅವನು ಮುಂಬಯಿ ಪಟ್ಟಣದ ನ್ಯಾಯಾಧಿಕಾರಿ ಹಾಯಕೋರ್ಟಿನಲ್ಲಿ ವಾದಿ ಪ್ರತಿವಾದಿಗಳ ಮೇಲೆ ತಾರೀಖು ೨೩-೭-೧೯೨೬ನೇ ಇಸ್ವಿ ದಿವಸ ಫೈಸಲು ಪಡೆದನು; ಮತ್ತು ೧೪-೯-೧೯೨೬ನೇ ಇಸ್ವಿ ದಿವಸ ಆ ಫೈಸಲಿನ ಅಮಲು ಪೂರಾ ಮಾಡುವದಕ್ಕಾಗಿ ವಾದಿಯು ೧೨೦೦ ರೂಪಾಯಿಗಳನ್ನು ಕೊಟ್ಟನು.

(೪) ಪ್ರತಿವಾದಿಯು ಆ ಹಣವನ್ನು ಕೊಟ್ಟಿಲ್ಲ.

(೫) ದಾವೆಯ ಕಾರಣವು ತಾರೀಖು ೧೬-೯-೧೯೨೬ನೇ ಇಸ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ವಾದಿಯು ೧೨೦೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೪೭

## ಹೊಣೆಯ ಕರಾರಿನ ಆಧಾರದಿಂದ

## ಸರನಾಮೆ

(೧) ತಾರೀಖು ೧೫-೬-೧೯೦೫ನೇ ಇಸ್ವಿ ದಿವಸ ಒಂದು ಮನೆಯನ್ನು ಪ್ರತಿವಾದಿಯು ವಾದಿಗೆ ಮಾಡಿದನು. ಮತ್ತು ಆ ವೇಳೆಗೆ ಸದರಿ ಮನೆಯಮೇಲೆ ಯಾವದೇ ಭಾರವಿಲ್ಲ ಮತ್ತು ಅದರ ಮೇಲೆ ರುದ್ರಪ್ಪಾ ಬಸಲಿಂಗಪ್ಪಾ ಅತ್ತಿಗೇರಿ ಎಂಬುವವನ ಮೊದಲಿದ್ದ ಭಾರವು ಪ್ರತಿವಾದಿಯು ಮೊಕಳೀಕ ಮಾಡಿರುತ್ತಾನೆಂದು ಪ್ರತಿವಾದಿಯು ವಾದಿಗೆ ತಿಳಿಸಿದನು. ಮತ್ತು ಅದೇ ದಿವಸ ಬರೆದು ಕೊಟ್ಟ ಖರೇದಿಪತ್ರದಿಂದ ಪ್ರತಿವಾದಿಯು ಒಪ್ಪಿಕೊಂಡಿದ್ದೇನಂದರೆ, ಯಾರಾದರು ಸದರಿ ಮನೆಯಮೇಲೆ ತನ್ನ ಭಾರವು ಮೊದಲಿನದೆಂದು ವಾದಮಾಡಿ ಅದರ ಭರ

ಪಾಯಿಯ ಬಗ್ಗೆ ವಾದಿಕಡಿಂದ ಏನಾದರೂ ವಸೂಲು ಮಾಡಿಕೊಂಡಲ್ಲಿ ಆ ಹಣ ವನ್ನು ಪ್ರತಿವಾದಿಯು ವಾದಿಗೆ ಕೊಡಬೇಕು.

(೨) ಸದರಿ ರುದ್ರಪ್ಪಾ ಬಸಲಿಂಗಪ್ಪಾ ಅತ್ತಿಗೇರಿ ಎಂಬುವವನು ಇದೇ ಕೋರ್ಟಿನಲ್ಲಿ ವಾದಿ ಪ್ರತಿವಾದಿಗಳ ಮೇಲೆ ಲಾ. ಅಸಲ ನಂಬರು $\frac{೬೫}{೧೯೩೬}$ ನೇದ್ದರಲ್ಲಿ ಸದರಿ ಮನೆಯ ಮೇಲಿನ ಮೊದಲಿದ್ದ ಭಾರದ ಆಧಾರದಮೇಲೆ ದಾವೆಯು ಮಾಡಿ ಫೈಸಲು ಪಡೆದನು; ಮತ್ತು ತಾರೀಖು ೧೬-೧೧-೧೯೩೬ನೇ ಇಸ್ವಿ ದಿವಸ ಆ ಫೈಸಲಿನ ಮೇಲಿನ ಅಮಲು ಪೂರಾ ಮಾಡುವದಕ್ಕಾಗಿ ವಾದಿಯು ೪೦೦೦ ರೂಪಾಯಿಗಳನ್ನು ಕೊಟ್ಟನು.

(೩) ಪ್ರತಿವಾದಿಯು ಆ ಹಣಾ ಕೊಟ್ಟಿಲ್ಲ.

(೪) ದಾವೆಯ ಕಾರಣವು ತಾರೀಖು ೧೬-೧೧-೧೯೩೬ನೇ ಇಸ್ವಿ ದಿವಸ ಉದ್ಭವಿಸಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ :—**

ವಾದಿಯು ೪೦೦೦ ರುಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೪೮

## ಭೂಮಿಯನ್ನು ಕೊಳ್ಳುವ ಕರಾರು ಮುರಿದ ಬಾಬತು

## ಸರನಾಮೆ

(೧) ಕೆಳಗೆ ವರ್ಣಿಸಿದ ಆಸ್ತಿಯನ್ನು ೪೫೨೫ ರೂಪಾಯಿಗೆ ವಾದಿಯು ಪ್ರತಿವಾದಿಗೆ ಮಾರಬೇಕೆಂತಲೂ, ಪ್ರತಿವಾದಿಯು ವಾದಿಯ ಕಡೆಯಿಂದ ಕೊಳ್ಳ ಬೇಕೆಂತಲೂ ತಾರೀಖು ೧೫-೯-೩೬ನೇ ಇಸ್ವಿ ದಿವಸ ಅವರು ತಮ್ಮತಮ್ಮೊಳಗೆ ಒಪ್ಪಂದ ಮಾಡಿಕೊಂಡರು.

(೨) ಪ್ರತಿವಾದಿಯು ಸದರೀ ಹಣವನ್ನುಕೊಟ್ಟರೆ ತಾರೀಖು ೨೦-೧-೧೯೩೭ನೇ ಇಸ್ವಿಯ ದಿವಸದವಳಗೆ ವಾದಿಯು ಸದರಿ ಆಸ್ತಿಯ ಯೋಗ್ಯವಾದ ತಬದಿಲಿಯ

ಮಾಡಿಕೊಡುತ್ತೇನೆಂದು ಹೇಳಿದನು. ಆಗ ವಾದಿಯು ಸದರಿ ಆಸ್ತಿಗೆ ಪೂರ್ಣ ವಾಗಿ ಮಾಲಕನಾಗಿ ಇದ್ದನು. [ಅಥವಾ (೨) ಯೋಗ್ಯವಾದ ದಸ್ತೈವಜು ಬರೆದು ಕೊಟ್ಟು ಸದರಿ ಆಸ್ತಿಯು ಪ್ರತಿವಾದಿಗೆ ತಬದಿಲು ಮಾಡಿಕೊಡಲಿಕ್ಕೆ ವಾದಿಯು ಸಿದ್ಧನಾಗಿಯೂ ರಾಜಿಯಾಗಿಯೂ ಇದ್ದನು; ಮತ್ತು ಈಗ್ಗೆ ಸಿದ್ಧನಾ ಗಿಯೂ ರಾಜಿಯಾಗಿಯೂ ಇರುತ್ತಾನೆ; ಮತ್ತು ಆ ಪ್ರಕಾರ ತೆಗೆದುಕೋ ಎಂದು ಪ್ರತಿವಾದಿಗೆ ಹೇಳಿದನು.]

(೩) ಪ್ರತಿವಾದಿಯು ಆ ಹಣ ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ವಾದಿಯು ೪೫೨೫ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೪೯

## ಮನೆ ಕಟ್ಟುವವನ ಮೇಲೆ ಕಚ್ಚಾ ಕೆಲಸ ಮಾಡಿದ್ದಕ್ಕಾಗಿ ಸರನಾಮೆ

(೧) ವಾದಿ ಪ್ರತಿವಾದಿಗಳು ತಾರೀಖು ೧೭–೫–೧೯೨೪ನೇ ಇಸ್ವಿ ದಿವಸ ತಮ್ಮೊಳಗೆ ಕರಾರು ಮಾಡಿಕೊಂಡದ್ದೇನಂದರೆ, ಪ್ರತಿವಾದಿಯು ಮೂರು ತಿಂಗಳದಲ್ಲಿ ವಾದಿ ದಶಿಂದ ಒಂದು ಮನೆಯು ಕೆಳಗೆ ವರ್ಣಿಸಿದ ಜಾಗಾದ ಮೇಲೆ ಕಟ್ಟಿಸಿಕೊಡಬೇಕು. ಮತ್ತು ಆ ಬಗ್ಗೆ ವಾದಿಯು ಪ್ರತಿವಾದಿಗೆ ೨೫೭೦ ರೂಪಾ ಯಿಗಳನ್ನು ಕೊಡಬೇಕು.

ಸದರಿ ಜಾಗೇದ ವರ್ಣನೆ:—

(೨) ವಾದಿಯು ತನಗೆ ಸಂಬಂಧಿಸಿದಷ್ಟು ಆ ಕರಾರಿನ ಭಾಗವನ್ನು ಕುರಿತು ಯಾವತ್ತು ಶರತುಗಳನ್ನು ಸರಿಯಾಗಿ ಕಡೆಗಾಣಿಸಿದನು.

(೩) ಪ್ರತಿವಾದಿಯು ಕರಾರಿನಲ್ಲಿ ನಮೂದಿಸಿದ ಮನಿಯನ್ನು ಕೆಟ್ಟರೀತಿ ಯಿಂದ ಮತ್ತು ಆ ಕೆಲಸವನ್ನು ಅರಿಯದವನ ಹಾಗೆ ಕಟ್ಟಿದನು.

(೪) ಇದರಿಂದ ವಾದಿಗೆ ೫೦೦ ರೂಪಾಯಿ ಲುಕ್ಸಾನವಾಯಿತು. ಅದರ ತಪಶೀಲು—

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೫೦೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೫೦

## ಮೋಸದಿಂದ ಮಾಲು ದೊರೆಯಿಸಿಕೊಂಡ ಬಾಬತು

## ಸರನಾಮೆ

(೧) ತಾರೀಖು ೧೮–೪–೧೯೨೭ನೇ ಇಶ್ವಿದಿವಸ ಪ್ರತಿವಾದಿಯು ತನಗೆ ಕೆಲವು ಜೀನಸುಗಳನ್ನು ಮಾರಲಿಕ್ಕೆ ವಾದಿಯನ್ನು ಪ್ರೇರೇಪಿಸುವ ಬುದ್ಧಿಯಿಂದ ಪ್ರತಿವಾದಿಯಾದ ತಾನು ಪತ್ತುಳ್ಳವನಾಗಿಯೂ ಕೊಡತಕ್ಕದ್ದೆಲ್ಲ ಹೋಗಲಾಗಿ ೧೫೦೦೦ ರೂಪಾಯಿಗಳ ಸಂಚಯ ಉಳ್ಳವನಾಗಿಯೂ ಇರುತ್ತೇನೆಂದು ವಾದಿಗೆ ತಿಳಿಸಿದನು.

(೨) ಅದರಿಂದ ೫೦೦೦ ರೂಪಾಯಿಗಳ ಜೀನಸುಗಳನ್ನು ಪ್ರತಿವಾದಿಗೆ ಒಪ್ಪಿಸುವಂತೆ ವಾದಿಯು ಪ್ರೇರೇಪಿತನಾದನು.

(೩) ಸದರಿ ಪ್ರಕಾರ ತಿಳಿಸಿದ್ದು ಅಸತ್ಯವಾಗಿರುತ್ತದೆ ( ಅಥವಾ ಸುಳ್ಳತನದ ವಿಶೇಷ ಬಾಬತನ್ನು ವಿವರಿಸಬೇಕು ) ಮತ್ತು ಅದು ಸುಳ್ಳೆಂಬುದು ಆಗ ಪ್ರತಿವಾದಿಗೆ ತಿಳಿದಿತ್ತು.

(೪) ಸದರಿ ಜೀನಸುಗಳನ್ನು ತಯಾರುಮಾಡಿ ಅವನ್ನು ಹಡಗಿನಮೇಲೆ ಏರಿಸಲಿಕ್ಕೂ ಅಲ್ಲಿಂದ ತನ್ನ ವಶವಲ್ಲಿ ಹಿಂಪಕ್ಕೆ ಬರಮಾಡಿಕೊಳ್ಳಲಿಕ್ಕೂ ವಾದಿಯು ೧೩೫೦ ರೂಪಾಯಿಗಳನ್ನು ವೆಚ್ಚಮಾಡಿದನು.

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

ವಾದಿಯು ೧೩೫೦ ರುಪಾಯಿಗಳು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೫೧

## ಕಪಟದಿಂದ ಮತ್ತೊಬ್ಬ ಮನುಷ್ಯನಿಗೆ ಕಡವಾಗಿ ಮಾಲು ಕೊಡುವಂತೆ ಮಾಡಿದ ಬಾಬತು.

## ಸರನಾಮೆ

(೧) ತಾರೀಖು೧೦–೫–೧೯೨೮ನೇ ದಿವಸ ನರಸೋ ತಿಮ್ಮಾಜಿ ಕುಲಕರ್ಣಿ ಎಂಬ ಮನುಷ್ಯನು ಸಾಲ ತೀರಿಸುವ ಶಕ್ತಿಯುಳ್ಳವನೆಂದು ಅವನ ಪತ್ತು ಚನ್ನಾಗಿ ಇರತ್ತದೆಂದು ಕೊಡತಕ್ಕದ್ದೆಲ್ಲ ಕಳೆದು ೧೫೦೦ ರೂಪಾಯಿಗಳ ಸಂಚಯವು ಅವನ ಬಳಿಯಲ್ಲಿ ಇರುತ್ತದೆಂದೂ ಪ್ರತಿವಾದಿಯು ವಾದಿಗೆ ತಿಳಿಸಿದನು.

[ಅಥವಾ (೧) ನರಸೋ ತಿಮ್ಮಾಜಿ ಕುಲಕರ್ಣಿ ಎಂಬವನಿಗೆ ಈಗ ದೊಡ್ಡ ಅಧಿಕಾರದ ಕೆಲಸವಿರುತ್ತದೆಂತಲೂ ಅವನು ಸುಖಿಯಾಗಿ ಇರುತ್ತಾನೆಂತಲೂ ಅವನಿಗೆ ಕಡವಾಗಿ ಮಾಲು ಸಂಶಯವಿಲ್ಲದೆ ಕೊಡಬಹುದೆಂತಲೂ ಪ್ರತಿವಾಯು ವಾದಿಗೆ ತಿಳಿಸಿದನು.]

(೨) ಅದರಿಂದ ವಾದಿಯು ನರಸೋ ತಿಮ್ಮಾಜಿ ಕುಲಕರ್ಣಿ ಎಂಬವನಿಗೆ ೫೦೦ ರುಪಾಯಿಗಳ ಅಕ್ಕಿಯನ್ನು ತಾರೀಖು ೧೨–೫–೧೯೨೮ನೇ ಇಶ್ವಿ ದಿವಸ ಕಡವಾಗಿ ಮಾರಿದನು.

(೩) ಸದರಿ ಪ್ರಕಾರ ತಿಳಿಸಿದ್ದು ಸುಳ್ಳಾಗಿರುತ್ತದೆ. ಮತ್ತು ಅದು ಸುಳ್ಳೆಂಬುದು ಆಗ ಪ್ರತಿವಾದಿಗೆ ತಿಳಿದಿತ್ತು, ಮತ್ತು ಕಪಟದಿಂದ ವಾದಿಗೆ ಮೋಸ ಮಾಡುವ (ಯಾ ಕಪಟದಿಂದ ಕೇಡು ಮಾಡುವ) ಉದ್ದೇಶದಿಂದ ಪ್ರತಿವಾದಿಯು ಆ ಸುಳ್ಳ ಬತಾವಣಿಯನ್ನು ಮಾಡಿದನು.

೪ ಸದರಿ ನರಸೋ ತಿಮ್ಮಾಜಿ ಕುಲಕರ್ಣಿ ಎಂಬವನು ( ಸದರಿ ಕಡದ ಮುದ್ದತು ತೀರಿದ ಬಳಿಕ ಆ ಮಾಲಿನ ಕ್ರಯ ಕೊಡಲಿಲ್ಲ. ಅಥವಾ ) ಸದರಿ

ಅಕ್ಕಿಯ ಕ್ರಯ ಕೊಟ್ಟಿಲ್ಲ ಮತ್ತು ವಾದಿಯು ಆ ಯಾವತ್ತು ಮಾಲು ಕಳಕೊಂಡನು.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ವಾದಿಯು ೫೦೦ ರೂಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

## ನಂಬರು ೫೨

## ವಾದಿಯ ಭೂಮಿಯಲ್ಲಿದ್ದ ನೀರು ಕೆಡಿಸಿದ ಬಾಬತು

## ಸರನಾಮೆ

(೧) ಹುಬ್ಬಳ್ಳಿ ತಾಲೂಕ ಪೈಕಿ ಕೇಶ್ವಾಪೂರ ಗ್ರಾಮದಲ್ಲಿರುವ ರಿ. ಸ. ನ. ... ... ಎಕರೆ ... ... ಆಕಾರ ... ... ನೇದ್ದು ಭೂಮಿಯೂ ಅದರಲ್ಲಿ ಇರುವ ಬಾವಿಯೂ ಅದರೊಳಗಿನ ನೀರು ಸಹ ಈಗ ವಾದಿಯ ಸ್ವಾಧೀನದಲ್ಲಿ ಉಂಟು; ಮತ್ತು ಇದರಲ್ಲಿ ಮುಂದೆ ಬರೆದ ಯಾವತ್ತು ಸಮಯಗಳಲ್ಲಿ ಅವು ಅವನ ಸ್ವಾಧೀನವಲ್ಲಿ ಇದ್ದವು. ಸದರಿ ಬಾವಿಯಿಂದಲೂ ಅದರೊಳಗಿನ ನೀರನಿಂದಲೂ ಆಗುವ ಲಾಭಕ್ಕೂ ಅವುಗಳ ಉಪಯೋಗಕ್ಕೂ ವಾದಿಯು ಬಾಧ್ಯನಾಗಿದ್ದನು. ಕೆಲವು ಬುಗ್ಗೆಗಳೂ ತೊರೆಗಳೂ ಹರಿದು ಆ ಬಾವಿಯೊಳಗೆ ಬರುತಿದ್ದವು. ಅವುಗಳಿಂದ ಬಾವಿಯು ನೀರು ತುಂಬುತಿತ್ತು. ಆ ನೀರು ಕೆಡದೆ ಯಾ ಹೊಲಸಾಗದೆ ಬಾವಿಯಲ್ಲಿ ಬರತಕ್ಕ ಹಕ್ಕು ವಾದಿಗೆ ಇತ್ತು.

(೨) ಪ್ರತಿವಾದಿಯು ತಾರೀಖು ೧೪–೪–೧೯೨೪ನೇ ಇಶ್ವಿ ದಿವಸ ಅನ್ಯಾಯದಿಂದ ಆ ಬಾವಿಯನ್ನೂ ಅದರೊಳಗಿನ ನೀರನ್ನೂ ಅದರೊಳಗೆ ಹರಿದು ಬರುವ ಸದರಿ ಬುಗ್ಗೆಗಳನ್ನೂ ತೊರೆಗಳನ್ನೂ ಕೆಡಿಸಿ ಹೊಲಸು ಮಾಡಿದನು.

(೩) ಅದರಿಂದ ಆ ಬಾವಿಯೊಳಗಿನ ನೀರು ಕೆಟ್ಟು ಮನೆತನದ ಕೆಲಸಕ್ಕೆ ಬೇರೆ ಅತ್ಯಾವಶ್ಯವಾದ ಸಲಸಗಳಿಗೂ ನಿರುಪಯುಕ್ತವಾಯಿತು ಮತ್ತು ವಾದಿಯೂ ಅವನ ಕುಟುಂಬದವರೂ ಆ ಬಾವಿಯು ಮತ್ತು ನೀರಿನ ಉಪಯೋಗಕ್ಕು ಲಾಭಕ್ಕೂ ಎರವಾದರು.

## ನಂಬರು ೫೩

## ಹಾದಿಯ ಹಕ್ಕಿಗೆ ಆತಂಕ ಮಾಡಿದ ಬಾಬತು

### ಸರನಾಮೆ

(೧) ಗದಗ ತಾಲೂಕ ಪೈಕಿ ಮುಳಗುಂದ ಗ್ರಾಮದಲ್ಲಿ ಒಂದು ಮನೆಯು ವಾದಿಯ ಕಬಜೆಯಲ್ಲಿ ಉಂಟು, ಮತ್ತು ಇದರಲ್ಲಿ ಕೆಳಗೆ ಬರೆದ ಕಾಲಕ್ಕೆ ಇತ್ತು.

(೨) ಸದರಿ ಮನೆಯಿಂದ ವಾಹನ ಮೇರಿ (ಯಾ ಕಾಲು ನಡಿಗೆಯಿಂದ) ಒಂದು ಹೊಲವನ್ನು ದಾಟಿ ಸಾರ್ವಜನಿಕ ದೊಡ್ಡ ಬೀದಿಗೆ ಹೋಗಲಿಕ್ಕಾಗಿ ಮತ್ತು ಸದರೀ ದೊಡ್ಡ ಬೀದಿಯಿಂದ ಸದರೀ ಹೊಲವನ್ನು ದಾಟಿ ಸದರಿ ಮನೆಗೆ ತಿರಿಗಿ ಬರುವದಕ್ಕಾಗಿ ಒಂದು ದಾರಿಯ ವಹಿವಾಟು ತಾನು ಸ್ವತಃ ಮಾಡುವ ಅಥವಾ ತನ್ನ ನೌಕರರಿಯಿಂದ ಮಾಡಿಸುವ ಹಕ್ಕು ಆತನಗಿತ್ತು.

(೩) ಪ್ರತಿವಾದಿಯು ತಾರೀಖು ೧೩–೪–೧೯೨೮ನೇ ಇಸ್ವಿ ದಿವಸ ಆ ದಾರಿಯನ್ನು ಅನ್ಯಾಯವಾಗಿ ಆತಂಕಿಸಿದನು, ಅದರಿಂದ ವಾದಿಗೆ ವಾಹನಮೇರಿ ಯಾ ಕಾಲುನಡಿಗೆಯಿಂದ ಯಾ ಯಾವದೊಂದು ರೀತಿಯಿಂದ ಆ ಮಾರ್ಗದ ವಹಿವಾಟು ಮಾಡಲಿಕ್ಕೆ ಹರಕತು ಆಯಿತು; ಪ್ರತಿವಾದಿಯು ಸದರಿ ದಾರಿಯನ್ನು ಅಂದಿನಿಂದ ಹಾಗೆಯೇ ಅನ್ಯಾಯವಾಗಿ ಆತಂಕಿಸಿದ್ದಾನೆ.

(೪) (ವಿಶೇಷವಾಗಿ ಕೇಡು ಏನಾಹರು ಆಗಿದ್ದರೆ ಅದನ್ನು ವಿವರಿಸು)

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಪ್ರತಿವಾದಿಯು ಸದರಿಯಂತೆ ದಾರಿಯ ವಹಿವಾಟಿಗೆ ಹರಕತು ಮಾಡ ಬಾರದೆಂದು ನಿರಂತರ ತಾಕೀದು ಕೊಡಬೇಕು.

## ನಂಬರು ೫೪

## ರಾಜಮಾರ್ಗಕ್ಕೆ ಆತಂಕ ಮಾಡಿದ ಬಾಬತು

### ಸರನಾಮೆ

(೧) ಹುಬ್ಬಳ್ಳಿ ಶಹರದಲ್ಲಿಯ ದುರ್ಗದ ಬೈಲಿನಿಂದ ಚಿಟಗುಪ್ಪಿ ದವಾಖಾನೆಗೆ ಹೋಗುವ ಬೀದಿಯು ಸಾರ್ವಜನಿಕ ಬೀದಿಯು ಇರುತ್ತದೆ.

(೨) ಡಾಕ್ಟರ ಸೋನಟಕ್ಕೆ ಇವರ ದಾವಾಖನೆಯ ಮುಂದೆ ನ್ಯಾಯಕ್ಕೆ ವಿರುದ್ಧವಾಗಿ ಪ್ರತಿವಾದಿಯು ಕಂದಕ ತಗೆದು ಸದರಿ ಬೀದಿಯು ಆತಂಕಿಸಲ್ಪಡು ಹಾಗೆ ಕಲ್ಲು ಮಣ್ಣು ಗಳನ್ನು ಒಟ್ಟಿದನು.

(೩) ವಾದಿಯು ಕಾಯದೆಶೀರವಾಗಿ ಸದರಿ ಬೀದಿಯಿಂದ ಹೋಗುತ್ತಿರಲಾಗಿ, ಸದರಿ ಕಾರಣದಿಂದ ಆ ಕಲ್ಲು ಮಣ್ಣುಗಳ ಮೇಲೆ (ಯಾ ಸದರೀ ಕಂದಕದೊಳಗೆ) ಬಿದ್ದು ಕೈ ಮುರಿದುಕೊಂಡು ಬಹಳ ವ್ಯಥೆಪಟ್ಟನು, ಮತ್ತು ಅದರಿಂದ ಅವನಿಗೆ ತನ್ನ ಉದ್ಯೋಗ ನಡೆಯಿಸಲಿಕ್ಕೆ ಬಹಳ ದಿವಸ ಹರಕತು ಆಯಿತು, ಮತ್ತು ಔಷಧೋಪಚಾರಕ್ಕೆ ಅವನ ಹಣ ವೆಚ್ಚವಾಯಿತು.

ಲುಕ್ಸಾನಿಯ ತಪಶೀಲು:—

... ... ... ...
... ... ... ...

**ವಾದಿ ವಿನಂತಿ ಏನಂದರೆ:—**

ಲುಕ್ಸಾನಿಯ ಬಗ್ಗೆ ವಾದಿಯು ೩೦೦ ರೂಪಾಯಿಗಳು ಸಿಗಬೇಕೆಂದ ಬೇಡುತ್ತಾನೆ.

## ನಂಬರು ೫೫

## ನೀರು ಹರಿಯುವ ದಾರಿಯನ್ನು ತಿರುಗಿಸುವ ಬಾಬತು

### ಸರನಾಮೆ

೧. ಧಾರವಾಡ ಜಿಲ್ಹಾ ಹುಬ್ಬಳ್ಳಿ ತಾಲೂಕ ಪೈಕಿ ಹೀರೆನರ್ತಿ ಗ್ರಾಮದಲ್ಲಿ ಬೆಣ್ಣೆಹಳ್ಳದ ಮೇಲೆ ಇರುವದೊಂದು ಬೀಸುವ ಯಂತ್ರವೂ ವಾದಿಯ ಕಬಜದಲ್ಲಿ ಉಂಟು. ಮತ್ತು ಕೆಳಗೆ ಬರೆದಕಾಲಕ್ಕೆ ಇತ್ತು.

೨. ಆ ಕಬಜೆಯಿದ್ದ ಕಾರಣದಿಂದ ಸದರಿ ಬೀಸುವ ಯಂತ್ರವನ್ನು ನಡಿಸುವದಕ್ಕೋಸ್ಕರವಾಗಿ ಸದರಿ ಹಳ್ಳದ ಪ್ರವಾಹಕ್ಕೆ ವಾದಿಯು ಹಕ್ಕುಂಟು.

೩. ಪ್ರತಿವಾದಿಯು ತಾರೀಖು ೧೩-೫-೧೯೨೭ನೇ ಇಸ್ವಿ ದಿವಸ ಸದರಿ ಹಳ್ಳದ ದಂಡೆಯನ್ನು ಕಡಿದು ಅದರ ಪ್ರವಾಹವನ್ನು ಅನ್ಯಾಯವಾಗಿ ತಿರುಗಿಸಿದನು. ಅದರಿಂದ ವಾದಿಯು ಬೀಸುವ ಕಲ್ಲಿಗೆ ಕಡಿಮೆ ನೀರು ಬರಹತ್ತಿತ್ತು.

೪. ಸದರಿ ಕಾರಣದಿಂದ ವಾದಿಯು ದಿವಸಕ್ಕೆ ೧೦೦೮೦ ಚೀಲಗಳಕಿಂತ ಹೆಚ್ಚು ಧಾನ್ಯ ಬೀಸಲಿಕ್ಕೆ ಅಸಮರ್ಥನಾದನು, ಆದರೆ ಸದರಿ ಪ್ರವಾಹ ತಿರೆಗಿಸುವ ಪೂರ್ವದಲ್ಲಿ ಅವನು ಪ್ರತಿದಿವಸ ೧೫೦೮೦ ಚೀಲಗಳನ್ನು ಬೀಸುತ್ತಿದ್ದನು. ಅದರಿಂದ ವಾದಿಗೆ ಆದ ಲುಕ್ಸಾನಿಯ ತಪಶೀಲು:—

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

(ಅ) ಲುಕ್ಸಾನಿಯ ಬಗ್ಗೆ ವಾದಿಯು ೫೦೦ ರುಪಾಯಿಗಳನ್ನು ಸಿಗಬೇಕೆಂದು ಬೇಡುತ್ತಾನೆ.

(ಬ) ಸದರಿಯಂತೆ ಹಳ್ಳದ ದಂಡೆಯನ್ನು ಕಡದದ್ದು ಭರಾಯಿಸಿ ಸದರಿ ದಂಡಿಯು ಮೊದಲಿದ್ದಂತೆ ಮಾಡಲಿಕ್ಕೆ ಮತ್ತು

(ಕ) ಪುನಃ ಈ ರೀತಿ ದಂಡಿಯು ಕಡಿಯಬಾರದೆಂಬ ಬಗ್ಗೆ ಪ್ರತಿವಾದಿಗೆ ಕಾಯಮ ತಾಕೀದಿ ಮಾಡಬೇಕು.

## ನಂಬರು ೫೬

## ಭೂಮಿಯನ್ನು ತೋಯಿಸುವ ಬಗ್ಗೆ ನೀರು ಉಪಯೋಗಿಸುವ ಹಕ್ಕಿಗೆ ಹರಕತು ಮಾಡಿದ ಬಾಬತು

### ಸರನಾಮೆ

(೧) ಹುಬ್ಬಳ್ಳಿ ತಾಲೂಕ ಪೈಕಿ ಉಣಕಲ್ಲ ಗ್ರಾಮದಲ್ಲಿರುವ ಕೆಲವು ಭೂಮಿಗಳು ವಾದಿಯ ಕಬಜೆಯಲ್ಲಿ ಇರುತ್ತವೆ; ಮತ್ತು ಕೆಳಗೆ ಬರೆದ ಕಾಲಕ್ಕೆ

ಇದ್ದವು; ಮತ್ತು ಸದರಿ ಭೂಮಿಗಳ ವ್ಯವಸಾಯಕ್ಕೆ ಬೇಕಾದ ನೀರನ್ನು ಒಂದು ಹಳ್ಳದಿಂದ ತೆಗೆದುಕೊಂಡು ಉಪಯೋಗಿಸುವ ಹಕ್ಕು ವಾದಿಗೆ ಇರುತ್ತದೆ ಮತ್ತು ಕೆಳಗೆ ಬರೆದ ಕಾಲಕ್ಕೆ ಇತ್ತು.

(೨) ಪ್ರತಿವಾದಿಯು ತಾರೀಖು ೬–೭–೧೯೨೮ನೇ ಇಸ್ವಿ ದಿವಸ ಸದರಿ ಹಳ್ಳದ ನೀರನ್ನು ಅನ್ಯಾಯವಾಗಿ ಆತಂಕಿಸಿ ಮತ್ತು ತಿರುಗಿಸಿ ಸದರಿ ಪ್ರಕಾರ ಆ ಹಳ್ಳದ ಸದರೀ ನೀರಿನ ಪೈಕಿ ಸದರಿ ಕೆಲವು ಭಾಗವನ್ನು ತೆಗೆದುಕೊಂಡು ಉಪಯೋಗಿಸಲಿಕ್ಕೆ ವಾದಿಗೆ ಆತಂಕಮಾಡಿದನು.

... ... ... ...

... ... ... ...

**ವಾದಿ ವಿನಂತಿ ಏದಂದರೆ:—**

ಮೇಲಿನಂತೆ ನೀರು ತೆಗೆದು ಕೊಳ್ಳಲಿಕ್ಕೆ ವಾದಿಗೆ ಪ್ರತಿವಾದಿಯು ಆತಂಕಿಸಬಾರದೆಂಬ ಬಗ್ಗೆ ತಾಕೀತು ಮಾಡಬೇಕು.

## ನಂಬರು ೫೭

## ದ್ವೇಷದಿಂದ ಫಿರ್ಯಾದಿಯನ್ನು ನಡೆಯಿಸಿದ ಬಾಬತು

### ಸರನಾಮೆ

(೧) ತಾರೀಖು ೪–೧೧–೧೯೨೭ನೇ ಇಸ್ವಿ ದಿವಸ ಪ್ರತಿವಾದಿಯು ಹುಬ್ಬಳ್ಳಿ ೧ನೇ ವರ್ಗ ರೆಸಿಡೆಂಟ ಮ್ಯಾಜಿಸ್ಟ್ರೇಟರವರಿಂದ ವಿಶ್ವಾಸಘಾತಕ ಆರೋಪದ ಮೇಲೆ ಕೈದಿನ ವಾರಂಟು ಪಡೆದು, ವಾದಿಯನ್ನು ದಸ್ತಗಿರು ಮಾಡಿಸಿದನು ಮತ್ತು ೨೦ ದಿವಸಗಳ ವರೆಗೆ ಕೈದಿನಲ್ಲಿ ಇಡಿಸಿದನು.

(೨) ಸದರಿ ಮ್ಯಾಜಿಸ್ಟ್ರೇಟರು. ತಾರೀಖು ೧೦–೧–೧೯೨೮ನೇ ಇಸ್ವಿ ದಿವಸ ಪ್ರತಿವಾದಿಯ ಸದರಿ ಫಿರ್ಯಾದಿಯನ್ನು ರದ್ದುಮಾಡಿ, ವಾದಿಯನ್ನು ದೋಷಯುಕ್ತ ಮಾಡಿದನು.

(೩) ಪ್ರತಿವಾದಿಯು ಸಯುಕ್ತಿಕವಾದ ಯಾ ಸಂಭಾವ್ಯವಾದ ಕಾರಣವಿಲ್ಲದೆ ದ್ವೇಷ ಬುದ್ಧಿಯಿಂದ ಸದರಿ ಫಿರ್ಯಾದಿಯನ್ನು ಮಾಡಿದನು.

(೪) ಪ್ರತಿವಾದಿಯ ಸದರಿ ಕೃತ್ಯದಿಂದ ವಾದಿಯ ದೇಹಕ್ಕೂ ಮನಸ್ಸಿಗೂ ಕ್ಲೇಶವಾಯಿತು ಮತ್ತು ಅವನ ಪತ್ತು ಕೆಟ್ಟಿತು ಮತ್ತು ಅವನಿಗೆ ಕೆಳಗಿನಂತೆ ವಿಶೇಷ ಲುಕ್ಸಾನವಾಯಿತು.

ಅದರ ತಪಶೀಲು.

೧. ಕೈದಿನಿಂದ ಬಿಡುಗಡೆ ಹೊಂದಲಿಕ್ಕೆ ರಾ. ರಂಗರಾವ ಕುಲಕರ್ಣಿ ವಕೀಲ ಇವರ ಫೀ ರೂಪಾಯಿ ೫೦.

೨. ಫಿರ್ಯಾದಿಯ ಜಬಾಬು ಕೊಡಲಿಕ್ಕೆ ರಾ. ವೆಂಕಟರಾವ ಗುಡಿ ವಕೀಲ ಇವಿರ ಫಿ ರೂಪಾಯಿ ೩೦೦.

೩. ಆರೋಪಿಂದ ಬಜಾವ ಹೊಂದುವದಕ್ಕಾಗಿ ಚಿಲ್ಲರ ವೆಚ್ಚ ರೂಪಾಯಿ ೭೫.

೪. ಸದರಿ ಕೈದಿನ ಮೂಲಕವಾಗಿ ವಾದಿಯು ಹಸನಸಾಹೇಬ ಕುಮಠಾಕರ ಎಂಬುವನಲ್ಲಿ ಮಾಡುತ್ತಿದ್ದ ಕಾರಕೂನಿಯ ನೌಕರಿಯುನ್ನು ಕಳೆದುಕೊಂಡನು (ಅಥವಾ ಬಹುಜನರು ವಾದಿಯನ್ನು ಕೈದು ಮಾಡಿದ್ದು ಕೇಳಿ ಅವನು ಅಪರಾಧಿಯೆಂದೆಣಿಸಿ ಅವನ ಕೂಡ ವ್ಯವಹಾರವನ್ನು ನಿಲ್ಲಿಸಿ ಬಿಟ್ಟರು) ಅದರಿಂದ ಆದ ಲುಕ್ಸಾನು ರೂಪಾಯಿ ೫೮೦.

ಅಂತು ರೂಪಾಯಿ ೯೨೫

... ... ... ...

... ... ... ...

**ವಾದಿ ವಿನಂತಿ ಏನಂದರೆ: —**

(ಅ) ವಾದಿಯ ದೇಹಕ್ಕೂ ಮನಸ್ಸಿಗೂ ಕ್ಲೇಶವಾಯಿತೆಂಬ ಬಗ್ಗೆ ೫೦೦ ರೂಪಾಯಿಗಳನ್ನು ಮತ್ತು

(ಬ) ಮೇಲ್ಕಂಡ ವಿಶೇಷ ಲುಕ್ಸಾನಿಯ ಬಗ್ಗೆ ೯೨೫ ರೂಪಾಯಿಗಳನ್ನು ಅಂತು ೧೪೨೫ ರುಪಾಯಿಗಳನ್ನು ಸಿಗಬೇಕೆಂದು ವಾದಿಯು ಬೇಡುತ್ತಾನೆ.

೧೫—೬೬೯೬

## ನಂಬರು ೫೮

## ಮೋಸದಿಂದ ಮಾಲು ಖರೀದಿ ಮಾಡುವವನ ಮೇಲೆಯೂ ಆ ಮೋಸವನ್ನು ಅರಿತು ಅವನ ಕಡೆಯಿಂದ ಆ ಮಾಲು ತಬದಿಲು ಮಾಡಿ ತೆಗೆದುಕೊಂಡವನ ಮೇಲೆಯೂ ಸರನಾಮೆ

೧. ಬೂದಪ್ಪಾ ಮಲ್ಲಪ್ಪಾ ಎಂಬ ಪ್ರತಿವಾದಿಯು ತನಗೆ ವಾದಿಯು ಕೆಲವು ಸರಕುಗಳನ್ನು ಮಾರುವ ಹಾಗೆ ಅವನನ್ನು ಪ್ರೇರೇಪಿಸುವ ಹವಣಿಕೆಯಿಂದ ತಾನು ಪತ್ತುಳ್ಳವನೆಂತಲೂ, ಸಾಲಸಂಬಂಧ ಕಳೆಯಲಾಗಿ ೫೦೦೦ ರೂಪಾಯಿಗಳ ಸಂಗ್ರಹವುಳ್ಳವನೆಂತಲೂ ತಾರೀಖು ೪-೫-೧೯೩೩ನೇ ಇಸ್ವಿದಿವಸಾ ವಾದಿಗೆ ತಿಳಿಸಿದನು.

೨. ಅದನ್ನು ನಂಬಿ ವಾದಿಯು ಸದರಿ ಬೂದಪ್ಪಗೆ ಚಹಾದ ೧೦೦ ಪೆಟ್ಟಿಗೆಗಳನ್ನು ಮಾರಿ ಒಪ್ಪಿಸಲಿಕ್ಕೆ ಪ್ರವೃತ್ತನಾದನು. ಅವುಗಳ ಅಂದಾಜಿನ ಬೆಲೆಯು ೩೦೦೦ ರೂಪಾಯಿಯಾಗಿದೆ.

೩. ಸದರಿ ಪ್ರಕಾರ ತಿಳಿಸಿದ್ದು ಸುಳ್ಳ ಬತಾವಣಿಯು; ಮತ್ತು ಅಂಥಾದ್ದೆಂಬುದು ಸದರಿ ಬೂದಪ್ಪಗೆ ಆಗ ತಿಳಿದಿತ್ತು; (ಅಥವಾ ಸದರಿ ಪ್ರಕಾರ ತಿಳಿಸಿದಾಗ ಸದರಿ ಬೂದಪ್ಪನು ನಾದಾರನಾಗಿದ್ದು ತಾನು ನಾದಾರನೆಂಬುದನ್ನು ಅರಿತಿದ್ದನು.)

೪. ಸದರಿ ಬೂದಪ್ಪನು ಆ ಮೇಲೆ ಸದರಿ ಮಾಲನ್ನು ಹುಚ್ಚಯ್ಯಾ ಕಲಗಂಜಯ್ಯಾ ಎಂಬ ಪ್ರತಿವಾದಿಗೆ ಮೊಬದಲೆ ಏನೂ ತೆಗೆದುಕೊಳ್ಳದೆ (ಅಥವಾ ಹುಚ್ಚಯ್ಯಾ ಕಲಗುಂಜಯ್ಯಾ ಎಂಬ ಪ್ರತಿವಾದಿಗೆ ಸದರಿ ಪ್ರಕಾರ ತಿಳಿಸಿದ್ದು ಸುಳ್ಳೆಂಬುದು ತಿಳಿದಿದ್ದು) ತಬದೀಲು ಮಾಡಿಕೊಟ್ಟನು.

... ... ... ...

... ... ... ...

ವಾದಿಯು ಕೆಳಗೆ ಬರೆದಂತೆ ಪ್ರಾರ್ಥಿಸುತ್ತಾನೆ:—

೧. ಸದರಿ ಮಾಲಿನ ಕಬಜವನ್ನು ಕೊಡಿಸಬೇಕು, ಅಥವಾ ಆ ಕಬಜವನ್ನು ಕೊಡಿಸಗೊಡದಿದ್ದರೆ ೩೦೦೦ ರೂಪಾಯಿಗಳನ್ನು ಕೊಡಿಸಬೇಕು.

೨. ಆ ಮಾಲು ಇಟ್ಟುಕೊಂಡಬಾಬತು ಲುಕ್ಸಾನು ೫೦೦ ರೂಪಾಯಿ ಕೊಡಿಸಬೇಕು.

## ನಂಬರು ೫೯

## ತಪ್ಪಾದ ಕಾರಣದಿಂದ ಕರಾರು ರದ್ದು ಮಾಡುವದನ್ನು ಕುರಿತು ಸರನಾಮೆ

೧. ಪ್ರತಿವಾದಿಯು, ಹುಬ್ಬಳ್ಳಿ ತಾಲೂಕ ಪೈಕಿ ಬಮ್ಮಾಪುರ ಗ್ರಾಮದಲ್ಲಿ ಇರುವ ತನ್ನ ಭೂಮಿಯು ೨೫ ಎಕರೆಗಳನ್ನುಂಟೆಂದು ತಾರೀಖು೧೬-೩-೧೯೨೫ ನೇ ಇಸ್ವಿ ದಿವಸ ವಾದಿಗೆ ತಿಳಿಸಿದನು.

೨. ಅದರಿಂದ ಸದರಿ ತಿಳಿಸಿದ ಮಜಕೂರು ನಿಜವೆಂದು ನಂಬಿ, ವಾದಿಯು ಆ ಭೂಮಿಯನ್ನು ೨೫೦೦ ರೂಪಾಯಿಗೆ ಕೊಂಡುಕೊಳ್ಳಲಿಕ್ಕೆ ಪ್ರವೃತ್ತನಾದನು ಮತ್ತು ಒಂದು ಕರಾರನಾಮೆಗೆ ಸಹಿಮಾಡಿದನು. ಆದರೆ ಪ್ರತಿವಾದಿಯು ಆ ಭೂಮಿಯನ್ನು ವಾದಿಗೆ ತಬದಿಲು ಮಾಡಿಕೊಟ್ಟಿಲ್ಲ.

೩. ತಾರೀಖು ೨೪-೩-೧೯೨೫ನೇ ಇಸ್ವಿದಿವಸ ವಾದಿಯು ಪ್ರತಿವಾದಿಗೆ ಆ ಖರೀದಿಯ ಹಣದಲ್ಲಿ ೫೦೦ ರೂಪಾಯಿಗಳನ್ನು ಕೊಟ್ಟನು.

೪. ಸದರಿ ಭೂಮಿಯು ನಿಜವಾಗಿ ೨೦ ಎಕರೆ ಮಾತ್ರ ಇರುತ್ತದೆ.

... ... ... ...

ವಾದಿಯು ಕೆಳಗೆ ಬರೆದಂತೆ ಪ್ರಾರ್ಥಿಸುತ್ತಾನೆ—

೧. ತಾರೀಖು ೨೪-೩-೧೯೨೫ನೇ ಇಸ್ವಿ ದಿವಸದಿಂದ ದರಸಾಲು ದರ ಶೇಕಡಾ ೧೨ ರೂಪಾಯಿಯ ದರದಂತೆ ಆಗುವ ಬಡ್ಡಿ ರೂಪಾಯಿ ೭೫ ಮತ್ತು ಕೊಟ್ಟ ೫೦೦ ರೂಪಾಯಿ ಅಂತು ೫೭೫ ರೂಪಾಯಿಗಳನ್ನು ಕೊಡಿಸಬೇಕು, ಮತ್ತು

೨. ಸದರೀ ಕರಾರಪತ್ರವನ್ನು ಹಿಂದಕ್ಕೆ ತೆಗೆದುಕೊಂಡು ರದ್ದು ಮಾಡಬೇಕು.

## ನಂಬರು ೬೦

### ಕೇಡುಮಾಡಬಾರದೆಂಬದಾಗಿ ತಾಕೀದು ಪಡೆಯುವದಕ್ಕಾಗಿ

### ಸರನಾಮೆ

೧. ವಾದಿಯು, ಹುಬ್ಬಳ್ಳಿ ತಾಲೂಕ ಪೈಕಿ ಪರಸಾಪುರ ಗಾಮದಲ್ಲಿ ಇರುವ ಮಾವಿನ ತೋಟದ, ಪೂರ್ಣ ಮಾಲಕನಿರುತ್ತಾನೆ.

೨. ಪ್ರತಿವಾದಿಯು ಅದನ್ನು ವಾದಿಯ ಕಡೆಯಿಂದ ಬಾಡಿಗೆಗೆ ತೆಗೆದು ಕೊಂಡದ್ದರಿಂದ ಅದು ಅವನ ಕಬಜೆಯಲ್ಲಿ ಇರುತ್ತದೆ.

೩. ಪ್ರತಿವಾದಿಯು ವಾದಿಯ ಸಮ್ಮತಿಯನ್ನು ಪಡೆಯದೆ ಮಾರುವ ದಕ್ಕೋಸ್ಕರವಾಗಿ ೫ ಬೆಲೆಯುಳ್ಳ ಮರಗಳನ್ನು ಕಡದಿರುತ್ತಾನೆ. ಮತ್ತು ಇನ್ನೂ ಹೆಚ್ಚಿಗೆ ಕಡಿಯುವ ಹೆದರಿಕೆಯನ್ನು ತೋರಿಸುತ್ತಾನೆ.

... ... ... ...

ವಾದಿಯು ಸದರಿ ಸ್ಥಳದಲ್ಲಿ ಹೆಚ್ಚಿಗೆ ಕೇಡು ಮಾಡದ ಹಾಗೆ ಯಾ ಮಾಡ ಗೊಡದ ಹಾಗೆ ಪ್ರತಿವಾದಿಗೆ ತಾಕೀದು ಮಾಡುವ ವಿಷಯದಲ್ಲಿ ಪ್ರಾರ್ಥಿಸುತ್ತೇನೆ.

[ ಹಣದ ಲುಕ್ಸಾನು ಸಹ ಬೇಡಬಹುದು. ]

## ನಂಬರು ೬೧

### ಉಪದ್ರವ ಮಾಡಬಾರದೆಂಬುದಾಗಿ ತಾಕೀದು ಪಡೆಯುವ ಬಾಬತು

### ಸರನಾಮೆ

(೧) ವಾದಿಯು ಕೆಳಗೆ ವರ್ಣಿಸಿದ ಮನೆಯ ಪೂರ್ಣ ಮಾಲಕನಾಗಿರು ತ್ತಾನೆ; ಮತ್ತು ಇದರಲ್ಲಿ ಕೆಳಗೆ ಬರೆದ ಎಲ್ಲ ಕಾಲಗಳಲ್ಲಿ ಇದ್ದನು.

ಸದರೀ ಮನೆಯ ವರ್ಣನೆ:—

... ... ... ...

(೨) ಪ್ರತಿವಾದಿಯು ಅದೇ ಓಣಿಯಲ್ಲಿ ಇರುವದೊಂದು ಕೆಳಗೆ ವರ್ಣಿಸಿದ ಜಮೀನಿನ ಪೂರ್ಣ ಮಾಲಕನಾಗಿರುತ್ತಾನೆ; ಮತ್ತು ಸದರೀ ಎಲ್ಲ ಕಾಲಗಳಲ್ಲಿದ್ದನು.

ಸದರೀ ಜಮೀನಿಯ ವರ್ಣನೆ:—

... ... ... ...

(೩) ಪ್ರತಿವಾದಿಯು ತನ್ನ ಸದರಿ ಸ್ಥಳದಲ್ಲಿ ತಾರೀಖು ೧೬–೪–೧೯೨೦ ನೇ ಇಸ್ವಿ ದಿವಸ ಒಂದು ಕಸಾಯಿ ಅಂಗಡಿಯನ್ನು ಹಾಕಿ, ಅದನ್ನು ಈಗ್ಲೂ ನಡಿಸಿರುತ್ತಾನೆ; ಅಂದನಿಂದ ಇದು ವರೆಗೆ ಅವನು ಎಡೆಬಿಡದೆ ದನಗಳನ್ನು ಅಲ್ಲಿಗೆ ತಂದು ಕೊಲ್ಲಿಸುವ ಉದ್ಯೋಗ ನಡೆಯಿಸಿರುತ್ತಾನೆ; ಮತ್ತು ರಕ್ತ ಮತ್ತು ಕೊಳಕ ಮಾಂಸಗಳನ್ನು ವಾದಿಯ ಸದರಿ ಮನೆಯ ಎದುರಿನ ಓಣಿಯಲ್ಲಿ ಚಲ್ಲಿಸಿದ್ದಾನೆ.

(೪) ಅದರಿಂದ ವಾದಿಗೆ ಸದರಿ ಮನೆಯನ್ನು ಬಿಡಬೇಕಾಯಿತು. ಮತ್ತು ಬಾಡಿಗೆಗೂ ಅದನ್ನು ಯಾರು ತೆಗೆದುಕೊಳ್ಳುವದಿಲ್ಲ.

... ... ... ...

... ... ... ...

ಪ್ರತಿವಾದಿಯು ಸದರಿಯಂತೆ ಉಪದ್ರವವನ್ನು ಮಾಡಬಾರದೆಂದು ಅಥವಾ ಮಾಡಗೊಡಬಾರದೆಂದು ತಾಕೀದು ಕೊಟ್ಟು ಪ್ರತಿವಾದಿಗೆ ಆತಂಕ ಮಾಡುವ ವಿಷಯದಲ್ಲಿ ವಾದಿಯು ಪ್ರಾರ್ಥಿಸುತ್ತಾನೆ.

## ನಂಬರು ೬೨

### ಸಾರ್ವಜನಿಕ ಪೀಡನೆಯು

### ಸರನಾಮೆ

(೧) ಪ್ರತಿವಾದಿಯು ಹುಬ್ಬಳ್ಳಿ ಶಹರದಲ್ಲಿ ಕುಪ್ಪೀಕರ ಹೆಸರನಿಂದ ಪ್ರಸಿದ್ಧವಾಗಿರುವ ಒಂದು ಸಾರ್ವಜನಿಕ ಮಾರ್ಗದಮೇಲೆ ಅನ್ಯಾಯದಿಂದ ಮಣ್ಣಿನ ಮತ್ತು ಕಲ್ಲುಗಳ ರಾಶಿಯನ್ನು ಹಾಕಿದನು ಮತ್ತು ಅದರ ಮೂಲಕವಾಗಿ ಆ

ಮಾರ್ಗದಿಂದ ಬರ ಹೋಗುವ ಜನರಿಗೆ ಅಡ್ಡಿಯಾಯಿತು. ಮತ್ತು ಹಾಗೆ ಮಾಡದಂತೆ ಅವನಿಗೆ ಬಂದೋಬಸ್ತು ಮಾಡಿದ ಹೊರತಾಗಿ ಅದೇರೀತಿಯಲ್ಲಿ ಇನ್ನೂ ಅನ್ಯಾಯದ ಕೃತ್ಯವನ್ನು ಚಾಲು ಮಾಡುವೆನೆಂದು ಮತ್ತು ಪುನಃ ಮಾಡುವೆನೆಂದು ಹೆದರಿಸುತ್ತಾನೆ; ಮತ್ತು ಹಾಗೆ ಮಾಡುವ ಉದ್ದೇಶವುಳ್ಳವನಾಗಿದ್ದಾನೆ.

(೨) ವಾದಿಯು ಈ ದಾವೆಯನ್ನು ಮಾಡುವ ವಿಷಯದಲ್ಲಿ ಧಾರವಾಡ ಜಿಲ್ಹಾದ ಕಲೆಕ್ಟರನ ಲೇಖೀ ಮಂಜೂರಿಯನ್ನು ಪಡೆದುಕೊಂಡಿದ್ದಾನೆ.

... ... ... ...

... ... ... ...

**ವಾದಿಯು ಈ ಕೆಳಗೆ ಬರೆದಂತೆ ಪ್ರಾರ್ಥಿಸುತ್ತಾನೆ:—**

(೧) ಸದರಿ ಸಾರ್ವಜನಿಕ ಮಾರ್ಗದಿಂದ ಬರ ಹೋಗುವದಕ್ಕೆ ಜನರಿಗೆ ಅಡ್ಡಿಮಾಡುವ ಹಕ್ಕು ಪ್ರತಿವಾದಿಗೆ ಇಲ್ಲವೆಂದು ಜಾಹೀರು ಮಾಡಬೇಕು.

(೨) ಪ್ರತಿವಾದಿಯು ಸದರೀ ಸಾರ್ವಜನಿಕ ಮಾರ್ಗದಿಂದ ಬರ ಹೋಗುವದಕ್ಕೆ ಜನರಿಗೆ ಅಡ್ಡಿ ಮಾಡಬಾರದೆಂದು ಅವನಿಗೆ ತಾಕೀದು ಕೊಡಬೇಕು; ಮತ್ತು ಮೇಲೆ ಹೇಳಿದಂತೆ ಅನ್ಯಾಯದಿಂದ ಹಾಕಿದ ಮಣ್ಣಿನ ಅಥವಾ ಕಲ್ಲುಗಳ ರಾಶಿಯನ್ನು ಪ್ರತಿವಾದಿಯು ತೆಗೆದು ಹಾಕಬೇಕೆಂದು ಅವನಿಗೆ ಹುಕುಮು ಮಾಡಬೇಕು.

## ನಂಬರು ೬೩

## ಅಂತರವಾದದ ದಾವೆ

## ಸರನಾಮೆ

(೧) ಅರ್ಜಿಯಲ್ಲಿ ಕೆಳಗೆ ಬರೆದ ಹಕ್ಕುಗಳು ತೋರಿಸಲ್ಪಟ್ಟ ತಾರೀಖಿನ ಪೂರ್ವದಲ್ಲಿ ಎಲ್ಲಪ್ಪಾ ರಾಚಪ್ಪಾ ಅಗಸರ ಎಂಬುವವನು ಒಂದು ಬಂಗಾರದ ತೋಡೆ ಜೋಡು ಮತ್ತು ಒಂದು ನತ್ತು ಸುರಕ್ಷಿತವಾಗಿ ಇಡಬೇಕೆಂದು ವಾದಿಯ ಹತ್ತರ ಇಟ್ಟನು.

(೨) ಮಲ್ಲಪ್ಪಾ ರಾಚಪ್ಪಾ ಎಂಬ ಪ್ರತಿವಾದಿಯು ಮೇಲ್ಕಂಡ ಎಲ್ಲಪ್ಪಾ ರಾಚಪ್ಪಾ ಎಂಬುವವನು ಅದರ ಮಾಲಕಿಯನ್ನು ತನಗೆ ಕೊಟ್ಟಿರುತ್ತಾನೆಂದು ಹೇಳಿ ಅದರ ಆಧಾರದಿಂದ ಅದನ್ನು ಬೇಡುತ್ತಾನೆ.

(೩) ರುದ್ರಪ್ಪಾ ರಾಚಪ್ಪಾ ಎಂಬ ಪ್ರತಿವಾದಿಯು ಮೇಲ್ಕಂಡ ಎಲ್ಲಪ್ಪಾ ರಾಚಪ್ಪಾ ಎಂಬುವವನು ಹುಕುಮಿನಿಂದ ಆ ಮಾಲು ತನಗೆ ತಬದಿಲು ಮಾಡಿಕೊಟ್ಟನೆಂದು ಹೇಳಿ ಆ ಹುಕುಮಿನ ಆಧಾರದಿಂದ ಅವನ್ನು ಬೇಡುತ್ತಾನೆ.

(೪) ಸದರಿ ಪ್ರತಿವಾದಿಗಳ ಬೇರೆ ಬೇರೆ ಹಕ್ಕುಗಳನ್ನು ವಾದಿಯು ಅರಿಯನು.

೫. ವೆಚ್ಚವನ್ನೂ ಭಾರಗಳನ್ನೂ ಹೊರತು ಪಡಿಸಿ ಮೇಲ್ಕಂಡ ಮಾಲಿನ ಮೇಲೆ ವಾದಿಯ ಹಕ್ಕು ಇಲ್ಲ. ಮತ್ತು ಅವನು ಕೋರ್ಟಿನವರ ಅಪ್ಪಣೆಯಂತೆ ಅವರಿಬ್ಬರಲ್ಲಿ ಯಾವನೊಬ್ಬನಿಗೆ ಆ ಮಾಲನ್ನು ಕೊಡಲಿಕ್ಕೆ ಸಿದ್ಧನಾಗಿಯೂ ಸಮ್ಮತಿಯುಳ್ಳವನಾಗಿಯೂ ಇರುತ್ತಾನೆ.

೬. ಪ್ರತಿವಾದಿಯರಲ್ಲಿ ಯಾವನೊಬ್ಬನ ಕೂಡ ಒಳಸಂಚುಮಾಡಿಕೊಂಡು ವಾದಿಯು ಈ ದಾವೆಯನ್ನು ಮಾಡಲಿಲ್ಲ.

... ... ... ...

... ... ... ...

**ವಾದಿಯು ಕೆಳಗಿನಂತೆ ಪ್ರಾರ್ಥಿಸುತ್ತಾನೆ:—**

೧. ಪ್ರತಿವಾದಿಗಳು ಸದರಿ ಮಾಲಿನ ಬಾಬತು ವಾದಿಯ ಮೇಲೆ ವ್ಯಾಜ್ಯ ನಡೆಯಿಸದ ಹಾಗೆ ಅವರಿಗೆ ತಾಕೀದು ಮಾಡಿ ಪ್ರತಿಬಂಧಿಸಬೇಕು.

೨. ಸದರಿ ಮಾಲಿಗಿರುವ ತಮ್ಮ ಬಾಧ್ಯತೆಯ ವಿಷಯವಾಗಿ ಅಂತರ್ವಾದವನ್ನು ನಡೆಯಿಸಲಿಕ್ಕೆ ಅವರಿಗೆ ತಾಕೀದು ಆಗಬೇಕು.

೩. ಸದರಿ ವಾದವೂ ತೀರುವವರೆಗೆ ಆ ಮಾಲು ಒಪ್ಪಿಸಿಕೊಳ್ಳಲಿಕ್ಕೆ ಒಬ್ಬ ಮನುಷ್ಯನಿಗೆ ಅಧಿಕಾರ ಕೊಡಬೇಕು.

೪. ಆ ಮನುಷ್ಯನಿಗೆ ಆ ಮಾಲು ಒಪ್ಪಿಸಿದ ಬಳಿಕ ಅದರ ವಿಷಯವಾಗಿ ಯಾವನೊಬ್ಬ ಪ್ರತಿವಾದಿಗೆ ವಾದಿಯು ಜಬಾಬದಾರನಲ್ಲವೆಂದು ಠರಾವೂ ಮಾಡಬೇಕು.

## ನಂಬರು ೬೪

## ಒತ್ತೆಯನ್ನು ಬಿಡಿಸಿಕೊಳ್ಳುವ ಹಕ್ಕು ಮುಣಗಿಸುವದು (foreclosure) ಯೂ ವಿಕ್ರಯವೂ (sale)

## ಸರನಾಮೆ

೧. ವಾದಿಯು ಪ್ರತಿವಾದಿಯ ಭೂಮಿಗಳ ಅಡವುದಾರನಾಗಿರುತ್ತಾನೆ.

೨. ಒತ್ತೆಯ ತಪಶೀಲುಗಳು ಈ ಕೆಳಗಿನಂತೆ ಇವೆ:—

ಅ. ತಾರೀಖು ... ... ೧೪–೪–೧೯೨೭

ಬ. ಒತ್ತೆ ಇಡುವವನ ಹೆಸರು ... ಚಿತಾಂಬರ
ಒತ್ತೆ ಇಟ್ಟುಕೊಂಡವನ ಹೆಸರು ... ಕೂವರ್ಜಿ

ಕ. ಒತ್ತೆಯ ಮೇಲೆ ತೆಗೆದುಕೊಂಡ ರಕಮು ... ೪೫೦೦ ರೂಪಾಯಿ

ಡ. ಬಡ್ಡಿಯ ದರವು ... ... ದರಸಾಲ ದರಶೇಕಡಾ ೧೨. ರೂಪಾಯಿ

ಇ. ಒತ್ತೆ ಇಟ್ಟ ಆಸ್ತಿಯು:—

ಹುಬ್ಬಳ್ಳಿ ತಾಲೂಕ ಪೈಕಿ ಭಂಡಿವಾಡ ಗ್ರಾಮದಲ್ಲಿರುವ–ಭೂಮಿಯ

ರಿ. ಸ. ನ. ... ಎಕರೆ ... ತರಮು

ಫ. ಈಗ ಸಲ್ಲತಕ್ಕ ರಕಮು ... ೫೩೫೦ ರೂಪಾಯಿಗಳು.

ಗ. [ವಾದಿಯ ಸತ್ತಾಧಿಕಾರವು ಅನ್ಯ ಪ್ರಾಪ್ತ ಸತ್ತಾಧಿಕಾರವಾಗಿದ್ದರೆ ಯಾವ ತಬದಿಲಿಗಳನ್ವಯ ಅಥವಾ ಪ್ರಾಪ್ತವಾ

ಗುವ ರೀತಿನ್ನೈಯು ಅವನು ಹಕ್ಕು ಹೇಳುತ್ತಿರುವನೋ ಆ ತಬದಿಲಿಗಳನ್ನು ಅಥವಾ ಪ್ರಾಪ್ತವಾಗುವ ರೀತಿಯನ್ನು ಸಂಕ್ಷಿಪ್ತವಾಗಿ ಬರೆಯಬೇಕು.

[ವಾದಿಯು ಕಬಜಾ ಅಡಾವುದಾರನಾಗಿದ್ದರೆ ಈ ಕೆಳಗಿನ ಮಜಕೂರನ್ನು ಸಹ ಬರೆಯಬೇಕು.]

೩. ವಾದಿಯು ತಾರೀಖು ೧೪-೪-೧೯೨೭ನೇ ಇಸ್ವಿ ದಿವಸ ಒತ್ತೆ ಇಟ್ಟ ಆಸ್ತಿಯ ಕಬಜವನ್ನು ತೆಗೆದುಕೊಂಡನು, ಮತ್ತು ಆ ವೇಳೆಯಿಂದ ಕಬಜಾ ಅಡಾವುದಾರನೆಂಬ ನಾತೆಯಿಂದ ಲೆಖ್ಖ ಕೊಡಲಿಕ್ಕೆ ಅವನು ಸಿದ್ಧನಾಗಿರುತ್ತಾನೆ.

... ... ... ...

... ... ... ...

**ವಾದಿಯು ಪ್ರಾರ್ಥಿಸುವದೇನಂದರೆ:—**

೧. ಪ್ರತಿವಾದಿಯ ಕಡಿಂದ ೫೩೫೦ ರುಪಾಯಿಗಳನ್ನು ಕೊಡಿಸಬೇಕು ಅಥವಾ ಸದರಿ ಹಣ ಕೊಡಲಿಕ್ಕೆ ತಪ್ಪಿದರೆ ಆಸ್ತಿಯನ್ನು ಮಾರಿಸಬೇಕು. [ಅಥವಾ ಒತ್ತೆಯನ್ನು ಬಿಡಿಸಿಕೊಳ್ಳುವ ಹಕ್ಕನ್ನು ರದ್ದು ಮಾಡಬೇಕು.] ಮತ್ತು ಕಬಜವನ್ನು ಕೊಡಿಸಬೇಕು.

೨. ಸದರಿ ಮಾರಾಟದ ಉತ್ಪನ್ನವು ವಾದಿಗೆ ಸಲ್ಲತಕ್ಕ ಹಣವನ್ನು ತೆರಲಿಕ್ಕೆ ಸಾಕಾಗುವದಿಲ್ಲವೆಂದು ಕಂಡು ಬಂದರೆ, ಬಾಕಿ ಉಳಿದ ಹಣದ ಬಗ್ಗೆ ಹುಕುಮನಾಮೆಯನ್ನು ಬೇಡಲಿಕ್ಕೆ ವಾದಿಗೆ ಸ್ವತಂತ್ರವನ್ನು ಕೊಡಬೇಕು.

## ನಂಬರು ೬೫

## ಒತ್ತೆ ಬಿಡಿಸಿಕೊಳ್ಳುವ ಹಕ್ಕು ಮುಣಗಿಸುವದು ಯಾ ವಿಕ್ರಯವೂ

### ಸರನಾಮೆ

೧. ವಾದಿಯು ಒತ್ತೆ ಇಟ್ಟುಕೊಂಡವನ ಯಾವತ್ತು ಹಕ್ಕನ್ನು ಪೂರ್ಣವಾಗಿ ತಬದಿಲು ಮಾಡಿಸಿಕೊಂಡವನಿರುತ್ತಾನೆ.

೨. ಒತ್ತೆಯ ತಪಶೀಲುಗಳು ಈ ಕೆಳಗಿನಂತೆ ಇವೆ:—

ಅ. ತಾರೀಖು ... ... ೧೩—೫—೧೯೨೫

ಬ. ಒತ್ತೆ ಇಡುವವನ ಹೆಸರು ... ದಾನಪ್ಪಾ

ಒತ್ತೆ ಇಟ್ಟುಕೊಂಡವನ ಹೆಸರು ... ಕಲ್ಲಪ್ಪಾ

(ಕ) ಒತ್ತೆಯ ಮೇಲೆ ತೆಗೆದುಕೊಂಡ ರಕಮು—೪೦೦೦ ರೂಪಾಯಿ.

(ಡ) (ಬಡ್ಡಿಯದರವೂ)— ದರಸಾಲು ದರಸೇಕಡಾ ೧೨ ರೂಪಾಯಿ.

(ಇ) ಒತ್ತೆ ಇಟ್ಟ ಆಸ್ತಿಯು—

(ಫ) ಈಗ ಸಲ್ಲತಕ್ಕ ರಕಮು ೫೦೫೦ ರೂಪಾಯಿಗಳನ್ನು

೩. ಮೇಲ್ಕಂಡ ದಾನಪ್ಪನು ತಾರೀಖು ೨೭—೧೦—೧೯೨೫ನೇ ಇಸ್ವಿ ದಿವಸ ತೀರಿಕೊಂಡನು. ಇವರಲ್ಲಿ ೧ನೇ ಪ್ರತಿವಾದಿಯು ಮತ್ತು ೨ನೇ ಪ್ರತಿವಾದಿಯ ತಂದೆಯಾದ ಗುರಪ್ಪನು ಸದರಿ ಮೃತನ ಖಾಸ ಮಕ್ಕಳಾಗಬೇಕು. ಮೇಲ್ಕಂಡ ಗುರಪ್ಪನು ತಾರೀಖು ೩—೪—೧೯೨೬ನೇ ಇಸ್ವಿ ದಿವಸ ಮೃತವಾದನು. ೨ನೇ ಪ್ರತಿವಾದಿಯು ಅವನ ಖಾಸ ಮಗನಾಗಬೇಕು.

೪. ಮೇಲ್ಕಂಡ ಒತ್ತೆಯ ಕರಾರು ಆದನಂತರ ೧ನೇ ಪ್ರತಿವಾದಿಯು ಅಡಾವು ಆಸ್ತಿಯ ಬಾಬತು ತನ್ನ ಸ್ವತ್ವನ್ನು ೩ನೇ ಪ್ರತಿವಾದಿಗೆ ಪೂರ್ಣವಾಗಿ ತಬದಿಲು ಮಾಡಿದ್ದಾನೆ.

೫. ತಾರೀಖು ೧೦—೮—೧೯೨೬ನೇ ಇಸ್ವಿ ದಿವಸ ಹಣದ ಹುಕುಮು ನಾಮೆಯ ಅಮಲು ಬಜಾವಣೆಯಲ್ಲಿಯಾದ ಲಿಲಾವಿನಲ್ಲಿ ೨ನೇ ಪ್ರತಿವಾದಿಯ ಆಡಾವು ಆಸ್ತಿಯ ಬಾಬತು ಹಕ್ಕನ್ನು ೪ನೇ ಪ್ರತಿವಾದಿಯು ಖರೀದಿಮಾಡಿರುತ್ತಾನೆ.

೬. ಮೇಲ್ಕಂಡ ಕಲ್ಲಪ್ಪನು ಅಡಾವಿನ ಬಾಬತು ತನ್ನ ಹಕ್ಕನ್ನು ತಾರೀಖು ೪—೫—೧೯೨೭ನೇ ಇಸ್ವಿ ದಿವಸ ಪೂರ್ಣವಾಗಿ ವಾದಿಗೆ ಖರೀದಿ ಕೊಟ್ಟನು.

... ... ... ...

... ... ... ...

**ವಾದಿ ವಿನಂತಿ ಏನಂದರೆ** :—

೧. ಸಲ್ಲತಕ್ಕ ೫೦೫೦ ರೂಪಾಯಿಗಳನ್ನು ಕೊಡಿಸಬೇಕು, ಅಥವಾ ಆ ಹಣ ಕೊಡಲಿಕ್ಕೆ ತಪ್ಪಿದರೆ ಆಸ್ತಿಯನ್ನು ಮಾರಿಸಬೇಕು.

೨. ಸದರಿ ಮಾರಾಟದ ಉತ್ಪನ್ನವು ವಾದಿಗೆ ಸಲ್ಲತಕ್ಕ ಹಣವನ್ನು ತೆರಲಿಕ್ಕೆ ಸಾಕಾಗುವದಿಲ್ಲವೆಂದು ಕಂಡುಬಂದರೆ ಬಾಕಿ ಉಳಿದ ಹಣದ ಬಗ್ಗೆ ಹುಕುಮನಾಮೆಯನ್ನು ಬೇಡಲಿಕ್ಕೆ ವಾದಿಗೆ ಸ್ವತಂತ್ರವನ್ನು ಕೊಡಬೇಕು.

## ನಂಬರು ೬೬

## ಒತ್ತೆ ಬಿಡಿಸುವದು (Redemption)

## ಸರನಾಮೆ

೧. ವಾದಿಯು ಯಾವ ಭೂಮಿಗಳನ್ನು ಪ್ರತಿವಾದಿಯು ಒತ್ತೆ ಇಟ್ಟುಕೊಂಡಿದ್ದಾನೋ ಆ ಭೂಮಿಗಳನ್ನು ಒತ್ತೆ ಇಟ್ಟವನಾಗಿರುತ್ತಾನೆ.

೨. ಒತ್ತೆಯ ತಪಶೀಲುಗಳು ಈ ಕೆಳಗಿನಂತೆ ಇವೆ—

(ಅ) ತಾರೀಖು— ೧೧–೬–೧೯೨೫

(ಬ) ಒತ್ತೆ ಇಡುವವನ ಹೆಸರು— ಕಾಸೀಮಸಾಹೇಬ
ಒತ್ತೆ ಇಟ್ಟುಕೊಂಡವನ ಹೆಸರು— ಹಜರತಸಾಹೇಬ

(ಕ) ಒತ್ತೆಯಮೇಲೆ ತೆಗೆದುಕೊಂಡ ರಕಮು— ೫೫೦ ರೂಪಾಯಿ

(ಡ) ಬಡ್ಡಿಯ ದರವು ಪರಮಹಾ ದರವಂದು ರೂಪಾಯಿಗೆ ೩ ಪೈ.

(ಇ) ಒತ್ತೆ ಇಟ್ಟ ಆಸ್ತಿಯು
( ವರ್ಣನೆಯು ಬರೆಯಬೇಕು )

(ಫ) (ವಾದಿಯ ಸತ್ತಾಧಿಕಾರವು ಅನ್ಯಪ್ರಾಪ್ತ ಸತ್ತಾಧಿಕಾರವಾಗಿದ್ದರೆ ಯಾವ ತಬದಿಲಿಗಳನ್ವಯ ಅಥವಾ ಪ್ರಾಪ್ತನಾಗುವ ರೀತಿನ್ವಯ ಅವನು ಹಕ್ಕು ಹೇಳುತ್ತಿರುವನೋ ಆ ತಬದಿಲಿಗಳನ್ನು ಅಥವಾ ಪ್ರಾಪ್ತವಾಗುವ ರೀತಿಯನ್ನು ಸಂಕ್ಷಿಪ್ತವಾಗಿ ಬರೆಯಬೇಕು. )

ಪ್ರತಿವಾದಿಯು ಕಬಜಾ ಅಡಾವ್ರದಾರನಾಗಿದ್ದರೆ, ಈ ಕೆಳಗಿನ ಮಜಕೂರನ್ನು ಸಹ ಬರೆಯಬೇಕು.

೩. ಪ್ರತಿವಾದಿಯು ಒತ್ತೆ ಇಟ್ಟ ಆಸ್ತಿಯ ಕಬಜವನ್ನು (ಅಥವಾ ಬಡಿಗೆಯನ್ನು) ತೆಗೆದುಕೊಂಡಿದ್ದಾನೆ.

... ... ... ...

... ... ... ...

**ವಾದಿಯು ಪ್ರಾರ್ಥಿಸುವದೇನಂದರೆ—**

ವಾದಿಗೆ ಸದರಿ ಆಸ್ತಿಯನ್ನು ಬಿಡಿಸಿಕೊಳ್ಳಗೊಡಬೇಕು, ಮತ್ತು ಅದನ್ನು ಪುನಃ ಅವನ ಹೆಸರಲ್ಲಿ ಮಾಡಿಕೊಡಿಸಬೇಕು.

[ಮತ್ತು ಅದರ ಕಬಜನನ್ನು ಅವನಿಗೆ ಕೊಡಿಸಬೇಕು]

## ನಂಬರು ೬೭

## ವಿಶಿಷ್ಟ ರೀತಿಯಿಂದ ಕರಾರು ಕಡೆಗಾಣಿಸುವದು

## ಸರನಾಮೆ

೧. ಪ್ರತಿವಾದಿಯಿಂದ ತಾರೀಖು ೧೬–೫–೧೯೨೭ನೇ ಇಶ್ವಿ ದಿವಸ ಸಹಿ ಮಾಡಿಕೊಡಲ್ಪಟ್ಟ ಕರಾರಪತ್ರದಲ್ಲಿ ವಿವರಿಸಿ ಉಲ್ಲೇಖಿಸಿದಂಥ ಕೆಲವೊಂದು ಸ್ಥಾವರ ಮಾಲನ್ನು ೫೦೦ ರುಪಾಯಿಗೆ ವಾದಿಯಿಂದ ಕೊಳ್ಳಲಿಕ್ಕೆ [ಯಾ ವಾದಿಗೆ ಮಾರಲಿಕ್ಕೆ] ಸದರಿ ಕರಾರಪತ್ರದಿಂದ ಅವನು ಒಡಂಬಟ್ಟನು.

೨. ಸದರಿ ಕರಾರಿನಲ್ಲಿ ಬರೆದ ಪ್ರಕಾರ ಅದನ್ನು ವಿಶಿಷ್ಟ ರೀತಿಯಿಂದ ತನ್ನ ಕಡೆಯಿಂದ ಕಡೆಗಾಣಿಸೆಂದು ಪ್ರತಿವಾದಿಗೆ ವಾದಿಯ ಹೇಳಿದ್ದಾಗ್ಯೂ ಪ್ರತಿವಾದಿಯು ಹಾಗೆ ಮಾಡಲಿಲ್ಲ.

೩. ವಾದಿಯ ಆ ಕರಾರು ವಿಶಿಷ್ಟ ರೀತಿಯಿಂದ ತನ್ನ ಕಡೆಯಿಂದ ಕಡೆಗಾಣಿಸಲಿಕ್ಕೆ ಸಿದ್ಧನಾಗಿಯೂ ಸಮ್ಮತನಾಗಿಯೂ ಇದ್ದನು ಮತ್ತು ಈಗ್ಯೂ ಇರುತ್ತಾನೆ ಮತ್ತು ಇದು ಪ್ರತಿವಾದಿಗೆ ತಿಳಿದದೆ.

... ... ... ...

... ... ... ...

**ವಾದಿಯು ಬೇಡಿಕೊಳ್ಳುವದೇನಂದರೆ:—**

ಸದರಿ ಕರಾರನ್ನು ವಿಶಿಷ್ಟ ರೀತಿಯಿಂದ ಕಡೆಗಾಣಿಸಲಿಕ್ಕೆ ಸದರಿ ಸ್ವತ್ತನ್ನು ವಾದಿಯ ಕಬಜೆಯಲ್ಲಿ ಪೂರ್ಣವಾಗಿ ಕೊಡಲಿಕ್ಕೆ ಅವಶ್ಯವಾದ ಕೆಲಸಗಳನ್ನೆಲ್ಲ ಮಾಡಲಿಕ್ಕೆ [ಅಥವಾ ಸದರಿ ಮಾಲಿನ ತಬದಿಲಿಯನ್ನೂ ಕಬಜೆಯನ್ನೂ ತೆಗೆದುಕೊಳ್ಳಲಿಕ್ಕೆ] ಮತ್ತು ದಾವೆಯ ವೆಚ್ಚವನ್ನು ಕೊಡಲಿಕ್ಕೆ ಕೋರ್ಟಿನವರು ಪ್ರತಿವಾದಿಗೆ ಹುಕುಮು ಮಾಡಬೇಕು.

## ನಂಬರು ೬೪

## ವಿಶಿಷ್ಟ ರೀತಿಯಿಂದ ಕರಾರು ಕಡೆಗಾಣಿಸುವದು

## ಸರನಾವೆ

೧. ಕೆಳಗೆ ವರ್ಣಿಸಿದ ಆಸ್ತಿಯು ೧೨೦೦ ರುಪಾಯಿಗೆ ಎರಡು ತಿಂಗಳದಲ್ಲಿ ಪ್ರತಿವಾದಿಯು ವಾದಿಗೆ ಮಾರಬೇಕಂತಲೂ ವಾದಿಯು ಪ್ರತಿವಾದಿಯ ಕಡೆಯಿಂದ ಕೊಳ್ಳಬೇಕೆಂತಲೂ ತಾರೀಖು ೧೩–೪–೧೯೨೮ನೇ ಇಸ್ವಿ ದಿವಸ ಅವರು ತಮ್ಮ ತಮ್ಮೊಳಗೆ ಬರಹದಿಂದ ಒಪ್ಪಂದ ಮಾಡಿಕೊಂಡರು. ಅದೇ ದಿವಸ ಸಂಚಕಾರವೆಂತಾ ವಾದಿಯು ಪ್ರತಿವಾದಿಗೆ ೨೦೦ ರುಪಾಯಿ ಕೊಟ್ಟನು.

... ... ... ...

ಸದರಿ ಆಸ್ತಿಯ ವರ್ಣನೆ:—

೨. ತಾರೀಖು ೧೨–೫–೧೯೨೮ನೇ ಇಸ್ವಿ ದಿವಸ ವಾದಿಯು ಪ್ರತಿವಾದಿಗೆ ೧೦೦೦ ರುಪಾಯಿಗಳನ್ನು ತೆಗೆದುಕೋ ಎಂದು ಹೇಳಿ ಸಾಕಷ್ಟು ಲೇಖದ ಮೂಲಕವಾಗಿ ಸದರಿ ಆಸ್ತಿಯ ತಬದಿಲಿಯನ್ನು ಮಾಡಿಕೊಡಲಿಕ್ಕೆ ಬೇಡಿದನು.

೩. ತಾರೀಖು ೧೨–೬–೧೯೨೮ನೇ ಇಸ್ವಿ ದಿವಸ ವಾದಿಯು ಇಂಥ ತಬದಿಲಿಯನ್ನು ಮತ್ತೊಮ್ಮೆ ಬೇಡಿದನು. ( ಅಥವಾ ಪ್ರತಿವಾದಿಯು ವಾದಿಗೆ ಸದರೀ ತಬದಿಲಿಯನ್ನು ಮಾಡಿಕೊಡಲಿಕ್ಕೆ ನಾಕಾರಿಸಿದನು. )

೪. ಪ್ರತಿವಾದಿಯು ಯಾವದೇ ತಬದಿಲಿಯ ಲೇಖವನ್ನು ಮಾಡಿಕೊಟ್ಟಿಲ್ಲ.

೫. ಸದರೀ ಆಸ್ತಿಯ ಖರೀದಿಯ ಹಣವನ್ನು ಅವನಿಗೆ ಕೊಡಲಿಕ್ಕೆ ವಾದಿಯು ಈಗಲೂ ಸಿದ್ಧನಾಗಿಯೂ ಸಮ್ಮತನಾಗಿಯೂ ಇರುತ್ತಾನೆ.

೬. ಮೇಲ್ಕಂಡ ಒಪ್ಪಿಗೆಯಂತೆ ಪ್ರತಿವಾದಿಯು ನಡೆಯದಿದ್ದರಿಂದ ವಾದಿಗೇ ೩೦೦ ರುಪಾಯಿ ಲುಕ್ಸಾನು ಆಗಿದೆ. ಅದರ ತಪಶೀಲು:—

... ... ... ...
... ... ... ...

**ವಾದಿಯು ಕೆಳಗಿನಂತೆ ಪ್ರಾರ್ಥಿಸುತ್ತಾನೆ:—**

೧. ಪ್ರತಿವಾದಿಯು ಸದರಿ ಆಸ್ತಿಯ ಸಾಕಷ್ಟು ಖರೀದಿಪತ್ರವನ್ನು [ಕರಾರಪತ್ರದ ಶರ್ತಿನ ಪ್ರಕಾರ] ಮಾಡಿ ಸದರೀ ಆಸ್ತಿಯು ವಾದಿಗೆ ತಬದಿಲು ಮಾಡಿಕೊಡಬೇಕು.

೨. ಅದನ್ನು ಮಾಡಿಕೊಡದಿದ್ದಕ್ಕಾಗಿ ಅವನು ಮೇಲ್ಕಂಡ ೨೦೦ ರುಪಾಯಿ; ಅದರ ಮೇಲಿನ ಬಡ್ಡಿ ೧೫ ಮತ್ತು ಲುಕ್ಸಾನು ೩೦೦ ರುಪಾಯಿ ಅಂತು ೫೧೫ ರೂಪಾಯಿಗಳನ್ನು ಕೊಡಬೇಕು.

## ನಂಬರು ೬೯

## ಪಾಲುಗಾರಿಕೆ

## ಸರನಾಮೆ

೧. ವಾದಿಯೂ ಗುರುನಾಥ ಗೋವಿಂದ ಎಂಬ ಪ್ರತಿವಾದಿಯೂ ಕೂಡಿ, ಕಳೆದ ೧೦ ವರ್ಷಗಳವರೆಗೆ ( ಯಾ ತಿಂಗಳವರೆಗೆ ) ಉದ್ಯೋಗವನ್ನು ನಡಿಸುತ್ತ ಬಂದರು. ಆ ಪಾಲುಗಾರಿಕೆಗಾಗಿ ವಾದಿ ಪ್ರತಿವಾದಿಗಳು ಕೆಲವು ನಿಯಮಗಳನ್ನು ಬರೆದುಕೊಂಡಿರುತ್ತಾರೆ. ( ಅಥವಾ ಅದಕ್ಕಾಗಿ ಕೆಲವೊಂದು ದಸ್ತೈವಜನ್ನು ಮಾಡಿರುತ್ತಾರೆ. ಅಥವಾ ಅದಕ್ಕಾಗಿ ತಮ್ಮೊಳಗೆ ಬಾಯಿಮಾತಿನ ಕರಾರು ಮಾಡಿಕೊಂಡಿರುತ್ತಾರೆ. )

೨. ಸದರಿ ಪಾಲುಗಾರರೆಂಬ ನಾತೆಯಿಂದ ವಾದಿ ಪ್ರತಿವಾದಿಗಳಲ್ಲಿ ನಾನಾ ಪ್ರಕಾರದ ತಕರಾರುಗಳೂ ವಾದಗಳೂ ಹುಟ್ಟಿದ ಕಾರಣ ಸದರಿ ಪಾಲುಗಾರಿಕೆಯು ಉದ್ಯೋಗವನ್ನು ಆ ಪಾಲುಗಾರರಿಗೆ ಲಾಭವಾಗುವಂತೆ ನಡೆಯಿಸುವದು ಅಸಾಧ್ಯವಾಗಿರುತ್ತದೆ.

ಅಥವಾ ೨. ಪ್ರತಿವಾದಿಯು ಪಾಲುಗಾರಿಕೆಯ ನಿಯಮಗಳ ಈ ಕೆಳಗಿನ ಉಲ್ಲಂಘನೆಗಳನ್ನು ಮಾಡಿದ್ದಾನೆ—

೧.

೨.

೩.

... ... ... ...

**ವಾದಿಯು ಪ್ರಾರ್ಥಿಸುವದೇನಂದರೆ:—**

೧. ಸದರಿ ಪಾಲುಗಾರಿಕೆಯನ್ನು ಮುರಿಯಬೇಕು.

೨. ಲೆಖ್ಖಗಳನ್ನು ತೆಗೆದುಕೊಳ್ಳಬೇಕು.

೩. ರಿಸೀವರನನ್ನು ನೇಮಿಸಿಬೇಕು.

[**ಸೂಚನೆ:**— ಯಾವದಾದರೂ ಪಾಲುಗಾರಿಕೆಯನ್ನು ಮುಗಿಸುವ ಬಗ್ಗೆ ಮಾಡಿದ ದಾವೆಗಳಲ್ಲಿ ಪಾಲುಗಾರಿಕೆಯನ್ನು ಮುರಿಯುವ ಪ್ರಾರ್ಥನೆಯನ್ನು ಮಾಡಬಾರದು; ಅದಕ್ಕೆ ಬದಲಾಗಿ ಪಾಲುಗಾರಿಕೆಯು ಮುರಿಯಲ್ಪಟ್ಟ ಬಗ್ಗೆ ಕೃತಿಗಳನ್ನು ವಿವರಿಸಿ ಒಂದು ಕಲಮು ಹಾಕಬೇಕು. ]

## ನಂಬರು ೭೦

## ರೇಲ್ವೆಯಲ್ಲಿ ದುರ್ಲಕ್ಷದ ಮೂಲಕವಾಗಿ ಆದ ಕೇಡಿನ ಬಾಬತು

## ಸರನಾಮೆ

ಅ, ಬ ಎಂಬ ಸದರಿ ವಾದಿಯು ತಿಳಿಸುವ ವಿವರ:—

೧. ಸನ್ನ ೧೯ ತಿಂಗಳಿನ ತಾರೀಖಿನಲ್ಲಿ ಪ್ರತಿವಾದಿಗಳು ಹೊಗೆ ಬಂಡಿಯಿಂದ ಎಂಬದಲ್ಲಿಂದ ಎಂಬಲ್ಲಿಗೆ ಹೋಗುವ ಮಾರ್ಗಸ್ಥರ ಸಾಧಾರಣ ವಾಹಕರಾಗಿದ್ದರು.

೨. ಈ ದಿವಸ ಸದರಿ ರೇಲ್ವೆಯು ಮೇಲೆ ಪ್ರತಿವಾದಿಗಳ ಬಂಡಿಗಳಲ್ಲಿ ಒಂದ ರೊಳಗೆ ವಾದಿಯು ಕುಳಿತು ಹೋಗುತ್ತಿದ್ದನು.

೩. ಅವನು ಹಾಗೆ ಮಾರ್ಗಸ್ಥವಾಗಿ, ಎಂಬ ಸ್ಥಳದಲ್ಲಿ [ಅಥವಾ ಸ್ಟೇಶನಿನ ಸಮೀಪದಲ್ಲಿ ಅಥವಾ ಮತ್ತು ಇವೆರಡು ಸ್ಟೇಶನುಗಳ ನಡುವೆ] ಸದರಿ ರೇಲ್ವೆಯ ಮೇಲೆ ಅಪಘಾತವಾಯಿತು, ಅದು ಪ್ರತಿವಾದಿಗಳ ನೌಕರ ದುರ್ಲಕ್ಷದಿಂದಲೂ ತಿಳಗೇಡಿತನದಿಂದಲೂ ಒದಗಿತು, ಅದರಿಂದ ವಾದಿಗೆ ಬಹಳ ಪೆಟ್ಟು ತಾಕಿತು. (ಅವನ ಕಾಲು ಮುರಿಯಿತು. ತಲೆ ಬಡಿಯಿತು, ಇತ್ಯಾದಿ, ಮತ್ತು ವಿಶೇಷವಾದ ಕೇಡು ಏನಾದರೂ ಆಗಿದ್ದರೆ ಬರೆ, ಹ್ಯಾಗೆಂದರೆ) ಮತ್ತು ಔಷಧೋಪಚಾರಕ್ಕೆ ಅವನ ಹಣ ವೆಚ್ಚವಾಯಿತು. ಮತ್ತು ತನ್ನ ಮೊದಲಿನ ಉದ್ಯೋಗವನ್ನು [ ಸೇಲ್ಯಸುನನಾಗಿ ] ನಡೆಯಿಸಲಿಕ್ಕೆ ಅವನು ಕಾಯಮವಾಗಿ ಅಸಮರ್ಥನಾದನು.

[ ಅಥವಾ ಹೀಗೆ:— ೨ ಈ ದಿವಸ ಸದರಿ ರೇಲ್ವೆಯ ಮಾರ್ಗವನ್ನು ವಾದಿಯು ನ್ಯಾಯವಾದ ರೀತಿಯಿಂದ ದಾಟ ಹೋಗುತ್ತಿರಲಾಗಿ ಈ ರೇಲ್ವೆಯ ಮೇಲೆ ಹೊಗುವದೊಂದು ಉಗೆಯ ಯಂತ್ರವನ್ನು ಅದಕ್ಕೆ ಜೋಡಸಿದ ಗಾಡಿ ಗಳನ್ನು ಪ್ರತಿವಾದಿಗಳು ತಮ್ಮ ನೌಕರರ ಮುಖಾಂತರವಾಗಿ ಅತಿಶಯ ದುರ್ಲಕ್ಷ್ಯದಿಂದಲೂ, ತಿಳಿಗೇಡಿತನದಿಂದಲೂ ನಡೆಯಿಸಿದ ಮೂಲಕವಾಗಿ ಸದರಿ ಯಂತ್ರವು, ಗಾಡಿಗಳು ಬಂದು ವಾದಿಗೆ ತಗಲಿದವು; ಅದರಿಂದ ಇತ್ಯಾದಿ, ೩ನೇ ಪ್ಯಾರಾಗ್ರಾಫಿನಲ್ಲಿ ಬರೆದಂತೆ. ]

## ನಂಬರು ೭೧

## ಅಜಾಗರೂಕತೆಯಿಂದ ವಾಹನಗಳನ್ನು ನಡೆಯಿಸಿದ ಮೂಲಕವಾಗಿ ಆದ ಕೇಡಿನ ಬಾಬತು

### ಸರನಾಮೆ

ಅ, ಬ ಎಂಬ ಸದರಿ ವಾದಿಯು ತಿಳಿಸುವ ವಿವರಾ—

೧. ವಾದಿಯು ಸಮಗಾರನಾಗಿ ಎಂಬಲ್ಲಿ ತನ್ನ ಉದ್ಯೋಗ ನಡೆಯಿಸಿರುತ್ತಾನೆ; ಪ್ರತಿವಾದಿಯು ಎಂಬಲ್ಲಿ ವ್ಯಾಪಾರ ಮಾಡುತ್ತಿರುತ್ತಾನೆ.

೨. ಸನ್ನ ೧೯ ನೇ ಇಸ್ವಿಯ ತಿಂಗಳ ನೇ ತಾರೀಖಿನಲ್ಲಿ ಸಂಜೆಗೆ ಸುಮಾರು ಮೂರ ಗಂಟೆಯ ಸಮಯದಲ್ಲಿ ವಾದಿಯು ಕಲಕತ್ತಾ ಪಟ್ಟಣದಲ್ಲಿ ಚೌರಂಗೀ ಬೀದಿಯಲ್ಲಿ ದಕ್ಷಿಣದಿಕ್ಕಿಗೆ ಹೋಗುತ್ತಿದ್ದನು. ಮಿಡಲಟನ್ನ ಬೀದಿಯು ಚೌರಂಗೀ ಬೀದಿಯನ್ನು ಅಡ್ಡಹಾಯುತ್ತಿರುವ ಕಾರಣ, ವಾದಿಯು ಈ ಮಿಡಲಟನ್ನ ಬೀದಿಯನ್ನು ದಾಟಿ ಹೋಗುತ್ತಿದ್ದನು; ಆ ಬೀದಿಯ ಎದುರಿನ ಬದಿಯಲ್ಲಿ ಕಾಲನಡಿಗೆಯ ಕಲ್ಲು ಹಾಸಿಗೆಗೆ ವಾದಿಯು ತಲಪುವ ಕಿಂಚಿತ ಪೂರ್ವದಲ್ಲಿ ಎರಡು ಕುದರೆಗಳು ಕಟ್ಟಲ್ಪಟ್ಟ ಪ್ರತಿವಾದಿಯ ಗಾಡಿಯು ಮಿಡಲಟನ್ನ ಬೀದಿಯಿಂದ ಅಕಸ್ಮಾತ್ತಾಗಿ ಭಯಂಕರವಾದ ವೇಗದಿಂದ ಓಡುತ್ತಾ ಬಂದು ಚೌರಂಗಿ ಬೀದಿಯೊಳಗೆ ತಿರುಗಿತು. ಅದನ್ನು ಪ್ರತಿವಾದಿಯ ನೌಕರರು ನಡೆಯಿಸುತ್ತಿದ್ದರು; ಅವರು ಏನೂ ಇರಾದೆಯನ್ನು ಮಾಡದೆ ದುರ್ಲಕ್ಷದಿಂದ ಓಡಿಸಿದರು; ಆ ಗಾಡಿಯು ಪೂಲು ವಾದಿಗೆ ತಗಲಿ ಅವನು ಕೆಳಗೆ ಬಿದ್ದದರಿಂದ ಕುದರೆಗಳಿಂದ ತುಳಿಯಲ್ಪಟ್ಟು ಅವನು ಬಹಳ ಜಬ್ಬಾದನು.

೩. ನೆಲಕ್ಕೆ ಬಿದ್ದದರಿಂದಲೂ ಪೆಟ್ಟಿನಿಂದಲೂ ಕುದರೆಗಳ ತುಳುಕಲಿನಿಂದಲೂ ವಾದಿಯ ಎಡಗೈ ಮುರಿದು, ಅವನ ಬೆನ್ನಿಗೂ ಮಗ್ಗಲಿಗೂ ಪೆಟ್ಟು ತಗಲಿ ಅಪಾಯವಾಯಿತು, ಮತ್ತು ಅವನ ಶರೀರದೊಳಗಿಂದ ಅವಯವಗಳಿಗೂ ಅಪಾಯವಾಯಿತು. ಅದರಿಂದ ವಾದಿಯು, ನಾಲ್ಕು ತಿಂಗಳು ಅಸ್ವಸ್ಥ ಬಿದ್ದು ಶ್ರಮಪಟ್ಟನು. ಮತ್ತು ತನ್ನ ಉದ್ಯೋಗ ನಡೆಯಿಸಲಿಕ್ಕೆ ಅಸಮರ್ಥನಾದನು, ಔಷಧೋಪಚಾರಕ್ಕೂ ಬೇರೆ ಉಪಾಯಗಳಿಗೂ ಬಹಳ ಹಣ ವೆಚ್ಚವಾಯಿತು; ವಾದಿಯ ಉದ್ಯೋಗ ಮುಳುಗಿ ಅವನಿಗೆ ಬಹಳ ಲುಕ್ಸಾನಾಯಿತು.

ಇವುಗಳ ತಪಶೀಲು:—

... ... ... ...

ಬೇಡತಕ್ಕ ನ್ಯಾಯಾಶ್ರಯವು ಬೇಡಬೇಕು.

೧೬—೬೯೬

## ನಂಬರು ೭೨

## ಮೈತನ ಆಸ್ತಿಯ ವಹಿವಾಟಿಗಾಗಿ ತನ್ನ ಬಗ್ಗೆ ಮತ್ತು ಬೇರೆ ಎಲ್ಲ ಸಾವುಕಾರರ ಬಗ್ಗೆ ಸಾಲಕೊಟ್ಟವನ ದಾವೆಯು

## ಸರನಾಮೆ

**ಅ, ಬ** ಎಂಬ ಸದರಿ ವಾದಿಯು ತಿಳಿಸುವ ವಿವರ:—

೧. ಫೋತೀ ಇ. ಫ. ಸಾಕೀನ ಇವನು ತೀರಿದಾಗ ವಾದಿಯ ಸಾಲ ಕೊಡಬೇಕಾಗಿತ್ತು; ಆ ಸಾಲದ ರಕಮು ರೂಪಾಯಿ ( ಇಲ್ಲಿ ಸಾಲದ ಪ್ರಕಾರವನ್ನು ಕಾರಣವನ್ನು ಇದ್ದರೆ, ವಿವರಿಸು) ಆಗಿತ್ತು. ಸದರಿ ಸಾಲವನ್ನು ಅವನ ಆಸ್ತಿಯೊಳಗಿಂದ ವಾದಿಯು ಇಗ್ಯೂ ಪಡೆಯತಕ್ಕವನಾಗಿದ್ದಾನೆ

೨. **ಫ, ಇ** ಎಂಬುವನು ಸನ್ನ ೧೯ ತಿಂಗಳಿನ ತಾರೀಖಿನಲ್ಲಿ ಅಥವಾ ಆ ಸುಮಾರಿಗೆ ಮರಣಹೊಂದಿದನು. ಅವನು ಸನ್ನ ೧೯ನೇ ಇಸ್ವಿಯ ತಿಂಗಳ ನೇ ತಾರೀಖಿನ ತನ್ನ ಕೊನೆಯ ಮೃತ್ಯುಪತ್ರದಿಂದ **ಕ ಡ** ಎಂಬುವವನ ಮೃತ್ಯುಪತ್ರ ನಡೆಯಿಸುವವನಾಗಿ ನೇಮಿಸಿದನು. ( ಅಥವಾ ತನ್ನ ಆಸ್ತಿಯನ್ನು ಜಿಮ್ಮೇದಾರಿಯಿಂದ ಮುಂತಾಗಿ ಇಟ್ಟನು, ಅಥವಾ ಮೃತ್ಯುಪತ್ರಮಾಡದೆ ತೀರಿದನು, ಪ್ರಸಕ್ತಿ ಇದ್ದಂತೆ ಬರೆ. )

೩. ಈ ಮೃತ್ಯುಪತ್ರವು **ಕ, ಡ** ಎಂಬುವವನಿಂದ ಸಾಬೀತು ಮಾಡಲ್ಪಟ್ಟಿತ್ತು. (ಅಥವಾ, ವಹಿವಾಟಿನ ದಾಖಲೆಗಳು ಕೊಡಲ್ಪಟ್ಟವು, ಇತ್ಯಾದಿ. )

೪. **ಈ' ಫ** ಎಂಬುವವನ ಜಂಗಮಮಾಲಿನ (ಮತ್ತು ಸ್ಥಾವರ ಮಾಲಿನ ಅಥವಾ ಸ್ಥಾವರ ಮಾಲಿನ ಆದಾಯದ ) ಕಬಜವನ್ನು ಪ್ರತಿವಾದಿಯು ಪಡೆದಿರುತ್ತಾನೆ. ಮತ್ತು ವಾದಿಗೆ ಅವನ ಸಾಲವನ್ನು ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ ಏನಂದರೆ:—**

ಫೋತೀ **ಇ, ಫ** ಎಂಬುವವನ ಜಂಗಮ ( ಮತ್ತು ಸ್ಥಾವರ ) ಮಾಲಿನ ಲೆಕ್ಕವು ತೆಗೆದುಕೊಳ್ಳಲ್ಪಡಬೇಕೆಂತಲೂ ಕೋರ್ಟಿನ ಹುಕುಮನಾಮೆಯಂತೆ ಮಾಲಿನ ವಹಿವಾಟು ನಡೆಯಬೇಕೆಂತಲೂ ವಾದಿಯ ಪ್ರಾರ್ಥನೆ.

## ನಂಬರು ೭೩

## ಮೃತನ ಆಸ್ತಿಯ ವಹಿವಾಟಿಯಗಾಗಿ ಮೃತ್ಯುಪತ್ರದಲ್ಲಿ ವಿಶೇಷೋದ್ದಿಷ್ಟವಾಗಿ ಸ್ವತ್ತು ಪಡೆಯುದವನ ದಾವೆ

## ಸರನಾಮೆ

[ ೭೨ನೇ ನಂಬರಿನ ನಮೂನೆಯನ್ನು ಕೆಳಗಿನಂತೆ ಹೆಚ್ಚುಕಡಿಮೆಮಾಡು ]

[೧ನೇ ಕಲಮು ತಗದು ಹಾಕಿ, ೨ನೇ ಕಲಮು ಕೆಳಗಿನಂತೆ ಆರಂಭಿಸ ಬೇಕು. ]

ಪೊತೀ **ಇ, ಫ** ಸಾಕೀನ ಇವನು ಸನ್ನ ೧೯ ನೇ ಇಸ್ವಿಯ ತಿಂಗಳ ನೇ ತಾರೀಖಿನಲ್ಲಿ ಅಥವಾ ಈ ಸುಮಾರಿಗೆ ಮರಣ ಹೊಂದಿದನು, ಮತ್ತು ಅವನು ಸನ್ನ ತಿಂಗಳಿನ ತಾರೀಖಿನ ತನ್ನ ಕಡೆಯ ಮೃತ್ಯುಪತ್ರ ದಿಂದ **ಕ, ಡ** ಎಂಬುವವನು ಈ ಮೃತ್ಯುಪತ್ರ ನಡಿಸುವವನಾಗಿ ನೇಮಿಸಿದನು. ಮತ್ತು ವಾದಿಗೆ (ಇಲ್ಲಿ ವಿಶೇಷೋದ್ದಿಷ್ಟವಾಗಿ ಆ ಪತ್ರದಿಂದ ಪಡೆದ ಸ್ವತ್ತನ್ನೇ ವಿವರಿಸು) ಕೊಟ್ಟನು.

೪ನೇ ಕಲಮಿಗೆ ಬದಲಾಗಿ ಕೆಳಗಿನಂತೆ ಬರೆ.

**ಇ. ಫ** ಎಂಬುವವನ ಜಂಗಮ ಮಾಲು ಪ್ರತಿವಾದಿಯ ಕಬಜೆಯಲ್ಲಿರುತ್ತದೆ ಮತ್ತು ಇತರ ಮಾಲಿನ ಸಂಗಡ (ಇಲ್ಲಿ ಮ್ಯುತ್ಯುಪತ್ರದಿಂದ ಪಡೆದ ಸ್ವತ್ತನ್ನು ಬರೆ ಅವನ ಕಬಜೆಯಲ್ಲಿ ಉಂಟು.

ವಿನಂತಿ ಕಲಮಿನ ಆರಂಭದ ಭಾಗಕ್ಕೆ ಬದಲಾಗಿ ಕೆಳಗಿನಂತೆ ಬರೆ—

ಸದರಿ (ಮೃತ್ಯುಪತ್ರದಿಂದ ವಿಶೇಷೋದ್ದಿಷ್ಟವಾಗಿ ಪಡೆದ ಸ್ವತ್ತನ್ನು ಬರೆ) ವಾದಿಯ ಕಬಜೆಯಲ್ಲಿ ಕೊಡಲಿಕ್ಕೆ ಪ್ರತಿವಾದಿಗೆ ಹುಕುಮು ಆಗಬೇಕೆಂದು ವಾದಿಯ ಪ್ರಾರ್ಥನೆ, ಅಥವಾ ಇತ್ಯಾದಿ,

## ನಂಬರು ೭೪

## ಮೃತನ ಆಸ್ತಿಯ ವಹಿವಾಟಿಗಾಗಿ ಮೃತ್ಯುಪತ್ರದಿಂದ ದಾನ ಪಡೆದವನ ದಾವೆಯು

( ೭೨ನೇ ನಂಬರಿನ ನಮೂನೆಯಲ್ಲಿ ಕೆಳಗಿನಂತೆ ಹೆಚ್ಚುಕಡಿಮೆ ಮಾಡು. )

[೧ನೇ ಕಲಮು ತೆಗೆದುಹಾಕಿ ೨ನೇ ಕಲಮಿಗೆ ಬದಲಾಗಿ ಕೆಳಗಿನಂತೆ ಬರೆ.]

ಪೋತೀ **ಇ, ಫ** ಸಾಕೀನ          ಇವನು ೧೯     ನೇ ಇಶ್ವಿಯ ತಿಂಗಳ        ನೇ ತಾರೀಖಿನಲ್ಲಿ ಅಥವಾ ಆ ಸುಮಾರಿಗೆ ಮರಣ ಹೊಂದಿದನು. ಅವನು ಸನ್ನ ೧೯     ತಿಂಗಳಿನ   ತಾರೀಖಿನ ತನ್ನಕಡಿಯ ಮೃತ್ಯುಪತ್ರದಿಂದ **ಕ, ಡ** ಎಂಬುವವನನ್ನು ಆ ಮೃತ್ಯುಪತ್ರ ನಡಿಯಿಸುವವನಾಗಿ ನೇಮಿಸಿದನು. ಮತ್ತು ವಾದಿಗೆ ರೂಪಾಯಿಗಳ ದಾನವನ್ನು ಕೊಟ್ಟನು.

೪ನೇ ಕಲಮಿನಲ್ಲಿ "ಸಾಲ" ಎಂಬದಕ್ಕೆ ಬದಲಾಗಿ "ದಾವೆ" ಎಂಬುವನ್ನು ಬರೆ.

## ಮತ್ತೊಂದು ನಮೂನೆ

## ಸರನಾಮೆ

**ಇ, ಫ** ಎಂಬ ಸದರಿ ವಾದಿಯು ತಿಳಿಸುವ ವಿವರ: —

೧.   **ಅ, ಬ** ಸಾಕೀನ        ಎಂಬಲ್ಲಿಯ ಕ. ಇವನು ಸನ್ನ ೧೯     ನೇ ಇಶ್ವಿಯ        ತಿಂಗಳ   ನೇ ತಾರೀಖಿನಲ್ಲಿ ಮರಣಪಟ್ಟನು. ಅವನು ಸನ್ನ   ನೇ ಇಶ್ವಿಯ        ತಿಂಗಳಿನ        ತಾರೀಖಿನ ತನ್ನ ಕಡೆಯ ಮೃತ್ಯುಪತ್ರದಿಂದ ಪ್ರತಿ ವಾದಿಯನ್ನೂ **ಮ, ನ** ಎಂಬುವವನನ್ನೂ (ಇವನು ಮೃತ್ಯುಪತ್ರಕರ್ತನು ಬದುಕಿರುವಾಗಲೇ ಮರಣ ಹೊಂದಿದನು. ) ಆ ಪತ್ರ ನಡಿಸುವವರಾಗಿ ನೇಮಿಸಿದನು. ಸದರಿ ಮೃತ್ಯುಪತ್ರದಿಂದ **ಅ, ಬ** ಎಂಬುವನು ಅದನ್ನು ನಡಸಲಿಕ್ಕೆ ಸದರಿ ಮನುಷ್ಯರಿಗೆ ತನ್ನ ಸ್ಥಾವರ ಜಂಗಮ ಸೊತ್ತನ್ನು ಜಿಮ್ಮೆದಾರಿಯಿಂದ ಕೊಟ್ಟು ವಾದಿಯು ಬದುಕಿರುವ ವರೆಗೆ ಅವನಿಗೆ ಬಾಡಿಗೆಯ ಹಣವನ್ನೂ ಬೇರೆ ಆದಾಯವನ್ನೂ

ಕೊಡುತ್ತಾ ಹೋಗಬೇಕೆಂದು ಗೊತ್ತುಮಾಡಿದನು; ಮತ್ತು ವಾದಿಯು ತೀರಿದ ಬಳಿಕ ಅವನ ಮಗನು ೨೧ ವರ್ಷದ ವಯಿಸ್ಸಿನವರೆಗೆ ಬದುಕದಿದ್ದರೆ, ಅಥವಾ ಅವನ ಮಗಳು ೨೧ ವರ್ಷದ ವಯುಸ್ಸಿನವರೆಗೆ ಬದುಕದಿದ್ದರೆ ಯಾ ಮದುವೆ ಮಾಡಿಕೊಳ್ಳದಿದ್ದರೆ ಸದರಿ ಮೃತ್ಯುಪತ್ರಕರ್ತನಿಗೆ ಕಾಯದೆಯಂತೆ ಆಗತಕ್ಕ ವಾರಸದಾರನ ಸಲುವಾಗಿ ಸ್ಥಾವರ ಮಾಲು ಸದರಿ ಮೃತ್ಯುಪತ್ರ ನಡಿಸುವವರ ವಶದಲ್ಲಿ ಜಿಮ್ಮೇದಾರಿಯಿಂದ ಇರಬೇಕೆಂತಲೂ, ಸದರಿ ಮೃತ್ಯುಲೇಖಕರ್ತನು ಆ ಲೇಖವನ್ನು ಬರೆದಿಡದೆ ತೀರಿ ವಾದಿಯ ಮರಣದ ಅನಂತರ ಅವನಿಗೆ ಸದರಿ ಬರೆದ ಪ್ರಕಾರ ಸಂತತಿಯು ಇಲ್ಲದೆ ಹೋಗಿದ್ದರೆ ಮೃತ್ಯುಲೇಖಕರ್ತನ ದಾಯಾದಿಗಳು ಯಾರಾಗುತ್ತಿದ್ದರೂ ಅವರ ಸಲುವಾಗಿ ಜಂಗಮ ಮಾಲು ಸದರಿ ಮೃತ್ಯುಪತ್ರ ನಡಿಯಿಸುವವರ ವಶದಲ್ಲಿ ಜಿಮ್ಮೆದಾರಿಯಿಂದ ಇರಬೇಕೆಂತಲೂ ಸದರಿ ಲೇಖದಿಂದ ಅವರ ಕರ್ತನು ಗೊತ್ತು ಮಾಡಿದನು.

೨. ಪ್ರತಿವಾದಿಯು, ಮೃತ್ಯುಪತ್ರವನ್ನು ನನ್ನ      ನೇ ಇಸ್ವಿಯ ತಿಂಗಳಿನ      ತಾರೀಖಿನಲ್ಲಿ ಸಾಬೀತು ಮಾಡಿದನು. ವಾದಿಯ ಲಗ್ನವಾಗಿಲ್ಲಾ.

೩. ಮೃತ್ಯುಪತ್ರ ಕರ್ತನು ಮರಣ ಕಾಲದಲ್ಲಿ ಸ್ಥಾವರ ಜಂಗಮ ಮಾಲಿಗೆ ಬಾಧ್ಯನಾಗಿದ್ದನು. ಪ್ರತಿವಾದಿಯು ಸ್ಥಾವರ ಮಾಲಿನ ಭಾಡಿಗೆ ವಸೂಲ ಮಾಡುವದನ್ನು ಆರಂಭಿಸಿರುತ್ತಾನೆ. ಮತ್ತು ಜಂಗಮ ಮಾಲು ತನ್ನ ಕಬಜೆಯಲ್ಲಿ ತೆಗೆದುಕೊಂಡಿರುತ್ತಾನೆ; ಅವನು ಸ್ಥಾವರ ಮಾಲಿನ ಕೆಲವು ಭಾಗ ವನ್ನು ಮಾರಿದನು.

ಇವುಗಳ ತಪಶೀಲಗಳು:—

...     ...     ...     ...

...     ...     ...     ...

ವಾದಿಯು ಬೇಡುವದೇನಂದರೆ:—

(೧) **ಅ, ಬ** ಎಂಬುವವನ ಸ್ಥಾವರ ಜಂಗಮ ಮಾಲಿನ ವಹೀವಾಟು ಈ ಕೋರ್ಟಿನಿಂದಾ ಆಗಬೇಕು, ಮತ್ತು ಅದಕ್ಕಾಗಿ ಯೋಗ್ಯವಾದ ಹುಕುಮುಗಳು ಮಾಡಲ್ಪಟ್ಟು ಲೆಕ್ಕವು ತೆಗೆದುಕೊಳ್ಳಬೇಕು.

## ನಂಬರು ೭೫

## ಜಿಮ್ಮೇದಾರಿಗಳ ಅನುಲಬಜ್ಯಾವಣಿಯು

**ಅ, ಬ** ಎಂಬ ಸದರಿ ವಾದಿಯು ತಿಳಿಸುವ ವಿವರ:—

೧. ಪ್ರತಿವಾದಿಯು ತಂದೆತಾಯಿಗಳಾದ **ಇ, ಫ, ಗ, ಹ** ಇವರ ಲಗ್ನ ಸಮಯದಲ್ಲಿ ಸನ್ನ ತಿಂಗಳಿನ ತಾರೀಖಿನಲ್ಲಿ ಯಾ ಈ ಸುಮಾರಿನಲ್ಲಿ ಮಾಡಿದ ವ್ಯವಸ್ಥಾಪತ್ರದಂತೆ (ಅಥವಾ **ಕ, ಡ** ಪ್ರತಿವಾದಿಯು ಹಿತಕ್ಕಾಗಿಯೂ **ಇ,** ಫ ಎಂಬುವನಿಗೆ ಸಾಲಕೊಟ್ಟಂಥ ಬೇರೆ ಜನರ ಹಿತಕ್ಕಾಗಿಯೂ **ಇ, ಫ** ಎಂಬುವನ ಅಸ್ತಿ ಸೊತ್ತುಗಳ ಮಾಲಕಿಯನ್ನು ತಬದಿಲುಮಾಡಿ ಕೊಡುವ ದಸ್ತೈವಜಿನಂತೆ) ನೇಮಿಸಲ್ಪಟ್ಟ ಜಮ್ಮೇದಾರರಲ್ಲಿ ವಾದಿಯು ಒಬ್ಬನಾಗಿರುತ್ತಾನೆ.

೨. **ಅ, ಬ** ಎಂಬುವವನು ಸದರಿ ಜಮ್ಮೇದಾರಿಯ ಭಾರವನ್ನು ವಹಿಸಿ, ಸದರಿ ಬರೆದ ದಸ್ತೈವಜಿನಿಂದ ತಬದಿಬು ಮಾಡಿಕೊಟ್ಟ ಸ್ಥಾವರ ಜಂಗಮ ಮಾಲಿನ (ಯಾ ಅದರ ಆದಾಯದ) ಕಬಜವನ್ನು ತೆಗೆದುಕೊಂಡಿರುತ್ತಾನೆ.

೩. **ಕ, ಡ** ಎಂಬುವವನು ಸದರಿ ದಸ್ತೈವಜಿನ ಆಧಾರದಿಂದ ಹಿತಾಧಿಕಾರರ ಸ್ವಾರ್ಥಸಂಬಂಧದ ಹಕ್ಕು ತನಗುಂಟೆಂಬ ಬಾಧ್ಯತೆಯನ್ನು ತೋರಿಸುತ್ತಾನೆ.

**ವಾದಿ ವಿನಂತಿ ಏನಂದರೆ:—**

... ... ... ...

೬. ವಾದಿಯು ಸದರಿ ಸ್ಥಾವರ ಮಾಲಿನ ಯಾವತ್ತು ಭಾಡಿಗೆ ಮತ್ತು ಲಾಭಗಳ (ಮತ್ತು ಸದರಿ ಸ್ಥಾವರ ಮಾಲಿನ ಯಾ ಅದರದೊಂದು ಭಾಗದ ವಿಕ್ರಯ ಮಾಡಿದ ಹಣದ, ಅಥವಾ ಜಂಗಮ ಮಾಲಿನ, ಅಥವಾ ಆ ಜಂಗಮ ಮಾಲಿನ ಯಾ ಅದರದೊಂದು ಭಾಗದ ವಿಕ್ರಯ ಮಾಡಿದ ಹಣದ, ಅಥವಾ ಸದರಿ ಜಮ್ಮೇದಾರಿಯ ಕೆಲಸದಲ್ಲಿ ವಾದಿಗೆ ಜಮ್ಮೇದಾರನೆಂಬ ಸಂಬಂಧದಿಂದ ಆಗುವ ಲಾಭದ ಲೆಖ್ಖವನ್ನು ಕೊಡಲಿಕ್ಕೆ ಅಪೇಕ್ಷಿಸುತ್ತಾನೆ; ಮತ್ತು **ಕ, ಡ** ಪ್ರತಿವಾದಿಯ ಸಮಕ್ಷದಲ್ಲಿಯ ಸದರಿ ಜಮ್ಮೇದಾರಿಯ ವಹಿವಾಟನೊಳಗೆ ಸ್ವಾರ್ಥ

ಸಂಬಂಧವುಳ್ಳವರಲ್ಲಿ ಕೋರ್ಟಿನವರು ಅಪ್ಪಣೆ ಮಾಡಿದಂಥವರ ಸಮಕ್ಷದಲ್ಲಿ ಯಾ ಸದರಿ ಜಮ್ಮೇದಾರಿಯ ಲೆಖ್ಖವನ್ನು ಕೋರ್ಟಿನವರು ತೆಗೆದುಕೊಳ್ಳಬೇಕೆಂದು ವಾದಿಯ ಪ್ರಾರ್ಥನೆಯು; ಇದಲ್ಲದೆ **ಕ, ಡ** ಪ್ರತಿವಾದಿಯ ಹಿತಕೋಸ್ಕರ ವಾಗಿಯು ಸದರಿಯಂತೆ ಸ್ವಾರ್ಥಸಂಭಂಧವುಳ್ಳಂಥ ಬೇರೆ ಯಾವತ್ತು ಜನರ ಹಿತಕ್ಕೋಸ್ಕರವಾಗಿಯೂ ಸದರಿ ಜಮ್ಮೇದಾರಿಯ ಯಾವತ್ತು ಆಸ್ತಿಯ ವಹಿವಾಟು ಕೋರ್ಟಿನಿಂದ ಆಗಬೇಕೆಂದು ಸಹ ಅವನು ಪ್ರಾರ್ಥಿಸುತ್ತಾನೆ; ಅಥವಾ **ಕ, ಡ** ಪ್ರತಿವಾದಿಯು ಹಾಗೆ ಮಾಡಬಾರದೆಂಬ ಬಗ್ಗೆ ತಕ್ಕ ಕಾರಣವನ್ನು ತೋರಿಸಬೇಕು, ಎಂದು ಪ್ರಾರ್ಥಿಸುತ್ತಾನೆ.

[ **ಸೂಚನೆ:—** ಹಿತಾಧಿಕಾರಿಯು ದಾವೆಯನ್ನು ಮಾಡಬೇಕಾಗಿದ್ದಿಲ್ಲ, ಮೃತ್ಯುಪತ್ರದಿಂದ ದಾನವನ್ನು ಪಡೆದವನ ಅಸಲರ್ಜಿಯಂತೆ, ಅಗತ್ಯವುಳ್ಳ ಹೆಚ್ಚು ಕಡಿಮೆಗಳೊಂದಿಗೆ, ಅಸಲರ್ಜಿಯನ್ನು ಮಾಡಬಹುದು. ]

## ನಂಬರು ೭೬

## ಕಾರಕೂನನು ತನ್ನ ಪ್ರಾಮಾಣಿಕತನಕ್ಕಾಗಿ ಬರೆದುಕೊಟ್ಟ ದಸ್ತೈವಜಿನ ಆಧಾರದಿಂದ

೧. ವಾದಿಯು ತಾರೀಖು ೧೬–೪–೧೯೨೬ನೇ ಇಸ್ವಿ ದಿವಸ ನಾರಾಯಣ ಲಿಂಗೋ ಕುಲಕರ್ಣಿ ಎಂಬುವನನ್ನು ಕಾರಕೂನನ ಕೆಲಸಕ್ಕೆ ಇಟ್ಟುಕೊಂಡನು.

೨. ಅದರ ಮೊಬದಲೆಯಾಗಿ ಸದರಿ ಅವನು ವಾದಿಯ ಕಾರಕೂನನಾಗಿ ತನ್ನ ಕೆಲಸವನ್ನು ಪ್ರಾಮಾಣಿಕತನದಿಂದ ಮಾಡದಿದ್ದರೆ, ಅಥವಾ ವಾದಿಯ ಕೆಲಸಕ್ಕಾಗಿ ಅವನ ಕೈಗೆ ಸೇರಿದ ಯಾವತ್ತು ಹಣವನ್ನೂ ಸಾಲದ ಪುರಾವೆದ ದಸ್ತೈವಜುಗಳನ್ನೂ ಅಥವಾ ಬೇರೆ ಮಾಲನ್ನೂ ಕುರಿತು ಸರಿಯಾಗಿ ಲೆಕ್ಕವನ್ನು ವಾದಿಗೆ ತೋರಿಸದಿದ್ದರೆ ಆ ಕಾರಣದಿಂದ ವಾದಿಗೆ ೨೫೦೦ ರೂಪಾಯಿಗಳವರೆಗೆ ಆದ ಯಾವತ್ತು ಲುಕ್ಸಾನವನ್ನು ಪ್ರತಿವಾದಿಯು ತುಂಬಿ ಕೊಡಬೇಕೆಂದು ಪ್ರತಿವಾದಿಯು ತಾರೀಖು ೧೬–೪–೧೯೨೬ನೇ ಇಸ್ವಿದಿವಸ ವಾದಿಯ ಸಂಗಡ ಕರಾರು ಮಾಡಿದನು.

[ ಅಥವಾ (೨) ಅದರ ಮೊಬದಲೆಯಾಗಿ ಪ್ರತಿವಾದಿಯು ವಾದಿಗೆ ದಂಡ ರೂಪವಾಗಿ ೨೫೦೦ ರೂಪಾಯಿಗಳನ್ನು ಕೊಡುವ ಬಗ್ಗೆ ಅದೇ ತಾರೀಖಿನ ದಸ್ತೈವಜು ಬರೆದುಕೊಟ್ಟನು; ಅದರೊಳಗಿನ ಶರತುಗಳು ಏನಂದರೆ– ಸದರಿ ನಾರಾಯಣ ಲಿಂಗೋ ಎಂಬುವವನು ವಾದಿಯು ಕಾರಕೂನನು ಖಜಾನೆದಾರನು ಆಗಿ ತನ್ನ ಕೆಲಸವನ್ನು ಪ್ರಾಮಾಣಿಕತನದಿಂದ ಮಾಡಿದರೆ, ಮತ್ತು ವಾದಿಯು ಸಲುವಾಗಿ ಯಾವದೊಂದು ಸಮಯಕ್ಕೆ ಅವನ ಜಿಮ್ಮೆಗೆ ಸೇರಿದ ಯಾವತ್ತು ಹಣವನ್ನೂ ಸಾಲದ ಪುರಾವೆಯ ದಸ್ತೈವಜುಗಳನ್ನೂ ಅಥವಾ ಬೇರೆ ಮಾಲನ್ನೂ ಕುರಿತು ವಾದಿಗೆ ಸರಿಯಾಗಿ ಲೆಕ್ಕಕೊಟ್ಟರೆ ಆ ದಸ್ತೈವಜು ರದ್ದಾಗಬೇಕು. ]

[ ಅಥವಾ (೨) ಅದರ ಮೊಬದಲೆಯಾಗಿ ಅದೇ ತಾರೀಖಿಗೆ ಪ್ರತಿವಾದಿಯು ವಾದಿಗೆ ಒಂದು ದಸ್ತೈವಜು ಬರೆದುಕೊಟ್ಟನು. ಅದರ ತಪಶೀಲು ]

(೩) ಸದರಿ ನಾರಾಯಣ ಲಿಂಗೋ ಕುಲಕರ್ಣಿ ಎಂಬುವವನ ಕೈಯಲ್ಲಿ ತಾರೀಖು ೧೭–೫–೧೯೨೬ನೇ ಇಸ್ವಿಯಿಂದ ತಾರೀಖು ೪–೧೨–೧೯೨೬ನೇ ಇಸ್ವಿಯವರೆಗೆ ನಗದ ಹಣವೂ ಬೇರೆ ಮಾಲೂ ಕೂಡಿ ೧೫೦೦ ರೂಪಾಯಿ ಬೆಲೆಯ ರಕಮು ವಾದಿಯ ಉಪಯೋಗಕ್ಕಾಗಿ ಬಂತು, ಅದರ ಲೆಕ್ಕವನ್ನು ಅವನು ವಾದಿಗೆ ತೋರಿಸಲಿಲ್ಲ, ಮತ್ತು ಆ ಹಣವು ಇನ್ನೂ ಸಲ್ಲತಕ್ಕದ್ದಾಗಿದ್ದು, ಅದನ್ನು ಇನ್ನೂ ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ ಏನಂದರೆ: —**

ಪ್ರತಿವಾದಿ ಕಡಿಂದ ೧೫೦೦ ರೂಪಾಯಿಗಳು ಸಿಗಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೭೭

## ಲೆಕ್ಕವನ್ನು ಮಾಡಿ ಹಣ ಕೊಡಿಸುವ ಬಾಬತು ಒಟ್ಟೆ ಮುಖತ್ಯಾರನ ಮೇಲೆ ದಾವೆಯು

(೧) ಧಾರವಾಡ ಜಿಲ್ಹಾ ಹುಬ್ಬಳ್ಳಿ ತಾಲೂಕ ಪೈಕಿ ಮೌಜೆ ಉಣಕಲ್ಲ ಮತ್ತು ಕೇಶವಾಪೂರ ಗ್ರಾಮುಗಳಲ್ಲಿ ಇರುವ ವಾದಿ ಮಾಲ್ಕಿವುಳ್ಳ ಯಾವತ್ತೂ

ಜಮೀನಗಳ ಬಾಬತು ಲಾವಣಿ ರಕಮುಗಳನ್ನು ವಸೂಲುಮಾಡುವ ಬಗ್ಗೆ ವಾದಿಯು ಪ್ರತಿವಾದಿಗೆ ಗುಮಾಸ್ತನಾಗಿ ನೇಮಿಸಿ ಆ ಬಗ್ಗೆ ತಾ॥ ೧೯-೪-೧೯೨೬ ನೇ ಇಸ್ವಿ ದಿವಸ ಒಂದು ಒಟ್ಟ ಮುಖತ್ಯಾರಪತ್ರವನ್ನು ಪ್ರತಿವಾದಿಯ ಹೆಸರಲೆ ಬರೆದುಕೊಟ್ಟನು.

(೨) ಪ್ರತಿವಾದಿಯು ಸನ್ ೧೯೨೬ನೇ ಇಸ್ವಿಯಿಂದ ಮೇಲ್ಕಂಡ ಜಮಿನುಗಳ ಬಾಬತು ಲಾವಣಿ ರಕಮುಗಳನ್ನು ವಸೂಲುಮಾಡುತ್ತಾ ಬಂದಿರುತ್ತಾನೆ.

(೩) ಎಷ್ಟೆಷ್ಟು ರಕಮುಗಳನ್ನು ಪ್ರತಿವಾದಿಯು ವಸೂಲು ಮಾಡಿದ್ದಾನೆಂಬುವದು ವಾದಿಗೆ ಗೊತ್ತಿಲ್ಲ. ಮತ್ತು ಆ ಬಗ್ಗೆ ಲೆಕ್ಕವನ್ನು ಕೊಡಲಿಕ್ಕೆ ಪ್ರತಿವಾದಿಗೆ ಹೇಳಿದರೂ ಅವನು ಕೊಟ್ಟಿಲ್ಲ.

(೪) ದಾವೇದ ಕಾರಣವು ಪ್ರತಿವಾದಿಗೆ ಲೆಕ್ಕವನ್ನು ಕೊಡಲಿಕ್ಕೆ ಹೆಳಿದ ಮತ್ತು ಅದಕ್ಕೆ ಅವನು ಇನಕಾರು ಮಾಡಿದ ದಿವಸ ಅಂದರೆ ತಾ॥ ೧೯-೪-೧೯೨೯ ನೇ ಇಸ್ವಿ ದಿವಸ ಉಂಟಾಯಿತು.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

(ಅ) ಪ್ರತಿವಾದಿಯ ಕಡೆಯಿಂದ ವಾದಿಯ ಗುಮಾಸ್ತನಾಗಿ ಅವನು ವಸೂಲು ಮಾಡಿದ ರಕಮುಗಳ ಸಂಪೂರ್ಣ ಮತ್ತು ಖರೆ ಲೆಕ್ಕವನ್ನು ಕೊಡಿಸಬೇಕು. ಮತ್ತು

(ಬ) ರೂಪಾಯಿ ೫೦೦೧ ಅಥವಾ, ಮೇಲಿನಂತೆ ಲೆಕ್ಕವನ್ನು ಮಾಡಿ ಪ್ರತಿವಾದಿಯು ವಾದಿಗೆ ಕೊಡಬಹುದಾದ ರಕಮನ್ನು ಪ್ರತಿವಾದಿಯ ಕಡೆಯಿಂದ ಕೊಡಿಸಬೇಕು.

## ನಂಬರು ೭೮

## ಲೆಖ್ಖವನ್ನು ಮಾಡಿ ಹಣಕೊಡಿಸುವಬಗ್ಗೆ ಗುಮಾಸ್ತನಮೇಲೆ ದಾವೆಯು

(೧) ವಾದಿಯು ಮಾಲನ್ನು ಮಾರಾಟ ಮಾಡುವದೊಸ್ಕರವಾಗಿ ವಾದಿಯು ಪ್ರತಿವಾದಿಗೆ ಬಾಯಿಮಾತಿನಿಂದ ಗುಮಾಸ್ತನಾಗಿ ನೇಮಿಸಿದನು. ವಾದಿಯು

ಪ್ರತಿವಾದಿಯು ಅಂಗಡಿಗೆ ಕಳುಹಿಸಿದ ಮಾಲನ್ನು ಮಾರಾಟ ಮಾಡಲಿಕ್ಕೆ ಮತ್ತು ಈ ರೀತಿ ಮಾರಾಟ ಮಾಡಿದ ಮಾಲಿನ ಬಾಬತು ಸಂಪೂರ್ಣ ಮತ್ತೆ ಖರೆ ಲೆಕ್ಕವನ್ನು ಕೊಡಲಿಕ್ಕೆ ಮತ್ತು ಈ ರೀತಿ ಮಾರಾಟದಿಂದ ವಸೂಲು ಬಂದ ಹಣವನ್ನು ವಾದಿಗೆ ಕೊಡಲಿಕ್ಕೆ ಪ್ರತಿವಾದಿಯು ಒಪ್ಪಿಕೊಂಡನು.

(೨) ಪ್ರತಿವಾದಿಯು ವಾದಿಯ ಗುಮಾಸ್ತನೆಂದು ಅವನ ಅಂಗಡಿಗೆ ವಾದಿಯು ಮೇಲಿಂದ ಮೇಲೆ ಕಳುಹಿಸಿದ ಮಾಲನ್ನು ಮಾರಾಟ ಮಾಡಿದನು; ಮತ್ತು ತಾರೀಖು ೧೬–೭–೧೯೨೪ನೇ ಇಸ್ವಿ ದಿವಸ ೩೦೦ ರೂಪಾಯಿಗಳನ್ನು ಪ್ರತಿವಾದಿಯು ವಾದಿಗೆ ಕೊಟ್ಟನು.

(೩) ಮೇಲಿನಂತೆ ಮಾರಾಟಮಾಡಿದ ಬಾಬತು ಲೆಕ್ಕವನ್ನು ಮತ್ತು ಮಾರಾಟದಿಂದ ವಸೂಲು ಬಂದ ಸಂಪೂರ್ಣ ಹಣವನ್ನು ಕೊಡಲಿಕ್ಕೆ ಪ್ರತಿವಾದಿಗೆ ಕೇಳಿದರೆ ಅವನು ಕೊಟ್ಟಿಲ್ಲ.

(೪) ಈ ಪ್ರಸಕ್ತಿಯಲ್ಲಿ ಪ್ರತಿವಾದಿಯು ಮೇಲ್ಕಂಡ ಮಾಲನ್ನು ಯಾರ್‍ಯಾರಿಗೆ ಮಾರಿದನು; ಎಷ್ಟೆಷ್ಟು ರಕಮು ವಸೂಲು ಮಾಡಿದನು ಮತ್ತು ಎಷ್ಟೆಷ್ಟು ರಕಮು ವಸೂಲು ಮಾಡತಕ್ಕವನಿರುತ್ತಾನೆಂಬುವನ್ನು ವಾದಿಗೆ ಗೊತ್ತಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ—**

(ಅ) ಪ್ರತಿವಾದಿಯು ಮಾಡಿದ ಮಾರಾಟಗಳ ಸಂಪೂರ್ಣ ಮತ್ತು ಖರೆ ಲೆಕ್ಕವನ್ನು ಮತ್ತು

(ಬ) ಮೇಲಿನ ೩೦೦ ರೂಪಾಯಿಗಳನ್ನು ವಜಾ ಹೋಗಲಾಗಿ ಮಾರಾಟಗಳಿಂದ ಪ್ರತಿವಾದಿಯು ವಸೂಲು ಮಾಡಿದ ಯಾವತ್ತು ರಕಮನ್ನು, ಮತ್ತು

(ಕ) ಸದರಿ ರಕಮಿನ ಮೇಲೆ ಲುಕ್ಸಾನ ತರೀಕ ವರಸಾಲ ಪರಶೇಕಡಾ ೧೨ ರೂಪಾಯಿದಂತೆ ಬಡ್ಡಿಯು ಪ್ರತಿವಾದಿಯು ಕಡೆಯಿಂದ ವಾದಿಗೆ ಕೊಡಸಬೇಕು.

## ನಂಬರು ೭೯

## ಲೆಖ್ಖವನ್ನು ಮಾಡಿ ಹಣ ಕೊಡಿಸುವ ಬಗ್ಗೆ ಹಿಶೇದಾರನ ಮೇಲೆ ದಾವೆಯು

(೧) ಕೆಳಗೆ (ಅ) ಪರಿಶಿಷ್ಟದಲ್ಲಿ ವರ್ಣಿಸಿದ ಆಸ್ತಿಗಳು ವಾದಿ–ಪ್ರತಿವಾದಿಯರ ಕಕ್ಕನಾದ ರಾಯಪ್ಪಾ ತಂದಿ ನಿಂಗಪ್ಪಾ ದೊಡ್ಡಗಾಣಗೇರ ಸಾಕೀನ ಹೆಬಸೂರ ತಾಲೂಕ ಹುಬ್ಬಳ್ಳಿ ಈತನ ಮಾಲ್ಕಿವುಳ್ಳದ್ದು ಇದ್ದವು.

(ಅ) ಪರಿಶಿಷ್ಟ

[ ಆಸ್ತಿಗಳ ವರ್ಣನೆಯನ್ನು ಬರೆಯಬೇಕು. ]

... ... ... ...

೨ ಸದರೀ ರಾಯಪ್ಪಾ ತಂದಿ ನಿಂಗಪ್ಪಾ ದೊಡ್ಡಗಾಣಿಗೇರ ಈತನು ಮೇಲೆ ವರ್ಣಿಸಿವ ಯಾವತ್ತು ಆಸ್ತಿಗಳನ್ನು ತಾರೀಖು ೧೬–೩–೧೯೨೬ನೇ ವಾದಿಪ್ರತಿವಾದಿಯರ ಹೆಸರಲೆ ಬಕ್ಷೀಸ ಮಾಡಿಕೊಟ್ಟನು. ಮತ್ತು ಸದರಿ ಆಸ್ತಿಗಳ ಪೈಕಿ ಪ್ರತಿಯೊಂದು ಆಸ್ತಿಯಲ್ಲಿ ವಾದಿಯು ಮತ್ತು ಪ್ರತಿವಾದಿಯ ಸಮಾ ಅರ್ಧ ಹಿಶೇ ಇರುತ್ತದೆಂದು ಹೇಳಿದನು.

೩ ಸದರಿ ಯಾವತ್ತು ಆಸ್ತಿಗಳು ರೈತರ ತಾಬೆಯಲ್ಲಿ ಇದ್ದು ವಾದಿಯು ದೇಶಾಂತರಕ್ಕೆ ಹೋದದ್ದರಿಂದ ವಾದಿಯ ಅನುಮತಿಯಿಂದ ಪ್ರತಿವಾದಿಯು ಸದರಿ ಆಸ್ತಿಗಳ ಬಾಬತ್ತು ರೈತರ ಕಡಿಂದ ಲಾವಣಿ ರಕಮುಗಳನ್ನು ವಸೂಲು ಮಾಡುತ್ತಾ ಬಂದಿರುತ್ತಾನೆ.

೪ ಪ್ರತಿವಾದಿಯು ತಾರೀಖು ೧೬–೩–೧೯೨೬ನೇ ಇಸ್ವಿ ದಿವಸದಿಂದ ಮೇಲ್ಕಂಡ ಆಸ್ತಿಗಳ ಬಾಬತು ರೈತರ ಕಡಿಂದ ವಸೂಲು ಮಾಡಿದ ಲಾವಣಿ ರಕಮಿನ ಲೆಕ್ಕವನ್ನು ಕೊಡಲಿಕ್ಕೆ ತಾರೀಖು ೪–೧–೧೯೩೯ನೇ ಇಸ್ವಿ ದಿವಸ ಮಾಡಿದ ನೋಟೀಸಿನ ಮುಖಾಂತರವಾಗಿ ಕೇಳಲೂ ಅವನು ಕೊಟ್ಟಿಲ್ಲ. ಮತ್ತು ವಸೂಲ ಮಾಡಿದ ಲಾವಣಿ ರಕಮಿನ ಪೈಕಿ ವಾದಿಯ ಹಿಶೇದ ರಕಮು ಅಥವಾ ಅದರ ಪೈಕಿ ಯಾವದೇ ಭಾಗವನ್ನು ಪ್ರತಿವಾದಿಯು ವಾದಿಗೆ ಕೊಟ್ಟಿಲ್ಲ.

೫. ಪ್ರತಿವಾದಿಯು ಮೇಲ್ಕಂಡ ಆಸ್ತಿಗಳ ಬಾಬತು ರೈತರ ಕಡಿಂದ ಎಷ್ಟೆಷ್ಟು ರಕಮುಗಳು ವಸೂಲ ಮಾಡಿದ್ದಾನೆಂಬುದು ವಾದಿಗೆ ಗೊತ್ತಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಅ. ಮೇಲ್ಕಂಡ ಆಸ್ತಿಗಳ ಬಾಬತ್ತು ರೈತರಕಡಿಂದ ವಸೂಲು ಮಾಡಿದ ರಕಮಿನ ಸಂಪೂರ್ಣ ಮತ್ತು ಖರೇ ಲೆಖ್ಖವನ್ನು ಮತ್ತು

ಬ. ಪ್ರತಿವಾದಿಯು ಮೇಲಿನಂತೆ ವಸೂಲು ಮಾಡಿದ ರಕಮಿನ ಅರ್ಧಾ ಭಾಗವನ್ನು ಮತ್ತು

ಕ. ಸದರಿ ರಕಮಿನ ಮೇಲೆ ಲುಕ್ಸಾನ ತರೀಕ ದರಸಾಲು ದರ ಶೇಕಡಾ ೧೨ ರುಪಾಯಿದಂತೆ ಬಡ್ಡಿಯು ಪ್ರತಿವಾದಿಯ ಕಡೆಯಿಂದ ಕೊಡಿಸಬೇಕು.

## ನಂಬರು ೮೦

## ಲೆಕ್ಕವನ್ನು ಮಾಡಿ ಹಣ ಕೊಡಿಸುವ ಬಗ್ಗೆ ಪಾಲಕನ ಮೇಲೆ ದಾವೆಯು

೧. ವಾದಿಯು ತಾರೀಖು ೧೮–೭–೧೯೨೮ನೇ ಇಶ್ವಿ ದಿವಸದ ವರೆಗೆ ಅಪ್ರಾಯಸ್ಥನಿದ್ದನು ಮತ್ತು ಪ್ರತಿವಾದಿಯು ತಾರೀಖು ೧೪–೮–೧೯೨೦ನೇ ಇಶ್ವಿ ದಿವಸ ಧಾರವಾಡ ಅಸಿಸ್ಟಂಟ ಜಜ್ಜ ಕೋರ್ಟಿನಿಂದ ವಾದಿಯ ಯಾವತ್ತೂ ಆಸ್ತಿಗಳ ಬಾಬತು ಪಾಲಕನೆಂದು ನೇಮಿಸಲ್ಪಟ್ಟನು.

೨. ತಾರೀಖು ೧೪–೮–೧೯೨೦ನೇ ಇಶ್ವಿಯಿಂದ ತಾ|| ೧೮–೭–೨೮ನೇ ಇಶ್ವಿಯ ವರೆಗೆ ವಾದಿಯ ಪಾಲಕನೆಂದು ಪ್ರತಿವಾದಿಯು ವಾದಿಯ ಯಾವತ್ತು ಆಸ್ತಿಗಳನ್ನು ವಹಿವಾಟ ಮಾಡುತಿದ್ದನು ಮತ್ತು ಅವುಗಳ ಬಾಬತು ಉತ್ಪನ್ನವನ್ನು ಸಹ ತೆಗೆದುಕೊಳ್ಳುತಿದ್ದನು. ಸದರೀ ಉತ್ಪನ್ನದ ಲೆಖ್ಖವನ್ನು ಕೊಡಲಿಕ್ಕೆ ಮತ್ತು ಸದರಿ ಉತ್ಪನ್ನದ ಪೈಕಿ ಐನ ಫಾಯದೇದ ಹಣವನ್ನು

ಕೊಡಲಿಕ್ಕೆ ಪ್ರತಿವಾದಿಗೆ, ತಾರೀಖು ೪-೧-೧೯೪೯ನೇ ಇಸ್ವಿ ದಿವಸ ಮಾಡಿದ ರಜಿಸ್ಟರ್ಡ ನೋಟೀಸದ ದ್ವಾರಾ, ಕೇಳಿದರೆ ಅವನು ಕೊಟ್ಟಿಲ್ಲ.

೪. ಪ್ರತಿವಾದಿಯು ಮೇಲ್ಕಂಡ ಆಸ್ತಿಗಳ ಬಾಬತು ಎಷ್ಟು ರಕಮು ವಸುಲು ಮಾಡಿದ್ದಾನೆ ಮತ್ತು ಅವರ ಪೈಕಿ ವಾದಿವತಿಂದ ಎಷ್ಟು ಪೆಚ್ಚ ಮಾಡಿದ್ದಾನೆಂಬುದು ವಾದಿಗೆ ಗೊತ್ತಿಲ್ಲ.

... ... ... ...

... ... ... ...

**ವಾದಿ ವಿನಂತಿ ಏನಂದರೆ:—**

ಅ. ಮೇಲ್ಕಂಡ ಆಸ್ತಿಗಳ ಬಾಬತ್ತು ವಸೂಲು ಮಾಡಿದ ರಕಮಿನ ಮತ್ತು ಅದರ ಪೈಕಿ ವಾದಿ ದಸೆಯಿಂದ ಖರ್ಚುನಾಡಿವ ರಕಮಿನ ಸಂಪೂರ್ಣ **ಮತ್ತು ಖರೇ ಲೆಖ್ಖವನ್ನು ಮತ್ತು**

ಬ. ವಸೂಲು ಮಾಡಿವ ರಕಮಿನಲ್ಲಿ ವಾದಿ ದಸೆಯಿಂದ ಖರ್ಚುವಾಡಿದ ರಕಮು ವಜಾ ಹೋಗಲಾಗಿ ಬಾಕಿ ಉಳಿದ ರಕಮನ್ನು ಮತ್ತು

ಕ. ಸದರಿ ರಕಮಿನ ಮೇಲೆ ಲುಕ್ಸಾನ ತರೀಕ ದರಸಾಲ ದರ ಶೇಕಡಾ ೧೨ ರುಪಾಯಿಯಂತೆ ಬಡ್ಡಿಯು ಪ್ರತಿವಾದಿಯು ಕಡೆಯಿಂದ ಕೊಡಸಬೇಕು.

## ನಂಬರು ೮೧

## ಖಾತೆ ಬಾಕಿ ನಿಕ್ಕಿ ಮಾಡಿದ ಬಾಬತು

೧. ವಾದಿಯು ಹುಬ್ಬಳ್ಳಿಯಲ್ಲಿ ಜೋಳದ ವ್ಯಾಪಾರ ಮಾಡುತ್ತಾನೆ ಮತ್ತು ಪ್ರತಿವಾದಿಯು ಕಲಘಟಗಿಯಲ್ಲಿ ಅಕ್ಕಿ ವ್ಯಾಪಾರ ಮಾಡುತ್ತಾನೆ.

೨. ಮೇಲಿಂದ ಮೇಲೆ ವಾದಿಯು ಪ್ರತಿವಾದಿಯು ಕಡೆಯಿಂದ ಉದ್ದರಿಯಿಂದ ಅಕ್ಕಿ ತರಿಸುತ್ತಿದ್ದನು ಮತ್ತು ಪ್ರತಿವಾದಿಯು ಮೇಲಿಂದ ಮೇಲೆ ವಾದಿಯು ಕಡಿಂದ ಉದ್ದರಿಯಿಂದ ಜೋಳಾ ತರಿಸುತ್ತಿದ್ದನು.

೩. ಪ್ರತಿವಾದಿಯು ತಾರೀಖು ೧೯-೪-೧೯೫೮ನೇ ಇಸ್ವಿದಿವಸ ವಾದಿ ಅಂಗಡಿಗೆ ಬಂದು ಲೆಖ್ಖವನ್ನು ನೋಡಿಕೊಂಡು ತನ್ನ ಮೇಲೆ ೨೩೪೦ ರುಪಾಯಿ

ಗಳ ಬಾಕಿ ಹೊರಡುತ್ತದೆಂದು ಒಪ್ಪಿಕೊಂಡನು. ಸದರಿ ಬಾಕಿಯನ್ನು ವಾದಿ ಅಂಗಡಿಯ ಖಾತೆವಹಿಯಲ್ಲಿ ೧೯ನೇ ಪಾನಿಗೆ ಬರೆದು ಅವಕ್ಕೆ ಪ್ರತಿವಾದಿಯು ಯೋಗ್ಯವಾಗಿ ಸಹಿಮಾಡಿದನು.

೪. ಪ್ರತಿವಾದಿಯು ತಾರೀಖು ೧೯–೪–೧೯೨೮ನೇ ಇಸ್ವಿ ದಿವಸದ ತರುವಾಯ ಏನೂ ವಸೂಲ ಕೊಟ್ಟಿಲ್ಲ.

... ... ... ...

**ವಾದಿ ವಿನಂತಿ:—**

ಮೇಲ್ಕಂಡ ೨೩೪೦ ರುಪಾಯಿಗಳನ್ನು ದರಸಾಲ ದರಶೇಕಡಾ ೧೨ ರೂಪಾಯಿದಂತೆ ಬಡ್ಡಿ ಸಹಿತವಾಗಿ ಪ್ರತಿವಾದಿಯ ಕಡೆಯಿಂದ ಕೊಡಿಸಬೇಕು.

## ನಂಬರು ೮೨

### ಮೂಲ ವ್ಯವಹಾರಗಳ ಆಧಾರದ ಮೇಲೆ ಆದರ ಬದಲಾಗಿ ಖಾತೆ ಬಾಕಿ ನಿಕ್ಕಿ ಮಾಡಿದ್ದರ ಮೇಲೆ ದಾವೆಯು

೧. ಧಾರವಾಡ ಜಿಲ್ಹಾದ ಪೈಕಿ ಹುಬ್ಬಳ್ಳಿಯಲ್ಲಿ ವಾದಿಯು ಜೋಳದ ವ್ಯಾಪಾರ ಮಾಡುತ್ತಾನೆ ಮತ್ತು ಬೆಳಗಾಂವಿ ಜಿಲ್ಹಾದ ಪೈಕಿ ಚಿಕ್ಕೋಡಿಯಲ್ಲಿ ಪ್ರತಿವಾದಿಯು ಬೆಲ್ಲದ ವ್ಯಾಪಾರ ಮಾಡುತ್ತಾನೆ.

೨. ವಾದಿಪ್ರತಿವಾದೀದೆರು ಪತ್ರವ್ಯವಹಾರದ ದ್ವಾರದಿಂದ ಅಪಸಾತಿನಲ್ಲಿ ಕೆಳಗೆ ಬರೆದಂತೆ ಕರಾರು ಮಾಡಿಕೊಂಡರು. ಪ್ರತಿವಾದಿಯು ತಾರೀಖು ೧೭–೪–೧೯೨೭ನೇ ಇಸ್ವಿ ದಿವಸದಿಂದ ವೇಳೈವೇಳೆಗೆ ಬೇಡಿದಷ್ಟು ಜೋಳಾ ವಾದಿಯು ಕಳುಹಿಸಿಕೊಡಬೇಕು ಮತ್ತು ಅದೇ ತಾರೀಖಿನಿಂದ ವಾದಿಯು ವೇಳೈ ವೇಳೆಗೆ ಬೇಡಿದಷ್ಟು ಬೆಲ್ಲಾ ಪ್ರತಿವಾದಿಯು ಕಳುಹಿಸಕೊಡಬೇಕು ಮತ್ತು ಸಾಲು ಅಖೈರಿಗೆ ಸದರಿ ಯಾವತ್ತು ವ್ಯವಹಾರಗಳ ಲೆಕ್ಕವನ್ನು ಮಾಡಿ ಖಾತೆ ಬಾಕಿ ನಿಕ್ಕಿಮಾಡಬೇಕು. ಮತ್ತು ಅದನ್ನು ರೋಖು ಕೊಡಬೇಕು ( ಅಥವಾ ಚುಕ್ತಾ ಮಾಡಬೇಕು ).

೩. ಲಗತಿಟ್ಟ ಲೆಕ್ಕದ ಪಟ್ಟಿಯಲ್ಲಿ ತೋರಿಸಿದಂತೆ ತಾ॥ ೧೦-೪-೧೯೨೭ನೇ ಇಸ್ವಿಯಿಂದ ತಾರೀಖು ೯–೪–೧೯೨೮ನೇ ಇಸ್ವಿಯ ವರೆಗೆ ವಾದಿಯು ೪೫೬೬

ರೂಪಾಯಿಗಳ ಬೆಲೆಯ ಜೋಳಾ ಪ್ರತಿವಾದಿಯ ಕಡಿಗೆ ಕಳುಹಿಸಿಕೊಟ್ಟನು ಮತ್ತು ಇದೇ ಅವಧಿಯಲ್ಲಿ ಪ್ರತಿವಾದಿಯು ೨೩೪೫ ರುಪಾಯಿಗಳ ಬೆಲೆಯ ಬೆಲ್ಲ ವಾದಿಯ ಕಡಿಗೆ ಕಳುಹಿಸಿಕೊಟ್ಟನು.

೪. ಪ್ರತಿವಾದಿಯು ತಾರೀಖು ೯-೪-೧೯೨೭ನೇ ಇಸ್ವಿ ದಿವಸ ವಾದಿ ಅಂಗಡಿಗೆ ಬಂದು ಯಾವತ್ತು ಲೆಖ್ಖವನ್ನು ನೋಡಿಕೊಂಡು ತನ್ನ ಮೇಲೆ ೨೨೨೧ ರುಪಾಯಿಗಳ ಬಾಕಿ ಹೊರಡುತ್ತದೆಂದು ಒಪ್ಪಿಕೊಂಡು ಆ ಬಾಕಿಯನ್ನು ವಾದಿಯ ಅಂಗಡಿಯ ಖಾತೆವಹಿಯ ೮ನೇ ಪಾನಿನ ಮೇಲೆ ಬರೆದು ಅದರ ಅಡಿಗೆ ಸಹಿಮಾಡಿದನು.

೫. ಸದರಿ ಬಾಕಿಯಲ್ಲಿ ಪ್ರತಿವಾದಿಯು ಏನೂ ವಸೂಲು ಕೊಟ್ಟಿಲ್ಲ.

... ... ... ...

**ವಾದಿ ವಿನಂತಿಃ—**

ಪ್ರತಿವಾದಿಯು ವಾದಿಯ ಸಂಗಡ ಮೇಲಿನಂತೆ ವ್ಯವಹಾರ ಮಾಡಿದ ಬಾಬತು ಹೊರಡುವ ಬಾಕಿಯ ಆಧಾರ ಮೇಲಿಂದ ಅಥವಾ ಅವರ ಬದಲಾಗಿ ಪ್ರತಿವಾದಿಯು ಬಾಕಿಯನ್ನು ನಿಕ್ಕಿ ಮಾಡಿಕೊಂಡಿದ್ದರ ಆಧಾರ ಮೇಲಿಂದ ವಾದಿಯು ೨೨೨೧ರುಪಾಯಿಗಳನ್ನು ಮುಂದಿನ ಬಡ್ಡಿಸಹಿತವಾಗಿ ಸಿಗಬೇಕೆಂದು ಬೇಡುತ್ತಾನೆ.

## ನಂಬರು ೮೩

### ಮೂಲವ್ಯವಹಾರಗಳ ಆಧಾರ ಮೇಲೆ ಅದರ ಬದಲಾಗಿ ಖಾತೆ ಬಾಕಿ ನಿಕ್ಕಿ ಮಾಡಿದ್ದರೆ ಮೇಲೆ ದಾವೆಯು

೧. ಪ್ರತಿವಾದಿಯು ವೇಳ್ಳೆ ವೇಳೆಕ್ಕೆ ಬೇಡಿದಂತೆ ಹಣವನ್ನು ವಾದಿಯು ಕೊಡಬೇಕು. ಮತ್ತು ಆ ಹಣವನ್ನು ವಾದಿಯು ಬೇಡಿದಾಗ್ಗೆ ದರಮುಹಾ ದರ ಶೇಕಡಾ ೧ ರೂಪಾಯಿ ಬಡ್ಡಿ ಸಹಿತವಾಗಿ ಪ್ರತಿವಾದಿಯು ವಾದಿಗೆ ಹಿಂದಕ್ಕೆ ಕೊಡಬೇಕೆಂದು ವಾದಿ ಪ್ರತಿವಾದಿಯರ ನಡುವೆ ತಾರೀಖು ೧೬-೩-೧೯೨೬ನೇ ಇಸ್ವಿ ದಿವಸ ಬಾಯಿಮಾತಿನಿಂದ ಕರಾರವಾಯಿತು.

೨. ಲಗತಿಟ್ಟ ಲೆಖ್ಖದ ಪಟ್ಟಿಯಲ್ಲಿ ಕಾಣಿಸದಂತೆ ತಾ॥ ೧೬-೩-೨೬ ನೇ ಇಸ್ವಿಯಿಂದಳ-೭-೧೯೨೮ನೇ ಇಸ್ವಿಯ ವರೆಗೆ ಪ್ರತಿವಾದಿಯು ವ್ಯವಹಾರಗಳನ್ನು ಮಾಡಿದ ಬಾಬತು ಅವನ ಮೇಲೆ ೩೪೦೦ ರೂಪಾಯಿಗಳು ಬಾಕಿ ಹೊರಡುತ್ತದೆ.

೩. ತಾರೀಖುಳ-೭-೧೯೨೮ನೇ ಇಸ್ವಿ ದಿವಸ ಪ್ರತಿವಾದಿಯು ಯಾವತ್ತು ಲೆಖ್ಖವನ್ನು ನೋಡಿಕೊಂಡು ತನ್ನ ಮೇಲೆ ೩೪೦೦ ರೂಪಾಯಿಗಳ ಬಾಕಿ ಹೊರಡುತ್ತದೆಂದು ಒಪ್ಪಿಕೊಂಡು ಅದನ್ನು ವಾದಿ ಅಂಗಡಿಯ ಖಾತೆ ವಹಿಯು ೧೬ನೇ ಪಾನಿನ ಮೇಲೆ ಬರೆದು ಅದರ ಕೆಳಗೆ ಸಹಿ ಮಾಡಿದನು.

೪. ಸದರಿ ಬಾಕಿಯಲ್ಲಿ ಪ್ರತಿವಾದಿಯು ಏನೂ ವಸೂಲ ಕೊಟ್ಟಿಲ್ಲ.

... ... ... ... ...

... ... ... ... ...

**ವಾದಿ ವಿನಂತಿ: —**

ಪ್ರತಿವಾದಿಯು ವಾದಿಯ ಸಂಗಡ ವ್ಯವಹಾರಮಾಡಿದ ಬಾಬತು ಹೊರಡುವ ಬಾಕಿಯ ಆಧಾರದ ಮೇಲಿಂದ ಅಥವಾ ಅವರ ಬದಲಾಗಿ ಪ್ರತಿವಾದಿಯು ಬಾಕಿಯು ನಿಕ್ಕಿ ಮಾಡಿಕೊಂಡಿದ್ದರ ಆಧಾರ ಮೇಲಿಂದ ವಾದಿಯು ೩೪೦೦ ರೂಪಾಯಿಗಳನ್ನು ಮುಂದಿನ ಬಡ್ಡಿ ಸಹಿತವಾಗಿ ಸಿಗಬೇಕೆಂದು ಬೇಡುತ್ತಾನೆ.

## ನಂಬರು ೮೪

## ದಲಾಲಿ ಬಾಬತು

೧. ಧಾರವಾಡ ಜಿಲ್ಲಾ ಹುಬ್ಬಳ್ಳಿ ತಾಲೂಕ ಸಬ್ಬರಜಿಸ್ಟರ ಹದ್ದಿ ಪೈಕಿ ಪೇಟ ಮಹಿಜಿದಪೂರ ಗ್ರಾಮದಲ್ಲಿರುವ ಸಿಟಿಸರ್ವೆ ನಂಬರ೧೪೯೨-೧೩೦ ಮತ್ತು ೧೩೧ ನೇದ್ದು ಅಂಗಡಿಗಳನ್ನು ಮಾರಾಟ ಮಾಡಿಸುವದಕ್ಕೋಸ್ಕರವಾಗಿ ಪ್ರತಿವಾದಿಯು ತಾರೀಖು ೧೬-೪-೧೯೨೭ನೇ ಇಸ್ವಿ ದಿವಸ ವಾದಿಗೆ ದಲಾಲನನ್ನಾಗಿ ನೇಮಿಸಿ, ವಾದಿಯು ಪ್ರತಿವಾದಿಗೆ ಯೋಗ್ಯತೋರಿದಂಥ ಗಿರಾಕಿಯನ್ನು ಪ್ರತಿವಾದಿಗೆ ಗಂಟುಹಾಕಿ ಕೊಟ್ಟಲ್ಲಿ ಮಾರಾಟದ ಬೆಲೆಯಲ್ಲಿ ಶೇಕಡಾ ೫ ರೂಪಾಯಿಯಂತೆ ವಾದಿಗೆ ದಲಾಲಿ ಕೊಡಲಿಕ್ಕೆ ಪ್ರತಿವಾದಿಯು ಒಪ್ಪಿಕೊಂಡನು.

೨. ಈ ಪ್ರಕಾರ ಒಬ್ಬ ಹಸನಸಾಹೇಬ ವಲ್ಲಡೆ ಇಬ್ರಾಹಿಮಸಾಹೇಬ ಕುಮಠಾಕರ ಎಂಬುವವನನ್ನ ವಾದಿಯು ಪ್ರತಿವಾದಿಗೆ ಗಂಟುಹಾಕಿಕೊಟ್ಟನು, ಮತ್ತು ಪ್ರತಿವಾದಿಯು ಸದರೀಯವನಿಗೆ ಮೇಲ್ಕಂಡ ಅಂಗಡಿಗಳನ್ನು ೩೦೦೦೦ ರೂಪಾಯಿಗಳಿಗೆ ತಾರೀಖು ೨೪-೪-೧೯೨೨ನೇ ಇಸ್ವಿ ದಿವಸ ಮಾರಿದನು ಮತ್ತು ಅದೇ ದಿವಸ ಮಾರಾಟದ ೩೦೦೦೦ ರೂಪಾಯಿಗಳನ್ನು ಪ್ರತಿವಾದಿಯು ಸದರೀ ಅವನ ಕಡೆಯಿಂದ ತೆಗೆದುಕೊಂಡನು.

೩. ಪ್ರತಿವಾದಿಯು ವಾದಿಗೆ ದಲಾಲಿ ಬಾಬತು ಕೊಡತಕ್ಕ ೧೫೦೦ ರೂಪಾಯಿಗಳನ್ನು ಅಥವಾ ಅವರ ಪೈಕಿ ಯಾವ ಭಾಗವನ್ನು ಕೊಟ್ಟಿಲ್ಲ.

... ... ... ...

... ... ... ...

**ವಾದಿ ವಿನಂತಿ: —**

ಪ್ರತಿವಾದಿಯ ಕಡೆಯಿಂದ ೧೫೦೦ ರೂಪಾಯಗಳನ್ನು ವಾದಿಗೆ ಮುಂದಿನ ಬಡ್ಡಿ ಸಹಿತವಾಗಿ ಕೊಡಿಸಬೇಕು.

# ೨ನೆಯ ಪ್ರಕರಣ

## ಕೈಫಿಯತಿಗಳ ನಮೂನೆಗಳು

### ನಂಬರು ೧

### ಮಾರಿ ಒಪ್ಪಿಸಲ್ಪಟ್ಟ ಮಾಲಿನ ಬಾಬಕ್ತಿನ ದಾವೆಗಳಲ್ಲಿ ಉತ್ತರ ಪಕ್ಷವು

### ಸರನಾಮೆ

೧. ಪ್ರತಿವಾದಿಯು ಸದರೀ ಮಾಲನ್ನು ಬೇಡಲಿಲ್ಲ.

೨. ಪ್ರತಿವಾದಿಗೆ ಸದರೀ ಮಾಲನ್ನು ಒಪ್ಪಿಸಲಿಲ್ಲ.

೩. ಸದರೀ ಮಾಲಿನ ಬೆಲೆಯು                ರೂಪಾಯಿಗಳಿಲ್ಲ.

[ಅಥವಾ]

೪ } ರೂಪಾಯಿಗಳ ವಿಷಯದಲ್ಲಿ ಅಲ್ಲದೆ, ೧ } ಗಳ
೫ } ರೂಪಾಯಿಗಳ ವಿಷಯದಲ್ಲಿ ಅಲ್ಲದೆ, ೨ } ಹಾಗೆ
೬ } ರೂಪಾಯಿಗಳ ವಿಷಯದಲ್ಲಿ ಅಲ್ಲದೆ, ೩ } ಯೋ

೭. ಪ್ರತಿವಾದಿಯು [ಅಥವಾ ಪ್ರತಿವಾದಿಯ ಏಜಂಟನಾದ **ಅ, ಬ** ನು] ದಾವೆಯ ಮೊಬಲಗನ್ನು ದಾವೆ ಹೂಡುವ ಮೊದಲೇ ವಾದಿಗೆ [ಅಥವಾ ವಾದಿಯ ಏಜಂಟನಾದ **ಕ, ಡ** ನಿಗೆ] ತಾರೀಖು ...   ... ಕೊಟ್ಟು ತೀರಿಸಿರುತ್ತಾನೆ.

೮. ಪ್ರತಿವಾದಿಯು ದಾವೆಯ ಮೊಬಲಗನ್ನು ದಾವೆ ಹೂಡಿದನಂತರ ವಾದಿಗೆ ತಾರೀಖು ...   ... ಇಶ್ವಿ ದಿವಸ ಕೊಟ್ಟು ತೀರಿಸಿದನು.

### ನಂಬರು ೨

### ಕತಿಬೆಗಳ ಆಧಾರದ ಮೇಲಿಂದ ಮಾಡಿದ ದಾವೆಗಳಲ್ಲಿ ಉತ್ತರಪಕ್ಷವು

### ಸರನಾಮೆ

೧. ಸದರೀ ಕತಿಬೆಯು ಪ್ರತಿವಾದಿಯ ಕತಿಬೆಯಾಗಿರುವದಿಲ್ಲ.

೨. ಸದರೀ ಕತಿಬೆಯ ಶರತಿನಲ್ಲಿ ಹೇಳಿದ ದಿವಸ ಪ್ರತಿವಾದಿಯು ವಾದಿಗೆ ಹಣವನ್ನು ಕೊಟ್ಟಿರುತ್ತಾನೆ.

೩. ಪ್ರತಿವಾದಿಯು ಸದರೀ ಕತಿಬೆಯಲ್ಲಿ ಹೇಳಿದ ದಿನದನಂತರ ಮತ್ತು ದಾವೆಯ ಮೊದಲು ಅದರಲ್ಲಿ ಬರೆದ ಮುದ್ದಲನ್ನು ಮತ್ತು ಬಡ್ಡಿಯನ್ನು ವಾದಿಗೆ ಕೊಟ್ಟಿರುತ್ತಾನೆ. ಅದರ ತಪಶೀಲು:—

[ ಅಥವಾ ]

ಪ್ರತಿವಾದಿಯು ತಾರೀಖು ... ... ಇಸ್ವಿ ದಿವಸ ಸದರೀ ಕತಿಬೆಯ ಬಗ್ಗೆ ವಾದಿಗೆ ರೂಪಾಯಿ ಕೊಟ್ಟಿದ್ದಾನೆ. ಮತ್ತು ಉಳಿದ ಹಣವನ್ನು ವಾದಿಯು ಸೂಟಬಿಟ್ಟಿರುತ್ತಾನೆ.

## ನಂಬರು ೩

## ಜಾಮೀನುದಾರರ ಮೇಲಿನ ದಾವೆಗಳಲ್ಲಿ ಉತ್ತರ ಪಕ್ಷವು

### ಸರನಾಮೆ

೧. ಮುಖ್ಯನು ದಾವೆಯ ಮೊದಲೇ ಅದರ ಮೊಬಲಗನ್ನು ಕೊಟ್ಟು ತೀರಿಸಿದ್ದಾನೆ.

೨. ವಾದಿಯು ಒಂದು ಬದ್ಧಕವಾದ ಕರಾರಿನ ಮೇರೆಗೆ ಮುಖ್ಯ ಋಣಿಗೆ ಮುದ್ದತನ್ನು ಕೊಟ್ಟಿದ್ದರಿಂದ ಪ್ರತಿವಾದಿಯು ಜವಾಬದಾರಿಯಿಂದ ವಿಮೋಚನೆ ಪಟ್ಟಿದ್ದಾನೆ.

## ನಂಬರು ೪

## ಸಾಲದ ಸಲುವಾಗಿ ಮಾಡಿದ ಯಾವದಾದರೂ ದಾವೆಯಲ್ಲಿ ಉತ್ತರಪಕ್ಷವು

### ಸರನಾಮೆ

೧. ದಾವೆಯ ಮೊಬಲಗಿನ ಪೈಕಿ ೨೦೦ ರೂಪಾಯಿಗಳ ಕುರಿತು, ಪ್ರತಿವಾದಿಯು ವಾದಿಗೆ ವಿಕ್ರಮಿಸಿ ಪಾವತಿ ಮಾಡಿದ ಮಾಲನ್ನು ವಜಾಮಾಡುವದಕ್ಕೆ ಪ್ರತಿವಾದಿಯು ಹಕ್ಕುಳ್ಳವನಾಗಿರುತ್ತಾನೆ.

ತಪಶೀಲು ಈ ಕೆಳಗೆ ಬರೆದಂತೆ ಇರುತ್ತದೆ:—

| | | | |
|---|---|---|---|
| ತಾರೀಖು | ... | ... | ೧೫೦ ರುಪಾಯಿ |
| ತಾರೀಖು | ... | ... | ೫೦ ರುಪಾಯಿ |

ಜುಮಲಾ ೨೦೦

೨. ಸದರೀ ಪೂರಾ ರಕಮಿನ [ಅಥವಾ ಬೇಡಿದ ಹಣದ ಪೈಕಿ ... ರೂಪಾಯಿಯ] ಸಂಬಂಧದಿಂದ ಪ್ರತಿವಾದಿಯು ತಾರೀಖು ... ಇಸ್ವಿ ದಿವಸ [ಅಥವಾ ದಾವೆಯ ಮೊದಲೇ] ... ... ರುಪಾಯಿಗಳನ್ನು ಕೊಡುವದಕ್ಕೆ ಉದ್ಯುಕ್ತನಾದನು, ಮತ್ತು ಅದನ್ನು ಕೋರ್ಟಿನಲ್ಲಿ ಕೊಟ್ಟಿದ್ದಾನೆ.

## ನಂಬರು ೫

## ಅಜಾಗರೂಕತೆಯಿಂದ ವಾಹನಗಳನ್ನು ನಡೆಯಿಸಿದ ಮೂಲಕ ಉಂಟಾದ ಕೇಡುಗಳ ಬಾಬತಿನಲ್ಲಿ ಮಾಡಿದ ದಾವೆಗಳಲ್ಲಿ ಉತ್ತರಪಕ್ಷವು

### ಸರನಾಮೆ

೧. ಪ್ರತಿವಾದಿಯು, ಅಸಲರ್ಜಿಯಲ್ಲಿ ಹೇಳಿದ ಗಾಡಿಯು ಪ್ರತಿವಾದಿಯದೆಂಬುವದನ್ನು ನಾಕಬೂಲು ಮಾಡುತ್ತಾನೆ; ಮತ್ತು ಅದು ತನ್ನ ನೌಕರರ ತಾಬೆಯಲ್ಲಿ ಅಥವಾ ನಿರ್ಬಂಧದಲ್ಲಿ ಇತ್ತೆಂಬುದನ್ನು ನಿರಾಕರಿಸುತ್ತಾನೆ.

ಆ ಗಾಡಿಯು ಗದಗಿನಲ್ಲಿರುವ ... ... ... ಇವರದಾಗಿರುತ್ತದೆ. ಇವರು ಕುದರೆಗಳ ತಬೇಲಿಯನ್ನು ಇಟ್ಟಿರುವವರಾಗಿ ಪ್ರತಿವಾದಿಗೆ ಗಾಡಿ ವ ಕುದುರೆಗಳನ್ನು ಒದಗಿಸಿಕೊಡುವದಕ್ಕಾಗಿ ಪ್ರತಿವಾದಿಯು ಅವರನ್ನು ನೇಮಿಸಿದ್ದನು, ಮತ್ತು ಸದರೀ ಗಾಡಿ ಯಾರ ತಾಬೆಯಲ್ಲಿ ಮತ್ತು ನಿರ್ಬಂಧದಲ್ಲಿತ್ತೋ ಆ ಮನುಷ್ಯನು ಸದರೀ ... ......... ... ಇವರ ನೌಕರನಾಗಿದ್ದನು.

೨. ಆ ಗಾಡಿಯು ಮಹಾಲದಾರ ಓಣಿಯಿಂದ, ಅಜಾಗರೂಕತೆಯಿಂದ, ಆಕಸ್ಮಾತ್ತಾಗಿ ಅಥವಾ ಎಚ್ಚರಿಕೆ ಕೊಡದೆ, ಅಥವಾ ತ್ವರೆಯಾದ ಅಥವಾ ಭಯಂಕರ ವೇಗದಿಂದ ತಿರುಗಿಸಲ್ಪಟ್ಟಿತೆಂಬುದನ್ನು ಪ್ರತಿವಾದಿಯು ಕಬೂಲು ಮಾಡುವದಿಲ್ಲ.

೩. ವಾದಿಯು ತಕ್ಕ ಜಾಗರೂಕತೆಯಿಂದ ಲಕ್ಷ ಪೂರೈಸಿದ್ದರೆ ಸದರೀ ಗಾಡಿಯು ಹತ್ತರ ಬರುವದನ್ನು ನೋಡಬಹುದಾಗಿತ್ತು ಮತ್ತು ನೋಡುವದು ಶಕ್ಯವಾಗಿತ್ತು, ಮತ್ತು ಅದು ತನಗೆ ತಾಕುವದನ್ನು ತಪ್ಪಿಸಿಕೊಳ್ಳಬಹುದಾಗಿತ್ತು ಮತ್ತು ತಪ್ಪಿಸಿಕೊಳ್ಳಲಿಕ್ಕೆ ಅವನಿಗೆ ಶಕ್ಯವಿತ್ತು ಎಂಬುದಾಗಿ ಪ್ರತಿವಾದಿಯು ಹೇಳುತ್ತಾನೆ.

೪. ಅಸಲರ್ಜಿಯ ಮೂರನೆ ಪ್ಯಾರಾಗ್ರಾಫಿನಲ್ಲಿರುವ ಹೇಳಿಕೆಗಳನ್ನು ಪ್ರತಿವಾದಿಯು ನಾಕಬೂಲು ಮಾಡುತ್ತಾನೆ.

## ನಂಬರು ೬

## ಅಪಕ್ರಿಯೆಯ ಸಂಬಂಧದ ಎಲ್ಲ ದಾವೆಗಳಲ್ಲಿ ಉತ್ತರ ಪಕ್ಷವು

## ಸರನಾಮೆ

೧. ತಕರಾರು ಮಾಡಿದ ಹಲವು ಕೃತ್ಯಗಳ (ಅಥವಾ ಸಂಗತಿಗಳ) ಸಂಬಂಧದಿಂದ ನಿರಾಕರಣೆ.

## ನಂಬರು ೭

## ಮಾಲನ್ನು ಆತಂಕಿಸಿಟ್ಟ ಬಾಬತಿನ ದಾವೆಗಳಲ್ಲಿ ಉತ್ತರ ಪಕ್ಷವು

## ಸರನಾಮೆ

೧. ಸದರೀ ಮಾಲು ವಾದಿಯ ಸೊತ್ತಾಗಿರುವದಿಲ್ಲ.

೨. ಪ್ರತಿವಾದಿಗೆ ಯಾವ ಲಿಯನಿನಮೇಲೆ ಹಕ್ಕಿತ್ತೋ ಆ ಲಿಯನಿನ ಬಗ್ಗೆ ಸದರೀ ಮಾಲನ್ನು ಅವನು ಆತಂಕಿಸಿಟ್ಟದ್ದಾಗಿರುತ್ತದೆ.

ತಪಶೀಲು ಈ ಕೆಳಗಿನ ಪ್ರಕಾರವಿರುತ್ತದೆ:—

ತಾರೀಖು ... ... ಇಶ್ವಿ ದಿವಸ ಹಕ್ಕು ಹೇಳುವ ನಾಲನ್ನು ಬೆಳಗಾಂವಿಯಿಂದ ವಿಜಾಪೂರಕ್ಕೆ ಒಯ್ದ ಬಗ್ಗೆ:—

ದರ ಮಣಕ್ಕೆ ೨ ರುಪಾಯಿ ಪ್ರಕಾರ ೪೫ ಮಣಗಳ ಬಗ್ಗೆ ... ... ೯೦ ರುಪಾಯಿಗಳು.

## ನಂಬರು ೮

### ಕಾಪಿ ರೈಟಸ ಹಕ್ಕನ್ನು ಅತಿಕ್ರಮಿಸಿದ ಬಾಬತಿನ ದಾವೆಗಳಲ್ಲಿ ಉತ್ತರ ಪಕ್ಷವು

### ಸರನಾಮೆ

೧. ವಾದಿಯು (ಸದರೀ ಪುಸ್ತಕದ) ಕರ್ತನು (ಅಸ್ವಾಮ್ಯಿ ಮಂತಾಗಿ) ಅಲ್ಲ.

೨. ಆ ಪುಸ್ತಕವು ರಜಿಸ್ಟರ ಮಾಡಲ್ಪಡಲಿಲ್ಲ.

೩. ಪ್ರತಿವಾದಿಯು ಅತಿಕ್ರಮಿಸಲಿಲ್ಲ.

## ನಂಬರು ೯

### ಟ್ರೇಡ್ ಮಾರ್ಕಿನ ಹಕ್ಕನ್ನು ಅತಿಕ್ರಮಿಸಿದ ಕುರಿತು ದಾವೆಗಳಲ್ಲಿ ಉತ್ತರ ಪಕ್ಷವು

### ಸರನಾಮೆ

೧. ಆ ಟ್ರೇಡ್ ಮಾರ್ಕು ವಾದಿಯದಲ್ಲ.

೨. ಟ್ರೇಡ್ ಮಾರ್ಕೆಂದು ಹೇಳುವಂಥಾದ್ದು ಟ್ರೇಡ್‌ಮಾರ್ಕೇ ಅಲ್ಲ.

೩. ಪ್ರತಿವಾದಿಯು ಅತಿಕ್ರಮಿಸಲಿಲ್ಲ.

# ನಂಬರು ೧೦

## ಪೀಡನೆಗಳ ಕುರಿತು ದಾವೆಗಳಲ್ಲಿ ಉತ್ತರ ಪಕ್ಷಗಳು

### ಸರನಾಮೆ

೧. ವಾದಿಯ ಬೆಳಕುಗಳು ಪ್ರಾಚೀನವಲ್ಲ [ ಅಥವಾ ಅವನು ಹೇಳುವ ಬೇರೆ ಮಾಮೂಲಿನ ಹಕ್ಕುಗಳನ್ನು ನಿರಾಕರಿಸು ]

೨. ಪ್ರತಿವಾದಿಯ ಇಮಾರತುಗಳಿಂದ ವಾದಿಯ ಬೆಳಕುಗಳಿಗೆ ವಸ್ತುತಃ ಅಡ್ಡಿ ಬರಲಾರದು.

೩. ಪ್ರತಿವಾದಿಯು, ತಾನು ಅಥವಾ ತನ್ನ ನೌಕರರು ನೀರನ್ನು ಕೆಡಿಸುತ್ತಾರೆಂಬುದನ್ನು [ ಅಥವಾ ಯಾತರ ಬಗ್ಗೆ ತಕರಾರು ಇರುವದೋ ಅವನ್ನು ಮಾಡುತ್ತಾರೆಂಬುದನ್ನು ] ನಿರಾಕರಿಸುತ್ತಾನೆ.

[ ಯಾವ ಬಗ್ಗೆ ತಕರಾರು ಇರುವದೋ ಅವನ್ನು ಮಾಡಲಿಕ್ಕೆ ಮಾಮೂಲಿಂದ ಅಥವಾ ಇತರ ರೀತಿಯಿಂದ ತನಗೆ ಹಕ್ಕು ಇರುವದಾಗಿ ಪ್ರತಿವಾದಿಯು ಹೇಳುತ್ತಿದ್ದಲ್ಲಿ ಅವನು ಹಾಗೆ ಹೇಳಬೇಕು ಮತ್ತು ಆ ಹಕ್ಕು ಹ್ಯಾಗೆ ಬಂತೆಂಬುದರ ಕಾರಣಗಳನ್ನು ಕೊಡಬೇಕು, ಎಂದರೆ, ಮಾಮೂಲಿನಿಂದಲೋ, ದೇಣಿಗೆಯಿಂದಲೋ ಅಥವಾ ಬೇರೆ ಯಾವ ಕಾರಣದಿಂದ ಎಂಬುವದನ್ನು ಹೇಳಬೇಕು. ]

೪. ವಾದಿಯು ವಿಳಂಬದ ಅಪರಾಧ ಮಾಡಿದ್ದಾನೆ; ಇದರ ತಪಶೀಲು ಈ ಕೆಳಗಿನಂತೆ:—

ಸನ್ ೧೯೦೦ ವಾದಿಯ ಕಾರಖಾನೆಯು ಕೆಲಸ ಮಾಡ ತೊಡಗಿತು.

ಸನ್ ೧೯೦೧ ವಾದಿಯ ಕಬಜೆಯಲ್ಲಿ ಬಂತು.

ಸನ್ ೧೯೦೨ ಮೊದಲನೆ ಫಿರ್ಯಾದಿ.

೫. ವಾದಿಯ ನಷ್ಟದ ಬಾಬತು ಹಕ್ಕಿನ ಕುರಿತು ಪ್ರತಿವಾದಿಯು ಮೇಲಿನ ಜಬಾಬಿನ ಮುದ್ದೆಗಳ ಮೇಲೆ ಅವಲಂಬಿಸಿರುತ್ತಾನೆ. ಮತ್ತು ಅವನು ಹೇಳುವದೇನೆಂದರೆ, ತಕರಾರು ಮಾಡಿದ ಕೃತ್ಯಗಳಿಂದ ವಾದಿಗೆ ಯಾವ ತರದ

ನಷ್ಟವೂ ಆಗಲಿಲ್ಲ. [ ಇನ್ನೂ ಬೇರೆ ಮುದ್ದೆಗಳ ಮೇಲೆ ಅವಲಂಬಿಸಿರುವದಲ್ಲಿ ಅವುಗಳನ್ನು ಕೊಡಬೇಕು, ಉದಾಹರಣಾರ್ಥ: ಹಿಂದಿನ ನಷ್ಟದ ಸಂಬಂಧದಿಂದ ಮುದ್ದತಿನ ಹರಕತು ].

## ನಂಬರು ೧೧

## ಒತ್ತೆಯನ್ನು ಬಿಡಿಸಿಕೊಳ್ಳುವ ಹಕ್ಕು ಮುಗಿಸುವ ವಿಷಯದ ದಾವೆಯಲ್ಲಿ ಉತ್ತರ ಪಕ್ಷವು

( ಸರನಾಮೆ )

೧. ಪ್ರತಿವಾದಿಯು ಸದರೀ ಒತ್ತೆಪತ್ರವನ್ನು ಮಾಡಿಕೊಡಲಿಲ್ಲ.

೨. ವಾದಿಗೆ ಸದರೀ ಒತ್ತೆಯು ತಬದಿಲು ಮಾಡಿಕೊಡಲ್ಪಡಲಿಲ್ಲ. (ಒಂದಕ್ಕಿಂತ ಹೆಚ್ಚು ತಬದಿಲುಗಳಾಗಿವೆ ಎಂದು ಅಂಬೋಣವಿದ್ದರೆ, ಯಾವ ತಬದಿಲಿಯು ನಾಕಬೂಲು ಮಾಡಲ್ಪಟ್ಟದೆ ಎಂಬುವದನ್ನು ಬರೆಯಬೇಕು).

೩. ಸನ್ ೧೯೦೮ನೇ ಇಸವಿಯ ಹಿಂದುಸ್ಥಾನದ ಮುದ್ದತಿನ ವಿಷಯದ ಆಕ್ಟಿನ ಒಂದನೆ ಪರಿಶಿಷ್ಟ ದೊಳಗಿನ ... ... ನೇ ಆರ್ಟಿಕಲಿನನ್ವಯ ದಾವೆಗೆ ಮುದ್ದತಿನ ಹರಕತು ಅದೆ.

೪. ಈ ಕೆಳಗಿನಂತೆ ರಕಮುಗಳು ಕೊಡಲ್ಪಟ್ಟವೆ ; ಎಂದರೆ:—

| | | | ರುಪಾಯಿ |
|---|---|---|---|
| ( ತಾರೀಖು ಬರೆಯಬೇಕು ) | ... | ... | ೧೦೦೦ |
| ( ತಾರೀಖು ಬರೆಯಬೇಕು ) | ... | ... | ೫೦೦ |

೫. ವಾದಿಯು ತಾರೀಖು ... ... ಇಷ್ಟಿ ದಿವಸ ಕಭಜೆಯನ್ನು ತೆಗೆದುಕೊಂಡನು, ಮತ್ತು ಅಂದಿನಿಂದ ಅವನು ಬಾಡಿಗೆಯನ್ನು ತೆಗೆದುಕೊಳ್ಳುತ್ತಿದ್ದಾನೆ.

೬. ವಾದಿಯು ತಾರೀಖು ... .. ಇಷ್ಟಿ ದಿವಸ ಸಾಲವನ್ನು ಬಿಟ್ಟುಕೊಟ್ಟನು.

೬. ತಾರೀಖು ... ... ಇಸ್ವಿ ದಿವಸ ಒಂದು ದಸ್ತೈವಜಿನ ಮೂಲಕವಾಗಿ ಪ್ರತಿವಾದಿಯು **ಅ, ಬ** ಎಂಬುವವನಿಗೆ ತನ್ನ ಎಲ್ಲ ಹಿತ ಸಂಬಂಧವನ್ನು ತಬದಿಲು ಮಾಡಿಕೊಟ್ಟನು.

## ನಂಬರು ೧೨

## ಒತ್ತೆಯನ್ನು ಬಿಡಿಸಿಕೊಳ್ಳುವ ವಿಷಯದ ದಾವೆಯಲ್ಲಿ ಉತ್ತರ ಪಕ್ಷವು

## ಸರನಾಮೆ

೧. ಸನ್ ೧೯೦೮ನೇ ಇಸವಿಯ ಹಿಂದುಸ್ಥಾನದ ಮುದ್ದತಿನ ವಿಷಯದ ಆಕ್ಟಿನ ಒಂದನೆ ಪರಿಶಿಷ್ಟದೊಳಗಿನ ... ನೇ ಆರ್ಟಿಕಲಿನನ್ವಯ ಒತ್ತೆಯನ್ನು ಬಿಡಿಸಿಕೊಳ್ಳುವ ವಿಷಯದ ವಾದಿಯ ಹಕ್ಕಿಗೆ ಮುದ್ದತಿನ ಹರಕತು ಅದೆ.

೨. ವಾದಿಯು ಆಸ್ತಿಯೊಳಗಿನ ಎಲ್ಲ ಹಿತಸಂಬಂಧವನ್ನು **ಅ, ಬ** ಎಂಬುವವಗೆ ತಬದಿಲು ಮಾಡಿಕೊಟ್ಟಿರುತ್ತಾನೆ.

೩. ಪ್ರತಿವಾದಿಯು ತಾರೀಖು ... ... ಇಸವಿ ದಿವಸ ಒಂದು ದಸ್ತೈವಜಿನ ಮೂಲಕವಾಗಿ ಒತ್ತೆಯಮೇಲೆ ತೆಗೆದ ಸಾಲದ ಮೇಲಿನ ಮತ್ತು ಒತ್ತೆ ಇಟ್ಟ ಆಸ್ತಿಯ ಮೇಲಿನ ತನ್ನ ಎಲ್ಲ ಹಿತಸಂಬಂಧವನ್ನು **ಅ, ಬ** ಎಂಬುವವನಿಗೆ ತಬದಿಲು ಮಾಡಿಕೊಟ್ಟನು.

೪. ಪ್ರತಿವಾದಿಯು ಒತ್ತೆಇಟ್ಟ ಆಸ್ತಿಯ ಕಬಜೆಯನ್ನಾಗಲೀ ಅವರ ಬಾಡಿಗೆಯನ್ನಾಗಲೀ ಎಂದಿಗೂ ತೆಗೆದುಕೊಳ್ಳಲಿಲ್ಲ.

( ಕೆಲವು ವೇಳೆಯವರೆಗೆ ಮಾತ್ರ ತನ್ನ ಹತ್ತರ ಕಬಜೆಯಿತ್ತೆಂದು ವಾದಿಯು ಕಬೂಲು ಮಾಡುತ್ತಿದ್ದರೆ ಎಷ್ಟು ವೇಳೆಯವರೆಗೆ ಕಬಜೆಯಿತ್ತೆಂಬುದನ್ನು ಅವನು ಬರೆಯಬೇಕು ; ಮತ್ತು ಕಬೂಲು ಮಾಡಿದ ವೇಳೆಯ ಆನಂತರದ ಕಬಜೆಯನ್ನು ನಾಕಬೂಲು ಮಾಡಬೇಕು ).

# ನಂಬರು ೧೩

## ಕರಾರನ್ನು ವಿಶಿಷ್ಟರೀತಿಯಿಂದ ನೆರವೇರಿಸುವ ವಿಷಯದ ದಾವೆಯಲ್ಲಿ ಉತ್ತರ ಪಕ್ಷವು

(ಸರನಾಮೆ)

೧. ಪ್ರತಿವಾದಿಯು ಕಬೂಲಾಯತನ್ನು ಮಾಡಲಿಲ್ಲ.

೨. **ಅ, ಬ** ಎಂಬುವವನು ಪ್ರತಿವಾದಿಯ ಎಜಂಟನಾಗಿದ್ದಿಲ್ಲ; (ಹೀಗೆ ವಾದಿಯ ಅಂಬೋಣವಿದ್ದರೆ).

೩. ವಾದಿಯು ಈ ಕೆಳಗಿನ ಶರತುಗಳನ್ನು ಕೊನೆಗಾಣಲಿಲ್ಲ:— (ಶರತುಗಳು)

೪. ಪ್ರತಿವಾದಿಯು ... ... (ಅಂಶತಃ ಮಾಡಲ್ಪಟ್ಟವೆಂದು ಅಂಬೋಣವಿರುವ ಕೃತ್ಯಗಳು) ಮಾಡಲಿಲ್ಲ.

೫. ಮಾರತಕ್ಕದ್ದೆಂದು ಕಬೂಲ ಮಾಡಲ್ಪಟ್ಟ ಆಸ್ತಿಯ ಮೇಲಿನ ವಾದಿಯ ಸತ್ತಾಧಿಕಾರವನ್ನು ಮಾನ್ಯಮಾಡಲಿಕ್ಕೆ ಪ್ರತಿವಾದಿಯು ಈ ಕೆಳಗಿನ ಕಾರಣಗಳ ಮೂಲಕವಾಗಿ ಬದ್ಧನಾಗಿರುವದಿಲ್ಲ: – (ಯಾಕೆಂಬುದನ್ನು ಬರೆಯಬೇಕು).

೬. ಕಬೂಲಾಯತು ಈ ಕೆಳಗಿನ ಬಾಬತುಗಳಲ್ಲಿ ಅನಿಶ್ಚಿತವಾಗಿದೆ:— (ಆ ಬಾಬತುಗಳನ್ನು ಬರೆಯಬೇಕು).

೭. (ಅಥವಾ) ವಾದಿಯು ವಿಳಂಬಮಾಡಿದ ಅಪರಾಧಿಯಾಗಿದ್ದಾನೆ.

೮. (ಅಥವಾ) ವಾದಿಯು ಮೋಸಮಾಡಿದ (ಅಥವಾ ಸುಳ್ಳ ಮಾಹಿತಿಯನ್ನು ಕೊಟ್ಟ) ಅಪರಾಧಿಯಾಗಿದ್ದಾನೆ.

೯. (ಅಥವಾ) ಕಬೂಲಾಯಿತು ಅನ್ಯಾಯದ್ದಾಗಿದೆ.

೧೦. (ಅಥವಾ) ಕಬೂಲಾಯಿತು ತಪ್ಪಿನಿಂದ ಮಾಡಲ್ಪಟ್ಟಿತು.

೧೧. (೭; ೮; ೯; ೧೦;) (ಅಥವಾ ಹ್ಯಾಗಿರುವದೋ ಹಾಗೆ) ಇವುಗಳ ಸಂಬಂಧದ ತಪಶೀಲುಗಳು ಈ ಕೆಳಗಿನಂತೆ ಇವೆ.

೧೨. ವಿಕ್ರಯದ ಶರತ್ತುಗಳು, ನಂಬರು ೧೧ ಇವುಗಳನ್ನಯ (ಅಥವಾ ಪರಸ್ಪರ ಕರಾರಿನ ಮೂಲಕ) ಕಬೂಲಾಯಿತು ರದ್ದು ಮಾಡಲ್ಪಟ್ಟಿತು.

(ಲುಕ್ಸಾನಿನ ರಕಮು ಬೇಡಲ್ಪಟ್ಟಿದ್ದು ಅದನ್ನು ಕೊಡಲಿಕ್ಕೆ ತಾನು ಜಬಾಬದಾರನಲ್ಲವೆಂದು ಪ್ರತಿವಾದಿಯು ಹೇಳುತ್ತಿರುವ ಪ್ರಸಂಗದಲ್ಲಿ, ಅವನು ಸದರೀ ಕಬೂಲಾಯುತನ್ನು ಅಥವಾ ಯಾವ ಉಲ್ಲಂಘನೆಗಳಾಗಿವೆಯೆಂದು ಅಂಬೋಣವಿರುವದೋ ಆ ಉಲ್ಲಂಘನೆಗಳನ್ನು ನಾಕಬೂಲು ಮಾಡಬೇಕು, ಅಥವಾ ಅವನು ಯಾವ ಇತರ ಮುದ್ದೆಯ ಮೇಲೆ ಆಧರಿಸಿ ತನ್ನ ಉತ್ತರಪಕ್ಷವನ್ನು ನಡಿಸಲಿಚ್ಛಿಸುವನೋ ಆ ಮುದ್ದೆಯನ್ನು ತೋರಿಸಬೇಕು. ಉದಾಹರಣಾರ್ಥವಾಗಿ, ಹಿಂದುಸ್ಥಾನದ ಮುದ್ದತಿನ ವಿಷಯದ ಕಾಯದೆ ತೆಗೆದುಕೊಳ್ಳೋಣ ಮತ್ತು ತೀರಿಸೋಣ, ಮುಕ್ತತೆ, ಮೋಸ, ಮುಂತಾಗಿ)

## ನಂಬರು ೧೪

## ಮೃತ್ಯುಪತ್ರದಿಂದ ಹಣ ಪಡೆದವನು ವಹಿವಾಟಿಗಾಗಿ ಮಾಡುವ ದಾವೆಯಲ್ಲಿ ಉತ್ತರ ಪಕ್ಷವು

### ಸರನಾಮೆ

೧. **ಅ, ಬ** ನ ಮೃತ್ಯುಪತ್ರದಲ್ಲಿ ಸಾಲಗಳ ಭಾರವಿತ್ತು; ಅವನು ನಾದಾರನಾಗಿ ಮೃತಪಟ್ಟನು. ಅವನ ಮರಣದ ಸಮಯದಲ್ಲಿ ಅವನಿಗೆ ಒಂದು ಸ್ಥಾವರ ಸೊತ್ತಿನ ಮೇಲೆ ಹಕ್ಕಿತ್ತು, ಮತ್ತು ಈ ಸೊತ್ತನ್ನು ಪ್ರತಿವಾದಿಯು ಮಾರಿದನು. ಮತ್ತು ಇದರಿಂದ ರೂಪಾಯಿಗಳ ನಕ್ಕಿ ರಕಮು ಉತ್ಪನ್ನವಾಯಿತು; ಮೃತ್ಯುಪತ್ರ ಕರ್ತನಿಗೆ ಒಂದು ಜಂಗಮ ಸೊತ್ತು ಇತ್ತು. ಅದನ್ನು ಪ್ರತಿವಾದಿಯು ಒಟ್ಟುಕೂಡಿಸಿದನು. ಮತ್ತು ಇದರಿಂದ ರೂಪಾಯಿಗಳ ನಕ್ಕಿ ರಕಮು ದೊರೆಯಿತು.

೨. ಸದರೀ ಎಲ್ಲ ರಕಮುಗಳನ್ನು, ಮತ್ತು ಸ್ಥಾವರ ಸೊತ್ತಿನ ಬಾಬತಿನಲ್ಲಿ ಪ್ರತಿವಾದಿಯು ವಸೂಲು ಮಾಡಿದ ಬಾಡಿಗೆಗಳ ರುಪಾಯಿಗಳ ರಕಮನ್ನು ಪ್ರತಿವಾದಿಯು, ಮೃತ್ಯುಪತ್ರ ಕರ್ತನ ಉತ್ತರಕ್ರಿಯೆಗಳ ಬಗ್ಗೆ

ಮೃತ್ಯುಪತ್ರ ಸಂಬಂಧದ ಖರ್ಚಿಗೆ, ಅವನ ಕೆಲವು ಸಾಲಗಳನ್ನು ತೀರಿಸುವ ಬಗ್ಗೆ ಉಪಯೋಗಿಸಿರುತ್ತಾನೆ.

೩. ಪ್ರತಿವಾದಿಯು ತನ್ನ ಲೆಕ್ಕವನ್ನೆಲ್ಲಾ ತಯಾರಿಸಿ ತಾರೀಖು ... ಇಷ್ಟಿ ದಿವಸ ವಾದಿಗೆ ಅದರ ನಕಲನ್ನು ಕಳುಹಿಸಿದನು ಮತ್ತು ಆ ಲೆಕ್ಕವನ್ನು ಸರಿ ನೋಡಲಿಕ್ಕೆ ವೌಚರಗಳನ್ನು ನೋಡುವದಕ್ಕಾಗಿ ವಾದಿಗೆ ಪೂರ್ಣ ಸ್ವತಂತ್ರತೆಯನ್ನೂ ಕೊಡುವೆನಾಗಿ ಪ್ರತಿವಾದಿಯು ಹೇಳಿದ್ದರೂ ಅವನು ಪ್ರತಿವಾದಿಯ ಈ ಹೇಳಿಕೆಯ ಉಪಯೋಗವನ್ನು ಮಾಡಲಿಲ್ಲ.

೪. ವಾದಿಯು ಈ ದಾವೆಯ ಖರ್ಚನ್ನು ಕೊಡತಕ್ಕದ್ದೆಂದು ಪ್ರತಿವಾದಿಯು ಅರಿಕೆ ಮಾಡುತ್ತಾನೆ.

(**ಸೂಚನೆ:—** ಮೇಲಿನ ೪ನೇ ಕಲಮಿನಲ್ಲಿ ಬರೆದ ಮಜಕೂರು ಬರೆಯಬೇಕು ಹೀಗೇನೂ ಇಲ್ಲ. ಅದನ್ನು ಬರೆಯದಿದ್ದರೆ ಸಹಾ ಯೋಗ್ಯ ಪ್ರಸಂಗದಲ್ಲಿ ಕೋರ್ಟಿನವರು ವಾದಿ ಕಡೆಯಿಂದ ಪ್ರತಿವಾದಿಯ ವೆಚ್ಚವನ್ನು ಕೊಡಿಸಬಹುದು, ಕಾರಣ ಈ ಸಂಗತಿ ಬರೆಯದೆ ಇರುವದು ಒಳ್ಳೆಯದು.)

## ನಂಬರು ೧೫

## ಮೃತ್ಯುಪತ್ರದ ವಿಧಿಪೂರ್ವಕವಾದ ಪ್ರೊಬೇಟು

## ಸರನಾಮೆ

೧. ಮೃತನ ಸದರೀ ಮೃತ್ಯುಪತ್ರವು ಮತ್ತು ಅದರ ಪುರವಣಿಯು (ಕೊಡಿಸಿಲ್) ಸನ್ ೧೯೬೫ನೇ ಇಸವಿಯ ಹಿಂದುಸ್ಥಾನದ ಉತ್ತರಾಧಿಕಾರದ ಆಕ್ಟಿನ ಠರಾವುಗಳಿಗನುಸಾರವಾಗಿ ಯೋಗ್ಯವಾಗಿ ಮಾಡಲ್ಪಡಲಿಲ್ಲ.

೨. ಮೃತನು, ಅನುಕ್ರಮವಾಗಿ ಸದರೀ ಮೃತ್ಯುಪತ್ರವು ಮತ್ತು ಅದರ ಪುರವಣಿಯು ಯಾವ ವೇಳೆಯಲ್ಲಿ ಮಾಡಲ್ಪಟ್ಟವು ಎಂದು ಅಂಬೋಣವಿರುವದೋ ಆ ವೇಳೆಯಲ್ಲಿ ನಿಜಬುದ್ಧಿಯುಳ್ಳವನೂ, ಒಳ್ಳೆ ಜ್ಞಾಪಕಶಕ್ತಿ ಮತ್ತು ತಿಳುವಳಿಕೆಯುಳ್ಳವನೂ ಆಗಿರಲಿಲ್ಲ.

೩. ಸದರೀ ಮೃತ್ಯುಪತ್ರವು ಮತ್ತು ಅದರ ಪುರವಣಿಯು ವಾದಿಯ [ಮತ್ತು ಈಗ್ಗೆ ಪ್ರತಿವಾದಿಗೆ ಹೆಸರುಗಳು ಗೊತ್ತಿಲ್ಲದ ಇನ್ನೂ ಬೇರೆಯವರು ವಾದಿಯು ಒಟ್ಟಿನಲ್ಲಿ ಮಾಡಿದ] ಅಯೋಗ್ಯ ಪ್ರೇರಣೆಯಿಂದ ಮಾಡಲಾದವು.

೪. ಆ ಮೃತ್ಯುಪತ್ರವು ಮತ್ತು ಅದರ ಪುರವಣಿಯು ವಾದಿಯು ಮಾಡಿದ ವಂಚನೆಯ ಕಾರಣದಿಂದ ಮಾಡಲಾದವು; ಈ ವಂಚನೆಯು ಪ್ರತಿವಾದಿಗೆ ಈಗ ಗೊತ್ತಾಗಿರುವ ಮಟ್ಟಿಗೆ, (ವಂಚನೆಯ ಪ್ರಕಾರವನ್ನು ಹೇಳು.)

೫. ಮೃತನು ಸದರೀ ಮೃತ್ಯುಪತ್ರವನ್ನು ಮತ್ತು ಅದರ ಪುರವಣಿಯನ್ನು ಮಾಡುವಾಗ ಅದರ [ಅಥವಾ ಸಂಗತ್ಯಾನುಸಾರವಾಗಿ ಬಾಕಿ ಉಳಿದಿದ್ದರ ವ್ಯವಸ್ಥೆ ಮಾಡುವ ಕಲಮಿನಲ್ಲಿರುವ ವಿಷಯಗಳ] ಮತಲಬನ್ನು ತಿಳಿದಿರಲಿಲ್ಲ ಮತ್ತು ಅದನ್ನು ಪಸಂದು ಮಾಡಿರಲಿಲ್ಲ.

೬. ಮೃತನು ತನ್ನ ನಿಜವಾದ ಕೊನೆಯ ಮೃತ್ಯುಪತ್ರವನ್ನು ತಾರೀಖು ೧೫-೬-೧೯೨೮ನೇ ಇಸ್ವಿ ದಿವಸ ಮಾಡಿದನು. ಮತ್ತು ಅದರ ಮೂಲಕ ಪ್ರತಿವಾದಿಯನ್ನು ಮಾತ್ರ ಮೃತ್ಯುಪತ್ರ ನಡೆಯಿಸುವವನಾಗಿ ನೇಮಿಸಿದನು.

೭. ಪ್ರತಿವಾದಿಯು ಬೇಡುವದೇನೆಂದರೆ:—

೧. ವಾದಿಯು ನಿಜವೆಂದು ಪ್ರತಿಪಾದಿಸುವ ಸದರೀ ಮೃತ್ಯುಪತ್ರದ ಮತ್ತು ಅದರ ಪುರವಣಿಯ ವಿರುದ್ಧವಾಗಿ ಕೋರ್ಟಿನವರು ತೀರ್ಮಾನ ಮಾಡಬೇಕು.

೨. ತಾರೀಖು ೧೫-೬-೧೯೨೮ನೇ ಇಸ್ವಿ ದಿವಸ ಮೃತ್ಯುಪತ್ರದ ಪ್ರೊಬೇಟನ್ನು ಕೋರ್ಟಿನವರು ಕಾಯಿದೆಯಂತೆ ವಿಧಿಪೂರ್ವಕವಾಗಿ ಹುಕುಮು ಮಾಡಿ ಕೊಡಬೇಕು.

## ನಂಬರು ೧೬

### ತಪಶೀಲು (ಆರ್ಡ್ರ ೭, ರೂ. ೫)

### ಸರನಾಮೆ

(ಯಾವ ಸಂಗತಿಗಳ ಸಂಬಂಧದಿಂದ ತಪಶೀಲು ಕೊಡಬೇಕೆಂದು ಹುಕುಮು ಆಗಿದೆಯೋ ಆ ಸಂಗತಿಗಳನ್ನು ಇಲ್ಲಿ ಬರೆಯಬೇಕು.) ಇದರ ತಪಶೀಲು ಈ ಕೆಳಗಿನಂತೆ ಇದೆ. ಮತ್ತು ಅದು ದ ನ ಹುಕುಮಿನನ್ವಯ ಕೊಡಲ್ಪಟ್ಟಿದೆ. (ಇಲ್ಲಿ ಫರ್ಮಾಯಿಸಲ್ಪಟ್ಟ ತಪಶೀಲನ್ನು ಅಗತ್ಯವಿದ್ದರೆ ಪ್ಯಾರಾಗ್ರಾಫುಗಳಾಗಿ ಕೊಡಬೇಕು.

# ೩ ನೆಯ ಪ್ರಕರಣ

## ಹುಕುಮನಾಮೆಯು ಯಾ ಹುಕುಮಿನ ಅಮಲು ಬಜಾವಣೆಯು,

ಹಿಂದಿನ ಪ್ರಕರಣದಲ್ಲಿ ಯಾವದಾದರೊಂದು ದಾವೆಯು ಯಾವ ಕೋರ್ಟಿನಲ್ಲಿ ಮಾಡಬೇಕು, ದಾವೆಯಲ್ಲಿ ಯಾವ ಯಾವ ಪಕ್ಷಕಾರರನ್ನು ವಾದಿಗಳನ್ನಾಗಲೀ ಪ್ರತಿವಾದಿಗಳನ್ನಾಗಲೀ ಒಟ್ಟುಗೂಡಿಸಬೇಕು, ದಾವೆಯಲ್ಲಿ ಯಾವ ಕಾರಣಗಳನ್ನು ಸೇರಿಸಬೇಕು, ಪಕ್ಷಕಾರರ ವರ್ಣನವನ್ನು ಹ್ಯಾಗೆ ಮಾಡಬೇಕು, ದಾವೆಯು ಸಹ ನಾವೆಯನ್ನು ಹ್ಯಾಗೆ ಬರೆಯಬೇಕು, ಅಸಲಜರ್ಜಿ ಮತ್ತು ಕೈಫಿಯತಿನಲ್ಲಿ ಯಾವ ಸಂಗತಿಗಳನ್ನು ಬರೆಯಬೇಕು ಮತ್ತು ಯಾವ ಸಂಗತಿಗಳನ್ನು ಬರೆಯಬಾರದು, ಅಸಲಜರ್ಜಿಗೆ ಮತ್ತು ಕೈಫಿಯತಿಗೆ ಅವಶ್ಯವಾದ ಸಂಗತಿಗಳು ಯಾವವೋ, ಅಸಲಜರ್ಜಿಯ ಸಂಗಡ ಯಾವ ದಸ್ತೈವಜಗಳನ್ನು ಹಾಜರು ಮಾಡಬೇಕು, ಕೈಫಿಯತಿನ ಸಂಗಡ ಯಾವ ದಸ್ತೈವಜಗಳನ್ನು ಹಾಜರು ಮಾಡಬೇಕು, ಎಲ್ಲ ದಸ್ತೈವಜಗಳನ್ನು ಯಾವಾಗ ಹಾಜರು ಮಾಡಬೇಕು, ಮುದ್ದೆಗಳು ಯಾವ ಸಂಗತಿಗಳ ಆಧಾರದ ಮೇಲಿಂದ ಠರಾಯಿಸಿರುತ್ತವೆ, ಚೌಕಶಿಯು ಯಾವಾಗ ಆಗುತ್ತದೆ, ಮತ್ತು ಹುಕುಮನಾಮೆಯನ್ನು ಹ್ಯಾಗೆ ಮಾಡಲ್ಪಟ್ಟಿರುತ್ತದೆ ಎಂಬುದನ್ನು ವಿಶದವಾಗಿ ಹೇಳಿರುತ್ತದೆ. ಆದರೆ ಈಗ ಹುಕುಮನಾಮೆಯಾದ ನಂತರದಲ್ಲಿಯ ಕ್ರಮವು ಹೇಳುವದು ಅವಶ್ಯವಿದೆ. ಅದನ್ನು ನಾವು ಇನ್ನು ಮುಂದೆ ಹೇಳುತ್ತೇವೆ.

ಹುಕುಮನಾಮೆಯ ಯಾ ಹುಕುಮಿನ ಅಮಲುಬಜಾವಣೆಯ ಸಂಬಂಧದಿಂದ ಬಹುತರವಾಗಿ ಎಲ್ಲ ನಿಯಮಗಳನ್ನು ಸಿವಿಲಪ್ರೊಸಿಜರಕೋಡಿನ ೨೧ನೇ ಆರ್ಡರದಲ್ಲಿ ಬರೆಯಲ್ಪಟ್ಟಿರುತ್ತವೆ. ಸದರೀ ಆರ್ಡರಿನಲ್ಲಿ ೧೦೩ ರೂಲಗಳು ಅಂದರೆ ಕಾನೂನಗಳು ಇರುತ್ತವೆ. ಸದರೀ ರೂಲಗಳ ಅಥವಾ ಕಾನೂನಗಳ ಸಾರಾಂಶವನ್ನು ಮತ್ತು ಅಮಲುಬಜಾವಣೆಗೆ ಸಂಬಂಧಿಸಿದ ಕೆಲವು ಕಲಮುಗಳನ್ನು ಕೆಳಗೆ ಕೊಡುತ್ತೇವೆ. ಕೆಳಗೆ ಬರೆದ ಉದಾಹರಣದ ಆಧಾರದಿಂದ ಅಮಲುಬಜಾವಣೆಯ ಕ್ರಮವು ಹ್ಯಾಗೆ ಇದೆ ಮತ್ತು ಏನು ಇದೆ ಎಂಬುದನ್ನು ವಿಶದ ಮಾಡೋಣ.

ಅ ಎಂಬುವವನು ೨೦೦ ರೂಪಾಯಿಗಳಿಗಾಗಿ ಬ ಎಂಬುವವನ ಮೇಲೆ ಹುಕುಮನಾಮೆಯನ್ನು ಪಡಕೊಂಡನು. ಇದರಲ್ಲಿ ಅ ಎಂಬುವವನು ಹುಕುಮ ನಾಮೆ ಧಾರಣಮಾಡಿದವನು ಇರುತ್ತಾನೆ. ಬ ಎಂಬುವವನು ಫೈಸಲಿನ ಋಣಿಯಿ ರುತ್ತಾನೆ. ಮತ್ತು ೫೦೦ ರೂಪಾಯಿಗಳನ್ನು ಫೈಸಲಿನ ಋಣವಾಗುತ್ತದೆ. ಬ ಈತನು ಸದರೀ ಹಣ ಕೊಡಲಿಕ್ಕೆ ತಪ್ಪಿದರೆ ಅ ಈತನು ಸದರೀ ಹುಕುಮನಾ ಮೆಯ ಅಮಲ-ಬಜಾವಣಿಗಾಗಿ ಅರ್ಜಿಯನ್ನು ಮಾಡಿ ಫೈಸಲಿನ ಋಣಿಯಾದ ಬ ಈತನನ್ನು ದಿವಾಣಿ ತುರಂಗದಲ್ಲಿ ಆತಂಕಿಸಿಡಬೇಕೆಂದು ಯಾ ಅವನು ಸ್ವತ್ತನ್ನು ಜಪ್ತ ಮಾಡಿ ಮಾರಬೇಕೆಂದು ಯಾ ಎರಡು ಮಾಡಬೇಕೆಂದು ಬೇಡಬಹುದು. (ರೂಲ ೩೦) ಹುಕುಮನಾಮೆಯ ಅಮಲುಬಜಾವಣಿಯ ಅರ್ಜಿಗೆ ದರಖಾಸ್ತು ಅಂತಾ ಅನ್ನುವರು. ಆದರೆ ಫೈಸಲಿನ ಋಣಿಯ ಶರೀರದ ಮೇಲೆ ಮತ್ತು ಆಸ್ತಿಯ ಮೇಲೆ ಒಂದೇ ವೇಳೆಗೆ ಅಮಲುಬಜಾವಣಿಯನ್ನು ಮಾಡಲಿಕ್ಕೆ ಕೋರ್ಟಿನವರು ತಮ್ಮ ವಿವೇಕಾನುಸಾರವಾಗಿ ನಾಕಾರಿಸಬಹುದು. ಫೈಸಲಿನ ಋಣಿಯ ಶರೀರದ ಮೇಲೆ ಅಮಲುಬಜಾವಣಿಯನ್ನು ಹ್ಯಾಗೆ ಮಾಡುವದು ? ಅವನ್ನು ಕೈದುಮಾಡುವದು ಮತ್ತು ದಿವಾಣಿ ತುರಂಗದಲ್ಲಿ ಆತಂಕಿಸಿಡುವದು ಫೈಸಲಿನ ಋಣಿಯ ಆಸ್ತಿಯ ಮೇಲೆ ಅಮಲುಬಜಾವಣಿಯನ್ನು ಹ್ಯಾಗೆ ಮಾಡು ವದು ? ಅವನ ಆಸ್ತಿಯನ್ನು ಜಪ್ತಮಾಡುವದು ಮತ್ತು ಮಾರುವದು ಮತ್ತು ಆ ಮಾರಾಟದಿಂದ ವಸೂಲು ಬಂದಹಣವನ್ನು ಹುಕುಮನಾಮೆ ಧಾರಣಮಾಡಿದವ ನಿಗೆ ಕೊಟ್ಟು ಫೈಸಲಿನ ಋಣ ಭರಪಾಯಿ ಮಾಡುವದು.

**ಹುಕುಮನಾಮೆಯ ಅಮಲಬಜಾವಣಿಗಾಗಿ ಅರ್ಜಿಯು ಅಂದರೆ ದರಖಾಸ್ತು**— ಹುಕುಮನಾಮೆ ಧಾರಣ ಮಾಡಿದನನು ಅದನ್ನು ಬಜಾಯಿಸಲಿಕ್ಕೆ ಅಪೇಕ್ಷಿಸಿದರೆ ಅವನು ಕೋರ್ಟಿಗೆ ಅರ್ಜಿಯನ್ನು ಮಾಡಬೇಕು. ಹುಕುಮನಾಮೆಯ ಅಮಲುಬಜಾವಣಿಗಾಗಿ ಮಾಡತಕ್ಕ ಪ್ರತಿಯೊಂದು ಅರ್ಜಿ ಯನ್ನು ಬರಹದಿಂದ ಮಾಡಬೇಕು; ಮತ್ತು ಅರ್ಜಿದಾರನು ಆ ಅರ್ಜಿಯ ಮೇಲೆ ಸಹಿ ಮಾಡಿ ಸತ್ಯತ್ವದ ಬಗ್ಗೆ ಇಕರಾರನ್ನು ಬರೆಯಬೇಕು. ಮತ್ತು ಅದರಲ್ಲಿ ಈ ಕೆಳಗೆ ಬರೆದ ವಿವರಗಳನ್ನೂ ಕೋಷ್ಟಕರೂಪದಿಂದ ಬರೆದಿರಬೇಕು. ಇವು ಯಾವವೆಂದರೆ—

ಅ. ದಾವೆಯ ನಂಬರು;

ಬ. ಪಕ್ಷಕಾರರ ಹೆಸರುಗಳು;

ಕ. ಹುಕುಮನಾಮೆಯ ತಾರೀಖು;

ಡ. ಹುಕುಮನಾಮೆಯ ಮೇಲೆ ಅಪೀಲು ಆಗಿರುತ್ತದೆಯೋ ಇಲ್ಲವೋ;

ಇ. ಹುಕುಮನಾಮೆಯಾದಬಳಿಕ ಪಕ್ಷಕಾರರು ವಿವಾದದ ವಿಷಯವನ್ನು ಕುರಿತು ತಮ್ಮೊಳಗೆ ಏನಾದರೂ ರಕಮನ್ನು ಕೊಟ್ಟಿರುತ್ತಾರೋ ಅಥವಾ ಏನಾದರೂ ರಾಜಿಯನ್ನು ಮಾಡಿಕೊಂಡಿರುತ್ತಾರೋ ಇಲ್ಲವೋ; ಇದ್ದರೆ ಎಷ್ಟು ಕೊಟ್ಟರು. ಅಥವಾ ಎಂದು ರಾಜಿಮಾಡಿಕೊಂಡರು;

ಫ. ಹುಕುಮನಾಮೆಯ ಅಮಲುಬಜಾವಣೆಗಾಗಿ ಪೂರ್ವದಲ್ಲಿ ಏನಾದರೂ ಅರ್ಜಿಗಳು ಮಾಡಲ್ಪಟ್ಟಿದ್ದವೋ ಇಲ್ಲವೋ ಮಾಡಲ್ಪಟ್ಟಿದ್ದರೆ ಇಂಥವು ವ ಅವುಗಳ ತಾರೀಖುಗಳು ಯಾವವು ವ ಅವುಗಳ ಪರಿಣಾಮವೇನಾಯಿತು;

ಗ. ಹುಕುಮನಾಮೆಯಿಂದ ಬರತಕ್ಕದ್ದಾದ ರಕಮು ಬಡ್ಡಿ (ಇದ್ದರೆ) ಸಹ, ಅಥವಾ ಹುಕುಮನಾಮೆಯಿಂದ ಕೊಡಿಸಲ್ಪಟ್ಟಂಥ ಬೇರೆ ನ್ಯಾಯಾಶ್ರಯವು, ಮತ್ತು ಯಾವ ಹುಕುಮನಾಮೆಯನ್ನು ಅಮಲಿನಲ್ಲಿ ತರುವದಾಗಿದ್ದೀತೋ ಅದಕ್ಕೆ ಮೊದಲು ಅಥವಾ ತರುವಾಯ ಆದ ಯಾವದಾದರು ಪರಸ್ಪರ ವಿರುದ್ಧ ಹುಕುಮನಾಮೆಗಳ ತಪಶೀಲು.

(ಹ) ಕೊಡಿಸಲ್ಪಟ್ಟ ವೆಚ್ಚದ ರಕಮು (ಇದ್ದರೆ).

(ಆಯ್) ಯಾವಾತನ ವಿರುದ್ಧವಾಗಿ ಹುಕುಮನಾಮೆಯ ಅಮಲು ಬಜಾವಣೆಯನ್ನು ಅಪೇಕ್ಷಿದೆಯೋ ಆ ಮನುಷ್ಯನ ಹೆಸರು, ಮತ್ತು.

(ಜ) ಕೋರ್ಟಿನ ಸಹಾಯವು ಬೇಕಾಗಿರುವ ಪ್ರಕಾರವು, ಎಂದರೆ:-

೧. ಹುಕುಮನಾಮೆಯಲ್ಲಿ ಬರೆದ ಯಾವದೊಂದು ವಿಶೇಷ ಸ್ವತ್ತಿನ ಸ್ವಾಧೀನತೆಯನ್ನು ಕೊಡಿಸುವದು.

೨. ಯಾವದೊಂದು ಆಸ್ತಿಯನ್ನು ಜಪ್ತುಮಾಡಿ ಅಥವಾ ಜಪ್ತುಮಾಡದೆ ಮಾರುವದು ಅಥವಾ.

೩. ಯಾವನೊಬ್ಬ ಮನುಷ್ಯನನ್ನು ಕೈದುಮಾಡಿ ತುರಂಗದಲ್ಲಿಡುವದು, ಅಥವಾ.

೪. ಒಬ್ಬ ರಿಸೀವರನನ್ನು ನೇಮಿಸುವದು, ಅಥವಾ.

೫. ಪಡೆಯಲಿಕ್ಕೆ ಅಪೇಕ್ಷಿಸಿವಂಥ ನ್ಯಾಯಾಶ್ರಯದ ಸ್ವರೂಪಕ್ಕೆ ಅವಶ್ಯವಾಗಿರುವಂಥ ಬೇರೆ ಪ್ರಕಾರವು.

ಸದರೀ ಅರ್ಜಿಯ ಸಂಗಡ ಹುಕುಮನಾಮೆಯ ದಾಖಲೆ ಇರುವ ನಕಲನ್ನು ಹಾಜರು ಮಾಡಬೇಕು.

ಬರಹದಿಂದ ಪ್ರತಿಯೊಂದು ಅರ್ಜಿ ಮಾಡಬೇಕೆಂದು ಮೇಲ್ಕಂಡ ನಿಯಮಿಗೆ ಕೆಳಗಿನ ಒಂದು ಅಪವಾದವುಂಟು. ಹಣ ಕೊಡುವದನ್ನು ಕುರಿತು ಹುಕುಮನಾಮೆಯಾಗಿದ್ದಲ್ಲಿ, ಹುಕುಮನಾಮೆಯು ಕೊಡಲ್ಪಟ್ಟಾಗ ಹುಕುಮನಾಮೆ ಪಡೆದವನು ಕೋರ್ಟಿಗೆ ಬಾಯಿಮಾತಿನಿಂದ ಅರ್ಜಿಯನ್ನು ಮಾಡಲಾಗಿ ಕೋರ್ಟಿನವರು ಫೈಸಲಿನ ಋಣಿಯು ಕೋರ್ಟಿನ ಆವಾರದೊಳಗಿದ್ದರೆ ಅವನನ್ನು ವಾರಂಟು ತಯಾರಾಗುವ ಮುಂಚೆ ದಸ್ತಗೀರು ಮಾಡಿ ಆ ಹುಕುಮನಾಮೆಯನ್ನು ಕೂಡಲೇ ಬಜಾಯಿಸುವ ವಿಷಯದಲ್ಲಿ ಹುಕುಮು ಮಾಡಬಹುದು.

ಫೈಸಲಿನ ಋಣಿಯ ವಶದಲ್ಲಿರದಂಥ **ಜಂಗಮ ಮಾಲಿನ ಜಪ್ತಿಗಾಗಿ** ಮಾಡತಕ್ಕ ಅರ್ಜಿಯು:— ಫೈಸಲಿನ ಋಣಿಯ ಮಾಲಕಿಗೆ ಸೇರಿದಾಗ್ಯೂ ಅವನ ವಶದಲ್ಲಿ ಇರದಂಥ ಯಾವದೊಂದು ಜಂಗಮ ಮಾಲಿನ ಜಪ್ತಿಗಾಗಿ ಅರ್ಜಿಯನ್ನು ಮಾಡಿದ್ದಾಗ್ಗೆ ಆ ಮಾಲಿನ ಯೋಗ್ಯರೀತಿಯ ಮತ್ತು ತಪ್ಪಿಲ್ಲದ ವರ್ಣನೆಯುಳ್ಳದೊಂದು ಫೇರಿಸ್ತನ್ನು ಹುಕುಮನಾಮೆ ಧಾರಣಮಾಡಿದವನು ಅರ್ಜಿಯ ಸಂಗಡ ಕಳುಹಬೇಕು. (ಆ. ೨೧, ರೂ. ೧೨.)

ಸ್ಥಾವರ ಮಾಲಿನ ಜಪ್ತಿಗಾಗಿ ಮಾಡತಕ್ಕ ಅರ್ಜಿಯಲ್ಲಿರತಕ್ಕ ವಿವಕ್ಷಿತ ತಪಶೀಲು:— ಫೈಸಲಿನ ಋಣಿಯ ಮಾಲಕಿಗೆ ಸೇರಿದಂಥ ಯಾವದೊಂದು ಸ್ಥಾವರ ಮಾಲಿನ ಜಪ್ತಿಗಾಗಿ ಅರ್ಜಿಯನ್ನು ಯಾವಾಗ್ಗೆ ಮಾಡತಕ್ಕದ್ದಿತ್ತೋ ಆಗ್ಗೆ ಅದರ ಅಡಿಗೆ:—

(ಅ) ಆ ಮಾಲಿನ ಗುರುತು ಹಿಡಿಯಲಿಕ್ಕೆ ಸಾಕಷ್ಟು ವರ್ಣನೆಯನ್ನು ಮತ್ತು ಪೈಮಾಷಿಯ ಅಥವಾ ಸರ್ವೆಯ ಕಾಗದಪತ್ರಗಳಲ್ಲಿ ಕೊಟ್ಟ ಹದ್ದು ಗಳ ಮೇಲಿಂದ ಅಥವಾ ನಂಬರಗಳ ಮೇಲಿಂದ ಆ ಮಾಲಿನ ಗುರುತು ಹಿಡಿಯ ಲಿಕ್ಕೆ ಬರುವಂತೆ ಇದ್ದಲ್ಲಿ ಆ ಹದ್ದುಗಳನ್ನು ಅಥವಾ ನಂಬರಗಳನ್ನು ಬರೆಯ ಬೇಕು ಮತ್ತು ;

(ಬ) ಅರ್ಜದಾರನು ಯಥಾರ್ಥವಾಗಿ ನಂಬುತ್ತಿದ್ದ ಮಟ್ಟಿಗೆ ಮತ್ತು ಅವ ನಿಂದ ಶೋಧ ಮಾಡಲಿಕ್ಕೆ ಕೂಡಿದಷ್ಟರ ಮಟ್ಟಿಗೆ ಆ ಮಾಲಿನಲ್ಲಿ ಇದ್ದ ಫೈಸಲಿನ ಋಣಿಯ ಮಾಲಿನ ಯಾ ಸ್ವಾರ್ಥಸಂಬಂಧದ ವಿವರಣೆಯನ್ನು ಬರೆಯಬೇಕು. (ಆ. ೨೧, ರೂ. ೧೩.) ಕಲೆಕ್ಟರನ ಆಫೀಸಿನಲ್ಲಿ ರಿಜಿಸ್ಟರಿಗೆ ಸೇರಿದ ಭೂಮಿಯನ್ನು ಜಪ್ತುಮಾಡುವದಕ್ಕೆ ಅರ್ಜಿಯನ್ನು ಮಾಡಿದ್ದಲ್ಲಿ ಕೋರ್ಟನವರು ಆ ಆಫೀಸಿನ ರಿಜಿಸ್ಟರನಿಂದ ತೆಗೆದುಕೊಂಡ ಮತ್ತು ಆ ಭೂಮಿಯ ಯಾ ಅದರ ತೆರಿಗೆಯ ಮಾಲಿಕರೆಂದು, ಅಥವಾ ಆ ಭೂಮಿಯಲ್ಲಾಗಲೀ ಅದರ ತೆರಗೆಯಲ್ಲಾಗಲೀ ವಿನಿ ಯೋಗ ಮಾಡಬಹುದಾದಂಥ ಸ್ವಾರ್ಥಸಂಬಂಧವುಳ್ಳವರೆಂದು, ಅಥವಾ ಆ ಭೂಮಿಗಾಗಿ ತೆರಿಗೆಯನ್ನು ಕೊಡತಕ್ಕವರೆಂದು ರಿಜಿಸ್ಟರಿಗೆ ದಾಖಲಾದಂಥ ಮನುಷ್ಯರ ಹೆಸರುಗಳನ್ನು ಆ ಮಾಲೀಕರ ಪಾಲುಗಳನ್ನು ವಿವರಿಸುವಂಥ ದಾಖ ಲೆಯುಳ್ಳ ಉತಾರನ್ನು ಹಾಜಿರು ಮಾಡುವ ವಿಷಯದಲ್ಲಿ ಅರ್ಜಿದಾರನಿಗೆ ಫರ್ಮಾ ಯಿಸಬಹುದು. (ಆ. ೨೧, ರೂ. ೧೪.) ಸಾರಾಂಶ. ಅರ್ಜಿಯ ಕೂಡ ಅಂದರೆ ದರಖಾಸ್ತಿನ ಕೂಡ ಹಕ್ಕುದಾರ ರಜಿಸ್ಟರ ಉತಾರಗಳನ್ನು ಯಾ ಪ್ರಾಪರ್ಟಿ ರಜಿ ಸ್ಟರ ಉತಾರಗಳನ್ನು ಯಾ **ಕ, ಡ ಇ.** ಪತ್ರಿಕೆಯ ಉತಾರಗಳನ್ನು ಹಾಜರು ಮಾಡಬೇಕು.

ಸದರೀ ನಿಯಮಗಳಿಗೆ ಅನುಸರಿಸಿ ಅರ್ಜಿಯನ್ನು ಮಾಡಲಾಗಿ ಕೋರ್ಟ ನವರು ಆ ಹುಕುಮನಾಮೆಯ ಅಮಲುಬಜಾವಣೆಗಾಗಿ ಪ್ರೊಸೆಸ್ಸನ್ನು ತೆಗೆಯ ಬೇಕು. ಮೇಲಿನ ಪ್ರಕಾರ ಅರ್ಜಿಯನ್ನು ಮಾಡಲ್ಪಡದೆ ಇದ್ದರೆ ಕೋರ್ಟ ನವರು ದರಖಾಸ್ತನ್ನು ನಾಕಾರಿಸಬಹುದು ಅಥವಾ ಇದ್ದ ಕೊರತೆಯನ್ನು ಆಗ್ಗೆ ಅಲ್ಲಿಯೇ ಅಥವಾ ಕೋರ್ಟ ನೇಮಿಸದಂಥ ವೇಳೆಯೊಳಗೆ ಸರಿಮಾಡ ಗೊಡಬಹುದು. (ಆ. ೨೧, ರೂ. ೧೭.) ಕೋರ್ಟನಿಂದ ಸದರಿ ದರಖಾಸ್ತು

ನಾಕಾರಿಸಲ್ಪಡದಲ್ಲಿ ಹುಕುಮನಾಮೆ ಧಾರಣ ಮಾಡಿದವನು ಪುನಃ ಯೋಗ್ಯ ವಾದ ಮತ್ತು ಕಾಯದೇಶೀರ ಅರ್ಜಿಯನ್ನು ಮಾಡಬಹುದು. ಅಂದರೆ ಮೇಲೆ ಕಾಣಿಸಿದ ನಿಯಮಗಳಿಗೆ ಅನುಸರಿಸಿ ಹುಕುಮನಾಮೆಯ ಅಮಲುಬಜಾವಣೆ ಗಾಗಿ ಅರ್ಜಿಯನ್ನು ಮಾಡಬಹುದು. ಅಂದರೆ ದರಖಾಸ್ತನ್ನು ಕೊಡಬಹುದು.

## ಯಾವ ಕೋರ್ಟಿನಲ್ಲಿ ಹುಕುಮನಾಮೆಯ ಅಮಲುಬಜಾವಣೆ ಗಾಗಿ ಅರ್ಜಿಯನ್ನು ಮಾಡಬಹುದು ಯಾ ದರಖಾಸ್ತನ್ನು ಕೊಡಬಹುದು ?

ಹುಕುಮನಾಮೆಯನ್ನು ಮಾಡಿದ ಕೋರ್ಟಿನವರು ಅಥವಾ ಅಮಲು ಬಜಾವಣೆಗಾಗಿ ಅದು ಯಾವ ಕೋರ್ಟಿಗೆ ಕಳುಹಿಸಲ್ಪಡುತ್ತದೆಯೋ ಆ ಕೋರ್ಟಿನವರು ಅವರ ಅಮಲುಬಜಾವಣೆಯನ್ನು ಮಾಡಬಹುದು. ಕಾರಣಾ ಇವುಗಳ ಪೈಕಿ ಯಾವದಾದರೊಂದು ಕೋರ್ಟಿಗೆ ಅರ್ಜಿಯನ್ನು ಮಾಡಬಹುದು. (ಕಲಮು ೩೮) ಹುಕುಮನಾಮೆ ಪಡೆದವನು ಅರ್ಜಿಯನ್ನು ಮಾಡಲಾಗಿ ಅದನ್ನು ಮಾಡಿದ ಕೋರ್ಟಿನವರು ಅಮಲುಬಜಾವಣೆಗಾಗಿ ಬೇರೆ ಕೋರ್ಟಿಗೆ ಕಳುಹ ಬಹುದು. ಸ್ಥಾವರಾಸ್ತಿಯ ಒಂದೇ ಇಸ್ಟೇಟು ಅಥವಾ ಸತ್ತಾಪ್ರಕಾರವಾಗಿದ್ದು ಎರಡು ಅಥವಾ ಹೆಚ್ಚು ಕೋರ್ಟುಗಳ ಹುಕುಮತಿನ ಸ್ಥಳ ಸೀಮೆಯೊಳಗೆ ಇದ್ದಾಗ್ಗೆ ಇಂಥ ಕೋರ್ಟುಗಳ ಪೈಕಿ ಯಾವದಾದರೊಂದು ಕೋರ್ಟಿನವರು ಆ ಎಲ್ಲ ಇಸ್ಟೇಟನ್ನು ಯಾ ಸತ್ತಾಪ್ರಕಾರವನ್ನು ಜಪ್ತಮಾಡಿ ಮಾರಬಹುದು.

**ಹುಕುಮನಾಮೆಯ ಅಮಲುಬಜಾವಣೆಗಾಗಿ ಅರ್ಜಿಯನ್ನು ಯಾರು ಮಾಡಬಹುದು ?** — ಹುಕುಮನಾಮೆ ಧಾರಣ ಮಾಡಿ ದವನು ಯಾ ಹುಕುಮನಾಮೆ ಪಡೆದವನು ಹುಕುಮನಾಮೆಯ ಅಮಲುಬಜಾ ವಣೆಗಾಗಿ ಅರ್ಜಿಯನ್ನು ಮಾಡಬಹುದು. ಹುಕುಮನಾಮೆಯು ತಬದಿಲು ಮಾಡಿ ಕೊಟ್ಟಲ್ಲಿ ಯಾರ ಹೆಸರಿಗೆ ತಬದಿಲು ಮಾಡಿಕೊಟ್ಟದೆಯೋ ಅವನು ಆ ಹುಕುಮ ನಾಮೆಯ ಅಮಲುಬಜಾವಣೆಯ ದೆಸೆಯಿಂದ ಅರ್ಜಿಯನ್ನು ಮಾಡಬಹುದು. (ಸೂ. ೧೬) ಒಬ್ಬನಗಿಂತ ಹೆಚ್ಚು ಜನರಿಗೆ ಅನುಕೂಲವಾಗಿ ಒಟ್ಟಿನಲ್ಲಿ ಹುಕುಮ ನಾಮೆಯು ಮಾಡಲ್ಪಟ್ಟಲ್ಲಿ ಅವರಲ್ಲಿ ಒಬ್ಬನಾಗಲೀ ಹೆಚ್ಚು ಜನರಾಗಲೀ ಆ ಹುಕುಮ

ನಾಮೆಯ ಬಜಾವಣಿ ಮಾಡುವದಕ್ಕೆ ಅರ್ಜಿಯನ್ನು ಮಾಡಬಹುದು. (ರೂ. ೧೫) ಅಂದರೆ ಹುಕುಮನಾಮೆಯನ್ನು ಸಾಮೂಯಿಕವಾಗಿ ಪಡೆದವರ ದೆಸೆಯಿಂದ ಅವರು ಪೈ ಕಿಯಾರಾದರೊಬ್ಬರೂ ಆ ಹುಕುಮನಾಮೆಯು ಅಮುಲುಬಜಾವಣಿಗಾಗಿ ಅರ್ಜಿ ಯನ್ನು ಮಾಡಬಹುದು. ಹುಕುಮನಾಮೆ ಧಾರಣ ಮಾಡಿದವನು ತೀರಿಕೊಂಡಲ್ಲಿ ಅವನ ಕಾಯದೆಶೀರ ಪ್ರತಿವಾದಿಯು ಆ ಹುಕುಮನಾಮೆಯ ಅಮುಲುಬಜಾವಣಿ ದೆಸೆಯಿಂದ ಅರ್ಜಿಯನ್ನು ಮಾಡಬಹುದು.

ಯಾರ ವಿರುದ್ಧವಾಗಿ ದರಖಾಸ್ತನ್ನು ಕೊಡಬಹುದು; ಯಾ ಹುಕುಮ ನಾಮೆಯ ಅಮುಲುಬಜಾವಣಿಗಾಗಿ ಅರ್ಜಿಯನ್ನು ಮಾಡಬಹುದು ? ಫೈಸಲಿನ ಋಣಿಯು ಜೀವಂತವಿದ್ದಲ್ಲಿ ಅವನ ವಿರುದ್ಧವಾಗಿ ದರಖಾಸ್ತು ಕೊಡಬಹುದು. ಫೈಸಲಿನ ಋಣಿಯು ಮರಣಹೊಂದಿದರೆ ಆ ಹುಕುಮನಾಮೆಯು ಮಾಲಕನು ಆ ಸ್ವತ್ತಿನ ಕಾಯದೇಶೀರ ಪ್ರತಿನಿಧಿಗೆ ವಿರುದ್ಧವಾಗಿ ಅದನ್ನು ಬಜಾಯಿಸಲಿಕ್ಕೆ ಅರ್ಜಿಯನ್ನು ಮಾಡಬಹುದು. (ಕಲಮು ೫೦)

**ಕೆಲವು ಪ್ರಸಂಗಗಳಲ್ಲಿ ಹುಕುಮನಾಮೆಯನ್ನು ಯಾಕೆ ಬಜಾಯಿಸಬಾರದೆಂಬುದಕ್ಕೆ ಕಾರಣ ತೋರಿಸುವ ಬಗ್ಗೆ ನೋಟಿಸು**

**(ಆ. ೨೧, ರೂ. ೨೨.)**

ಯಾವಾಗ

(ಅ) ಹುಕುಮನಾಮೆಯು ತಾರೀಖಿನಿಂದ ಒಂದು ವರ್ಷಕ್ಕಿಂತ ಹೆಚ್ಚಿನ ಮುದ್ದತಿನ ಅನಂತರ ಅಥವಾ

(ಬ) ಹುಕುಮನಾಮೆಯೊಳಗಿನ ಪಕ್ಷಕಾರನ ಕಾಯಿದೇಶೀರ ಪ್ರತಿನಿಧಿ ವಿರುದ್ಧ ಅಮುಲುಬಜಾವಣಿಯ ಬಗ್ಗೆ ಅರ್ಜಿಯನ್ನು ಮಾಡಿರುವದೋ ಆಗ ಯಾವ ಮನುಷ್ಯನ ವಿರುದ್ಧ ಅಮುಲುಬಜಾವಣಿಯ ಬಗ್ಗೆ ಅರ್ಜಿಯನ್ನು ಮಾಡಿ ರುವದೋ ಆ ಮನುಷ್ಯನಿಗೆ ತನ್ನ ಮೇಲೆ ಅಮುಲುಬಜಾವಣಿಯನ್ನು ಯಾಕೆ ಮಾಡಬಾರದೆಂಬುದರ ಕಾರಣ ತೋರಿಸುವ ಬಗ್ಗೆ ನೋಟಿಸು ಕೊಡಬೇಕು. ಅಂದರೆ ಈ ನೋಟಿಸು ಕೋರ್ಟಿನ ಮಾರಿಫತ್ತು ಹೋಗುತ್ತದೆ. ಮುಂಬೈ ಹೈಕೋರ್ಟಿನ ಹುಕುಮತ್ತಿನ ಕೆಳಗೆ ಇರುವ ಕೋರ್ಟುಗಳದೆಸೆಯಿಂದ ಮೇಲ್ಕಂಡ ಆ ಪ್ಯಾರಾದಲ್ಲಿ ಕೆಳಗೆ ಬರೆದ ಪ್ರಕಾರ ಬದಲು ಮಾಡಬೇಕು. ಎಂದರೆ—

(ಅ) ಹುಕುಮನಾಮೆಯು ತಾರೀಖಿನಿಂದ “ **ಎರಡು** ” ವರ್ಷಕ್ಕಿಂತ ಹೆಚ್ಚಿನ ಅನಂತರ, ಅಥವಾ ವಗೈರೆ. ಆದರೆ ಯೋಗ್ಯ ನ್ಯಾಯವಾಗಲಿಕ್ಕೆ ಕೋರ್ಟಿನವರು ಇಂಥ ನೋಟಿಸ ಕೊಡದೆ ಹುಕುಮನಾಮೆಯು ಅಮಲುಬಜಾವಣೆಯನ್ನು ನಡೆಯಿಸಬಹುದು. ಆದರೆ ಮೇಲ್ಕಂಡ ಪ್ರಸಕ್ತಿಗಳಲ್ಲಿ ನೋಟಿಸು ಕೊಡುವದು ಅವಶ್ಯವಿದೆ. ಫೈಸಲಿನ ಋಣಿಯನ್ನು ಕೈದುಮಾಡಿ ಮತ್ತು ದಿವಾಣಿ ತುರಂಗವಲ್ಲಿ ಆತಂಕಿಸಿಟ್ಟು ಹಣ ವಸೂಲು ಮಾಡುವ ಬಗ್ಗೆ ಅರ್ಜಿಯನ್ನು ಮಾಡಿದ್ದಲ್ಲಿ ಅವನನ್ನು ಕೈದುಮಾಡುವದಕ್ಕೆ ವಾರಂಟನ್ನು ತೆಗೆಯುವ ಮೊದಲು ಒಂದು ನೋಟೀಸನ್ನು ಮಾಡಿ ಅದರ ಮೇಲಿಂದ ಅವನಿಗೆ ದಿವಾಣಿ ತುರಂಗಕ್ಕೆ ಯಾಕೆ ಕಳುಹಿಸಬಾರದೆಂಬ ಬಗ್ಗೆ ಏನಾದರೂ ಕಾರಣವಿದ್ದರೆ ಅದನ್ನು ಹೇಳಬೇಕೆಂದು ಕೋರ್ಟಿನವರು ಫರ್ಮಾಯಿಸಬಹುದು. (ಆ. ೨೧, ರೂ. ೩೭.)

**ಅಮಲುಬಜಾವಣೆಯಲ್ಲಿ ಕೆಲಸ ನಡಿಸುವ ರೀತಿಯು —** (ಕಲಮು ೫೧) ಹುಕುಮನಾಮೆ ಪಡೆದವನು ಅರ್ಜಿಮಾಡಲಾಗಿ ಆ ಹುಕುಮನಾಮೆಯು ಬಜಾವಣೆಯನ್ನು

(ಅ) ಹುಕುಮನಾಮೆಯಲ್ಲಿ ಸ್ಪಷ್ಟವಾಗಿ ನಿರ್ದಿಷ್ಟಗೊಳಿಸಿದ ಯಾವದಾದರೂ ಆಸ್ತಿಯನ್ನು ಸ್ವಾಧೀನ ಮಾಡಿ

(ಬ) ಯಾವದಾದರೂ ಆಸ್ತಿಯನ್ನು ಜಪ್ತುಮಾಡಿ ಮತ್ತು ಮಾರಿ ಅಥವಾ ಅದನ್ನು ಜಪ್ತುಮಾಡದೆ ಮಾರಿ.

(ಕ) ದಸ್ತಗೀರು ಮಾಡಿ ಮತ್ತು ಆತಂಕಿಸಿಟ್ಟು

(ಡ) ರಿಸೀವರರನ್ನು ನೇಮಿಸಿ ಅಥವಾ

(ಇ) ಕೊಡತಕ್ಕ ನ್ಯಾಯಾಶ್ರಯದ ಸ್ವರೂಪದ ಪ್ರಕಾರ ಅಗತ್ಯವಾಗಬಹುದಾದ ಬೇರೆ ರೀತಿಯಿಂದ

ಮಾಡುವ ವಿಷಯದಲ್ಲಿ ಕೋರ್ಟಿನವರು ಹುಕುಮು ಮಾಡಬಹುದು.

ಈ ಸಂಗತಿಗಳ ಪೈಕಿ ಕೆಲವು ಸಂಗತಿಗಳ ಕ್ರಮಗಳು ವಿಶದವಾಗಿ ವಿವೇಚನ ಮಾಡತಕ್ಕಂಥವು ಇರುತ್ತವೆ. ಕಾರಣಾ ಅವುಗಳ ವಿವೇಚನ ಮಾಡೋಣ.

**ಫೈಸಲಿನ ಋಣಿಯ ಶರೀರದ ಮೇಲೆ ಅಮಲುಬಜಾವಣೆಯನ್ನು** (ಅಂದರೆ ಅವನನ್ನು ಕೈದುಮಾಡುವದು ಮತ್ತು ಆತಂಕಿಸಿಡುವದು):- **ಅ** ಎಂಬುವನು ೫೦೦ ರುಪಾಯಿಗಳಿಗಾಗಿ **ಬ** ಎಂಬುವನನ ಮೇಲೆ ಹುಕುಮನಾಮೆಯನ್ನು ಪಡೆದನು. ಇದಕ್ಕೆ ಹಣಕೊಡುವ ಹುಕುಮನಾಮೆಯೆನ್ನುವರು. ಇದರಲ್ಲಿ **ಬ** ಈತನು ಈ ಫೈಸಲಿನ ಋಣ ಕೊಡಲಿಲ್ಲ. **ಅ** ಈತನು ಸದರೀ ಋಣದ ಬಗ್ಗೆ **ಬ** ಈತನ ಶರೀರದ ಮೇಲೆ ಅಮಲು ಬಜಾವಣೆಯನ್ನು ನಡಿಸಿರುತ್ತಾನೆ. ಇದು ಹಣ ಕೊಡುವ ಹುಕುಮನಾಮೆಯಾಗಿದ್ದರಿಂದ ಕೋರ್ಟಿನವರು ಅವನನ್ನು ಕೈದು ಮಾಡುವದಕ್ಕೆ ವಾರಂಟು ತೆಗೆಯದೆ ಒಂದು ನೋಟೀಸನ್ನು ಮಾಡಿ ಅದರ ಮೇಲಿಂದ ಅವನನ್ನು ದಿವಾಣಿ ತುರಂಗಕ್ಕೆ ಏಕೆ ಕಳುಹಿಸಬಾರದೆಂಬ ಬಗ್ಗೆ ಏನಾದರೂ ಕಾರಣವಿದ್ದರೆ ಹೇಳಬೇಕೆಂದು ಫರ್ಮಾಯಿಸಬಹುದು. ನೋಟಿಸಿನ ಪ್ರಕಾರ ಫೈಸಲಿನ ಋಣಿಯಾದ **ಬ** ಈತನು ಕೋರ್ಟಿನ ಮುಂದೆ ಹಾಜರಾದ ಮೇಲೆ ಅಥವಾ ಅವನನ್ನು ಕೈದು ಮಾಡಿ ತಂದ ಮೇಲೆ; ೧ ಬಡತನದ ದೆಸೆಯಿಂದ ಅಥವಾ ಬೇರೆ ಯೋಗ್ಯ ಕಾರಣ ದೆಸೆಯಿಂದ ಹುಕುಮನಾಮೆಯ ರಕಮನ್ನು ಕೊಡುವದಕ್ಕೆ ಅಥವಾ ಆ ರಕಮನ್ನು ಹಪ್ತೆಬಂದಿ ಪ್ರಕಾರ ಕೊಡುವದಾಗಿದ್ದರೆ ಅವುಗಳ ಪೈಕಿ ಯಾವದಾದರೂ ಹಪ್ತೆಯ ರಕಮನ್ನು ಕೊಡುವದಕ್ಕೆ ಫೈಸಲಿನ ಋಣಿಯಾದ **ಬ** ಇವನಿಂದ ಆಗಲಿಕ್ಕಿಲ್ಲವೆಂದು ಕೋರ್ಟಿಗೆ ಕಂಡು ಬಂದಾಗ್ಗೆ ಕೋರ್ಟು ಸದರೀ **ಬ** ಇವನನ್ನು ಕೈದುಮಾಡಿ ಆತಂಕದಲ್ಲಿಡುವ ವಿಷಯದ ಮೇಲ್ಕಂಡ ಅರ್ಜಿಯನ್ನು (ಯಾ ದರಖಾಸ್ತನ್ನು) ನಾಮಂಜೂರ ಮಾಡುವ ಅಥವಾ ಅವನನ್ನು ಬಿಟ್ಟುಬಿಡುವ ಹುಕುಮನ್ನು ಮಾಡಬಹುದು. (ಆ. ೨೧, ರೂ. ೪೦.) (೧) ಸದರೀ ನೋಟೀಸಿನ ಪ್ರಕಾರ **ಬ** ಇವನು ಹಾಜರಾಗದಿದ್ದಲ್ಲಿ **ಅ** ಇವನು ಬೇಡಿದರೆ ಸದರೀ **ಬ** ಇವನನ್ನು ಕೈದುಮಾಡುವ ಬಗ್ಗೆ ಕೋರ್ಟಿನವರು ವಾರಂಟು ಕೊಡಬೇಕು. (ರೂ. ೩೭.) **ಬ** ಇವನು ಕೋರ್ಟಿನ ಮುಂದೆ ಹಾಜರಾಗಿ ಮೇಲ್ಕಂಡಂತೆ ಯೋಗ್ಯ ಕಾರಣವನ್ನು ತೋರಿಸದಿದ್ದರೆ, ಕೋರ್ಟಿನವರು ಅವನನ್ನು ಕೈದುಮಾಡಬೇಕು, ಮತ್ತು ದಿವಾಣಿ ತುರಂಗಕ್ಕೆ ಕಳುಹಿಸಬೇಕು. ಕೋರ್ಟಿನವರು **ಬ** ಇವನಿಗೆ ಕೈದುಮಾಡುವದಕ್ಕೆ ವಾರಂಟು ತೆಗೆದ ಬಳಿಕ ಅದರ ಅಮಲು ನಡೆಯಿಸಲಿಕ್ಕೆ ನೇಮಿಸಲ್ಪಟ್ಟ ಆಫೀಸರನು (ಬೇಲೀಫನು)ಅವನನ್ನು ಬಜಾಯಿಸತಕ್ಕದ್ದು. ಸದರೀ ವಾರಂಟನ್ನು ಬಜಾಯಿಸಲಿಕ್ಕೆ ಹೋದ ವೇಳೆಗೆ

**ಬ** ಇವನು ಕೋರ್ಟಿನ ಹುಕುಮಿನಂತೆ ತಾನು ಕೊಡತಕ್ಕ ಹಣವನ್ನು ಅವರ ಬಡ್ಡಿಯನ್ನು ತನ್ನ ಮೇಲೆ ಹೊರಿಸಲ್ಪಟ್ಟ ವೆಚ್ಚವನ್ನು (ಇದ್ದರೆ) ಕೊಟ್ಟರೆ, ಅದನ್ನು ಆ ಆಫೀಸರನು ವಸೂಲ ಮಾಡಬೇಕು. (ಅಂದರೆ ಬೇಲೀಫನು ವಸೂಲ ಮಾಡಬೇಕು) ಮತ್ತು ಆ ಮೇಲೆ ಆ ವಾರಂಟನ್ನು ಬಜಾಯಿಸಬಾರದು. ಅಂದರೆ ಕೈದು ಮಾಡುವ ವಾರಂಟನ್ನು ಬಜಾಯಿಸುವ ವೇಳೆಗೆ **ಬ** ಇವನು ಅದರಲ್ಲಿ ನಮೂದ ಇದ್ದ ಹಣವನ್ನು ಕೊಟ್ಟರೆ, ಅವನನ್ನು ಕೈದುಮಾಡಲಾಗದು. (ರೂ. ೩೮) ಆದರೆ **ಬ** ಇವನು ಹಣ ಕೊಡದಿದ್ದರೆ ಅವನನ್ನು ಕೈದುಮಾಡಬೇಕು. ಮತ್ತು ಅವನನ್ನು ಆದಷ್ಟು ಬೇಗ ಕೋರ್ಟಿನ ಮುಂದೆ ತರಬೇಕು. (ಕಲಮು ೫೫) ರೂ. ೩೭ ನೇ ಪ್ರಕಾರ ನೋಟಿಸನ್ನು ತೆಗೆಯದೆ ಮತ್ತು ಅದನ್ನು ಬಜಾಯಿಸಲ್ಪಡದೆ **ಬ** ಇವನನ್ನು ಕೈದುಮಾಡಿ ಕೋರ್ಟಿನ ಮುಂದೆ ತಂದರೆ, **ಬ** ಇವನು ತನ್ನ ಬಡತನದದಶೆಯಿಂದ ಅಥವಾ ಬೇರೆ ಯೋಗ್ಯಕಾರಣದದೆಸೆಯಿಂದ ಹುಕುಮುನಾಮೆಯ ರಕಮು ಕೊಡುವದಕ್ಕೆ ಅಗುವದಿಲ್ಲವೆಂದು ಕೋರ್ಟಿಗೆ ತೋರಿಸಬಹುದು. ಸದರೀ ಕಾರಣವನ್ನು ಯೋಗ್ಯವಿದೆಂದು ಕೋರ್ಟಿನವರ ಖಾತ್ರಿಯಾ ಸಮಾಧಾನವಾದಲ್ಲಿ ಅವರು **ಬ** ಇವನನ್ನು ಬಿಟ್ಟು ಬಿಡುವ ಹುಕುಮನ್ನು ಮಾಡಬೇಕು. ಆ ಕಾರಣವನ್ನು ಯೋಗ್ಯವಿರುವದಿಲ್ಲೆಂದು ಕೋರ್ಟಿನ ಖಾತ್ರಿಯಾ ಸಮಾಧಾನವಾದಲ್ಲಿ ಅವರು **ಬ** ಇವನನ್ನು ದಿವಾಣಿ ತುರಂಗಕ್ಕೆ ಕಳುಹಿಸುವದಕ್ಕೆ ಹುಕುಮು ಮಾಡಬೇಕು.

**ಬ** ಇವನನ್ನು ಆತಂಕಿಸಿಡುವ ತುರಂಗವು ದಿವಾಣಿ ತುರಂಗವಿರುವದು. ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಈ ಪ್ರಕಾರ ದಿವಾಣಿ ತುರಂಗದಲ್ಲಿ ಆತಂಕಿಸಿಡತಕ್ಕ ಪ್ರತಿಯೊಬ್ಬ ಮನುಷ್ಯನನ್ನು.

(ಅ) ಹುಕುಮುನಾಮೆಯ ರಕಮು ೫೦ ರುಪಾಯಿಗಿಂತ ಹೆಚ್ಚಾಗಿದ್ದರೆ ಆರುತಿಂಗಳ ಮುದ್ದತಿನವರೆಗೆ ಮತ್ತು

(ಬ) ಬೇರೆ ಯಾವದಾದರೂ ಬಾಬತಿನಲ್ಲಿ ಆರುವಾರಗಳ ಮುದ್ದತಿನ ವರೆಗೆ ಸದರೀ ಪ್ರಕಾರ ಅತಂಕಿಸಿಡಬೇಕು.

ಆದರೆ ವಿಧಿಸಲ್ಪಡುವದೇನೆಂದರೆ:—

(೧) ಅವನನ್ನು ಆತಂಕಿಸಿಡುವ ವಿಷಯದಲ್ಲಿ ವಾರಂಟಿನಲ್ಲಿ ಹೇಳಿದ ರಕಮನ್ನು ದಿವಾಣಿ ತುರಂಗದ ಮೇಲಿನ ಅಮಲದಾರನ ಕಡೆಗೆ ಕೊಟ್ಟ ಮೇಲೆ; ಅಥವಾ

(೨) ಬೇರೆ ರೀತಿಯಿಂದ ತನ್ನ ವಿರುದ್ಧ ಆದ ಹುಕುಮನಾಮೆಯ ಪೂರಾ ಭರಪಾಯಿಯನ್ನು ಮಾಡಿದ ಮೇಲೆ; ಅಥವಾ

(೩) ಯಾವ ಮನುಷ್ಯನ ಅರ್ಜಿಯ ಮೇಲಿಂದ ಅವನನ್ನು ಸವರೀಯಂತೆ ಆತಂಕಿಸಿಟ್ಟದ್ದೀತೋ ಆ ಮನುಷ್ಯನ ಹೇಳಿಕೆಯ ಮೇಲಿಂದ, ಅಥವಾ

(೪) ಪೋಷಣಿಯ (ಯಾ ಪೋಟಗಿಯ) ನೇಮಣೂಕಿನ ರಕಮನ್ನು ಯಾವ ಮನುಷ್ಯನ ಅರ್ಜಿಯ ಮೇಲಿಂದ ಅವನನ್ನು ಮೊದಲು ಹೇಳಿದ ಪ್ರಕಾರ ಆತಂಕಸಿಟ್ಟದ್ದಿತೋ ಆ ಮನುಷ್ಯನು ಕೊಡದೆ ಇದ್ದರೆ.

ಪ್ರಸಂಗಕ್ಕನುಸಾರವಾಗಿ ಸದರಿ ಆರುತಿಂಗಳ ಅಥವಾ ಆರುವಾರಗಳ ಮುದ್ದತು ಮೀರುವ ಪೂರ್ವದಲ್ಲಿ ಇಂಥ ಕೈದಿನೊಳಗಿಂದ ಅವನನ್ನು ಬಿಟ್ಟು ಬಿಡಬೇಕು. (ಕಲಮು ೫೮) ಮೇಲಿನ ಯಾವದಾದರೊಂದು ಕಾರಣದ ಮೂಲಕಾ ಫೈಸಲಿನ ಋಣಿಯನ್ನು ಬಿಟ್ಟು ಬಿಟ್ಟಲ್ಲಿ ಅದೇ ಹುಕುಮನಾಮೆಯ ಆಧಾರದಿಂದ ಅವನನ್ನು ಪುನಃ ಕೈದುಮಾಡಲಾಗದು. ಫೈಸಲಿನ ಋಣವು ಇನ್ನೂ ಕೊಡುವದಿದ್ದರೂ ಸಹಿತ ಪುನಃ ಅವನನ್ನು ಕೈದು ಮಾಡಲಾಗದು. ಆದರೆ ಇದರಿಂದ ಸದರಿ ಹಣಾ ಕೊಡುವ ಜವಾಬದಾರಿಯಿಂದ ಯಾ ಬದ್ಧತೆಯಿಂದ ಫೈಸಲಿನ ಋಣಿಯು ಮುಕ್ತವಾಗಿರುತ್ತಾನೆಂದು ತಿಳಿಯಲಾಗದು. ಈ ಕಾರಣದಿಂದ ಅವನು ಋಣಮುಕ್ತನಾಗುವದಿಲ್ಲ. ಆದರೆ ಫೈಸಲಿನ ಋಣಿಯಾದ, **ಬ** ಇವನ ಆಸ್ತಿಯ ಮೇಲೆ **ಅ** ಇವನು ಸದರಿ ಹುಕುಮನಾಮೆಯ ಅಮಲುಬಜಾವಣಿಯನ್ನು ನಡೆಯಿಸಬಹುದು. **ಹಣಕೊಡುವ ಹುಕುಮನಾಮೆಯ** ಬಜಾವಣಿಯಲ್ಲಿ ಯಾವಳಾದರು **ಹೆಂಗಸನ್ನು** ಕೈದುಮಾಡುವ ಬಗ್ಗೆ ಅಥವಾ ದಿವಾಣಿ ತುರಂಗದಲ್ಲಿ ಆತಂಕಿಸಿಡುವ ಬಗ್ಗೆ ಕೋರ್ಟಿನವರು ಹುಕುಮು ಮಾಡಬಾರದು. (ಕಲಮು ೫೬)

**ಹಣಕೊಡುವ ಹುಕುಮನಾಮೆಗಳ ಹೊರತು ಬೇರೆ ತರಹದ ಹುಕುಮನಾಮೆಗಳು—** ಹಣಕೊಡುವ ಹುಕುಮನಾಮೆಯ ಬಜಾವಣಿ

ಯಲ್ಲಿ ಮಾತ್ರ ಫೈಸಲಿನ ಋಣಿಗೆ ಕೈದುಮಾಡಿ ಆತಂಕಿಸಿಡುವದಕ್ಕೆ ಬರುತ್ತದೆ
ಹೀಗೇನೂ ಇಲ್ಲ; ಕೆಳಗೆ ಬರೆದ ಬೇರೆ ತರಹದ ಹುಕುಮನಾಮೆಯು ಬಜಾ
ವಣೆಯಲ್ಲಿ ಸಹಾ ಅವನಿಗೆ ಕೈದು ಮಾಡಿ ಆತಂಕಿಸಿಡಬಹುದು. ೧. ನಿರ್ದಿಷ್ಟ
ವಾದ ಜಂಗಮ ಸ್ವತ್ತಿನ ಬಗ್ಗೆ ೨. ನಿರ್ದಿಷ್ಟವಾದ ಕೃತ್ಯವನ್ನು ಮಾಡುವದ
ಕ್ಕೋಸ್ಕರ ೩. ದಾಂಪತ್ಯ ಸಂಬಂಧದ ಹಕ್ಕನ್ನು ಹಿಂದಕ್ಕೆ ಪಡೆಯುವದಕ್ಕೋ
ಸ್ಕರ ಅಥವಾ ೪. ತಾಕೀದಿಯಗೋಸ್ಕರ ಮಾಡಲ್ಪಟ್ಟ ಹುಕುಮನಾಮೆಯ
ಅಮಲುಬಜಾವಣೆಯಲ್ಲಿ ಸಹಾ ಫೈಸಲಿನ ಋಣಿಗೆ ಕೈದುಮಾಡಿ ತುರಂಗದಲ್ಲಿ
ಆತಂಕಿಸಿಡಬಹುದು. ಈ ಹುಕುಮನಾಮೆಯು ಅಮಲುಬಜಾವಣೆಗಾಗಿ ಅರ್ಜಿ
ಯನ್ನು ಯಾ ದರಖಾಸ್ತನ್ನು ಯೋಗ್ಯರೀತಿಯಿಂದ ಅಂದರೆ ಹಿಂದೆ ಹೇಳಿದ ನಿಯ
ಮಗಳಿಗೆ ಅನುಸರಿಸಿ ಕೊಟ್ಟದ್ದಲ್ಲಿ ಕೋರ್ಟಿನವರು ಫೈಸಲಿನ ಋಣಿಗೆ ಕೈದು
ಮಾಡುವದಕ್ಕೆ ವಾರಂಟನ್ನು ಕಳುಹಿಸಬಹುದು. ಈ ತರಹದ ಹುಕುಮನಾಮೆ
ಗಳ ಅಮಲುಬಜಾವಣೆಯಲ್ಲಿ ಕೈದು ಮಾಡುವದಕ್ಕೆ ವಾರಂಟನ್ನು ಕಳುಹಿಸುವ
ಪೂರ್ವದಲ್ಲಿ (ಆ. ೨೧, ರೂ. ೩೭ ಪ್ರಕಾರ.) ಕಾರಣ ತೋರಿಸುವ ನೋಟೀಸು
ಕಳುಹಿಸುವ ಕಾರಣವಿಲ್ಲ. ಸದರಿ ವಾರಂಟಿನ ಅಮಲುಬಜಾವಣೆಯಲ್ಲಿ ಫೈಸ
ಲಿನ ಋಣಿಗೆ ಕೈದು ಮಾಡಿದ್ದಲ್ಲಿ ಅವನನ್ನು ಆದಷ್ಟು ಬೇಗ ಕೋರ್ಟಿನ ಮುಂದೆ
ತರಬೇಕು. ಆ ಮೇಲೆ ಕೋರ್ಟಿನವರು ಅವನನ್ನು ದಿವಾಣಿ ತುರಂಗಕ್ಕೆ ಕಳು
ಹಿಸುವದಕ್ಕೆ ಹುಕುಮು ಮಾಡಬೇಕು; ಮೇಲೆ ಹೇಳಿದ ೫೮ನೇ ಕಲಮಿನಲ್ಲಿ
ತೋರಿಸಿದ ಯಾವದಾದರೊಂದು ಕಾರಣದ ಮೂಲಕಾ ದಿವಾಣಿ ತುರುಂಗದಿಂದ
ಫೈಸಲಿನ ಋಣಿಗೆ ಬಿಟ್ಟು ಬಿಡಬಹುದು; ಇಲ್ಲದಿದ್ದರೆ ಅವನನ್ನು ಮುದ್ದತು
ಮೀರುವವರೆಗೆ ಆ ತುರಂಗದಲ್ಲಿ ಆತಂಕಿಸಿಡಬಹುದು.

**ಫೈಸಲಿನ ಋಣಿಯ ಆಸ್ತಿಯ ಮೇಲೆ ಅಮಲು ಬಜಾವಣೆ
ಯು**—ಆಸ್ತಿಯ ಮೇಲೆ ಅಮಲುಬಜಾವಣೆಯನ್ನು ಮಾಡುವದೇನಂದರೆ, ಅದನ್ನು
೧. ಜಪ್ತಿ ಮಾಡುವದು ೨. ಮತ್ತು ಮಾರುವದು. ಅಥವಾ ಜಪ್ತಿಮಾಡದೆ ಮಾರು
ವದು. ಸದರಿ ಎರಡು ಸಂಗತಿಗಳನ್ನು ಬೇರೆ ಬೇರೆಯಾಗಿ ವಿವೇಚನ ಮಾಡೋಣ.
ಯಾವದಾದರೊಂದು ಆಸ್ತಿಯನ್ನು ಜಪ್ತುಮಾಡಬೇಕಾದರೆ ಅದನ್ನು ಮಾರುವ
ಪೂರ್ವದಲ್ಲಿ ಮಾಡತಕ್ಕದ್ದು. ಒತ್ತೆಯ ಹುಕುಮನಾಮೆಯು ಅಮಲುಬಜಾ

ವಣಿಯಲ್ಲಿ ಒತ್ತೆಯ ಆಸ್ತಿಯನ್ನು ಜಪ್ತಮಾಡಬೇಕಾಗುವದಿಲ್ಲ. ಅದನ್ನು ಹಾಗೆ ಮಾರುವರು, ಜಪ್ತಿ ಮಾಡುವದನ್ನು ಮತ್ತು ಮಾರಾಟ ಮಾಡುವದನ್ನು ಕೋರ್ಟ ನಿಂದ ಈ ಕೆಲಸಕ್ಕೆ ನೇಮಿಸಲ್ಪಟ್ಟ ಆಫೀಸರನ (ಅಂದರೆ ಬೇಲೀಫನ) ಕಡಿಂದ ಬಜಾಯಿಸಲ್ಪಡುವದು. ಹುಕುಮನಾಮೆಯ ಅಮಲುಬಜಾವಣಿಗಾಗಿ ಯೋಗ್ಯ ವಾದಂಥ ಅಂದರೆ ಹಿಂದೆ ಹೇಳಿದ ನಿಯಮುಗಳಿಗೆ ಅನುಸರಿಸಿ ಅರ್ಜಿಯನ್ನು ಯಾ ದರಖಾಸ್ತನ್ನು ಕೊಟ್ಟಿದೆಂದು ಕೋರ್ಟಿನವರು ಮನಗಂಡಲ್ಲಿ ಅವರು ಅಮಲು ಬಜಾವಣಿಗಾಗಿ ಹುಕುಮು ಮಾಡಬೇಕು. (ಆ, ೨೧. ರೂ. ೨೨) ಪ್ರಕಾರ ಕಾರಣ ತೋರಿಸುವ ನೋಟೀಸು ಕೊಡುವ ಅಗತ್ಯವಿದ್ದಲ್ಲಿ ಆ ಬಗ್ಗೆ ಹುಕುಮು ಮಾಡಬೇಕು. ಸದರೀ ಪ್ರಕಾರ ನೋಟಿಸ ಮಾಡಿದ್ದಲ್ಲಿ ನೋಟೀಸು ಕೊಡಲ್ಪಟ್ಟ ಮನುಷ್ಯನು ಹಾಜರಾಗದಿದ್ದರೆ, ಅಥವಾ ಹುಕುಮನಾಮೆಯ ಅಮಲುಬಜಾ ವಣಿಯನ್ನು ಯಾಕೆ ಮಾಡಬಾರದೆಂಬ ಬಗ್ಗೆ ಕೋರ್ಟಿನವರು ಮನಗಾಣುವಂಥ ಕಾರಣವನ್ನು ತೋರಿಸದಿದ್ದರೆ ಕೋರ್ಟಿನವರು ಅಮಲುಬಜಾವಣಿಯ ಹುಕುಮು ಮಾಡಬೇಕು. ಅಂಥ ಮನುಷ್ಯನು ಅಮಲುಬಜಾವಣಿಗೆ ಹರಕತ್ತು ಮಾಡಿದರೆ ಕೋರ್ಟಿನವರು ಆ ಹರಕತ್ತನ್ನು ವಿಚಾರಿಸಿ ತಮಗೆ ಯೋಗ್ಯವಾಗಿ ತೋರಿದಂಥ ಹುಕುಮು ಮಾಡಬೇಕು. (ಆ. ೨೧, ರೂ. ೨೩) ಫೈಸಲಿನ ಋಣಿಯ ಆಸ್ತಿ ಯನ್ನು ಜಪ್ತಮಾಡುವದಕ್ಕೆ ಕೋರ್ಟಿನವರು ಹುಕುಮು ಮಾಡುವರು. ಕಾರಣ ಮೊದಲು ಈ ಸಂಗತಿಯ ವಿವೇಚನೆ ಮಾಡೋಣ.

**ಜಪ್ತಿ ಮಾಡುವದು—** ಇದರ ವಿವೇಚನ ಮಾಡುವ ಪೂರ್ವದಲ್ಲಿ, ಹುಕುಮನಾಮೆಯ ಅಮಲುಬಜಾವಣಿಯಲ್ಲಿ ಕೆಲವು ಆಸ್ತಿಗಳು ಯಾ ಸ್ವತ್ತು ಜಪ್ತಿಯಾಗಲಿಕ್ಕೆ ಮತ್ತು ಮಾರಲ್ಪಡಲಿಕ್ಕೆ ಪಾತ್ರವಿಲ್ಲೆಂಬುದನ್ನು ಮತ್ತು ಅವು ಯಾವವೆಂಬುದನ್ನು ತಿಳಿದುಕೊಳ್ಳುವ ಆವಶ್ಯಕತೆಯಿದೆ. ಹುಕುಮನಾಮೆಯ ಅಮಲುಬಜಾವಣಿಯಲ್ಲಿ ಜಪ್ತಿಯಾಗಲಿಕ್ಕೆ ಪಾತ್ರವಾದ ಸ್ವತ್ತು. (ಕಲಮು ೬೦)

ಈ ಕೆಳಗೆ ವಿವರಿಸಿದ ಮಾಲು ಹುಕುಮನಾಮೆಯ ಅಮಲು ಬಜಾವಣಿ ಯಲ್ಲಿ ಜಪ್ತಿಯಾಗಿ ಮಾರಲ್ಪಡಲಿಕ್ಕೆ ಪಾತ್ರವಾಗಿರುತ್ತದೆ. ಯಾವದೆಂದರೆ--

ಭೂಮಿಗಳು, ಮನೆಗಳು ಯಾ ಬೇರೆ ಇಮಾರತುಗಳು, ಸರಕುಗಳು, ಹಣ, ಬ್ಯಾಂಕನೋಟುಗಳು, ಚೆಕ್ಕುಗಳು, ಬಿಲ್ಲ ಆಫ್ ಎಕ್ಸಚೇಂಜ ಹುಂಡಿಗಳು ಪ್ರಾಮಿ-

ಸರಿ ನೋಟುಗಳು, ಸರಕಾರಿ ಸಿಕ್ಯೂರಿಟಿಗಳು, ಹಣದ ಬಾಬತಿನ ಬಾಂಡುಗಳು ಅಥವಾ ಇತರ ದಸ್ತೈವಜುಗಳು, ಸಾಲಗಳು, ಯಾವದೊಂದು ಕಾರ್ಪೊರೇಶನೊಳಗಿನ ಶ್ಯಾರಗಳು ಮತ್ತು ಮುಂದೆ ಹೇಳಿದ್ದು ಹೊರತಾಗಿ ಫೈಸಲಿನ ಋಣಿಯು ಮಾಲಕಿಗೆ ಶೇರಿದಂಥಾದ್ದು, ಅಥವಾ ಅವನು ತನ್ನ ಹಿತಕ್ಕೋಸ್ಕರವಾಗಿ ನಡಿಸಬಹುದಾದ ಅವನ ವಿನಿಯೋಗಾಧಿಕಾರಕ್ಕೆ ಒಳಗಾಗುವಂಥಾದ್ದು ಅಥವಾ ಆ ವಿನಿಯೋಗಾಧಿಕಾರಕ್ಕೆ ಒಳಗಾದ ಆದಾಯವುಳ್ಳಂಥಾದ್ದು, ಆಗಿ ಮಾರಬಹುದಾದಂಥ ಬೇರೆ ಎಲ್ಲ ಬಗೆಯ ಮಾಲು, ಅದು ಸ್ಥಾವರ ಇದ್ದರೂ ಜಂಗಮವಿದ್ದರೂ ಅಡ್ಡಿಯಿಲ್ಲ, ಮತ್ತು ಅದನ್ನು ಫೈಸಲಿನ ಋಣಿಯು ತನ್ನ ಹೆಸರಿನಿಂದ ಧಾರಣ ಮಾಡುತ್ತಿದ್ದರೂ, ಅವನ ಹಿತಕ್ಕೋಸ್ಕರವಾಗಿ ಯಾ ಅವನ ಸಲುವಾಗಿ ಜಿಮ್ಮೆದಾರಿಯಿಂದ ಬೇರೊಬ್ಬ ಮನುಷ್ಯನು ಧಾರಣ ಮಾಡಿರುತ್ತಿದ್ದರೂ ಅಡ್ಡಿಯಿಲ್ಲ. ಸಾರಾಂಶ: ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಫೈಸಲಿನ ಋಣಿಯ ಮಾಲಕಗೆ ಸೇರಿದಂಥ ಮತ್ತು ಅವನು ಮಾರಬಹುದಾದಂಥ ಎಲ್ಲ ಬಗೆಯ ಮಾಲು ಅಥವಾ ಅವನು ತನ್ನ ಹಿತಕ್ಕೋಸ್ಕರವಾಗಿ ನಡಿಸಬಹುದಾದ ಅವನ ವಿನಿಯೋಗಾಧಿಕಾರಕ್ಕೆ ಒಳಗಾಗುವಂಥಾದ್ದು ಪ್ರತಿಯೊಂದು ಮಾಲು ಜಪ್ತಿಯಾಗಿ ಮಾರಲ್ಪಡಲಿಕ್ಕೆ ಪಾತ್ರವಿದೆ.

ಆದರೆ ವಿಧಿಸಲ್ಪಡುವದೇನಂದರೆ, ಕೆಳಗಿನ ತಪಶೀಲು ಕೊಟ್ಟವುಗಳು ಸದರಿಯಂತೆ ಜಪ್ತಿಗೆ ಅಥವಾ ಮಾರಾಟಕ್ಕೆ ಪಾತ್ರವಿಲ್ಲ. ಅವು ಯಾವವೆಂದರೆ—

(ಅ) ಫೈಸಲಿನ ಋಣಿಯು, ಅವನ ಹೆಂಡತಿಯು ಮತ್ತು ಅವನ ಮಕ್ಕಳ ಮೈಮೇಲಿನ ಅವಶ್ಯವಾದ ಹೊದಿಕೆಗಳು, ಅಡಿಗೆ ಪಾತ್ರೆಗಳು ಮತ್ತು ಹಾಸಿಗೆಗಳು, ಮತ್ತು ಧರ್ಮಸಂಬಂಧದ ವಹಿವಾಟಿಯ ಪ್ರಕಾರವಾದ ಆಭರಣಗಳನ್ನು ಯಾವಳಾದರೂ ಸ್ತ್ರೀಯು ಮೈಮೇಲಿಂದ ತೆಗೆಯಲಿಕ್ಕೆ ಆಗುವದಿಲ್ಲವೋ ಅಂಥ ಆಭರಣಗಳು.

(ಬ) ಕೈಗಾರಿಕೆಯ ಆಯುಧಗಳು ಮತ್ತು ಫೈಸಲಿನ ಋಣಿಯು ಒಕ್ಕಲತನದವನಾಗಿದ್ದರೆ ಅವನ ಹೊಲದ ಆಯುಧಗಳು ಮತ್ತು ಕೋರ್ಟಿನವರ ಅಭಿಪ್ರಾಯದಂತೆ ಅವನು ಒಕ್ಕಲಿಗನೆಂಬ ನಾತೆಯಿಂದ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ ಅವಶ್ಯವಾಗಿರುವಷ್ಟು ದನಗಳು ಮತ್ತು ಬೀಜದ ಧಾನ್ಯವು ಮತ್ತು ಹೊಲ

ಮನೆಯು ಉತ್ಪನ್ನದ ಅಥವಾ ಯಾವದಾದರೂ ವರ್ಗದ ಹೊಲಮನೆಯ ಉತ್ಪನ್ನದ ಯಾವ ಭಾಗವು ಜವಾಬದಾರಿಗೆ ಪಾತ್ರವಲ್ಲವೆಂದು ಈ ಲಗತ ಮುಂದಿನ ಕಲಮಿನನ್ವಯ ಠರಾಯಿಸಿದ್ದೀತೋ ಆ ಭಾಗವು;

(ಕ) ಒಕ್ಕಲಿಗನ ಮಾಲಕಿಯ ಮತ್ತು ಅವನ ಭೋಗವಟಿಯಲ್ಲಿ ಇರುವಂಥಾ ಮನೆಗಳು ಮತ್ತು ಇತರ ಇಮಾರತುಗಳು (ಅವುಗಳ ಸಾಮಾನು ಮತ್ತು ಸ್ಥಳಗಳನ್ನು ಮತ್ತು ಅವುಗಳಿಗೆ ಪ್ರತ್ಯಕ್ಷ ಅಂಗಭೂತವಾದ ಯಾವ ಭುಮಿಯು ಅವುಗಳ ಉಪಭೋಗದ ಬಗ್ಗೆ ಅವಶ್ಯವಾಗಿರುವದೋ ಆ ಭೂಮಿಯುನ್ನು ಹಿಡಿದು)

(ಡ) ಲೆಖ್ಖದ ವಹಿಗಳು

(ಇ) ಲುಕ್ಸಾನಿಗಾಗಿ ದಾವೆಯನ್ನು ಮಾಡುವ ಬಗ್ಗೆ ಬರೇ ಹಕ್ಕುಗಳು,

(ಫ) ಸ್ವತಃ ನೌಕರಿಮಾಡುವ ಯಾವದೊಂದು ಹಕ್ಕು

(ಗ) ಸರಕಾರದವರ ಪೆನಶನದಾರರಿಗೆ ಅಥವಾ ಗವರ್ನರ ಜನರಲ್ ಇನ್‌ಕೌನ್ಸಿಲರವರು, ಈ ಬಗ್ಗೆ ಇಂಡಿಯಾ ಗ್ಯಾಝಿಟನಲ್ಲಿ ಜಾಹೀರುಮಾಡಿದ ಯಾವದಾದರೂ ಸರ್ವಿಸ ಫ್ಯಾಮಿಲಿ ಪೆನಶನ ಫಂಡಿನೊಳಗಿಂದ ಸಲ್ಲುವ ನೇಮಣೂಕಗಳು, ಗ್ರಾಜ್ಯುಯೇಟುಗಳು, ಮತ್ತು ಪೊಲಿಟಿಕಲ್ ಪೆನಶನಗಳು.

(ಹ) ನೌಕರಿಯ ಮೇಲಿಂದ ಗೈರಹಾಜರಿದ್ದ ಮುದ್ದತಿನಲ್ಲಿ ಯಾವನೊಬ್ಬ ಸರಕಾರೀ ಅಮಲದಾರನ, ಯಾ ರೇಲ್ವೆ ಕಂಪನಿಯ ಅಥವಾ ಸ್ಥಾನಿಕ ಅಧಿಕಾರಿಯು ಯಾವನಾದರೂ ನೌಕರನ (ಸಂಬಳಕ್ಕಿಂತ ಕಡಿಮೆ ಇರುವ) ನೇಮಣೂಕಗಳು

(ಆಯ್) ಮೆಲ್ಕಂಡ (ಹ) ರಕಮಿನಲ್ಲಿ ಹೇಳಿದಂಥ ಯಾವನಾದರು ಸರಕಾರಿ ಅಮಲದಾರನು ಯಾ ನೌಕರನು ಕೆಲಸದ ಮೇಲಿದ್ದಾಗ್ಗೆ ಕೆಳಗಿನ ಮರ್ಯಾದೆಯವರೆಗೆ ಸಂಬಳವು ಅಥವಾ ಸಂಬಳದಷ್ಟೇ ನೇಮಣೂಕು–

(ಅ) ತಿಂಗಳಿಗೆ ನಾಲ್ವತ್ತು ರೂಪಾಯಿಗಿಂತ ಹೆಚ್ಚಾಗಿಲ್ಲದಿದ್ದಲ್ಲಿ ಆ ಇಡೀ ರಕಮಿನವರೆಗೆ,

(ಬ) ತಿಂಗಳಿಗೆ ನಾಲ್ವತ್ತು ರೂಪಾಯಿಗಿಂತ ಹೆಚ್ಚಾಗಿದ್ದು ಎಂಬತ್ತು ರೂಪಾಯಿಗಿಂತ ಹೆಚ್ಚಿಗೆ ಇಲ್ಲದಿದ್ದಾಗ್ಗೆ ತಿಂಗಳಿಗೆ ನಾಲ್ವತ್ತು ರೂಪಾಯಿವರೆಗೆ ಮತ್ತು

(ಕ) ಬೇರೆ ಯಾವದಾದರೂ ಸಂಗತಿಯಲ್ಲಿ ಸಂಬಳದ ಅರ್ಧ ರಕಮಿನ ವರೆಗೆ

(ಖ) ಹಿಂದುಸ್ಥಾನದ ಆರ್ಟಿಕಲ ಆಫ ವಾರ ಎಂಬ ನಿಯಮಗಳಿಗೆ ಒಳಗಾದಂಥ ಮನುಷ್ಯರ ಸಂಬಳವು ಮತ್ತು ನೇಮಣೂಕಗಳು.

(ಕೆ) ಯಾವ ಫಂಡಿಗೆ ಸನ್ ೧೮೯೭ನೇ ಇಸವಿಯ ಪ್ರಾವಿಡಂಟ ಫಂಡುಗಳ ವಿಷಯದ ಆಕ್ಟು ಆಯಾ ಕಾಲದಲ್ಲಿ ಆಗ್ಗೆ ಇದ್ದೀತೋ ಆ ಫಂಡನೊಳಗಿನ ಅಥವಾ ಅವರೊಳಗಿಂದ ಸಿಕ್ಕ ಎಲ್ಲ ಅವಶ್ಯಕ ಠೇವುಗಳು ಮತ್ತು ಇತರ ರಕಮುಗಳು, ಅವು ಎಷ್ಟರ ಮಟ್ಟಿಗೆ ಜಪ್ತಿಗೆ ಪಾತ್ರವಿಲ್ಲವೆಂದು ಸದರೀ ಆಕ್ಟಿನಲ್ಲಿ ಠರಾಯಿಸಿದ್ದಿತೋ ಅಷ್ಟರ ಮಟ್ಟಿಗೆ.

(ಲ) ಕೂಲಿಕಾರರ ಕೂಲಿಯೂ ಮನೆಯ ಕೆಲಸದ ನೌಕರರ ಸಂಬಳವೂ, ಹಣದ ರೂಪದಿಂದ ಕೊಡತಕ್ಕದ್ದಾಗಿರಲಿ ಇತರ ರೀತಿಯಾಗಿ ಕೊಡತಕ್ಕದ್ದಾಗಿರಲಿ.

(ಮ) ಹಿಂದೆ ಬದುಕಿದ ಪಕ್ಷದಲ್ಲಿ ಉಂಟಾಗತಕ್ಕ ಉತ್ತರಾಧಿಕಾರವು, ಅಥವಾ ಬೇರೆ ಕೇವಲ ಆಕಸ್ಮಿಕವಾದ ಯಾ ಸಂಭಾವ್ಯವಾದ ಹಕ್ಕು ಯಾ ಸ್ವಾರ್ಥ ಸಂಬಂಧವು.

(ನ) ಮುಂದೆ ಬರತಕ್ಕಂಥಾ ಪೋಷಣೆಯ ಹಕ್ಕು.

(ಓ) ಸನ್ ೧೮೬೧ನೇ ಇಸವಿಯ ಅಥವಾ ಸನ್ ೧೮೯೨ನೇ ಇಸವಿಯ ಹಿಂದುಸ್ಥಾನದ ಕಾಯದೆ ಕೌನ್ಸಿಲುಗಳ ಆಕ್ಟುಗಳನ್ವಯ ಮಾಡಿದ ಯಾವದಾದರೂ ಕಾಯದೆಯ ಮೇಲಿಂದ ಹುಕುಮನಾಮೆಯ ಬಜಾವಣಿಯಲ್ಲಿ ಜಪ್ತಿಗೆ ಅಥವಾ ಮಾರಲಿಕ್ಕೆ ಪಾತ್ರವಿಲ್ಲವೆಂದು ಠರಾಯಿಸಿದ ಯಾವದಾದರೂ ನೇಮಣೂಕ, ಮತ್ತು.

(ಪ) ಫೈಸಲಿನ ಋಣಿಯು ಭೂಮಿಯ ಮಹಸೂಲು ಕೊಡಲಿಕ್ಕೆ ಪಾತ್ರವಾಗಿದ್ದಲ್ಲಿ, ಇಂಥ ಮಹಸೂಲಿನ ಬಾಕಿಯನ್ನು ವಸೂಲು ಮಾಡುವದರ ಸಲುವಾಗಿ ಯಾವ ಜಂಗಮ ಸ್ವತ್ತು ಆ ಋಣಿಗೆ ಆಯಾ ಕಾಲದಲ್ಲಿ ಲಾಗೂ ಇರುವ ಯಾವದಾದರೂ ಕಾಯದೆಯ ಮೇಲಿಂದ ಮಾಡಲ್ಪಡಲಿಕ್ಕೆ ಪಾತ್ರವಿಲ್ಲವೆಂದು ಠರಾಯಿಸಿದ್ದೀತೋ ಆ ಜಂಗಮ ಸ್ವತ್ತು.

**ವಿವರಣೆ:—** (೧) (ಗ), (ಹ) (ಆಯ್) (ಜೆ) (ಲ) ಮತ್ತು (ಓ) ಈ ರಕಮಗಳಲ್ಲಿ ಹೇಳಿದ ಪ್ರಸಕ್ತಿಗಳು ಅವುಗಳನ್ನು ಪ್ರತ್ಯಕ್ಷವಾಗಿ ಕೊಡತಕ್ಕದ್ದಾಗುವ ಪೂರ್ವದಲ್ಲಿ ಯಾ ಆದ ಆನಂತರ ಜಪ್ತಿಗೆ ಮತ್ತು ಮಾರಾಟಕ್ಕೆ ಪಾತ್ರವಾಗಲಿಕ್ಕಿಲ್ಲ.

(೨) ಈ ಕಲಮಿನೊಳಗಿನ ಯಾವದೊಂದು ಸಂಗತಿಯ ಮೇಲಿಂದ:— ಮನೆಗಳು ಮತ್ತು ಬೇರೆ ಇಮಾರತುಗಳು (ವಗೈರೆ) ಇಂಥ ಯಾವದಾದರೂ ಮನೆಯ, ಇಮಾರತಿನ ಬಾಡಿಗೆಗಾಗಿ ಮಾಡಲ್ಪಟ್ಟ ಹುಕುಮನಾಮೆಯು ಅಮಲು ಬಜಾವಣೆಯಲ್ಲಿ ಜಪ್ತಿಯಿಂದ ಯಾ ಮಾರಲ್ಪಡುವದರಿಂದ ಮಾಫ ಮಾಡಲ್ಪಟ್ಟಿರುತ್ತವೆ ಎಂದು ಎಣಿಸಬಾರದು.

ಸ್ಥಾನಿಕ ಸರಕಾರದವರು ಹೊಲದ ಉತ್ಪನ್ನಕ್ಕೆ ಅಂಶತಃ ಜಪ್ತಿಯಿಂದ ಮಾಫಿಯು ಮಾಡಬಹುದು. (ಕಲಮು ೬೧) ಫೈಸಲಿನ ಋಣಿಯ ಮಾಲಕಿಗೆ ಸೇರಿದಂಥಾದ್ದು ಜಪ್ತಿಯಾಗಿರಲಿಕ್ಕೆ ಪಾತ್ರವಿದ್ದಂಥಾದ್ದು ಆಸ್ತಿಯು (೧)ಜಂಗಮ ಅಥವಾ (೨) ಸ್ಥಾವರ ಆಸ್ತಿಯು ಇರುವದು. ಅಂದರೆ ಆಸ್ತಿಯಲ್ಲಿ ಜಂಗಮ ಆಸ್ತಿಯು ಮತ್ತು ಸ್ಥಾವರ ಆಸ್ತಿಯು ಎಂಬ ಎರಡು ಭೇದಗಳು ಮಾಡಿರುತ್ತವೆ.

**ಜಂಗಮ ಆಸ್ತಿಯ ಜಪ್ತಿಯು:—** ಇದರಲ್ಲಿ ಜಂಗಮ ಆಸ್ತಿಗಳು ಜಪ್ತು ಮಾಡುವವರಲ್ಲಿ ಆ ಆಸ್ತಿಗಳ ಪ್ರಕಾರದಂತೆ ಬೇರೆ ಬೇರೆ ಕ್ರಮಗಳುಂಟು. ಯಾವ ಮಾಲು ಜಪ್ತುಮಾಡುವದ್ದಾಗಿದ್ದೀತೋ ಆ ಮಾಲು ಪ್ರತ್ಯಕ್ಷವಾಗಿ ಹಿಡಿಯಲ್ಪಟ್ಟು ಜಪ್ತಿಮಾಡುವ ಅಮಲದಾರನು ಅದನ್ನು ತನ್ನ ಸ್ವಂತ ಕಾವಲಿನಲ್ಲಿ ಇಟ್ಟುಕೊಳ್ಳಬೇಕು.

ಫೈಸಲಿನ ಋಣಿಯ ವಶದಲ್ಲಿದ್ದ ಹೊಲದ ಉತ್ಪನ್ನದ ಹೊರತು ಬೇರೆ ಜಂಗಮ ಮಾಲು ಜಪ್ತಿಮಾಡುವ ಕ್ರಮವು ರೂ. ೪೩ ನೇದ್ದಲ್ಲಿ, ಹೊಲದ ಉತ್ಪನ್ನ ಜಪ್ತಿಮಾಡುವ ಕ್ರಮವು ರೂ. ೪೪; ಮತ್ತು ೪೫ ನೇದ್ದರಲ್ಲಿ; ಸಾಲ, ಶ್ಯಾರು ಮತ್ತು ಫೈಸಲಿನ ಋಣಿಯ ವಶದಲ್ಲಿ ಇರದಂಥ ಇತರ ಸ್ವತ್ತನ್ನು ಜಪ್ತಿ ಮಾಡುವ ಕ್ರಮವು ರೂ. ೪೬ ನೇದ್ದರಲ್ಲಿ. ಜಂಗಮ ಆಸ್ತಿಯ ಭಾಗದ ಜಪ್ತಿಯ ಕ್ರಮವು ರೂ. ೪೭ ನೇದ್ದರಲ್ಲಿ; ಸರಕಾರಿ ನೌಕರನ ಅಥವಾ ರೆಲವೆ ಕಂಪನಿಯ ಅಥವಾ ಸ್ಥಾನಿಕ ಅಧಿಕಾರಿಯ ನೌಕರನ ಸಂಬಳವನ್ನು ಅಥವಾ ನೇಮಣೂಕನ್ನು

ಜಪ್ತಿಮಾಡುವ ಕ್ರಮವು. ರೂ ೪೮ನೇದ್ದರಲ್ಲಿ, ಭಾಗಿದಾರಿಯ ಆಸ್ತಿಯ ಜಪ್ತಿ ಮಾಡುವ ಕ್ರಮವು ರೂ. ೪೯ನೇದ್ದರಲ್ಲಿ; ನಡೆಯಿಸಬಹುದಾದಂಥ ದಸ್ತೈವಜುಗಳ ಜಪ್ತಿಯ ಕ್ರಮವು ರೂ. ೫೧ನೇದ್ದರಲ್ಲಿ, ಕೋರ್ಟಿನ ಅಥವಾ ಸರಕಾರೀ ಅಮಲದಾರನ ಕಾವಲಿನಲ್ಲಿ ಇರುವ ಮಾಲು ಜಪ್ತಿಮಾಡುವ ಕ್ರಮವು ರೂ. ೫೨ನೇದ್ದರಲ್ಲಿ, ಮತ್ತು ಹುಕುಮನಾಮೆಗಳ ಜಪ್ತಿಮಾಡುವ ಕ್ರಮವು ರೂ. ೫೩ನೇದ್ದರಲ್ಲಿ ಕೊಟ್ಟಿರುತ್ತವೆ.

**ಸ್ಥಾವರ ಆಸ್ತಿಯ ಜಪ್ತಿಮಾಡುವ ಕ್ರಮವು:**— ಜಪ್ತು ಮಾಡತಕ್ಕ ಆಸ್ತಿಯು ಸ್ಥಾವರ ಮಾಲಾಗಿದ್ದರೆ, ಅದನ್ನು ಯಾವದೊಂದು ಬಗೆಯಿಂದ ಮತ್ತೊಬ್ಬನ ಹೆಸರಿನಲ್ಲಿ ಮಾಡಿಕೊಡಲಿಕ್ಕೂ ಅದರಮೇಲೆ ಹಣದ ಜಬಾಬದಾರಿಯನ್ನು ಏರಿಸಲಿಕ್ಕೂ ಫೈಸಲಿನ ಋಣಿಗೆ ಮತ್ತು ಈ ಪ್ರಕಾರ ಮತ್ತೊಬ್ಬನ ಹೆಸರಲ್ಲಿ ಮಾಡಿಕೊಟ್ಟದ್ದರ ಅಥವಾ ಜಬಾಬದಾರಿಯನ್ನು ಏರಿಸಿದ್ದರ ಫಾಯದೆಯನ್ನು ಯಾವದಾದರೂ ಬಗೆಯಿಂದ ತೆಗೆದುಕೊಳ್ಳಲಿಕ್ಕೆ ಎಲ್ಲಾ ಜನರಿಗೆ ಹರಕತು ಮಾಡುವಂಥ ಹುಕುಮಿನಿಂದ ಜಪ್ತಿಯು ಮಾಡಲ್ಪಡಬೇಕು. ಜಪ್ತಿ ಮಾಡತಕ್ಕ ಮಾಲಿನಮೇಲೆ ಅಥವಾ ಅದರ ನೆರೆಹೊರೆಯಲ್ಲಿದ್ದ ಯಾವದೊಂದು ಸ್ಥಳದಲ್ಲಿ ಡಂಗರನ್ನು ಹೊಡಿಯುವದರಿಂದ ಯಾ ಬೇರೊಂದು ವಹಿವಾಟಿನ ರೀತಿಯಿಂದ ಸದರೀ ಹುಕುಮು ಜಾಹೀರು ಮಾಡಬೇಕು; ಮತ್ತು ಆ ಹುಕುಮಿನ ಒಂದು ನಕಲನ್ನು ಆ ಮಾಲಿನಲ್ಲಿ ಬಹಿರಂಗವಾದ ಒಂದು ಸ್ಥಳದಲ್ಲಿ ಮತ್ತು ಆಮೇಲೆ ಕೋರ್ಟಿನ ಇಮಾರತಿನ ಬಹಿರಂಗವಾದ ಭಾಗದಲ್ಲಿ ಹಚ್ಚಬೇಕು; ಮತ್ತು ಆ ಮಾಲು ಸರಕಾರಕ್ಕೆ ತೆರಿಗೆ ಸಲ್ಲುವಂಥ ಭೂಮಿಯಾಗಿದ್ದಲ್ಲಿ ಅದು ಇರುವ ಜಿಲ್ಲೆಯ ಕಲೆಕ್ಟರನ ಆಫೀಸಿನಲ್ಲಿ ಸಹ ಹಚ್ಚಬೇಕು.

**ಜಪ್ತಿಯಾದ ಬಳಿಕ ಖಾಸಗಿ ರೀತಿಯಿಂದ ಮಾಲನ್ನು ಪರಾಧೀನ ಮಾಡಿದ್ದಲ್ಲಿ ಅದರ ಪರಿಣಾಮವೇನಾಗುವದು?**—ಜಪ್ತಿಯನ್ನು ಮಾಡಲ್ಪಟ್ಟಲ್ಲಿ, ಜಪ್ತಿಯು ಜಾರಿ ಇರಲಾಗಿ ಜಪ್ತುಮಾಡಿದ ಮಾಲನ್ನು ಅಥವಾ ಅದರೊಳಗಿನ ಯಾವದಾದರೂ ಹಿತಸಂಬಂಧವನ್ನು ಖಾಸಗಿ ರೀತಿಯಿಂದ ಪರಾಧೀನ ಪಡಿಸುವದು ಅಥವಾ ಒಪ್ಪಿಸಿಕೊಡುವದು ಮತ್ತು ಫೈಸಲಿನ ಋಣಿಗೆ ಯಾವದೊಂದು ಸಾಲವನ್ನು ಡಿವಿಡೆಂಟನ್ನು ಅಥವಾ ಇತರ ಹಣ

ವನ್ನು ಅಂಥ ಜಪ್ತಿಗೆ ವಿರುದ್ಧವಾಗಿ ಮುಟ್ಟಿಸುವದು, ಇವೆಲ್ಲಾ ಜಪ್ತಿಯ ಆಧಾರ ನಡೆಯಿಸಬಹುದಾದ ಯಾವತ್ತು ಹಕ್ಕುಗಳಿಗೆ ವಿರುದ್ಧವಾಗಿರುವ ಮಟ್ಟಿಗೆ ನಿರರ್ಥಕವಾಗಿರುವವು. (ಕಲಮು ೬೪) ಸಾರಾಂಶ ಜಪ್ತಿಯಾದಬಳಿಕ ಖಾಸಗಿ ರೀತಿಯಿಂದ ಜಪ್ತಾದ ಮಾಲನ್ನು ಪರಾಧೀನ ಮಾಡುವದು ನಿರರ್ಥಕವು.

ಹುಕುಮನಾಮೆಯ ಅಮಲುಬಜಾವಣಿಯಲ್ಲಿ ಜಪ್ತಿಯಾದಂಥ ಯಾವದೊಂದು ಮಾಲು ಹಾಗೆ ಜಪ್ತಿಯಾಗತಕ್ಕದಲ್ಲವೆಂಬ ಆಧಾರದಿಂದ ಅದಕ್ಕೆ ಯಾರಾದರೂ ಹಕ್ಕು ತೋರಿಸಿದರೆ ಯಾ ಜಪ್ತಿಗೆ ಹರಕತ್ತು ಮಾಡಿದರೆ ಕೋರ್ಟಿನವರು ಆ ಹಕ್ಕಿನ ಯಾ ಹರಕತಿನ ಚೌಕಶಿಯನ್ನು ನಡೆಯಿಸಬೇಕು. **ಹುಕುಮನಾಮೆಗೆ ಪಕ್ಷಕಾರ ಇಲ್ಲದಂಥವನ** ಜಪ್ತಿಯಾದ ಮಾಲಿಗೆ ತೋರಿಸಲ್ಪಡುವ ಬಾಧ್ಯತೆಯನ್ನು ಜಪ್ತಿಯ ಹರಕತನ್ನು ಇದರಲ್ಲಿ ವಿಚಾರಿಸಬಹುದು (ಆ. ೨೧, ರೂ. ೫೮.) ಸದರೀ ಹಕ್ಕುದಾರನಾಗಲೀ ಹರಕತದಾರನಾಗಲೀ ಸದರೀ ಮಾಲು ಜಪ್ತಿಯಾದ ದಿವಸ ಅವರಲ್ಲಿ ತನ್ನ ಸ್ವಾರ್ಥಸಂಬಂಧವಿತ್ತೆಂದಾಗಲೀ ಅದು ತನ್ನ ಕಬಜೆಯಲ್ಲಿತ್ತೆಂದಾಗಲೀ ತೋರಿಸುವದಕ್ಕೋಸ್ಕರ ಪುರಾವೆಯನ್ನು ಹಾಜರು ಮಾಡಬೇಕು. ಕೋರ್ಟಿನವರು ಇದರ ವಿಚಾರಮಾಡಿ ಸದರಿ ಆಸ್ತಿಯನ್ನು ಜಪ್ತಿಯಿಂದ ಖುಲಾಸೆ ಮಾಡುವರು, ಯಾ ಜಪ್ತಿಯಮಾಲಿಗೆ ಹೇಳಿದ ಹಕ್ಕುನಾಕಾರಿಸುವರು. ಯಾವದೊಂದು ಹಕ್ಕು ಅಥವಾ ಹರಕತು ಮಾಡಲ್ಪಟ್ಟಿದ್ದರೆ ಯಾವ ಮನುಷ್ಯನ ವಿರುದ್ಧವಾಗಿ ಹುಕುಮು ಮಾಡಲ್ಪಡುವದೋ ಅವನು ತಕರಾರಿನ ಮಾಲಿಗೆ ತನ್ನ ಹಕ್ಕು ಸಾಬೀತು ಮಾಡುವದಕ್ಕೋಸ್ಕರ ದಾವೆಯನ್ನು ಮಾಡಬಹುದು; ಆದರೆ ಅಂಥಾ ದಾವೆಯ ನಿರ್ಣಯ ಕ್ಕೊಳಗಾಗಿ ಸದರೀ ಹುಕುಮು ನಿರ್ಣಾಯಕವಾಗಿರುವದು. (ರೂ. ೬೩) ಇಂಥ ದಾವೆಯು ಹುಕುಮಾದ ಒಂದು ವರ್ಷದಲ್ಲಿ ಮಾಡಬೇಕು. ಸದರಿ ನಿಯಮಗಳು ಹುಕುಮನಾಮೆಯಲ್ಲಿ ಪಕ್ಷಕಾರರಿಲ್ಲದಂಥವರಿಗೆ ಲಾಗೂ ಆಗುವವು.

**ಹುಕುಮನಾಮೆಯಲ್ಲಿ ಪಕ್ಷಕಾರರಿದ್ದವರ ತಕರಾರು**— ಹುಕುಮನಾಮೆಯ ಅಮಲುಬಜಾವಣಿಯನ್ನು ಮಾಡುವ ಕೋರ್ಟಿನವರು, ಆ ದಾವೆಯ ಪಕ್ಷಕಾರರ ಯಾ ಅವರ ಪ್ರತಿನಿಧಿಗಳ ನಡುವೆ ಹುಟ್ಟಿದ ಮತ್ತು ಹುಕುಮನಾಮೆಯ ಅಮಲುಬಜಾವಣಿಗೆ, ಯಾ ಬಿಟ್ಟುಕೊಡುವದಕ್ಕೆ,

ಅಥವಾ ಭರಪಾಯಿಯನ್ನು ಮಾಡಿಕೊಡುವದಕ್ಕೆ ಸಂಬಂಧವು ಎಲ್ಲ ತಕರಾರುಗಳ ನಿರ್ಣಯಿಸಲ್ಪಡಬೇಕು. ಬೇರೆ ದಾವೆಯಿಂದ ಅವುಗಳನ್ನು ನಿರ್ಣಯಿಸಲಾಗದು. (ಕಲಮು ೪೭) ಈ ಕಲಮಿನ ಪ್ರಕಾರ ಪಕ್ಷಕಾರನೊಳಗಿನ ತಕರಾರಿನ ವಿಚಾರವಾಗುವದು. ಈ ಪ್ರಸಕ್ತಿಯಲ್ಲಿ ಬೇರೆ ದಾವೆಯನ್ನು ಮಾಡಲಿಕ್ಕೆ ಅವಕಾಶವಿಲ್ಲ.

ಯಾವಾಗ್ಗೆ—

(೧) ವೆಚ್ಚಸಹಿತವಾಗಿ ಹುಕುಮನಾಮೆಯ ಹಣವು ಕೋರ್ಟಿನಲ್ಲಿ ಭರಣಾ ಮಾಡಲ್ಪಟ್ಟಿರುವದೋ ಅಥವಾ

(೨) ಕೋರ್ಟಿನ ಮುಖಾಂತರವಾಗಿ ಬೇರೊಂದು ಬಗೆಯಿಂದ ಹುಕುಮನಾಮೆಯ ಅಮಲು ಪೂರಾ ಮಾಡಲ್ಪಟ್ಟವದೋ.

(೩) ಹುಕುಮನಾಮೆಯು ರದ್ದು ಮಾಡಲ್ಪಟ್ಟರುವದೋ ಯಾ ತಿರುಗಿಸಲ್ಪಟ್ಟಿರುವದೋ.

ಆಗ್ಗೆ ಜಪ್ತಿಯು ಎಬ್ಬಿಸಲ್ಪಟ್ಟದೆ ಎಂದು ತಿಳಿಯಬೇಕು. ಮತ್ತು ಪಕ್ಷಕಾರನು ಹಾಗೆ ಅಪೇಕ್ಷಿಸಿದರೆ ಅವನ ಖರ್ಚಿನಿಂದ ಅದನ್ನು ಹಾಗೆ ಜಾಹೀರು ಮಾಡಬಹುದು. ಮೇಲಿನಂತೆ ಜಪ್ತಿಯು ಎಬ್ಬಿಸಲ್ಪಟ್ಟದೆ ಇದ್ದರೆ ಕೋರ್ಟಿನವರು ಜಪ್ತಾದ ಮಾಲಿನ ಮಾರಾಟಕ್ಕೆ ಹುಕುಮು ಮಾಡಬೇಕು. (ರೂ. ೬೪) ಹುಕುಮನಾಮೆಯ ಅಮಲು ಬಜಾವಣೆಯಲ್ಲಿ ನಾಣ್ಯಗಳನ್ನಾಗಲೀ ಚಲನಿ ನೋಟುಗಳನ್ನಾಗಲೀ ಜಪ್ತಿಮಾಡಲ್ಪಟ್ಟಲ್ಲಿ ಅವುಗಳನ್ನು ಪಡಕೊಳ್ಳಲಿಕ್ಕೆ ಹಕ್ಕುಳ್ಳ ಪಕ್ಷಕಾರನಿಗೆ ಅವುಗಳನ್ನು ಕೊಡಲಿಕ್ಕೆ ಹುಕುಮು ಮಾಡಬೇಕು. (ರೂ. ೫೬) ಅಂದರೆ ಅವುಗಳ ಮಾರಾಟ ಮಾಡುವ ಅಗತ್ಯವಿಲ್ಲ.

**ಜಪ್ತಿಯು ಮುಗಿಯೋಣ** —ಯಾವದಾದರೂ ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಜಪ್ತಿ ಮಾಡಲ್ಪಟ್ಟದ್ದು, ಹುಕುಮನಾಮೆ ಧಾರಣ ಮಾಡಿದವನ ತಪ್ಪಿನ ಮೂಲಕವಾಗಿ ದರಖಾಸ್ತನ್ನು ಕೋರ್ಟಿನವರು ಮುಂದರಿಸಿ ನಡೆಯಿಸಲಿಕ್ಕೆ ಅಸಮರ್ಥರಾಗಿರುವದಲ್ಲಿ ಅವರು ಸದರೀ ದರಖಾಸ್ತನ್ನು ತೆಗೆದು ಹಾಕಬೇಕು, ಅಥವಾ ಯಾವದಾದರೂ ಸಾಕಷ್ಟು ಕಾರಣದ ಬಗ್ಗೆ ಸದರೀ ಪ್ರಕರಣವನ್ನು ಮುಂದಿನ ಯಾವದೊಂದು ತಾರೀಖಿಗೆ ಮುಂದರಿಸಿ ಹಾಕಬೇಕು.

ಅಂಥ ದರಖಾಸ್ತು ಯಾ ಹುಕುಮನಾಮೆಯು ಅಮಲುಬಜಾವಣಿಯ ಅರ್ಜಿಯು ತೆಗೆದು ಹಾಕಲ್ಪಡಲಾಗಿ ಆ ಜಪ್ತಿಯು ನಿಂತು ಹೋಗತಕ್ಕದ್ದು. (ರೂ. ೫೭) ಅಂದರೆ ದರಖಾಸ್ತನ್ನು ತೆಗೆದು ಹಾಕಿದ ಕೂಡಲೇ ಅದರಲ್ಲಿ ಆದ ಜಪ್ತಿಯು ಮುಗಿಯುತ್ತದೆ ಮತ್ತು ಹೊಸ ದರಖಾಸ್ತನ್ನು ಕೊಟ್ಟ ಪಕ್ಷಕ್ಕೆ ಆ ಆಸ್ತಿಯನ್ನು ಪುನಃ ಹೊಸದಾಗಿ ಜಪ್ತು ಮಾಡಬೇಕಾಗುವದು.

**ಸಾಧಾರಣವಾಗಿ ಮಾರಾಟವು** — ಯಾವದೊಂದು ಜಪ್ತಾದ ಜಂಗಮ ಮಾಲು ಸ್ವಾಭಾವಿಕವಾಗಿ ಬೇಗ ಕೆಡುವಂಥಾದ್ದಾಗಿದಲ್ಲಿ ಅಥವಾ ಅದನ್ನು ಬಂದೋಬಸ್ತಿನಲ್ಲಿ ಇಡುವ ವೆಚ್ಚವು ಅದರ ಬೆಲೆಗಿಂತ ಹೆಚ್ಚಾಗುವ ಹಾಗಿದ್ದಲ್ಲಿ ಅದನ್ನು ತಾತ್ಕಾಲವೇ ಮಾರಬಹುದು. (ರೂ. ೪೩) ಪ್ರತಿಯೊಂದು ಮಾರಾಟದ ಕೆಲಸವನ್ನು ಅದರ ಅಮಲುಬಜಾವಣಿಯನ್ನು ಕೋರ್ಟಿನಿಂದ ಆ ಕೆಲಸಕ್ಕೆ ನೇಮಿಸಲ್ಪಟ್ಟ ಅಮಲದಾರ ಮುಖಾಂತರವಾಗಿ ಆಗಬೇಕು. ಅಂದರೆ ಹುಕುಮನಾಮೆಗಳ ಅಮಲುಬಜಾವಣಿಯಲ್ಲಿ ಮಾಡತಕ್ಕ ಪ್ರತಿಯೊಂದು ಮಾರಾಟವನ್ನು ಯಾ ವಿಕ್ರಯವನ್ನು ಕೋರ್ಟಿನ ಅಮಲದಾರನು ನಡೆಯಿಸಬೇಕು. (ರೂ. ೬೫) ಸದರೀ ವಿಕ್ರಯವು ಜಾಹೀರು ಲಿಲಾವಿನಿಂದ ಮಾಡಬೇಕು.

ಸ್ಥಾವರ ಮಾಲು ಯಾ ಜಂಗಮ ಮಾಲು ಜಪ್ತಾದ ಬಳಿಕ ಕೋರ್ಟಿನವರು ಪಕ್ಷಕಾರರಿಗೆ ಯೋಗ್ಯ ನೋಟೀಸನ್ನು ಕೊಟ್ಟು ಜಾಹೀರು ಲಿಲಾವಿನಿಂದ ವಿಕ್ರಯಮಾಡುವ ಜಾಹೀರನಾಮೆಯನ್ನು ಪ್ರಕಟಿಸುವ ಅಪ್ಪಣೆ ಮಾಡಬೇಕು.

ಇಂಥ ಜಾಹೀರನಾಮೆಯನ್ನು ಹುಕುಮನಾಮೆ ಪಡೆದವನಿಗೆ ಮತ್ತು ಫೈಸಲಿನ ಋಣಿಗೆ **ನೋಟೀಸನ್ನು ಕೊಟ್ಟು** ಅನಂತರ ತೆಗೆಯಬೇಕು; ಮತ್ತು ಅದರಲ್ಲಿ ವಿಕ್ರಯದ ವೇಳೆಯನ್ನು ಸ್ಥಳವನ್ನು ಬರೆಯಬೇಕು ಮತ್ತು

(ಅ) ಮಾರತಕ್ಕ ಮಾಲನ್ನು

(ಬ) ಆ ಮಾರತಕ್ಕ ಮಾಲು ಸರಕಾರಕ್ಕೆ ತೆರಿಗೆ ಸಲ್ಲುವಂಥ ಭೂಮಿಯಲ್ಲಿ ಯಾ ಭೂಮಿಯ ಭಾಗದಲ್ಲಿ ಇರುವಂಥ ಸಾರ್ಥಸಂಬಂಧವಾಗಿದ್ದಲ್ಲಿ, ಆ ಭೂಮಿಯ ಮೇಲೆ ಯಾ ಅದರ ಭಾಗದ ಮೇಲೆ ಕೊಡಿಸಲ್ಪಟ್ಟ ತೆರಿಗೆಯನ್ನು.

(ಕ) ಆ ಮಾಲಿನಮೇಲೆ ಇರುವಂಥ ಯಾವದೊಂದು ಭಾರವನ್ನು.

(ಡ) ಯಾವ ರಕಮು ವಸೂಲ ಮಾಡುವಬಗ್ಗೆ ಮಾರಾಟದ ಹುಕುಮು ಮಾಡಿದ್ದೀತೋ ಆ ರಕಮನ್ನು.

(ಇ) ಈ ಮಾಲು ಕೊಳ್ಳುವವನು ಅವರ ಸ್ವರೂಪವನ್ನು ಬೆಲೆಯನ್ನು ನಿಶ್ಚಯಿಸಿಕೊಳ್ಳಲಿಕ್ಕೆ ಅವನಿಗೆ ಅವಶ್ಯವಾಗಿ ತಿಳಿಯತಕ್ಕದ್ದೆಂದು ಕೋರ್ಟಿನವರಿಂದ ಎಣಿಸಲ್ಪಡುವಂಥ ಪ್ರತಿಯೊಂದು ಇತರ ಸಂಗತಿಯನ್ನು.

ಆ ಜಾಹೀರನಾಮೆಲ್ಲಿ ಆವಷ್ಟುಮಟ್ಟಿಗೆ ಸರಿಯಾಗಿಯೂ ಸ್ಪಷ್ಟವಾಗಿಯೂ ವಿವರಿಸಬೇಕು. (ಆ. ೨೧, ರೂ. ೬೬. (೨) ) ಈ ಕಾನೂನಿನನ್ವಯ ಮಾರಾಟಮಾಡುವ ಬಗ್ಗೆ ಹುಕುಮು ಸಿಗುವ ವಿಷಯದ ಪ್ರತಿಯೊಂದು ಅರ್ಜಿಯ ಸಂಗಡ ಒಂದು ಪತ್ರಿಕೆಯು ಇರಬೇಕು; ಈಪತ್ರಿಕೆಯ ಮೇಲೆ ಅಸಲರ್ಜಿ ಕೈಫಿಯತುಗಳ ಮೇಲೆ ಸಹಿಮಾಡುವ ವಿಷಯದಲ್ಲಿ ಮತ್ತು, ಸತ್ಯತೆಯ ಇಕರಾರು ಮಾಡುವ ವಿಷಯದಲ್ಲಿ ಹಿಂದೆ ಗೊತ್ತುಪಡಿಸಿದ ರೀತಿಯಿಂದ ಸಹಿಮಾಡಿ ಇಕರಾರು ಬರೆಯಬೇಕು ಮತ್ತು ಅದರಲ್ಲಿ ಪೋಟಕಾನೂನು (೨) ರನ್ವಯ ಯಾವ ಸಂಗತಿಗಳ ತಪಶೀಲು ಜಾಹೀರನಾಮೆಯಲ್ಲಿ ಕೊಡುವ ಅವಶ್ಯವಿದೆಯೋ ಆ ಸಂಗತಿಗಳ ತಪಶೀಲು ಇಕರಾರು ಮಾಡುವ ಮನುಷ್ಯನಿಗೆ ಗೊತ್ತಿದ್ದಷ್ಟು ಅಥವಾ ಅವನಿಂದ ನಿಶ್ಚಯಿಸಲಿಕ್ಕೆ ಆಗುವಷ್ಟು ಇರಬೇಕು. (ಆ. ೨೧, ರೂ. ೬೬. (೩) ).

ವಿಕ್ರಯದ ಹುಕುಮು ಕೊಡುವ ಜಜ್ಜಕೋರ್ಟಿನ ಇಮಾರತಿನಲ್ಲಿ ಸದರೀ ಜಾಹೀರನಾಮೆಯ ನಕಲು ಹಚ್ಚಿದ ತಾರೀಖಿನಿಂದ ಸ್ಥಾವರ ಮಾಲಿನ ಪ್ರಸಕ್ತಿಯಲ್ಲಿ ನಿಕೃಷ್ಟ ಪಕ್ಷಕ್ಕೆ ಮೂವತ್ತು ದಿವಸಗಳು, ಜಂಗಮಮಾಲಿನ ಪ್ರಸಕ್ತಿಯಲ್ಲಿ ನಿಕೃಷ್ಟ ಪಕ್ಷಕ್ಕೆ ಹದಿನೈದು ದಿವಸಗಳು ಆಗುವವರೆಗೆ ಯಾವದೊಂದು ಬಗೆಯ ವಿಕ್ರಯವನ್ನು ಮಾಡಲಾಗದು. ಆದರೆ ಫೈಸಲಿನ ಋಣಿಯ ಲೇಖೀ ಸಮ್ಮತಿಯನ್ನು ಪಡಕೊಂಡು ಮೇಲ್ಕಂಡ ವೇಳೆಗಳು ಮೀರುವ ಪೂರ್ವದಲ್ಲಿ ಸಹಾ ಯಾವದೊಂದು ವಿಕ್ರಯವನ್ನು ಮಾಡಬಹುದು. (ಆ. ೨೧, ರೂ. ೬೮) ಸದರೀ ವಿಕ್ರಯವನ್ನು ಕೋರ್ಟಿನವರು ತಹಕೂಬ ಮಾಡಬಹುದು; ಆದರೆ ವಿಧಿಸಲ್ಪಡುವದೇನೆಂದರೆ, ವಿಕ್ರಯವು ೭ ದಿವಸಗಳ ಮುದ್ದತಿನಗಿಂತ ಹೆಚ್ಚಿನ ಮುದ್ದತಿನ ವರೆಗೆ ತಹಕೂಬು ಮಾಡಿದಾಗ್ಗೆ ಫೈಸಲಿನ ಋಣಿಯು ಬಿಟ್ಟುಬಿಡುವದಕ್ಕೆ ಕಬೂಲ ಇದ್ದಲ್ಲಿ ಹೊರತಾಗಿ ಹೊಸ ಜಾಹೀರನಾಮೆಯನ್ನು ಪ್ರಸಿದ್ಧ

ಮಾಡಬೇಕು. (ಆ. ೨೧, ರೂ. ೬೯) ತಾನು ಪಡೆದ ಹುಕುಮನಾಮೆಯ ಅಮಲು ಬಜಾವಣೆಗಾಗಿ ಮಾಲು ಮಾರಿಸುವ ಮನುಷ್ಯನು ಕೋರ್ಟಿನವರ ಅಪ್ಪಣೆಯನ್ನು ಸ್ಪಷ್ಟವಾಗಿ ಪಡೆದ ಹೊರತು, ಆ ಮಾಲನ್ನು ಕೊಳ್ಳಲಾಗದು ಅಥವಾ ಅದಕ್ಕೆ ಸವಾಲು ಮಾಡಲಾಗದು. (ಆ. ೨೧, ರೂ. ೭೨) ಕೋರ್ಟಿನವರು ಸ್ಪಷ್ಟವಾಗಿ ಅಪ್ಪಣೆಯನ್ನು ಪಡಕೊಂಡಬಳಿಕ ಆ ಮಾಲನ್ನು ಕೊಳ್ಳಬಹುದು, ಯಾ ಅದಕ್ಕೆ ಸವಾಲು ಮಾಡಬಹುದು. ಹುಕುಮನಾಮೆ ಪಡೆದವನು ಸದರೀ ಪ್ರಕಾರ ಅಪ್ಪಣೆ ಪಡೆದು ಮಾಲು ಕೊಂಡಲ್ಲಿ, ೭೩ನೇ ಕಲಮಿನ ಠರಾವುಗಳಿಗೆ ಒಳಪಟ್ಟು ಖರೀಧಿಯ ಹಣ ಮತ್ತು ಹುಕುಮನಾಮೆಯ ಹಣ ಇವೆರಡರಲ್ಲಿ ಒಂದನ್ನು ಮತ್ತೊಂದರೊಳಗೆ ವಜಾಮಾಡಿ, ಕೋರ್ಟಿನವರು ಹುಕುಮನಾಮೆಯ ಅಮಲು ಸಮಗ್ರವಾಗಿ ಯಾ ಅಂಶತಃ ಪ್ರಸಕ್ತಿ ಇದ್ದಂತೆ ಪೂರಾ ಆದ ಬಗ್ಗೆ ಷರೆಯನ್ನು ಬರೆಯಬೇಕು. (ಆ. ೨೧, ರೂ. ೭೨ (೨) )

**ಜಪ್ತಾದ ಮಾಲು ಅಯೋಗ್ಯರೀತಿಯಿಂದ ಮಾರಲ್ಪಟ್ಟ ವಿಷಯದಲ್ಲಿ ಮುಂದಿನ ಕ್ರಮವು** — ಅದು ಜಂಗಮಮಾಲು ಇದೆಯೋ ಸ್ಥಾವರಮಾಲು ಇದೆಯೋ?

**ಜಂಗಮಮಾಲು ಇದ್ದಲ್ಲಿ**— ಜಂಗಮ ಮಾಲನ್ನು ಮಾರಿದಲ್ಲಿ ಆ ಮಾರಾಟವನ್ನು ಮಾರಾಟವು ಯೋಗ್ಯರೀತಿಯಾಗಿ ಪ್ರಸಿದ್ಧಿಸಲ್ಪಡಲಿಲ್ಲವೆಂಬ ಅಥವಾ ಮಾರಾಟದ ಕೆಲಸವೂ ಯೋಗ್ಯರೀತಿಯಾಗಿ ನಡೆಯಿಸಲ್ಪಡಲಿಲ್ಲವೆಂಬ ಕಾರಣದಿಂದ ರದ್ದು ಮಾಡಬಾರದು; ಆದರೆ ಇಂಥ ಅಯೋಗ್ಯರೀತಿಯ ಮೂಲಕವಾಗಿ ಕೆಲವೊಬ್ಬ ಮನುಷ್ಯನ ಕೈಯಿಂದ ಮತ್ತೊಬ್ಬನಿಗೆ ಯಾವದೊಂದು ಬಗೆಯ ಲುಕ್ಸಾನು ಆದರೆ, ಆ ಎರಡನೆಯವನು ಮೊದಲನೆಯವನ ಮೇಲೆ ಆ ಲುಕ್ಸಾನಿನ ಪ್ರತಿಫಲವನ್ನು ಪಡೆಯುವದಕ್ಕಾಗಿ, ಅಥವಾ (ಮೊದಲಿನ ಮನುಷ್ಯನು ಖರೀದಿದಾರನಾಗಿದ್ದರೆ) ಆ ವಿಶಿಷ್ಟಮಾಲನ್ನು ಹಿಂದಕ್ಕೆ ಪಡೆಯಲಿಕ್ಕೂ ಅದನ್ನು ಅವನು ಕೊಡದಿದ್ದರೆ ಲುಕ್ಸಾನಿನ ಪ್ರತಿಫಲವನ್ನು ಪಡೆಯಲಿಕ್ಕೂ ದಾವೆಯನ್ನು ಮಾಡಬಹುದು. (ಆ. ೨೧, ರೂ. ೭೮) ಸಾರಾಂಶ: ಅಯೋಗ್ಯರೀತಿಯ ಮೂಲಕವಾಗಿ ಜಂಗಮಮಾಲು ಮಾರಲ್ಪಟ್ಟಲ್ಲಿ ಆ ಕಾರಣದಿಂದ ಸದರೀ ಮಾರಾಟವನ್ನು ರದ್ದುಮಾಡಲಾಗದು; ಆದರೆ ಲುಕ್ಸಾನ ಪಡೆದವನು ಲುಕ್ಸಾನಿನ ಪ್ರತಿಫಲವನ್ನು ಪಡೆಯುವದಕ್ಕಾಗಿ ದಾವೆಯನ್ನು ಮಾಡಬಹುದು.

**ಸ್ಥಾವರ ಮಾಲು ಇದ್ದಲ್ಲಿ**—ಯಾವದಾದರೂ ಸ್ಥಾವರ ಮಾಲನ್ನು ಹುಕುಮನಾಮೆಯ ಬಜಾವಣೆಯಲ್ಲಿ ಮಾರಿದ್ದಲ್ಲಿ

(೧) ಹುಕುಮನಾಮೆ ಪಡೆದವನು ಅಥವಾ

(೨) ಯಾವ ಮನುಷ್ಯನಿಗೆ ದರದ ಪ್ರಕಾರ ಹಂಚಿಕೊಡತಕ್ಕ ಐವಜಿನೊಳಗಿಂದ ಪಾಲು ಸಿಕ್ಕುವ ಹಕ್ಕು ಇದ್ದೀತೋ ಅಂಥ ಯಾವನಾದರು ಮನುಷ್ಯನು, ಅಥವಾ

(೩) ಯಾವ ಮನುಷ್ಯನು ಹಿತಸಂಬಂಧಗಳಿಗೆ ಸದರೀ ಮಾರಾಟದಿಂದ ಬಾಧೆಬಂದಿರುವದೋ ಆ ಮನುಷ್ಯನು

ಆ ವಿಕ್ರಯವನ್ನು (೧) ಪ್ರಸಿದ್ಧಿಸುವದರಲ್ಲಿ ಯಾ (೨) ನಡೆಯಿಸುವದರಲ್ಲಿ ಮಹತ್ವದ ಅವ್ಯವಸ್ಥೆ ಅಥವಾ ಮೋಸಗಾರಿಕೆಯಾಯಿತೆಂಬ ಕಾರಣದಿಂದ ವಿಕ್ರಯವನ್ನು ರದ್ದುಪಡಿಸುವದಕ್ಕೋಸ್ಕರ ಕೋರ್ಟಿಗೆ ಅರ್ಜಿಯನ್ನು ಮಾಡಬಹುದು.

ಆದರೆ ವಿಧಿಸಲ್ಪಡುವದೇನೆಂದರೆ, ಅರ್ಜದಾರನು ಅಂಥ ಅವ್ಯವಸ್ಥೆಯ ಅಥವಾ ಮೋಸಗಾರಿಕೆಯ ಕಾರಣದಿಂದ ತನಗೆ ಮಹತ್ವದ ಲುಕ್ಸಾನು ಆಯಿತೆಂಬುದನ್ನು ಕೋರ್ಟಿನವರ ಮನಗಾಣುವಂತೆ ಸಾಬೀತು ಮಾಡದ ಹೊರತು ಆ ಅವ್ಯವಸ್ಥೆಯ ಅಥವಾ ಮೋಸಗಾರಿಕೆಯ ಕಾರಣದಿಂದ ವಿಕ್ರಯವನ್ನು ರದ್ದು ಮಾಡಲಾಗದು. (ಆ. ೨೧, ರೂ. ೯೦) ಮಹತ್ವದ ಲುಕ್ಸಾನು ಮೇಲ್ಕಂಡ ಕಾರಣದಿಂದ ಆಯಿತೆಂಬುದನ್ನು ಸಾಬೀತು ಆದಲ್ಲಿ ಮಾತ್ರ ವಿಕ್ರಯವನ್ನು ರದ್ದು ಮಾಡಲ್ಪಡಬಹುದು.

ಹುಕುಮನಾಮೆಯ ಬಜಾವಣೆಯಲ್ಲಾದ ಯಾವದೊಂದು ವಿಕ್ರಯದಲ್ಲಿ ಫೈಸಲಿನ ಋಣಿಗೆ ಮಾರಬಹುದಾದಂಥ ಸ್ವಾರ್ಥಸಂಬಂಧವಿದ್ದಿಲ್ಲ ಎಂಬ ಕಾರಣದಿಂದ ಆ ವಿಕ್ರಯಕ್ಕೆ ಸೇರಿದ ಖರೇದಿದಾರನು ಸದರೀ ವಿಕ್ರಯವನ್ನು ರದ್ದು ಮಾಡುವ ಬಗ್ಗೆ ಕೋರ್ಟಿಗೆ ಅರ್ಜಿಯನ್ನು ಮಾಡಬಹುದು.

**ಮಾರಾಟದಿಂದ ವಸೂಲಬಂದ ಹಣದ ವ್ಯವಸ್ಥೆ**—ಐವಜು ಹಂಚಿಕೊಡೋಣ ಐವಜು ಕೋರ್ಟಿನ ಕೈಯಲ್ಲಿದ್ದು, ಒಬ್ಬನಿಗಿಂತ ಹೆಚ್ಚು

ಜನರು ಅದೇ ಫೈಸಲಿನ ಋಣಿಯಿಂದ ಸಲ್ಲತಕ್ಕ ಹಣಕ್ಕಾಗಿ ಪಡೆದ ಹುಕುಮು ನಾಮೆಗಳ ಅಮಲುಬಜಾವಣೆಗಾಗಿ, ಇಂಥ ಐವಜು ಸಿಗುವ ಪೂರ್ವದಲ್ಲಿ ಇಂಥ ಕೋರ್ಟಿಗೆ ಅರ್ಜಿಯನ್ನು ಮಾಡಿರಲಾಗಿ ಆ ಹುಕುಮುನಾಮೆಗಳ ಸಲ್ಲಿಸೋಣವು ಪೂರಾ ಆಗದಿದ್ದಲ್ಲಿ ಆ ಐವಜನ್ನು ಜಮೆಮಾಡುವ ವೆಚ್ಚಹೋಗಲಾಗಿ ಉಳಿದದ್ದನ್ನು ಅವರೆಲ್ಲರಿಗೆ ದರದ ಪ್ರಕಾರ ಹಂಚಿಕೊಡಬೇಕು. (ಕಲಮು ೭೩.)

**ದರದ ಪ್ರಕಾರ ಹಂಚಿಕೊಡತಕ್ಕ ಐವಜು ಪಡೆಯುಲಿಕ್ಕೆ ಹಕ್ಕು ದೊರೆಯಬೇಕಾದರೆ ಯಾವ ಸಂಗತಿಗಳು ಹಾಜರಾಗಿರಬೇಕು ಎಂಬುದನ್ನು ವಿವರಿಸಿ ಹೇಳೋಣ.**

೧. ದರದ ಪ್ರಕಾರ ಹಂಚಿಕೊಡತಕ್ಕ ಐವಜಿನಲ್ಲಿ ಪಾಲು ಬೇಡುವಂಥ ಹುಕುಮನಾಮೆ ಪಡೆದವನು ಯಾವ ಕೋರ್ಟಿನ ಕೈಯಲ್ಲಿ ಆ ಐವಜು ಅದೆಯೋ ಆ ಕೋರ್ಟಿಗೆ ತನ್ನ ಹುಕುಮುನಾಮೆಯ ಅಮಲುಬಜಾವಣೆಗಾಗಿ ಅರ್ಜಿಯನ್ನು ಮಾಡಿರಬೇಕು.

೨. ಸದರಿ ಪ್ರಕಾರ ಹುಕುಮನಾಮೆಯ ಅಮಲುಬಜಾವಣೆಗಾಗಿ ಅರ್ಜಿಯನ್ನು ಸದರೀ ಐವಜು ಆ ಕೋರ್ಟಿನ ಕೈಗೆ ಸೇರುವ ಪೂರ್ವದಲ್ಲಿ ಮಾಡಿರಬೇಕು

(೩) ಯಾವ ಐವಜು ದರದ ಪ್ರಕಾರ ಹಂಚಿಕೊಡತಕ್ಕದ್ದಾಗಿರುವದೋ ಆ ಐವಜು ಆ ಕೋರ್ಟಿನ ಕೈಯಲ್ಲಿ ಇರಬೇಕು.

(೪) ಜಪ್ತಿ ಮಾಡಿಸಿದಂಥಾ ಮನುಷ್ಯನು ಮತ್ತು ಸದರೀ ಐವಜಿನಲ್ಲಿ ಪಾಲು ಬೇಡುವಂಥ ಹುಕುಮನಾಮೆ ಪಡೆದವನು ಇವರು ಹಣಕೊಡುವ ಹುಕುಮುನಾಮೆಗಳು ಧಾರಣ ಮಾಡಿದವರಾಗಿರಬೇಕು.

(೫) ಸದರಿ ಹುಕುಮನಾಮೆಗಳು ಅದೇ ಫೈಸಲಿನ ಋಣಿಯ ವಿರುದ್ಧವಾಗಿ ಆಗಿರಬೇಕು.

ಈ ಎಲ್ಲ ಶರ್ತುಗಳನ್ನು ಹಾಜರಿದ್ದಲ್ಲಿ ಮಾತ್ರ ಸದರಿ ಐವಜಿನಲ್ಲಿ ಹಿಸೆ ಬೇಡುವ ಬಾಧ್ಯತೆಯನ್ನುಂಟಾಗುವದು, ಇಲ್ಲದಿದ್ದರೆ ಇಲ್ಲ. ಸದರಿ ಬಾಧ್ಯತೆಯನ್ನುಂಟುಮಾಡಬೇಕಾಗಿದ್ದಲ್ಲಿ ಆ ಬಗ್ಗೆ ಬೇರೆ ಅರ್ಜಿಯನ್ನು ಮಾಡುವ ಅಗತ್ಯವಿಲ್ಲ.

ಹುಕುಮನಾಮೆಯ ಅಮಲುಬಜಾವಣೆಯ ಬಗ್ಗೆ ಅರ್ಜಿಯನ್ನು ಮಾಡಿದರೆ ಸಾಕಾಗುವದು. ಈ ಬಗ್ಗೆ ಹೆಚ್ಚಿನ ಏನೂ ಇಲಾಜುಮಾಡುವ ಕಾರಣವಿಲ್ಲ.

ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಆದ ಸ್ಥಾವರಮಾಲಿನ ವಿಕ್ರಯವನ್ನು ಕೋರ್ಟಿನವರು ಕಾಯಮ ಮಾಡುವರು ಯಾ ರದ್ದು ಮಾಡುವರು. ಸದರೀ ವಿಕ್ರಯವು ರದ್ದು ಮಾಡಿದ ಪಕ್ಷಕ್ಕೆ ಅದನ್ನು ಪುನಃ ವಿಕ್ರಯ ಮಾಡುವರು. ವಿಕ್ರಯವು ಕಾಯಮಾಯಿತೆಂದು ಕೋರ್ಟು ಹುಕುಮು ಮಾಡಿದ ಅನಂತರವಲ್ಲಿ ಸದರಿ ಮಾರಾಟವು ಯಾ ವಿಕ್ರಯವು ನಿರ್ವಿವಾದವಾಗುವದು. (ರೂ. ೯೨.) ಸ್ಥಾವರ ಮಾಲಿನ ವಿಕ್ರಯವು ನಿರ್ವಿವಾದ ಬಳಿಕ ಕೋರ್ಟಿನವರು ಖರೀದಿದಾರನಿಗೆ ಸರಟಿಫಿಕೇಟು ಕೊಡಬೇಕು. (ರೂ. ೯೪.) ಮಾರಾಟಾದ ಸ್ಥಾವರ ಮಾಲು ಫೈಸಲಿನ ಋಣಿಯ ಕಬಜೆಯಲ್ಲಿದ್ದರೆ ಅದನ್ನು ಖರೀದಿದಾರನಿಗೆ ಒಪ್ಪಿಸಲಿಕ್ಕೆ ಹುಕುಮು ಮಾಡಬೇಕು. ಬಾಡಿಗೆದಾರನ ಕಬಜೆಯಲ್ಲಿದ್ದರೂ ಸಹಾ ಅದನ್ನು ಖರೀದಿದಾರನಿಗೆ ಒಪ್ಪಿಸಲಿಕ್ಕೆ ಹುಕುಮು ಮಾಡಬೇಕು. (ಆ. ೨೧. ರೂ. ೯೫ ಮತ್ತು ೨೯೬).

ಹುಕುಮನಾಮೆ ಪಡೆದವನಿಗೆ ಅಥವಾ ಖರೀದಿದಾರನಿಗೆ ಸದರೀ ಆಸ್ತಿಯ ಕಬಜೆ ಪಡೆಯುವಲ್ಲಿ ಯಾರಾದರೂ ಹರಕತು ತಂದರೆ ಯಾ ಅಡ್ಡಿಯನ್ನು ಮಾಡಿದರೆ ಅವನು ಸದರೀ ಹರಕತಿನ ಅಥವಾ ಅಡ್ಡಿಯ ಸಂಬಂಧದಿಂದ ಕೋರ್ಟಿಗೆ ಅರ್ಜಿಯನ್ನು ಮಾಡಬಹುದು. ಕೋರ್ಟಿನವರು ಅದರ ಚೌಕಶಿಯನ್ನು ಮಾಡಿ ಅದನ್ನು ಫೈಸಲಿನ ಋಣಿಯಿಂದ ಯಾ ಅವನ ಪ್ರೇರೇಪಣೆಯಿಂದ ಬೇರೊಬ್ಬ ಮನುಷ್ಯನಿಂದ ಆಯಿತೆಂದು ಅವರು ಮನಗಂಡರೆ ಅವರು ಸದರೀ ಹರಕತನ್ನು ಯಾ ಅಡ್ಡಿಯನ್ನು ದೂರ ಮಾಡಬೇಕು. ಮತ್ತು ಖರೇ ಭಾವದ ಹಕ್ಕುದಾರನಿಂದ ಸದರೀ ಹರಕತು ಅಥವಾ ಅಡ್ಡಿಯಾಯಿತೆಂದು ಕೋರ್ಟಿನವರು ಮನಗಂಡಲ್ಲಿ, ಅವರು ಕಬಜೆಯ ಬಗ್ಗೆ ಮಾಡಿದ ಅರ್ಜಿಯು ತೆಗೆದುಹಾಕುವ ಹುಕುಮು ಮಾಡಬೇಕು.

**ತಿರುಗಿ ಕೊಡುವ ಬಗ್ಗೆ ಅರ್ಜಿಯು** - ಹುಕುಮನಾಮೆಯು ಬದಲಾಯಿಸಲ್ಪಟ್ಟಲ್ಲಿ ಅಥವಾ ತಿರುಗಿಸಲ್ಪಟ್ಟಲ್ಲಿ ಮತ್ತು ಅಷ್ಟರಮಟ್ಟಿಗೆ, ಕನಿಷ್ಠ ಕೋರ್ಟಿನವರು ಪ್ರತಿದಾನದ ಕಾರಣದಿಂದ ಅಥವಾ ಇತರ ರೀತಿಯಿಂದ ಯಾವ

ದಾದರೂ ಫಾಯದೆಯನ್ನು ಪಡೆಯಲಿಕ್ಕೆ ಹಕ್ಕುಳ್ಳ ಯಾವನಾದರೂ ಪಕ್ಷಕಾರನ ಅರ್ಜಿಯ ಮೇಲಿಂದ ಆ ಹುಕುಮನಾಮೆಯು ಯಾ ಅದರ ಬದಲಾಯಿಸಲ್ಪಟ್ಟ ಅಥವಾ ತಿರುಗಿಸಲ್ಪಟ್ಟ ಭಾಗವು ಕೊಡಲ್ಪಡದಿದ್ದರೆ ಪಕ್ಷಕಾರರು ಯಾ ಸ್ಥಿತಿಯೊಳಗೆ ಇರುತಿದ್ದರೋ ಅದೇ ಸ್ಥಿತಿಯೊಳಗೆ ಆದಷ್ಟು ಮಟ್ಟಿಗೆ ಉಳಿಯುವಂತೆ ಪ್ರತಿದಾನವನ್ನು ಕೊಡಿಸಬೇಕು; ಮತ್ತು ಈ ಕಾರಣದ ದೆಸೆಯಿಂದ ವೆಚ್ಚವನ್ನು ತಿರುಗಿ ಕೊಡುವ ವಿಷಯದ ಮತ್ತು ಬಡ್ಡಿ ಲುಕ್ಸಾನು, ಲುಕ್ಸಾನಿನ ಮೊಬದಲೆ ಮತ್ತು ಒಳಗಡೆಯ ಉತ್ಪನ್ನಗಳನ್ನು ಕೊಡುವ ವಿಷಯದ ಹುಕುಮುಗಳ ಸಹಿತವಾಗಿ ಯಾವ ಹುಕುಮುಗಳು ಆ ಹುಕುಮನಾಮೆಯನ್ನು ಬದಲಾಯಿಸುವ ಅಥವಾ ತಿರುಗಿಸುವ ಠರಾವಿಗೆ ವಾಜವೀರೀತಿಯಿಂದ ಅನುಷಂಗಿಕವಾಗಿರುವವೋ ಅಂಥ ಯಾವದಾದರೂ ಹುಕುಮುಗಳನ್ನು ಆ ಕೋರ್ಟಿನವರು ಮಾಡಬಹುದು.

ಮೇಲಿನ ಪ್ರಕಾರ ಅರ್ಜಿಮಾಡಿ ದೊರಕಿಸಬಹುದಾಗಿರುವ ಯಾವದಾದರೂ ಪ್ರತಿದಾನ ಅಥವಾ ಇತರ ನ್ಯಾಯಾಶ್ರಯದ ಬಗ್ಗೆ ಯಾವದಾದರೂ ದಾವೆಯನ್ನು ಮಾಡಲಾಗದು. (ಕಲಮು ೧೪೪.)

———

# ೪ನೆಯ ಪ್ರಕರಣ

## ಸಾಮಾನ್ಯತಃ ಅರ್ಜಿಗಳು

ಅರ್ಜಿಗಳನ್ನು ಸಹ ಒಳ್ಳೆ ಕಾಳಜಿಯಿಂದ ಬರೆಯಬೇಕು. ಹಾಗೆ ಅವುಗಳನ್ನು ಸಂಕ್ಷಿಪ್ತವಾಗಿ ಮತ್ತು ನಿಶ್ಚಿತವಾಗಿ ಬರೆಯಬೇಕು; ಎಂದರೆ ಅವುಗಳಲ್ಲಿ ಅಸಂಬದ್ಧವಾದ ಸಂಗತಿಗಳನ್ನು ಬರೆಯಬಾರದು.

ಯಾವ ಕಲಮಿನ ಪ್ರಕಾರ ಅರ್ಜಿಯನ್ನು ಮಾಡಬೇಕಾಗುವದು ಅದನ್ನು ಚನ್ನಾಗಿ ಓದಿಕೊಂಡು ಮತ್ತು ತಿಳಿದುಕೊಂಡು ಅದಕ್ಕೆ ಕಾಯಿದೆಯಿಂದ ಯಾವ ಸಂಗತಿಗಳನ್ನು ಹೇಳಬೇಕಾಗುವದೋ ಅವುಗಳನ್ನಷ್ಟೆ ಬರೆಯಬೇಕು ಹೊರ್ತಾಗಿ ಇತರ ಸಂಗತಿಗಳನ್ನು ಬರೆಯಬಾರದು. ಅರ್ಜಿಯನ್ನು ಬರೆಯುವದರಲ್ಲಿ ಆದಷ್ಟು ಮಟ್ಟಿಗೆ ಯಾವ ಕಲಮಿನ ಪ್ರಕಾರ ಅರ್ಜಿಯನ್ನು ಮಾಡಿರುತ್ತದೆಯೋ ಆ ಕಲಮಿನ ಶಬ್ದಗಳನ್ನು ಯಾ ಶಬ್ದಪ್ರಯೋಗಳನ್ನು ಉಪಯೋಗಿಸತಕ್ಕದ್ದು. ಬೇರೆ ಶಬ್ದಗಳನ್ನು ಯಾ ಶಬ್ದಪ್ರಯೋಗವನ್ನು ಶಕ್ಯವಿದ್ದಷ್ಟುಮಟ್ಟಿಗೆ ಉಪಯೋಗಿಸತಕ್ಕದ್ದಲ್ಲ. ಎಂದರೆ ಅರ್ಜಿಯನ್ನು ಆದಷ್ಟು ಕಲಮಿನಲ್ಲಿಯ ಶಬ್ದಗಳಲ್ಲಿಯೇ ಬರೆಯತಕ್ಕದ್ದು. ಅರ್ಜಿಯಲ್ಲಿ ಬೇಡತಕ್ಕ ನ್ಯಾಯಾಶ್ರಯವನ್ನು ಸಹ ಕಲಮಿನಲ್ಲಿಯ ಶಬ್ದಗಳಲ್ಲಿಯೇ ಬರೆಯಬೇಕು.

## ಅರ್ಜಿಯ ನಮೂನೆ

ಅಸಲರ್ಜಿಯಂತೆ ಸಾಮಾನ್ಯತಃ ಎಲ್ಲ ಅರ್ಜಿಯ ಪ್ರಾರಂಭಕ್ಕೆ ಕೋರ್ಟಿನ ಹೆಸರು ಮತ್ತು ಸರನಾಮೆಯನ್ನು ಬರೆಯಬೇಕು. ಯಾವ ದಾವೆಯಲ್ಲಿ ಯಾ ಪ್ರಕರಣದಲ್ಲಿ ಅರ್ಜಿಯನ್ನು ಮಾಡಬೇಕಾಗಿರುವದೋ ಆ ದಾವೆಯ ಯಾ ಪ್ರಕರಣದ ನಂಬರವು ಅರ್ಜಿಯಲ್ಲಿ ಪ್ರಾರಂಭಕ್ಕೆ ನಮೂದ ಮಾಡಿರಬೇಕು. ಮತ್ತು ಅದರ ಕೆಳಗೆ ಕೋರ್ಟಿನ ಹೆಸರು ಮತ್ತು ದಾವೆಯ ಯಾ ಪ್ರಕರಣದ ಸರನಾಮೆಯನ್ನು ಬರೆಯಬೇಕು. ಆ ಮೇಲೆ ದಾವೆಯ ಯಾ ಪ್ರಕರಣದ ಯಾ ಅರ್ಜಿಯು, ಹ್ಯಾಗೆ ಇರುವದೊ ಹಾಗೆ, ಬೇಲಿಯನ್ನು ಎಷ್ಟು ಮಾಡಿರುತ್ತದೆಂಬುದನ್ನು ಸ್ಪಷ್ಟವಾಗಿ ಬರೆಯಬೇಕು. ಅನಂತರದಲ್ಲಿ ಅರ್ಜಿಮಾಡುವನ ಹೆಸರು ಬರೆದು ಅರ್ಜಿಯಲ್ಲಿಯ

ಮಜಕೂರು ಬರೆಯಲಿಕ್ಕೆ ಸುರು ಮಾಡಬೇಕು. ಆದಷ್ಟು ಮಟ್ಟಿಗೆ ಪ್ರತಿಯೊಂದು ಅರ್ಜಿಗೆ ಅರ್ಜಿಮಾಡುವವನಾದ ಪಕ್ಷಕಾರನ ಸಹಿಯನ್ನು ತೆಗೆದುಕೊಳ್ಳಬೇಕು. ಕೆಲವು ಅರ್ಜಿಗೆ ಇಕರಾರು ಮಾಡಬೇಕಾಗಿರುವದು. ಅವುಗಳ ಮೇಲೆ ಇಕರಾರು ಬರೆಯಲಿಕ್ಕೆ ಮರೆಯಬಾರದು. ಅರ್ಜಿಗಳ ನಮೂನೆಗಳನ್ನು ನಾವು ಈ ಕೆಳಗೆ ಕೊಡುತ್ತೇವೆ. ಅವುಗಳಲ್ಲಿ ಈ ಎಲ್ಲ ತಪಶೀಲುಗಳನ್ನು ಬರೆದಿರುವದಿಲ್ಲ. ಪ್ರಸಕ್ತಿಯಿದ್ದಂತೆ ಅವುಗಳನ್ನು ಬರೆದುಕೊಳ್ಳಬೇಕು. ಸರನಾಮೆಯನ್ನು ವಗೈರೆ ಹ್ಯಾಗೆ ಬರೆಯಬೇಕೆಂಬುದನ್ನು ನಾವು ಒಮ್ಮೆ ಹೇಳಿಬಿಡುತ್ತೇವೆ.

ಉ — "                                        ಲಾ. ಅಸಲು ನ. ೧೨೩/೧೯೨೭

## ಬೈಲಹೊಂಗಲ ೨ನೇ ವರ್ಗ ಸಬಜಜ್ಜ ಕೋರ್ಟನಲ್ಲಿ

೧. ... ... ... ... ... ಅರ್ಜದಾರ

**ವಿರುದ್ಧ**

೧. ... ... ... ... ... ಎದುರಗಾರ

ದಾವೆ ರೂಪಾಯಿ ೫೨೫ ೬ ೦ ೬ ೦

ಇದರಲ್ಲಿ ವಾದಿಯು ಆ. ೯, ರೂಲ ೮ನೇ ಪ್ರಕಾರ ಮಾಡುವ ಅರ್ಜಿ ಏನಂದರೆ: –

(ಅರ್ಜಿಯ ಮಜಕೂರನ್ನು ಬರೆಯಬೇಕು)

---

ಲಾ. ದ. ನ. ೧೫೨/೧೯೨೭

## ಚಿಕ್ಕೋಡಿ ಎರಡನೇ ವರ್ಗ ಸಬಜಜ್ಜ ಕೋರ್ಟನಲ್ಲಿ

೧. ... ... ... ... ... ಅರ್ಜದಾರ

**ವಿರುದ್ಧ**

೧. ... ... ... ... ... ಎದುರಗಾರ

ದಾವೆ ರೂಪಾಯಿ ೧೫೨೫ ೬ ೧೩ ೬ ೬

ಇದರಲ್ಲಿ ಪ್ರತಿವಾದಿಯು ಆ. ೯, ರೂಲ ೧೩ನೇ ಪ್ರಕಾರ ಮಾಡುವ ಅರ್ಜಿ ಏನೆಂದರೆ:—

ಕಿ. ಅರ್ಜಿ ನಂ.
―――
೧೯೨೮

**ಬೆಳಗಾವಿಯ ೧ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ**

(೧) ... ... ... ... ...

ಅರ್ಜಿದಾರ (ಹಕ್ಕದಾರ)

**ವಿರುದ್ಧ**

(೧) ... ... ... ... ...

ಹುಕುಮನಾಮೆ ಧಾರಣ ಮಾಡಿದವನು

(೨) ... ... ... ... ...

ಫೈಸಲಿನ ಋಣಿಯು

ದಾವೆ ರೂಪಾಯಿ ೫೫೬೮ ೬ ೧೨ ೬ ೦

ಇದರಲ್ಲಿ ಅರ್ಜಿದಾರನು ಆ. ೨೧, ರೂಲ ೫೮ನೇ ಪ್ರಕಾರ ಮಾಡುವ ಅರ್ಜಿ ಏನಂದರೆ:—

# ೫ನೆಯ ಪ್ರಕರಣ

## ಅಫೀಡೆವಿಟಗಳು ಎಂದರೆ ಪ್ರತಿಜ್ಞಾ ಲೇಖಗಳು

ಯೋಗ್ಯವಾದ ದಕ್ಷತೆಯಿಂದ ಮತ್ತು ಒಳ್ಳೆ ಕಾಳಜಿಯಿಂದ ಪ್ರತಿಯೊಂದು ಪ್ರತಿಜ್ಞಾ ಲೇಖವನ್ನು ಬರೆಯಬೇಕು. ಪ್ರತಿಜ್ಞಾ ಲೇಖದಲ್ಲಿ ಅಸಂಬದ್ಧವಾದ ಮತ್ತು ಅನಿಶ್ಚಿತವಾದ ಎಷ್ಟೋ ಸಂಗತಿಗಳನ್ನು ಬರೆಯುವ ಪದ್ಧತಿಯು ಕಂಡು ಬರುತ್ತದೆ. ಆದರೆ ಹೀಗೆ ಮಾಡುವದು ತೀರ ತಪ್ಪು ಇರುತ್ತದೆ. ಪ್ರತಿಜ್ಞಾ ಲೇಖದಲ್ಲಿ ಅದನ್ನು ಮಾಡುವವನ ತಿಳುವಳಿಕೆಯಲ್ಲಿ ಇದ್ದ ಸಂಗತಿಗಳನ್ನಷ್ಟೇ ಬರೆಯಬೇಕು ಹೊರ್ತಾಗಿ ಇತರ ಸಂಗತಿಗಳನ್ನು ಬರೆಯಬಾರದು. ಅರ್ಜಿ ಯಂತೆ ಪ್ರತಿಜ್ಞಾ ಲೇಖವನ್ನು ಬರೆಯುವ ಪದ್ಧತಿಸಹ ಕಂಡುಬರುತ್ತದೆ. ಆದರೆ ಇದು ತಪ್ಪು. (೧) ಪ್ರತಿಜ್ಞಾ ಲೇಖದಲ್ಲಿ ಅವಶ್ಯವಾದ ಸಂಗತಿಗಳನ್ನಷ್ಟೇ ಬರೆಯ ಬೇಕು ಹೊರ್ತಾಗಿ ಅವಶ್ಯವಿಲ್ಲದ ಯಾವದೇ ಸಂಗತಿಯನ್ನು ಎಂದೂ ಬರೆಯತಕ್ಕ ದ್ದಲ್ಲ.

(೨) ಅಗತ್ಯವಿದ್ದಾಗ ಪ್ರತಿಜ್ಞಾ ಲೇಖವನ್ನು ಪ್ಯಾರಾಗ್ರಾಫುಗಳಾಗಿ ವಿಭಾ ಗಿಸಿ ಅದಕ್ಕೆ ಅನುಕ್ರಮ ನಂಬರಗಳನ್ನು ಕೊಟ್ಟಿರಬೇಕು.

(೩) ಪ್ರತಿಜ್ಞಾಲೇಖದಲ್ಲಿ ನಮೂದ ಮಾಡಿದ ಪ್ರತಿಯೊಂದು ಮನು ಷ್ಯನ ಯಾ ಸ್ಥಳದ ವರ್ಣನವನ್ನು ಪೂರ್ಣವಾಗಿ ಮತ್ತು ಸ್ಪಷ್ಟವಾಗಿ ಮಾಡಿರ ಬೇಕು.

(೪) ಪ್ರತಿಜ್ಞಾ ಲೇಖದಲ್ಲಿ ಕಾಯದೆಯ ಸಂಗತಿಗಳನ್ನು ಅನುಮಾನಗ ಳನ್ನು ಯಾ ಸಿದ್ಧಾಂತಗಳನ್ನು ಬರೆಯತಕ್ಕದಲ್ಲ.

(೫) ಪ್ರತಿಜ್ಞಾ ಲೇಖದಲ್ಲಿ ನ್ಯಾಯಾಶ್ರಯವನ್ನು ಬೇಡತಕ್ಕದ್ದಲ್ಲ.

ಸಾರಾಂಶ: ಪ್ರತಿಜ್ಞಾ ಲೇಖದಲ್ಲಿ ಅವಶ್ಯವಿದ್ದ ಪುರಾವೆಯ ಸಂಗತಿಗಳನ್ನಷ್ಟೇ ಬರೆಯತಕ್ಕದ್ದು.

**ಜಬಾನಿ ಕೊಡುವವನು ತನ್ನ ಸ್ವಂತ ತಿಳುವಳಿಕೆಯಿಂದ ಸಾಬೀತು ಮಾಡಬಹುದಾಗಿರುವಂಥ ಸಂಗತಿಗಳು ಮಾತ್ರ ಪ್ರತಿ ಜ್ಞಾ ಲೇಖದಲ್ಲಿ ಇರತಕ್ಕವು; ಆದರೆ ಮಧ್ಯಂತರದಲ್ಲಿ ಅರ್ಜಿಯಾ**

**ದಲ್ಲಿ, ಅವನು ನಂಬುವಂಥ ಮಜಕೂರುಗಳನ್ನು ಅದರೊಳಗೆ ಬರೆಗೊಡಬಹುದು. ಆದರೆ ಆ ನಂಬಿಕೆಗೆ ಸಯುಕ್ತವಾದ ಆಧಾರ ಗಳು ತೋರಿಸಲ್ಪಡತಕ್ಕವು.**

**ಪ್ರತಿಜ್ಞಾಲೇಖದ ನಮೂನೆ:—**

ಯಾವ ದಾವೆಯ ವಿಷಯದಲ್ಲಿ ಯಾ ಪ್ರಕರಣದ ವಿಷಯಲ್ಲಿ ಪ್ರತಿಜ್ಞಾ ಲೇಖವನ್ನು ಮಾಡಬೇಕಾಗಿರುವದೋ ಆ ದಾವೆಯ ಯಾ ಪ್ರಕರಣದ ನಂಬರವು ಪ್ರಾರಂಭಕ್ಕೆ ಕೊಟ್ಟಿರಬೇಕು, ಮುಂದೆ ಕೋರ್ಟಿನ ಹೆಸರು ಬರೆಯಬೇಕು. ಆ ಮೇಲೆ ಸರನಾಮೆಯನ್ನು ಬರೆಯಬೇಕು. ಅನಂತರದಲ್ಲಿ ಜಬಾನಿ ಕೊಡುವವನ ಎಂದರೆ ಪ್ರತಿಜ್ಞಾಲೇಖ ಮಾಡುವವನ ಹೆಸರನ್ನು ಮತ್ತು ವರ್ಣನವನ್ನು ಬರೆದು ಪ್ರತಿಜ್ಞಾಲೇಖದ ಮಜಕೂರು ಬರೆಯಬೇಕು. ಆದರೆ ಪ್ರತಿಜ್ಞಾ ಲೇಖದ ಮಜ ಕೂರು ಬರೆಯುವ ಮೊದಲು ಪ್ರತಿಜ್ಞಾ ಲೇಖ ಮಾಡುವನು "ಶಪಥವನ್ನು ತೆಗೆದುಕೊಂಡು ಯಾ ಪ್ರತಿಜ್ಞಾ ಮಾಡಿ ಹೇಳುವದೇನೆಂದರೆ" ಅಂತಾ ಷರೆ ಬರೆಯಬೇಕು. ಮತ್ತು ಅದರ ಕೆಳಗೆ ಪ್ರತಿಜ್ಞಾಲೇಖದ ಮಜಕೂರು ಬರೆಯ ಬೇಕು. ಪ್ರತಿಜ್ಞಾ ಲೇಖದ ಅಡಿಗೆ ಕೆಳಗಿನ ಷರೆಯನ್ನು ಬರೆದು ಅದನ್ನು ಮುಗಿ ಸಬೇಕು. ಆ ಷರೆಯು ಯಾವವೆಂದರೆ:—

"ನಾನು ಪ್ರತಿಜ್ಞೆ ಮಾಡಿ ಹೇಳುವದೇನೆಂದರೆ:— ಮೇಲೆ ಹೇಳಿದ ಮಜ ಕೂರು ನಿಜವಾದದ್ದು ಇರುತ್ತದೆ. ಅದರಲ್ಲಿ ಏನೂ ಅಡಗಿಸಿರುವದಿಲ್ಲ ಮತ್ತು ಅದರ ಪೈಕಿ ಯಾವದೇ ಭಾಗವು ಅಸತ್ಯವಾದದ್ದಿರುವದಿಲ್ಲ."

ಅಥವಾ

"ನಾನು ಶಪಥವನ್ನು ತೆಗೆದುಕೊಂಡು ಯಾ ಪ್ರತಿಜ್ಞೆ ಮಾಡಿ ಹೇಳುವ ದೇನೆಂದರೆ:—ಮೇಲೆ ಹೇಳಿದ ಮಜಕೂರು ನಿಜವಾದದ್ದು ಇರುತ್ತದೆ. ಅದರಲ್ಲಿ ಏನೂ ಅಡಗಿಸಿರುವದಿಲ್ಲ ಮತ್ತು ಅದರ ಪೈಕಿ ಯಾವದೇ ಭಾಗವು ಅಸತ್ಯವಾದ ದ್ದಿರುವದಿಲ್ಲ."

ಅಥವಾ

"ನಾನು ಮೇಲೆ ೧, ೨ ಮತ್ತು ೩ನೇ ಪ್ಯಾರಾಗ್ರಾಪುಗಳಲ್ಲಿ ಹೇಳಿದ ಮಜ ಕೂರು ನನ್ನ ಸ್ವಂತ ತಿಳುವಳಿಕೆಯಂತೆ ನಿಜವಾದದ್ದು ಇರುತ್ತದೆ. ಮತ್ತು ೪ ೫ನೇ ಪ್ಯಾರಾಗ್ರಾಪುಗಳಲ್ಲಿ ಹೇಳಿದ ಮಜಕೂರು ನನ್ನ ದೊರೆತ ಮತ್ತು ನಿಜವೆಂದು ನಂಬಲ್ಪಟ್ಟ ಮಾಹಿತಿ ಮೇಲಿಂದ ನಿಜವಾದದ್ದು ಇರುತ್ತದೆ."

# ೭ನೆಯ ಪ್ರಕರಣ

## ಅರ್ಜಿಗಳ ನಮೂನೆಗಳು

### ನಂಬರು ೧

### ಹುಕುಮನಾಮೆಯನ್ನು ಬೇರೆ ಕೋರ್ಟಿಗೆ ಅಮಲಬಜಾವಣಿಗಾಗಿ ಕಳುಹಿಸುವ ಬಗ್ಗೆ ಅರ್ಜಿಯು (ಕಲಮು ೩೯)

### ಸರನಾಮೆ

(೧) ಅರ್ಜಿದಾರನು ಇದೇ ಕೋರ್ಟಿನ ಲಾ. ಅಸಲ ನಂ. $\frac{೬೭}{೧೯೨೭}$ ನೇದರಲ್ಲಿ ಹುಕುಮನಾಮೆಯನ್ನು ಪಡೆದವನಿರುತ್ತಾನೆ.

(೨) ಯಾರ ವಿರುದ್ಧ ಹುಕುಮನಾಮೆಯಾಗಿರುವದೋ ಆ ಎದುರಗಾರನು ಬಾಗಲಕೋಟೆಯ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನ ಅಧಿಕಾರದ ಹದ್ದಿಯಲ್ಲಿ ತಥ್ಯವಾಗಿ ಮತ್ತು ಸ್ವೇಚ್ಛೆಯಿಂದ ವಾಸಿಸುತ್ತಾನೆ. ( ಯಾ ಉದ್ಯೋಗ ನಡಿಸುತ್ತಾನೆ ಯಾ ಲಾಭಕ್ಕೋಸ್ಕರವಾಗಿ ಸ್ವತಃ ಕೆಲಸ ಮಾಡುತ್ತಾನೆ. )

[ಅಥವಾ (೨) ಯಾರ ವಿರುದ್ಧ ಹುಕುಮನಾಮೆಯಾಗಿರುವದೋ ಆ ಎದುರಗಾರನ ಸ್ವತ್ತು, ಮೇಲ್ಕಂಡ ಹುಕಮನಾಮೆಯ ಅಮಲು ಪೂರಾ ಆಗಲಿಕ್ಕೆ ತಕ್ಕಷ್ಟು, ಈ ಕೋರ್ಟಿನ ಅಧಿಕಾರದ ಹದ್ದಿನೊಳಗೆ ಇರದೆ; ಅವನ ಸ್ವತ್ತು ಬಾಗಲಕೋಟೆ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನಲ್ಲಿ ಅಧಿಕಾರದ ಹದ್ದಿನೊಳಗೆ ಇದೆ.]

[ಅಥವಾ (೨) ಸದರಿ ಹುಕುಮನಾಮೆಯಲ್ಲಿ, ಈ ಕೋರ್ಟಿನ ಹುಕುಮತ್ತಿನ ಸ್ಥಲ ಸೀಮೆಯ ಹೊರಗೆ ಮತ್ತು ಬಾಗಲಕೋಟೆ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನ ಹುಕುಮತ್ತಿನ ಸ್ಥಲ ಸೀಮೆಯಲ್ಲಿ ಇರುವಂಥ ಸ್ಥಾವರ ಮಾಲನ್ನು ಮಾರುವ ಬಗ್ಗೆ (ಅಥವಾ ಸ್ವಾಧೀನ ಮಾಡುವ ಬಗ್ಗೆ, ಹುಕುಮು ಮಾಡಿರುತ್ತದೆ.]

[ಅಥವಾ (೨) ಬಾಗಲಕೋಟೆ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನ ಲಾ. ಅಸಲ ನಂ ೬೮/೧೯೩೨ ನೇದ್ದರಲ್ಲಿಯ ಹುಕುಮನಾಮೆಯ ಅಮಲಬಜಾವಣೆಯು ಅದೇ ಕೋರ್ಟಿನ ಲಾ. ದ. ನ. ೧೫/೧೯೨೮ ನೇದ್ದರಲ್ಲಿ ನಡೆದಿದ್ದ ಫೈಸಲಿನ ಋಣಿಯ ಸ್ವತ್ತು ಜಪ್ತಾಗಿ ಲಿಲಾವಿಗೆ ಬಂದಿರುತ್ತದೆ ಮತ್ತು ಸದರಿ ಲಿಲಾವಿಸಿಂದ ವಸೂಲಾದ ಹಣದಲ್ಲಿ ಪಾಲು ಬೇಡಲಿಕ್ಕೆ ಅರ್ಜಿದಾರನು ಇಚ್ಛಿಸುತ್ತಾನೆ.]

(೨) ಅರ್ಜಿದಾರನ ವಿನಂತಿ ಏನಂದರೆ:—

ಸದರಿ ಹುಕುಮನಾಮೆಯು ವಿಜಾಪೂರ ಡಿಸ್ಟ್ರಿಕ್ಟ ಜಜ್ಜ ಕೋರ್ಟಿಗೆ ಅಮಲಬಜಾವಣೆಗಾಗಿ ಕಳುಹಿಸಬೇಕು.

**ಸೂಚನೆ:**—ಈ ಅರ್ಜಿಗೆ ಇಕರಾರು ಬರೆಯಬೇಕು. ಹುಕುಮನಾಮೆಯನ್ನು ಮಾಡಿದ ಕೋರ್ಟು ಇರುವ ಜಿಲ್ಹೆಯಲ್ಲಿಯೇ ಇರುವಂಥಾದ್ದೊಂದು ಕೋರ್ಟಿಗೆ ಅದನ್ನು ಅಮಲಬಜಾವಣೆಗಾಗಿ ಕಳುಹಿಸಬೇಕಾಗಿದ್ದಲ್ಲಿ, ಆ ಮೊದಲಿನ ಕೋರ್ಟಿನವರು ಅದನ್ನು ಆ ಎರಡನೇ ಕೋರ್ಟಿಗೆ ಪರಸ್ಪರವಾಗಿ ಕಳುಹಬೇಕು. ಆದರೆ ಆ ಹುಕುಮನಾಮೆಯ ಅಮಲುಬಜಾವಣೆಯ ಬಗ್ಗೆ ಕಳುಹಿಸಬೇಕಾಗಿದ್ದ ಕೋರ್ಟು ಬೇರೊಂದು ಜಿಲ್ಲೆಯಲ್ಲಿ ಇದ್ದರೆ ಆ ಹುಕುಮನಾಮೆಯನ್ನು ಮಾಡಿದ ಕೋರ್ಟು ಆ ಹುಕುಮನಾಮೆಯನ್ನು ಯಾವ ಜಿಲ್ಲೆಯಲ್ಲಿ ಬಜಾಯಿಸತಕ್ಕದ್ದೋ ಅಲ್ಲಿಯ ಡಿಸ್ಟ್ರಿಕ್ಟ ಕೋರ್ಟಿನ ಕಡೆಗೆ ಕಳುಹಬೇಕು. (ಆ. ೨೧, ರೂಲ ೫.)

## ನಂಬರು ೨

### ಹುಕುಮನಾಮೆಯ ಅಮಲುಬಜಾವಣೆಯ ಸಂಬಂಧದಿಂದ ತಕರಾರು ಮಾಡೋಣ. (ಕಲವು ೪೭.)

### ಸರನಾಮೆ

(೧) ... ... } (ಫೈಸಲಿನ ಋಣಿಯ ಪ್ರತಿನಿಧಿ)
ಅರ್ಜಿದಾರ

(೨) ... ... } ಎದುರಗಾರನು
(ಹುಕುಮನಾಮೆಯನ್ನು ಪಡೆದವನು)

ಅರ್ಜಿದಾರನು ಹುಕುಮನಾಮೆಯ ಅಮಲುಬಜಾವಣೆಯ ಸಂಬಂಧದಿಂದ ಕಲಮು ೪೭ ಪ್ರಕಾರ ಮಾಡುವ ತಕರಾರುಗಳು ಏನಂದರೆ:—

(೧) ಎದುರಗಾರನು ಈ ದರಖಾಸ್ತಿನಲ್ಲಿ ಬಡ್ಡಿಯನ್ನು ಬೇಡಿರುತ್ತಾನೆ. ಆದರೆ ಹುಕುನಾಮೆಯಲ್ಲಿ ಅದನ್ನು ಕೊಡಿಸಿರುವದಿಲ್ಲ.

(೨) ಅರ್ಜಿದಾರನು ಮದ್ರಾಸ ಸದರ್ನ ಮರಾಠಾ ರೇಲ್ವೆ ಕಂಪನಿಯಲ್ಲಿ ನೌಕರನು ಇರುತ್ತಾನೆ, ಮತ್ತು ಅವನಿಗೆ ದಿನಗೂಲಿ ೧೨ ಆಣೆ ದರದಂತೆ ದೊರೆಯುತ್ತದೆ. ಎದುರಗಾರನು ಅರ್ಜಿದಾರನ ಸಂಬಳವನ್ನು ಜಪ್ತಿ ಮಾಡಿಸಿರುತ್ತಾನೆ. ಸದರಿ ಸಂಬಳ ಮೇಲಿನ ಜಪ್ತಿ ಎಬ್ಬಿಸಬೇಕು.

(೩) ಎದುರಗಾರನು ಬಂಕಾಪುರ ತಾಲೂಕ ಪೈಕಿ ತಡಸ ಗ್ರಾಮದಲ್ಲಿ ಇರುವ ಅ. ಸ. ನ. ೧೬ ಎಕರೆ ೨೪ ೮ ೨ ತರಮು ೫೦ ರೂಪಾಯಿ ಉಳ್ಳಂಥಾ ಭೂಮಿಯನ್ನು ಜಪ್ತಿಮಾಡಿಸಿರುತ್ತಾನೆ. ಇದು ಫೈಸಲಿನ ಋಣಿಯಾದ ರುದ್ರಪ್ಪಾ ಪರಮೇಶ್ವರಪ್ಪಾ ಈತನ ಯಾ ಅರ್ಜಿದಾರನ ಮಾಲಕಿ ಉಳ್ಳದ್ದು ಇಲ್ಲ. ಮತ್ತು ಇದ್ದಿದ್ದಿಲ್ಲ.

(೪) ಎದುರಗಾರನು ಜಪ್ತಿ ಮಾಡಿಸಿದ್ದು ಶಿಗ್ಗಾವಿಯಲ್ಲಿದ್ದ ಮನೆಯು ಅರ್ಜಿದಾರನ ಪಿತ್ರಾರ್ಜಿತ ಆಸ್ತಿಯು ಇರುತ್ತದೆ; ಅದು ಫೈಸಲಿನ ಋಣಿಯ ಸ್ವಸಂಪಾದಿತ ಆಸ್ತಿಯು ಇರುವದಿಲ್ಲ.

(೫) ಅರ್ಜಿದಾರನ ಮೇಲ್ಕಂಡ ಹರಕತ್ತುಗಳನ್ನು ವಿಚಾರಿಸಿ ನಿರ್ಣಯ ಮಾಡಬೇಕೆಂದು ಅರ್ಜಿದಾರನ ಪ್ರಾರ್ಥನೆ ಇರುತ್ತದೆ.

## ನಂಬರು ೩

### ಅಪೂರ್ತಿಯಾದ ಆಧಾರದಿಂದ ಜಪ್ತಿಯನ್ನು ಮಾಡಿದ್ದಕ್ಕೆ ಪ್ರತಿಫಲದ ಬಗ್ಗೆ (ಕಲಮು ೯೫.)

### ಸರನಾಮೆ

(೧) ವಾದಿಯು ತಾರೀಖು ೧೪-೫-೧೯೨೭ನೇ ಇಸ್ವಿ ದಿವಸ ಲಾ. ಅಸಲು ನಂಬರು ೧೯೨೪/೩೩೭ನೇದ್ದರಲ್ಲಿ ಫೈಸಲಿನ ಪೂರ್ವದಲ್ಲಿ ಈ ಅರ್ಜಿದಾರನಿಗೆ

ಕೈದು ಮಾಡಿಸುವ ಬಗ್ಗೆ ಅರ್ಜಿ ಮಾಡಿ ಆ ಬಗ್ಗೆ ಹುಕುಮುಪಡಕೊಂಡು, ಸದರಿ ಹುಕುಮಿನ ಪ್ರಕಾರ ಅರ್ಜಿದಾರನಿಗೆ ತಾರೀಖು ೧೭-೫-೧೯೨೭ನೇ ಇಸ್ವಿ ದಿವಸ ಕೈದು ಮಾಡಿಸಿದನು.

(೨) ಯಾವ ದಸ್ತೈವಜಿನ ಆಧಾರ ಮೇಲೆ ವಾದಿಯು ದಾವೆ ಮಾಡಿದನು ಆ ದಸ್ತೈವಜು ಖೊಟ್ಟಿ ಇರುವದರಿಂದ ಆ ಮೂಲಕ ವಾದಿ ದಾವೆ ತಾರೀಖು ೧೮-೧೦-೧೯೨೭ನೇ ಇಸ್ವಿ ದಿವಸ ರದ್ದಾಯಿತು.

(೩) ಸದರಿ ದಸ್ತೈವಜು ಖೊಟ್ಟಿ ಇರುವದರಿಂದ ಅದರ ಆಧಾರದಿಂದ ದಾವೆಯನ್ನು ಮಾಡಲಿಕ್ಕೆ ವಾದಿಗೆ ಯೋಗ್ಯ ಅಥವಾ ಸಂಭವನೀಯವಾದ ಆಧಾರ ಇದ್ದಿಲ್ಲ.

(೪) ಅರ್ಜಿದಾರನ ವಿನಂತಿ ಏನಂದರೆ:—

ಮೇಲ್ಕಂಡಂತೆ ಅರ್ಜಿಯನ್ನು ಮಾಡಲಾಗಿ ಅರ್ಜದಾರನಿಗೆ ಆದ ಅಪಕಾರಕ್ಕಾಗಿ ೧೦೦೦ರೂಪಾಯಿಯ ಪ್ರತಿಫಲವನ್ನುವಾದಿಯ ಕಡೆಯಿಂದ ಕೊಡಿಸಬೇಕು.

## ನಂಬರು ೪

## ಅಪೂರ್ತಿಯಾದ ಆಧಾರದಿಂದ ಜಪ್ತಿಯನ್ನು ಮಾಡಿದ್ದಕ್ಕೆ ಪ್ರತಿಫಲದ ಬಗ್ಗೆ ಅರ್ಜಿಯು (ಕಲಮು ೯೫)

(೧) ವಾದಿಯು ತಾರೀಖು ೧೪-೫-೧೯೨೭ನೇ ಇಸ್ವಿ ದಿವಸ ಲಾ. ಅಸಲು ನಂಬರು $\frac{೧೨೩}{೧೯೨೭}$ ನೇದ್ದರಲ್ಲಿ ಫೈಸಲಿನ ಪೂರ್ವದಲ್ಲಿ ಅರ್ಜಿದಾರನ ಜಂಗಮ ಮಾಲು ಜಪ್ತ ಮಾಡಿಸುವ ಬಗ್ಗೆ ಅರ್ಜಿ ಮಾಡಿ ಆ ಬಗ್ಗೆ ಹುಕುಮು ಪಡೆಕೊಂಡು, ಸದರಿ ಹುಕುಮಿನ ಪ್ರಕಾರ ತಾರೀಖು ೧೬-೫-೧೯೨೭ನೇ ಇಸ್ವಿ ದಿವಸ ಅರ್ಜದಾರನ ಜಂಗಮ ಮಾಲು ಜಪ್ತ ಮಾಡಿಸಿದನು.

(೨) ಅಪೂರ್ತಿಯಾದ ಆಧಾರದಿಂದ ಸದರಿ ಅರ್ಜಿಯು ಮಾಡಲ್ಪಟ್ಟಿತು. ವಾದಿಯು "ಪ್ರತಿವಾದಿಯು ಯಾವತ್ತು ಮಾಲನ್ನು ಯಾ ಅದರ ಯಾವದೊಂದು ಭಾಗವನ್ನು ವಿನಿಯೋಗಿಸುವ ಪ್ರಯತ್ನದಲ್ಲಿದ್ದಾನೆಂದು ಮತ್ತು ಅರ್ಜಿಯಲ್ಲಿ

ಕಾಣಿಸಿದ ಮಾಲಿನ ಹೊರತಾಗಿ ಪ್ರತಿವಾದಿಯ ಬೇರೆ ಯಾವದೂ ಮಾಲು ಇಲ್ಲೆಂದು" ಮಾಡಿದ ವಿಧಾನಗಳು ಸುಳ್ಳ ಇರುತ್ತವೆ.

(೩) ಸದರಿ ಮಾಲಿನ ವಿನಿಯೋಗ ಮಾಡಬೇಕೆಂದು ಅರ್ಜದಾರನ ಎಂದು ಉದ್ದೇಶವಿದ್ದಿಲ್ಲ ಅರ್ಜದಾರನು ಪತ್ತುಳ್ಳವನು ಮತ್ತು ೨೫೦೦೦ ರೂಪಾಯಿ ಬೆಲೆಯ ಆಸ್ತಿಯ ಮಾಲಕನು ಇರುತ್ತಾನೆ.

**ಅರ್ಜಿದಾರನ ವಿನಂತಿ ಏನಂದರೆ—**

ಸದರಿ ಜಪ್ತಿಯಿಂದ ಆದ ಲುಕ್ಸಾನಿಯ ಬಗ್ಗೆ ೧೦೦೦ ರೂಪಾಯಿಯ ಪ್ರತಿಫಲವನ್ನು ಕೊಡಿಸಬೇಕು.

## ನಂಬರು ೫

## ಫೈಸಲುಗಳನ್ನು ಯಾ ಹುಕುಮುನಾಮೆಗಳನ್ನು ಸುಧಾರಿಸೋಣ

( ಕಲಮು ೧೫೨. )

### ಸರನಾಮೆ

( ) ಒತ್ತೆ ಇಟ್ಟ ಆಸ್ತಿಯನ್ನು ಮಾರಿಸುವ ಬಗ್ಗೆ ವಾದಿಯು ಇದೇ ಕೋರ್ಟಿನಲ್ಲಿ ಲಾ. ಅಸಲ ನಂಬರು ೧೯೮ / ೧೯೨೮ ನೇದ್ದು ದಾವೆ ಮಾಡಿದನು.

(೨) ಸದರಿ ಆಸ್ತಿಯ ಸಿಟಿ ಸರ್ವೆ ನಂಬರಗಳು ೧೪೧೫, ೧೪೧೬ ಅಂತಾ ಬರೆದಿರುತ್ತವೆ.

(೩) ಹೊಸ ಸಿಟಿ ಸರ್ವೆ ಚೌಕಶಿಯಲ್ಲಿ ಸದರಿ ಆಸ್ತಿಯ ಬಾಬತು ಸವರಿ ನಂಬರುಗಳು ಬದಲಾಗಿ ಅವುಗಳ ಸ್ಥಳದಲ್ಲಿ ೮೯೮ ಮತ್ತು ೮೯೯ ಅಂತಾ ನಂಬರುಗಳು ನಿರ್ದಿಷ್ಟವಾಗಿರುತ್ತವೆ.

(೪) ಸದರಿ ಆಸ್ತಿಯ ವರ್ಣನೆಯನ್ನು ಬರೆಯುವಾಗ್ಗೆ ಹಸ್ತದೋಷದಿಂದ ಸದರಿ ಹೊಸ ನಂಬರಗಳು ಬರೆಯುವವರಲ್ಲಿ ಬಂದಿಲ್ಲ. ಕಾರಣ ಫೈಸಲಿನಲ್ಲಿ ಪ್ರಾಥಮಿಕ ಹುಕುಮುನಾಮೆಯಲ್ಲಿ ಸದರಿ ಆಸ್ತಿಯ ನಂಬರುಗಳು ೧೪೧೫ ಮತ್ತು ೧೪೧೬ ಅಂತಾ ತೋರಿಸಿರುತ್ತವೆ.

(೫) ಪಕ್ಕಾ ಹುಕುಮನಾಮೆಯನ್ನು ಪಡಕೊಳ್ಳುವ ಬಗ್ಗೆ ಅರ್ಜಿಯನ್ನು ಮಾಡುವ ವೇಳೆಗೆ ಸದರಿ ತಪ್ಪು ಅರ್ಜಿದಾರನ ಲಕ್ಷಕ್ಕೆ ಬಂತು.

**ಅರ್ಜಿದಾರನ ವಿನಂತಿ ಏನಂದರೆ—**

ಮೇಲ್ಕಂಡ ೧೪೧೫ ಮತ್ತು ೧೪೧೬ನೇ ನಂಬರುಗಳ ಸ್ಥಳದಲ್ಲಿ ೪೯೮ ಮತ್ತು ೪೯೯ನೇ ನಂಬರುಗಳು ಬರೆದು ಮೇಲ್ಕಂಡ ದಾವೆಯ ಅಸಲರ್ಜಿಯು, ಫೈಸಲು ಮತ್ತು ಪ್ರಾಥಮಿಕ ಹುಕುಮನಾಮೆಯು ಸುಧಾರಿಸಬೇಕು.

## ನಂಬರು ೬

## ಒಂದೆ ಸ್ವಾರ್ಥಸಂಬಂಧದಲ್ಲಿ ಎಲ್ಲರ ತರ್ಫಿನಿಂದ ದಾವೆಯನ್ನು ಮಾಡುವದಕ್ಕೋಸ್ಕರವಾಗಿ ಅಪ್ಪಣೆಯನ್ನು ಪಡಕೊಳ್ಳುವ ಬಗ್ಗೆ

( ಆ. ೧, ರೂ. ೮. )

### ಸರನಾಮೆ

(೧) ಅರ್ಜಿದಾರನು ನೂಲವಿಯಲ್ಲಿಯ ಶ್ರೀ ಭೈರವಿ ಭಾರತಿ ಮಠದ ಅನುಯಾಯಿಯು ಇರುತ್ತಾನೆ.

(೨) ನೂಲವಿಯಲ್ಲಿ ಸದರಿ ಮಠದ ಅನುಯಾಯಿಗಳು ಅಂದಾಜು ೨೫೦ ಜನರು ಇರುತ್ತಾರೆ.

(೩) ಸದರಿ ಮಠದ ಸಂಬಂಧದಿಂದ ಗುಡಿಯೊಳಗಿನ ಮೂರ್ತಿಯ ಪೂಜೆಯನ್ನು ಮಾಡುವ ತನ್ನ ಬಾಧ್ಯತೆಯನ್ನು, ನಿರ್ಣಯಿಸುವದಕ್ಕಾಗಿ ಮೇಲ್ಕಂಡ ಎಲ್ಲ ಜನರ ತರ್ಫಿನಿಂದ ದಾವೆಯನ್ನು ಮಾಡಲಿಕ್ಕೆ ಅರ್ಜದಾರನು ಇಚ್ಛಿಸುತ್ತಾನೆ. ಮತ್ತು ಆ ಬಗ್ಗೆ ಅಪ್ಪಣೆಯನ್ನು ಬೇಡಿಕೊಳ್ಳುತ್ತಾನೆ.

## ನಂಬರು ೭

## ಬೇರೆ ರೀತಿಯಿಂದ ಸಮನು ಬಜಾವಣೆಯು (ಆ. ೫, ರೂ. ೨೦.)

### ಸರನಾಮೆ

(೧) ಇವನಲ್ಲಿ ಪ್ರತಿವಾದಿಯು ಸಮನು ಬಜಾಯಿಸಿಕೊಳ್ಳಬಾರದೆಂಬುದಾಗಿ ವೋರೆ ತಪ್ಪಿಸಿರುತ್ತಾನೆ.

[ ಅಥವಾ (೧) ಇದರಲ್ಲಿ ಪ್ರತಿವಾದಿಯಳು ದೊಡ್ಡ ಮನೆತನದ ಗೋಷಾದ ಹೆಣ್ಣು ಮಗಳು ಇರುವದರಿಂದ ವಾಡಿಕೆಯು ಕ್ರಮದಂತೆ ಸಮನು ಬಜಾಯಿಸಲಿಕ್ಕೆ ಬರುವಂತೆ ಇಲ್ಲ.

(೨) ಅರ್ಜದಾರನ ವಿನಂತಿ ಏನಂದರೆ—

ಕೋರ್ಟಿನೊಳಗೆ ಬಹಿರಂಗವಾದ ಯಾವದೊಂದು ಸ್ಥಳದಲ್ಲಿಯೂ, ಸಮನು ಹೊರಡುವ ಪೂರ್ವದಲ್ಲಿ ಪ್ರತಿವಾದಿಯು ...... ಶಹರ ಪೈಕಿ ... ಓಣಿಯಲ್ಲಿ ಮು. ನಂ. ... ನೇದ್ದು ಮನೆಯಲ್ಲಿ ವಾಸಿಸುತ್ತಿರುವದರಿಂದ (ಅಥವಾ ... ಅಂಗಡಿಯಲ್ಲಿ ಉದ್ಯೋಗ ನಡೆಯಿಸುತ್ತಿರುವದರಿಂದ ಅಥವಾ ನಫೆಯ ಸಲುವಾಗಿ ಸ್ವತಃ ಕೆಲಸ ಮಾಡುತ್ತಿರುವದರಿಂದ) ಆ ಮನೆಯ (ಯಾ ಅಂಗಡಿಯ) ಯಾವದೊಂದು ಬಹಿರಂಗವಾದ ಭಾಗದಲ್ಲಿಯೂ, ಆ ಸಮನಿನ ನಕಲು ಹಚ್ಚುವದರಿಂದಾಗಲೀ ಕೋರ್ಟಿಗೆ ಯೋಗ್ಯವಾಗಿ ತೋರಿದಂಥ ಬೇರೆ ಯಾವದೊಂದು ರೀತಿಯಿಂದಾಗಲೀ ಸಮನು ಬಜಾಯಿಸಲಿಕ್ಕೆ ಹುಕುಮು ಕೊಡಬೇಕು.

---

## ಪ್ರತಿಜ್ಞಾ ಲೇಖ (ಅಫಿಡೆವಿಟ)

(೧) ಮೊದಲಿನ ಸರ್ತಿ ಪ್ರತಿವಾದಿಯು ವಾಸಿಸುವಂಥ ಶಹರ ಪೈಕಿ ... ಓಣಿಯಲ್ಲಿರುವ ಮು. ನಂ. ... ನೇದ್ದು ಮನೆಗೆ ಸಮನು ಕಳುಹಿಸಲ್ಪಟ್ಟಿತು. ಆದರೆ ಅವನು ಬೆಳಗಾಂವಿಗೆ ಹೋಗಿರುತ್ತಾನೆಂದು ನಾಜಾರಿಯಾಗಿ ಬಂತು.

(೨) ಎರಡನೆ ಸರ್ತಿ ಸಮನು ಬೆಳಗಾಂವಿಗೆ ಕಳುಹಿಸಲ್ಪಟ್ಟಿತು. ಅಲ್ಲಿಂದ ಸಹಾ ಅದು ನಾಜಾರಿಯಾಗಿ ಬಂತು.

(೩) ಮೂರನೆ ಸರ್ತಿ ಪ್ರತಿವಾದಿಯು ಉದ್ಯೋಗ ನಡೆಯಿಸತಕ್ಕಂಥ ... ಅಂಗಡಿಗೆ ಕಳುಹಿಸಲ್ಪಟ್ಟಿತು. ಆದರೆ ಅವನು ಗೋಕಾವಿಗೆ ಹೋಗಿರುತ್ತಾನೆಂದು ನಾಜಾರಿಯಾಗಿ ಬಂತು.

(೪) ನಾಲ್ಕನೆ ಸಾರೆ ಸಮನು ಗೋಕಾವಿಗೆ ಕಳುಹಿಸಲ್ಪಟ್ಟಿತು. ಆದರೆ ಪ್ರತಿವಾದಿಯು ಅದೂ ಇನಕಾರ ಮಾಡಿರುತ್ತಾನೆಂದು ಪೋಸ್ಟ ಆಫೀಸಿನವರಿಂದ ನಾಜಾರಿ ಆಗಿ ಬಂತು.

(೫) ಸಮನು ಬಜ ಯಿಸಿಕೊಳ್ಳಬಾರದೆಂಬುದಾಗಿ ಪ್ರತಿವಾದಿಯು ಬೋರಿ ತಪ್ಪಿಸುತ್ತಾನೆ.

## ನಂಬರು ೮

## ಅಸಲಜರ್ಜಿಯು ಸುಧಾರಿಸುವ ವಿಷಯದಲ್ಲಿ (ಆ. ೬, ರೂ. ೧೭.)

### ಸರನಾಮೆ

(೧) ಪ್ರತಿವಾದಿಯು ತಾರೀಖು ೧೬-೭-೧೯೨೭ನೇ ಇಶ್ವಿ ದಿವಸ ವಾದಿ ಬಳಿಯಲ್ಲಿ ೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡನು.

(೨) ಸದರೀ ಸಾಲದ ಬಗ್ಗೆ ಪ್ರತಿವಾದಿಯು ಬರೆದುಕೊಟ್ಟ ಪ್ರಾಮಿಸರಿ ನೋಟಿನ ಆಧಾರವ ಮೇಲಿಂದ ಈ ದಾವೆಯು ಮಾಡಲ್ಪಟ್ಟದೆ.

(೩) ಸದರೀ ಪ್ರಾಮಿಸರಿ ನೋಟು ಕಾಯದೆಯಿಂದ ಠರಾಯಿಸಲ್ಪಟ್ಟ ಸ್ಟಾಂಪಿನಗಿಂತ ಕಡಿಮೆ ಸ್ಟಾಂಪಿನ ಮೇಲೆ ಬರೆಯಲ್ಪಟ್ಟಿರುತ್ತದೆ.

(೪) ಈ ಕಾರಣದಿಂದ ಸದರೀ ಪ್ರಾಮಿಸರಿ ನೋಟು ಪುರಾವೆಗೆ ಹಿಡಿಯಲಿಕ್ಕೆ ಬರುವಂತೆ ಇಲ್ಲ. ಆದ್ದರಿಂದ ಈ ದಾವೆಯು ರದ್ದಾಗುವ ಸಂಭವವದೆ.

(೫) ಮೂಲ ಸಾಲದ ಆಧಾರದಿಂದ ಈ ದಾವೆಯು ಮಾಡಿದ್ದಂತೆ ಅಸಲ ಅರ್ಜಿಯನ್ನು ಸುಧಾರಿಸಲಿಕ್ಕೆ ವಾದಿಗೆ ಬಿಡಬೇಕೆಂದು ವಾದಿಯು ಬೇಡುತ್ತಾನೆ.

**ಸೂಚನೆ:**— ಅಸಲಜರ್ಜಿಯೂ ಕೈಫಿಯತೂ ಸುಧಾರಿಸೋಣ—(ಆ. ೬, ರೂ. ೧೭.) ಕೋರ್ಟಿನವರು ಕಾರ್ಯಕ್ರಮದ ಯಾವದೇ ಪರ್ಯಾಯದಲ್ಲಿಯಾದರೂ ಇಬ್ಬರೊಳಗೆ ಯಾವನೇ ಪಕ್ಷಕಾರನಿಗೆ ತನ್ನ ಅಸಲಜರ್ಜಿಯನ್ನು ಯಾ ಕೈಫಿಯತನ್ನು ಯೋಗ್ಯವಾಗಬಹುದಾದಂಥ ರೀತಿಯಿಂದ ಮತ್ತು ಶರತುಗಳ ಮೇಲೆ ಬದಲಾಯಿಸುವದಕ್ಕೆ ಅಥವಾ ಸುಧಾರಿಸುವದಕ್ಕೆ ಬಿಡಬಹುದು, ಮತ್ತು ಪಕ್ಷಕಾರರೊಳಗೆ ವಾದದಲ್ಲಿರುವ ನಿಜವಾದ ಪ್ರಶ್ನಗಳನ್ನು ನಿರ್ಣಯಿಸುವ ಕಾರಣದ ಬಗ್ಗೆ ಬೇಕಾಗಬಹುದಾದಂಥ ಎಲ್ಲ ಸುಧಾರಣೆಗಳನ್ನೂ ಮಾಡತಕ್ಕದು.

ಕೋರ್ಟಿನಿಂದ ಈ ಪ್ರಕಾರ ಅಪ್ಪಣೆಯನ್ನು ಪಡಕೊಂಡು ಪಕ್ಷಕಾರನು ತಾನಾಗಿ ಅಸಲಜರ್ಜಿ ಯಾ ಕೈಫಿಯತು ಸುಧಾರಿಸಬೇಕು.

## ನಂಬರು ೯

### ಅಸಲರ್ಜಿಯನ್ನು ಸುಧಾರಿಸುವ ವಿಷಯದಲ್ಲಿ (ಆ. ೬, ರೂ. ೧೭)

### ಸರನಾಮೆ

(೧) ವಾದಿಯು ಕೆಳಗೆ ವರ್ಣಿಸಿದ ತೋಟದ ಮಾಲಕನಾಗಿರುತ್ತಾನೆ. ಸದರೀ ತೋಟದ ವರ್ಣನೆ ... ... ...

(೨) ಸದರೀ ತೋಟದಲ್ಲಿಯ ಮರಗಳನ್ನು ಪ್ರತಿವಾದಿಯು ಕಡಿದಿರುತ್ತಾನೆ; ಅವುಗಳ ಬೆಲೆಯ ಬಗ್ಗೆ ವಾದಿಯು ಈ ದಾವೆಯನ್ನು ಮಾಡಿರುತ್ತಾನೆ.

(೩) ವಾದಿಯು ಸದರೀ ತೋಟದ ಮಾಲಕನಿದ್ದದ್ದು ಪ್ರತಿವಾದಿಯು ನಿರಾಕರಿಸುತ್ತಾನೆ. ಸದರೀ ತೋಟದ ಮಾಲಕೀ ಹಕ್ಕು ವಾದಿ ಪ್ರತಿವಾದಿಗಳೊಳಗೆ ವಾದದಲ್ಲಿರುವ ನಿಜವಾದ ಪ್ರಶ್ನವಾಗಿರುತ್ತದೆ.

(೪) ಸದರೀ ಪ್ರಶ್ನೆಯ ಕೊನೆಯ ನಿರ್ಣಯ ಮಾಡುವದಕ್ಕೋಸ್ಕರ ವಾಗಿ ಅಸಲರ್ಜಿಯನ್ನು ಸುಧಾರಿಸುವ ಅವಶ್ಯವಿದೆ.

(೫) ವಾದಿಯು ಸದರೀ ತೋಟದ ಮಾಲಕನಾಗಿರುತ್ತಾನೆಂದು ಡಿಕ್ಲೇರೇಶನ ಪಡಕೊಳ್ಳುವಂತೆ ಅಸಲರ್ಜಿಯನ್ನು ಸುಧಾರಿಸಲಿಕ್ಕೆ ವಾದಿಗೆ ಬಿಡಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೧೦

### ದಾವೆಯು ರದ್ದು ಮಾಡಿದ್ದನ್ನು ತಿರುಗಿಸುವದಕ್ಕೋಸ್ಕರ

(ಆ. ೯, ರೂ. ೮.)

### ಸರನಾಮೆ

(೧) ತಾರೀಖು ೧೬-೪-೧೯೨೮ನೇ ಇಸ್ವಿ ದಿವಸ ಅರ್ಜದಾರನಿಗೆ ಅಮಾಂಶವ್ಯಥೆ ಆಗಿತ್ತು. ಮತ್ತು ಅದು ತಾರೀಖು ೨೯-೪-೧೯೨೮ ನೇ ಇಸ್ವಿ ದಿವಸದ ವರೆಗೆ ಹಾಗೆ ಇತ್ತು. ಈ ಕಾರಣದಿಂದ ಅರ್ಜದಾರನಿಗೆ ಲಾ. ಅಸಲು

ನಂ. $\frac{೩೩೭}{೧೯೨೮}$ ನೇ ದಾವೆಯು ಸುಗಾವಣಿಗಾಗಿ ನೇಮಿಸಿದ ದಿವಸ ಹಾಜರಾಗಲಿಕ್ಕೆ ಅಡ್ಡಿಯಾಯಿತು.

(೨) ಅರ್ಜದಾರನ ವಿನಂತಿ ಏನಂದರೆ—

ತಾರೀಖು ೨೪-೪-೧೯೨೮ನೇ ಇಸ್ವಿ ದಿವಸ ಲಾ. ಅ. ನ. $\frac{೩೩೭}{೧೯೨೮}$ ನೇ ದಾವೆಯು ರದ್ದು ಮಾಡಿದ ಹುಕುಮನ್ನು ತಿರುಗಿಸಬೇಕು.

**ಸೂಚನೆ:**—ಈ ಅರ್ಜಿಗೆ ಇಕರಾರು ಬರೆಯಬೇಕು. ಮತ್ತು ಅವಕ್ಕೆ ಪ್ರತಿಜ್ಞಾ ಲೇಖನನ್ನು ಜೋಡಿಸಬೇಕು. ಸದರಿ ಪ್ರತಿಜ್ಞಾ ಲೇಖದಲ್ಲಿ ವ್ಯಥೆಯು ಬಗ್ಗೆ ಯಾವತ್ತು ಸಂಗತಿಗಳನ್ನು ಬರೆಯಬೇಕು. ಹಾಜರಾಗಲಿಕ್ಕೆ ತಪ್ಪಿದ್ದರಿಂದ ಅಥವಾ ಪ್ರೊಸೆಸ್ಸಿನ ಬಜಾವಣಿಯ ವೆಚ್ಚ ಕೊಡಲಿಕ್ಕೆ ಅಥವಾ ವೆಚ್ಚದ ಬಗ್ಗೆ ತಾರಣ ಕೊಡಲಿಕ್ಕೆ ತಪ್ಪಿದ್ದರಿಂದ ತೆಗೆದು ಹಾಕಿದ್ದನ್ನು ರದ್ದು ಮಾಡುವ ಹುಕುಮು ಆಗುವ ವಿಷಯದಲ್ಲಿ ವಾದಿಯು ಮೇಲಿನಂತೆ ಮಾಡತಕ್ಕ ಅರ್ಜಿಯು ತೆಗೆದು ಹಾಕಿದ ತಾರೀಖಿನ **ಮೂವತ್ತು ದಿವಸಗಳಲ್ಲಿ** ಮಾಡಬೇಕು.

## ನಂಬರು ೧೧

## ಏಕತರ್ಫಿ ಹುಕುಮನಾಮೆಯನ್ನು ರಹಿತ ಮಾಡುವದಕ್ಕಾಗಿ

(ಆ. ೯, ರೂ. ೧೩.)

### ಸರನಾಮೆ

(೧) ಅರ್ಜಿದಾರನು ಲಾ. ಅಸಲು ನಂಬರು $\frac{೯೨೭}{೧೯೨೭}$ ನೇ ದಾವೆಯಲ್ಲಿ ಒಬ್ಬ ಪ್ರತಿವಾದಿಯಾಗಿದ್ದನು. ಸದರಿ ದಾವೆಯಲ್ಲಿ ತಾರೀಖು ೫-೪-೧೯೨೮ನೇ ಇಸ್ವಿ ದಿವಸ ಅರ್ಜದಾರನಿಗೆ ವಿರುದ್ಧವಾಗಿ ಏಕತರ್ಫಿ ಹುಕುನುನಾಮೆಯಾಗಿರುತ್ತದೆ.

(೨) ಅರ್ಜಿಗೆ ಜೋಡಿಸಿದ ಪ್ರತಿಜ್ಞಾ ಲೇಖದಲ್ಲಿ ತೋರಿಸಿದ ಕಾರಣದಿಂದ ದಾವೆಯು ಸುನಾವಣಿಗಾಗಿ ನೇಮಿಸಿದ ದಿವಸ ಹಾಜರಾಗಲಿಕ್ಕೆ ಅರ್ಜಿದಾರನಿಗೆ ಅಡ್ಡಿಯಾಯಿತು. ಸದರಿ ಕಾರಣವು ತಕ್ಕವಿದೆಂಬ ಅರ್ಜದಾರನ ಅಂಬೋಣವಿದೆ.

(೩) ಅರ್ಜಿದಾರನ ವಿನಂತಿ ಏನಂದರೆ—

ತಾರೀಖು ೫-೪-೧೯೨೮ನೇ ಇಸ್ವಿ ದಿವಸ ಅರ್ಜದಾರನಿಗೆ ವಿರುದ್ಧ ವಾಗಿ ಮಾಡಿದ ಹುಕುಮನಾಮೆಯು ರಹಿತ ಮಾಡುವ ಹುಕುಮು ಮಾಡಬೇಕು.

**ಸೂಚನೆ:—** ಈ ಅರ್ಜಿಗೆ ಇಕರಾರು ಬರೆಯುಬೇಕು. ಮತ್ತು ಇದಕ್ಕೆ ಪ್ರತಿಜ್ಞಾ ಲೇಖ ಜೋಡಿಸಬೇಕು. ಮತ್ತು ಸದರೀ ಪ್ರತಿಜ್ಞಾ ಲೇಖದಲ್ಲಿ ಯಾವ ಕಾರಣದಿಂದ ದಾವೆಯು ಸುನಾವಣೆಗಾಗಿ ನಿಯಮಿಸಿದ ದಿವಸ ಹಾಜ ರಾಗಲಿಕ್ಕೆ ತನಗೆ ಅಡ್ಡಿಯಾಯಿತೆಂಬುದು ಹೇಳಬೇಕು. ಏಕತರ್ಫಿ ಹುಕುಮನಾಮೆಯನ್ನು ರದ್ದು ಮಾಡುವ ಹುಕುಮು ಆಗುವದಕ್ಕೋಸ್ಕರ ಪ್ರತಿವಾದಿಯು ಮೇಲಿನಂತೆ ಮಾಡತಕ್ಕ ಅರ್ಜಿಯು ಹುಕುಮನಾಮೆಯ ತಾರೀ ಖಿನ ಅಥವಾ ಸಮನು ಯೋಗ್ಯವಾಗಿ ಬಜಾಯಿಸಲ್ಪಡದಿದ್ದರೆ ಅರ್ಜದಾರನಿಗೆ ಹುಕುಮನಾಮೆಯು ತಿಳಿವಳಿಕೆಗೆ ಬಂದ ತಾರೀಖಿನ **ಮೂವತ್ತು ದಿವಸಗಳಲ್ಲಿ** ಮಾಡಬೇಕು.

## ನಂಬರು ೧೨

## ಏಕತರ್ಫಿ ಹುಕುಮನಾಮೆಯನ್ನು ರಹಿತ ಮಾಡುವದಕ್ಕಾಗಿ

(ಆ. ೯, ರೂ ೧೩)

### ಸರನಾಮೆ

(೧) ಅರ್ಜಿದಾರನು ಲಾ. ಅಸಲು ನಂಬರು ೭೪೬/೧೯೨೮ನೇ ದಾವೆಯಲ್ಲಿ ಒಬ್ಬ ಪ್ರತಿವಾದಿಯಾಗಿದ್ದನು; ಸದರಿ ದಾವೆಯಲ್ಲಿ ತಾರೀಖು ೧೫-೪-೧೯೨೯ನೇ ಇಸ್ವಿ ದಿವಸ ಅರ್ಜದಾರನ ವಿರುದ್ಧವಾಗಿ ಏಕತರ್ಫಿ ಹುಕುಮನಾಮೆಯಾಗಿರುತ್ತದೆ.

(೨) ಸದರಿ ದಾವೆಯ ಸಮನು ಅರ್ಜದಾರನ ಮೇಲೆ ಯೋಗ್ಯವಾಗಿ ಬಜಾಯಿಸಲ್ಪಡಲಿಲ್ಲ.

(೩) ತಾರೀಖು ೧೫-೪-೧೯೨೯ನೇ ಇಸ್ವಿದಿವಸ ಅರ್ಜಿದಾರನಿಗೆ ವಿರುದ್ಧ ವಾಗಿ ಮಾಡಿದ ಹುಕುಮನಾಮೆಯು ರಹಿತ ಮಾಡುವ ಹುಕುಮು ಮಾಡ ಬೇಕೆಂದು ಅರ್ಜಿದಾರನು ಬೇಡುತ್ತಾನೆ.

**ಸೂಚನೆ:** – ಇಕರಾರು ಬರೆಯುಬೇಕು ಮತ್ತು ಪ್ರತಿಜ್ಞಾ ಲೇಖವನ್ನು ಜೋಡಿಸಬೇಕು.)

## ನಂಬರು ೧೩

## ದಸ್ತೈವಜಿನ ಯಾದಿಯು (ಆ. ೧೩, ರೂ. ೧-)

## ಸರನಾಮೆ

ವಾದಿಯು / ಪ್ರತಿವಾದಿಯು ಹಾಜರು ಪಡಿಸಿದ ದಸ್ತೈವಜುಗಳ ಯಾದಿಯು

| ನಂಬರು | ದಸ್ತೈವಜಿನ ವರ್ಣನವು | ದಸ್ತೈವಜಿನಮೇಲೆ ತಾರೀಖು ಇದ್ದರೆ ಅದು | ಪಕ್ಷಕಾರನ ಅಥವಾ ವಕೀಲನ ಸಹಿ |
|---|---|---|---|
| ೧ | ೨ | ೩ | ೪ |
| | | | |

## ನಂಬರು ೧೪

## ಕೋರ್ಟನಿಂದ ಕಾಗದಗಳನ್ನು ಬೇಡುವದಕ್ಕಾಗಿ (ಆ. ೧೩, ರೂ. ೧೦.)

## ಸರನಾಮೆ

(೧) ಅರ್ಜಿಗೆ ಜೋಡಿಸಿದ ಪ್ರತಿಜ್ಞಾದ ಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ಅರ್ಜಿದಾರನು ಕಾರವಾರ ಡಿಸ್ಟ್ರಿಕ್ಟ ಜಜ್ಜ ಕೋರ್ಟನಿಂದ ಕೆಳಗೆ ವಿವರಿಸಿದ ಕಾಗದಗಳನ್ನು ತರಿಸಿಕೊಂಡು ತಪಾಸಿಸಬೇಕೆಂದು ಬೇಡುತ್ತಾನೆ.

ಸದರಿ ಕಾಗದಗಳ ವಿವರ:—

೧. ಹೊನ್ನಾವರ ೨ನೇ ವರ್ಗ ಸಬಜಜ್ಜ ಕೋರ್ಟಿನ ಲಾ. ಅಸಲು ನಂಬರು -೪೫೮/೧೯೨೭- ನೇ ದಾವೆಯಲ್ಲಿಯ

ಅಸಲರ್ಜಿ ನಿಶಾನಿ ನಂಬರು ೧.

೨. ಕೈಫಿಯತು ... ... ನಿಶಾನಿ ನಂಬರು ೧೩

ವಗೈರೆ ವಗೈರೆ

---

## ಪ್ರತಿಜ್ಞಾಲೇಖ

(**ಸೂಚನೆ**:-ಪ್ರತಿಜ್ಞಾ ಲೇಖದಲ್ಲಿ ಬೇಡತಕ್ಕ ಕಾಗದಗಳು ಅರ್ಜಿಮಾಡಲ್ಪಟ್ಟ ದಾವೆಯಲ್ಲಿ ಅವಶ್ಯಕವಾದದ್ದು ಹ್ಯಾಗೆಂಬುದು ಮತ್ತು ಅರ್ಜಿದಾರನು ನಿಷ್ಕಾರಣ ವಾದ ವೆಚ್ಚದ ಯಾ ವಿಲಂಬದ ಹೊರತು ಯೋಗ್ಯವಾಗಿ ಸಹಿಯಿಂದ ನಿಜ ಪಡಿ ಸಲ್ಪಟ್ಟ ಆ ಕಾಗದಗಳ ಯಾ ತನಗೆ ಬೇಕಾಗಿದ್ದ ಅವುಗಳ ಭಾಗದ ನಕಲುಗಳನ್ನು ಪಡೆಯಲಾರನೆಂಬುದು ಅಥವಾ ನ್ಯಾಯದ ಉದ್ದೇಶಗಳಿಗಾಗಿ ಅಸಲು ಕಾಗದ ಗಳೇ ಹಾಜರಾಗುವ ಅಗತ್ಯವಿರುತ್ತದೆಂಬುದು ತೋರಿಸಲ್ಪಟ್ಟಿರಬೇಕು.)

## ನಂಬರು ೧೫

### ಫೈಸಲು ವ ಹುಕುಮನಾಮೆಯ ದಾಖಲೆಯುಳ್ಳ ನಕಲು ಗಳನ್ನು ಬೇಡುವ ವಿಷಯದಲ್ಲಿ (ಆ. ೭೮, ರೂ. ೨೦.)

### ಸರನಾಮೆ

ಇದರಲ್ಲಿ ೨ನೇ ಪ್ರತಿವಾದಿಯು ಮಾಡುವ ಅರ್ಜಿ ಏನಂದರೆ:—ಈ ದಾವೆ ಯೊಳಗಿನ ಫೈಸಲಿನ ನಕಲು ೧ ಮತ್ತು ಹುಕುನಾಮೆಯು ನಕಲು ೧ ಕೊಡ ಬೇಕು. ವೆಚ್ಚಿನ ಬಗ್ಗೆ ೧ ರುಪಾಯಿ ಕೊಟ್ಟಿರುತ್ತದೆ. ಹೆಚ್ಚಿನ ಕೊಡತಕ್ಕದ್ದಾ ಗುವ ರಕಮು ಹಿಂದಿನಿಂದ ಕೊಡಲಾಗುವದು.

ತಾರೀಖು ಹಜರತ ಸಾಹೇಬ ಕುಸುಗಲ್ಲ

ಸಹಿ

**ಸೂಚನೆ**:—ಪಕ್ಷಕಾರರಿಗೆ, ಕೋರ್ಟಿಗೆ ಅರ್ಜಿಯನ್ನು ಮಾಡಲಾಗಿ ಅವರ ವೆಚ್ಚದಿಂದ ಫೈಸಲು ಹುಕುಮನಾಮೆಯ ದಾಖಲೆಯುಳ್ಳ ನಕಲುಗಳನ್ನು ಕೊಡ ಬೇಕು. (ಆ. ೨೦, ರೂ. ೨೦.)

## ನಂಬರು ೧೬

## ಫೈಸಲು ವ ಹುಕುಮುನಾಮೆಯ ದಾಖಲೆಯುಳ್ಳ ನಕಲುಗಳನ್ನು ಬೇಡುವ ವಿಷಯದಲ್ಲಿ (ಆ. ೨೦, ರೂ. ೨೦.)

### ಸರನಾಮೆ

ಈ ದಾವೆಯೊಳಗಿನ ಫೈಸಲಿನ ನಕಲು ಒಂದು ಮತ್ತು ಹುಕುನಾಮೆಯ ನಕಲು ಒಂದು ತಯಾರಿಸಿ ವ್ಹಿ. ಪಿ. ಯಿಂದ ಕೆಳಗೆ ಬರೆದ ಪತ್ತೆಗೆ ಕಳಿಸಕೊಡಬೇಕೆಂದು, ಇದರಲ್ಲಿ ३ನೇ ಪ್ರತಿವಾದಿಯು ಬೇಡುತ್ತಾನೆ.

ತಾರೀಖು ... ... ಸಹಿ ರಾಯಪ್ಪಾ ದೊಡ್ಡ ಗಾಣಿಗೇರ

ಪತ್ತೆ:— ರಾ. ರಾಘವೇಂದ್ರರಾವ ಬ್ಯಾಹಟ್ಟಿ ವಕೀಲ ಹುಬ್ಬಳ್ಳಿ

## ನಂಬರು ೧೭

## ಫೈಸಲು ಮತ್ತು ಹುಕುಮುನಾಮೆಯ ದಾಖಲೆಯುಳ್ಳ ನಕಲುಗಳನ್ನು ಬೇಡುವ ವಿಷಯದಲ್ಲಿ (ಆ. ೨೦, ರೂ. ೨೦.)

### ಸರನಾಮೆ

ಇದರಲ್ಲಿ ೨ ನೇ ಪ್ರತಿವಾದಿಯು, ಈ ದಾವೆಯೊಳಗಿನ

(೧) ಫೈಸಲಿನ ನಕಲು; ಮತ್ತು

(೧) ಹುಕುಮುನಾಮೆ ನಕಲು ಕೊಡಬೇಕೆಂದು ಬೇಡುತ್ತಾನೆ.

ತಾರೀಖು ಕಾಸೀಮುಸಾಹೇಬ ಕುಸುಗಲ್ಲ

ಸಹಿ

## ನಂಬರು ೧೮

### ದಾವೆಯೊಳಗಿನ ಕಾಗದಪತ್ರಗಳ ನಕಲುಗಳನ್ನು ಬೇಡುವ ವಿಷಯದಲ್ಲಿ

### ಸರನಾಮೆ

ಇದರಲ್ಲಿ ವಾದಿಯು ಮಾಡುವ ಅರ್ಜಿ ಏನೆಂದರೆ:—ಈ ದಾವೆಯೊಳಗಿನ

ಅಸಲರ್ಜಿ ನಕಲು ಒಂದು.

ಕೈಫಿಯತಿನ ನಕಲು ಒಂದು.

ನಿಶಾನಿ ೧೧ನೇದ್ದರ ನಕಲು ಒಂದು.

ಈ ಪ್ರಕಾರ ನಕಲುಗಳನ್ನು ತಯಾರಿಸಿ ವ್ಹಿ. ಪಿ. ಯಿಂದ ಕೆಳಗೆ ಬರೆದ ಪತ್ತೆಗೆ ಕಳಿಸಕೊಡಬೇಕು.

ತಾರೀಖು ಹುಸೇನಸಾಹೇಬ ಕುಸುಗಲ್ಲ

ಸಹಿ

ಪತ್ತೆ:— ರಾ. ಗೋಪಾಳರಾವ ದೇಶಪಾಂಡೆ ವಕೀಲ, ಹಾವೇರಿ.

## ನಂಬರು ೧೯

### ಹುಕುಮನಾಮೆಯು ಭರಪಾಯಿಯಾಗಿದ್ದಕ್ಕೆ (ಆ. ೨೧, ರೂ. ೨.)

ಲಾ. ಅಸಲ ನಂ. ೯೨೮/೧೯೨೭

### ಸರನಾಮೆ

(೧) ಇದರಲ್ಲಿ ಹುಕುಮನಾಮೆಯನ್ನು ಧಾರಣ ಮಾಡಿದವನಾದ ವಾದಿಯು ತಿಳಿಸುವದೇನಂದರೆ:—

ಪ್ರತಿವಾದಿಯು ೨೫೦ ರೂಪಾಯಿಗಳನ್ನು ಕೊಟ್ಟು ಸದರಿ ಹುಕುಮನಾಮೆಯು ಅಂಶತಃ (ಯಾ ಪೂರ್ತಿಯಾಗಿ) ಭರಪಾಯಿ ಮಾಡಿರುತ್ತಾನೆ.

[ಅಥವಾ ಪ್ರತಿವಾದಿಯು ತಾರೀಖು ೧೬-೭-೧೯೨೮ ನೇ ಇಶ್ವಿ ದಿವಸ ರೋಖು ೨೦೦ರೂಪಾಯಿಗಳನ್ನು ಮತ್ತು ೫೦ ರೂಪಾಯಿಗಳ ಬೆಲೆಯ ಆಕಳನ್ನು

ಅದೇ ದಿವಸ ವಾದಿಗೆ ಕೊಟ್ಟು ಸದರಿ ಹುಕುಮನಾಮೆಯು ಅಂಶತಃ (ಯಾ ಪೂರ್ತಿಯಾಗಿ) ಭರಪಾಯಿ ಮಾಡಿರುತ್ತಾನೆ.]

## ನಂಬರು ೨೦

### ಹುಕುಮನಾಮೆಯು ಭರಪಾಯಿಯಾಗಿದ್ದಕ್ಕೆ (ಆ. ೨೧, ರೂ. ೨.)

### ಸರನಾಮೆ

(೧) ಅರ್ಜಿದಾರನು ಇದೇ ಕೋರ್ಟಿನ ಲಾ. ಅಸಲ ನಂ. $\frac{೯೨೮}{೧೯೨೭}$ ನೇ ದಾವೆಯಲ್ಲಿ ಫೈಸಲಿನ ಋಣಿಯಾಗಿರುತ್ತಾನೆ.

(೨) ಅರ್ಜಿದಾರನು ತಾರೀಖು ೧೬–೭–೧೯೨೮ನೇ ಇಸ್ವಿ ದಿವಸ ಕೋರ್ಟಿನ ಹೊರಗೆ ಸದರಿ ದಾವೆಯ ಹುಕುಮನಾಮೆಯನ್ನು ಧಾರಣ ಮಾಡಿದವನಾದ ವಾದಿಗೆ ೨೫೦ ರುಪಾಯಿಗಳನ್ನು ಕೊಟ್ಟು ಸದರಿ ಹುಕುಮನಾಮೆಯ ಅಂಶತಃ (ಯಾ ಪೂರ್ತಿಯಾಗಿ) ಭರಪಾಯಿ ಮಾಡಿರುತ್ತಾನೆ.

(೩) ಅರ್ಜಿದಾರನ ವಿನಂತಿ ಏನಂದರೆ:—

ಸದರಿ ಹುಕುಮನಾಮೆಯನ್ನು ಧಾರಣ ಮಾಡಿದವನಿಗೆ ನೋಟೀಸು ಕೊಟ್ಟು ಸದರಿ ಭರಪಾಯಿಯು ದಾಖಲು ಮಾಡಬೇಕು.

(**ಸೂಚನೆ:**— ಇಕರಾರು ಬರೆಯಬೇಕು.)

## ನಂಬರು ೨೧

### ಜಪ್ತಿಯಿಂದ ಖುಲಾಸೆ ಮಾಡುವದಕ್ಕಾಗಿ (ಆ. ೨೧, ರೂ. ೫೮.)

ಕಿ. ನ.

ಕೋರ್ಟಿನಲ್ಲಿ

(೧) ಅರ್ಜಿದಾರನು

(ಹಕ್ಕದಾರನು)

## ವಿರುದ್ಧ

(೧)

( ಹುಕುಮನಾಮೆ ಧಾರಣ ಮಾಡಿದವನು )

(೨)

( ಫೈಸಲಲಿನ ಋಣಿ )

## ದಾವೆ ರೂಪಾಯಿ

ಇದರಲ್ಲಿ ಅರ್ಜದಾರನು ಆ. ೨೧, ರೂಲ. ೫೮ನೇ ಪ್ರಕಾರ ಮಾಡುವ ಅರ್ಜಿ ಏನಂದರೆ:—

(೧) ಇದರಲ್ಲಿ ೧ನೇ ಎದುರಗಾರನು, ಲಾ. ಅಸಲ ನಂ. $\frac{೩೬೮}{೧೯೩೭}$ ನೇದ್ದರಲ್ಲಿ ೨ನೇ ಎದುರಗಾರನ ವಿರುದ್ಧವಾಗಿ ಹುಕುಮನಾಮೆಯನ್ನು ಪಡಕೊಂಡು ಅದರ ಅಮಲುಬಜಾವಣಿಯು ೨ನೇ ಎದುರಗಾರನ ವಿರುದ್ಧ ಈ ಕೋರ್ಟಿನ ಲಾ. ದ. ನಂ. $\frac{೬೫೭}{೧೯೩೮}$ ನೇದ್ದರಲ್ಲಿ ನಡಿಸಿ ಅದರಲ್ಲಿ ಕೆಳಗೆ ವರ್ಣಿಸಿದ ಆಸ್ತಿಯು (ಯಾ ಮಾಲನ್ನು) ಜಪ್ತಿ ಮಾಡಿಸಿರುತ್ತಾನೆ, ಸದರಿ ಆಸ್ತಿಯ (ಯಾ ಮಾಲಿನ) ವರ್ಣನೆ:—

(೨) ಅರ್ಜದಾರನು ಸದರಿ ಅಸ್ತಿಯ (ಯಾ ಮಾಲಿನ) ಮಾಲಕನಾಗಿರುತ್ತಾನೆ ಮತ್ತು ಅದು ಜಪ್ತಿಯಾದ ದಿವಸ ಅದರ ಮಾಲಕನಾಗಿದ್ದನು.

(೩) ಸದರೀ ಆಸ್ತಿಯು ( ಯಾ ಮಾಲು ) ಜಪ್ತಿಯಾದಾಗ ಅರ್ಜದಾರನ ವಶದಲ್ಲಿ ಇತ್ತು ಮತ್ತು ಅಂದಿನಿಂದ ಮುಂದೆ ಅವನ ವಶದಲ್ಲಿಯೇ ಇರುತ್ತದೆ. (ಅಥವಾ ಸದರೀ ಆಸ್ತಿಯು (ಯಾ ಮಾಲು) ಜಪ್ತಿಯಾದಾಗ ಅರ್ಜದಾರನ ವತಿಯಿಂದ ಬಾಡಿಗೆದಾರನ ನಾತೆಯಿಂದ ೨ನೇ ಎದುರಗಾರನ ವಶದಲ್ಲಿ ಇತ್ತು.)

(೪) ಅರ್ಜದಾರನ ವಿನಂತಿ ಏನಂದರೆ:—

ಮೇಲ್ಕಂಡ ಆಸ್ತಿಯನ್ನು (ಯಾ ಮಾಲನ್ನು) ಜಪ್ತಿಯಿಂದ ಖುಲಾಸೆ ಮಾಡಬೇಕು.

**ಸೂಚನೆ:—**ಈ ಅರ್ಜಿಗೆ ಇಕರಾರು ಬರೆಯಬೇಕು. ಬುದ್ಧಿಪೂರ್ವಕವಾಗಿ ಯಾ ನಿರರ್ಥಕವಾಗಿ ವಿಳಂಬ ಮಾಡಿ ಸದರೀ ಅರ್ಜಿ ಮಾಡಿದರೆ ಅದರ ಚೌಕಸಿಯು ಆಗಲಾರದು. ಜಪ್ತಿ ಆದ **ಮೇಲೆ ಆದಷ್ಟು** ಕೂರಿಯಾದ **ವೇಳೆ**ಯಲ್ಲಿ ಸದರೀ ಅರ್ಜಿಯನ್ನು ಮಾಡಬೇಕು.

## ನಂಬರು ೨೨

ವಿಕ್ರಯವನ್ನು ರದ್ದುಮಾಡುವ ವಿಷಯದಲ್ಲಿ (ಆ ೨೧, ರೂ. ೮೯.)

ಲಾ. ದ. ನ. ______

ಕಿ. ನ.

ಕೋರ್ಟಿನಲ್ಲಿ

(೧) ... ... ... ... ಅರ್ಜದಾರ

**ವಿರುದ್ಧ**

(೧) ..............................
ಹುಕುಮನಾಮೆ ಧಾರಣಮಾಡಿದವನು
(೨) ... ..............................
ಖರೀದಿದಾರನು
} ಎದುರಗಾರರು

**ದಾವಾರೂಪಾಯಿ**

ಇವರಲ್ಲಿ ಅರ್ಜದಾರನು ಆ. ೨೧, ರೂ. ೮೯ನೇ ಪ್ರಕಾರ ಮಾಡುವ ಅರ್ಜಿ ಏನಂದರೆ—

(೧) ಇದರಲ್ಲಿ ಅರ್ಜಿದಾರನು ಈ ಕೋರ್ಟಿನ ಲಾ. ದ. ನ——ನೇದ್ದರಲ್ಲಿ ಫೈಸಲಿನ ಋಣಿಯಾಗಿರುತ್ತಾನೆ. ಮತ್ತು ಸದರಿ ದರಖಾಸ್ತಿನಲ್ಲಿ ಮಾರಾಟವಾದ ಆಸ್ತಿಯ ಮಾಲಕನಾಗಿರುತ್ತಾನೆ.

(೨) ಸದರೀ ಮಾರಾಟವು ತಾರೀಖು ದಿವಸ ಆಯಿತು.

(೩) ಅರ್ಜಿದಾರನು ಕೆಳಗೆ ವಿವರಿಸಿದಂತೆ ಹಣ ಅಮಾನತು ಇಟ್ಟಿರುತ್ತಾನೆ.

(ಅ) ರೂಪಾಯಿ ಖರೀದಿದಾರನಿಗೆ ಕೊಡುವ ಬಗ್ಗೆ

(ಬ) ರೂಪಾಯಿ ಹುಕುಮನಾಮೆಯನ್ನು ಪಡೆದವನಿಗೆ
ಕೊಡುವ ಬಗ್ಗೆ

ಅಂತು ರೂಪಾಯಿಗಳನ್ನು

(೪) ಅರ್ಜಿದಾರನ ವಿನಂತಿ ಏನಂದರೆ—
ಮೇಲ್ಕಂಡ ವಿಕ್ರಯವು ರದ್ದು ಮಾಡಬೇಕು.

---

**ಸೂಚನೆ:**—ಇಕರಾರು ಬರೆಯಬೇಕು; ಸ್ಥಾವರ ಮಾಲಿನ ವಿಕ್ರಯವಾಗಿದ್ದಲ್ಲಿ ಮಾತ್ರ ಈ ಪ್ರಕಾರ ಅರ್ಜಿಮಾಡಲಿಕ್ಕೆ ಬರುತ್ತದೆ. ಯಾವ ಮನುಷ್ಯನು ವಿಕ್ರಯವಾದ ಮಾಲಿನ ಮಾಲೀಕನಾಗಿರುವನೋ ಅಥವಾ ಅಂಥ ವಿಕ್ರಯದ ಮೊದಲು ಸಂಪಾದನೆ ಮಾಡಿದ ಹಕ್ಕು ಸಂಬಂಧವನ್ನು ಧಾರಣ ಮಾಡುತ್ತಿದ್ದಾನೋ ಅವನಿಗೆ ಮಾತ್ರ ಈ ಪ್ರಕಾರ ಅರ್ಜಿಯನ್ನು ಮಾಡುವ ಅಧಿಕಾರ ಉಂಟು. ಸದರಿ ಅರ್ಜಿಗೆ ಹುಕುಮನಾಮೆ ಧಾರಣ ಮಾಡಿದವನು ಮತ್ತು ಖರೀದಿದಾರನು ಅವಶ್ಯ ಪಕ್ಷಕಾರರು ಇರುತ್ತಾರೆ. ವಿಕ್ರಯದ ತಾರೀಖಿನ ೩೦ದಿವಸದಲ್ಲಿ ಸದರೀ ಅರ್ಜಿಯನ್ನು ಮಾಡಬೇಕು. ಹುಕುಮನಾಮೆ ಬಜಾಯಿಸುವಗೋಸ್ಕರ ಮಾಡಿದ ವಿಕ್ರಯವನ್ನು ರದ್ದುಮಾಡುವ ವಿಷಯದಲ್ಲಿ ಅದೇ ಕಾಯದೆಯನ್ವಯ ವಿಕ್ರಯದ ತಾರೀಖಿನ ಮೂವತ್ತು ದಿವಸದಲ್ಲಿ ಅರ್ಜಿಯು ಮಾಡಬೇಕು).

## ನಂಬರು ೨೩

**ವಿಕ್ರಯವನ್ನು ರದ್ದು ಮಾಡುವ ವಿಷಯದಲ್ಲಿ**(ಆ. ೨೧, ರೂ. ೯೦.)

(೧) ಅರ್ಜಿದಾರನು ಲಾ. ದ. ನಂ. ೫೭೭/೧೯೨೭ ನೇದ್ದರಲ್ಲಿ ತಾರೀಖು ೧೮–೧೦–೧೯೨೭ನೇ ದಿವಸ ಮಾರಾಟವಾದ ಆಸ್ತಿಯ ಮಾಲಿಕನಾಗಿದ್ದನು.

[ ಅಥವಾ (೧) ಅರ್ಜದಾರನು ಲಾ. ದ. ನಂ. ೫೭೭/೧೯೨೭ ನೇದ್ದರಲ್ಲಿ ಹುಕುಮನಾಮೆ ಪಡೆದವನಿರುತ್ತಾನೆ. ]

[ ಅಥವಾ (೧) ಅರ್ಜಿದಾರನಿಗೆ ದರದ ಪ್ರಕಾರ ಹಂಚಿಕೊಡತಕ್ಕ ಐವಜಿನೊಳಗಿಂದ ಪಾಲು ಸಿಕ್ಕುವ ಹಕ್ಕು ಇದೆ. ]

(೨) ಸದರಿ ಆಸ್ತಿಯ ಬೆಲೆಯು ೮೫೦೦ ರೂಪಾಯಿಗಳು ಆಗುತ್ತಿದ್ದು ಅದು ೧೫೦೦ ರೂಪಾಯಿಗಳಿಗೆ ಮಾತ್ರ ವಿಕ್ರಯವಾಗಿರುತ್ತದೆ.

(೩) ಸದರಿ ವಿಕ್ರಯವನ್ನು ಪ್ರಸಿದ್ಧಿಸುವದರಲ್ಲಿ ಯಾ ನಡೆಸುವದರಲ್ಲಿ ಮಹತ್ವದ ಅವ್ಯವಸ್ಥೆಯುಂಟಾಗಿದ್ದರಿಂದ ಸದರಿ ಆಸ್ತಿಯು ಮೇಲಿನಂತೆ ಕಡಿಮೆ ಬೆಲೆಗೆ ವಿಕ್ರಯವಾಯಿತು. ಸದರಿ ಅವ್ಯವಸ್ಥೆಗಳ ತಪಶೀಲುಗಳು—

(೧) ಲಿಲಾವ ಜಾಹೀರನಾಮೆಯನ್ನು ವಿಕ್ರಯವಾದ ಆಸ್ತಿಯ ಯಾವದೇ ಭಾಗಕ್ಕೆ ಹಚ್ಚಲಿಲ್ಲ.

(೨) ವಿಕ್ರಯವಾದ ಮಾಲಿನಮೇಲೆ ಅಥವಾ ಅದರ ಸನಿಹೊರೆಯಲ್ಲಿದ್ದ ಯಾವದೊಂದು ಸ್ಥಳದಲ್ಲಿ ಅಥವಾ ಬೇರೆ ಯಾವದೆ ಸ್ಥಳದಲ್ಲಿ ಡಂಗರವನ್ನು ಹೊಡೆದು ಸದರಿ ವಿಕ್ರಯದ ಹುಕುಮು ಜಾಹೀರು ಮಾಡಲ್ಪಟ್ಟಿಲ್ಲ.

(೩) ವಿಕ್ರಯವಾದ ಆಸ್ತಿಯ ಮೇಲೆ ಗುರಪ್ಪಾ ನೀಲಿ ಎಂಬುವವನ ೫೦೦ ರೂಪಾಯಿಗಳ ಬೋಜೆ ಇದ್ದು ಅದು ತಪ್ಪಿನಿಂದ ೨೦೦೦ ರೂಪಾಯಿಗಳ ವಿದೆಂದು ಲಿಲಾವ ಜಾಹೀರನಾಮೆಯಲ್ಲಿ ತೋರಿಸಿರುತ್ತದೆ.

ಇವುಗಳ ಪರಿಣಾಮಗಳು—

(೧) ಮೇಲ್ಕಂಡ ೧ನೇ ಮತ್ತು ೨ನೇ ಅವ್ಯವಸ್ಥೆಗಳದಿಂದ ಮೇಲ್ಕಂಡ ಲಿಲಾವಿನಲ್ಲಿ ಬೇಡತಕ್ಕಂಥ ಎಷ್ಟೋ ಜನರಿಗೆ ವಿಶೇಷತಃ ಸಿದ್ದಪ್ಪಾ ಮಂಟೂರ ಇವರಿಗೆ ಸದರಿ ಲಿಲಾವಿನ ಸಂಗತಿ ತಿಳಿಯಲಿಲ್ಲ.

(೨) ಮೇಲ್ಕಂಡ ೩ನೇ ಅವ್ಯವಸ್ಥೆಯಿಂದ ಲಿಲಾವಿನ ವೇಳೆಗೆ ಹಾಜರಿದ್ದ ಜನರು ಲಿಲಾವಿನಲ್ಲಿ ಸವಾಲು ಏರಿಸಲಿಲ್ಲ,

ಅರ್ಜಿದಾರನ ವಿನಂತಿ ಏನಂದರೆ—

ಮೇಲ್ಕಂಡ ವಿಕ್ರಯವು ರದ್ದುಮಾಡಬೇಕು.

---

**ಸೂಚನೆ:**— ಇದಕ್ಕೆ ಇಕರಾರು ಬರೆಯಬೇಕು. ಹಿಂದೆ ಹೇಳಿದಂತೆ ವಿಕ್ರಯದ ತಾರೀಖಿನ ಮೂವತ್ತು ದಿವಸಗಳಲ್ಲಿ ಅರ್ಜಿಯನ್ನು ಮಾಡಬೇಕು.

## ನಂಬರು ೨೪

### ವಿಕ್ರಯವನ್ನು ರದ್ದುಮಾಡುವ ವಿಷಯದಲ್ಲಿ (ಆ. ೨೧, ರೂ. ೯೦.)

(೧) ಅರ್ಜಿದಾರನು ಲಾ. ದ. ನಂ. ೧೬೬/೩೮ನೇದ್ದರಲ್ಲಿ ತಾರೀಖು ೧೮-೧೧-೧೯೨೮ನೇ ಇಶ್ವಿದಿವಸ ಮಾರಾಟವಾದ ಆಸ್ತಿಯ ಮಾಲಿಕನಾಗಿದ್ದನು.

(೨) ಸದರಿ ಆಸ್ತಿಯ ಬೆಲೆಯು ೫೫೦೦ ರೂಪಾಯಿಯಾಗುತ್ತಿದ್ದು ಅದು ೨೫೦೦ ರೂಪಾಯಿಗೆ ಮಾತ್ರ ವಿಕ್ರಯವಾಗಿರುತ್ತದೆ.

(೩) ಇದರಲ್ಲಿ ಹುಕುಮನಾಮೆ ಪಡೆದವನು ಮೋಸಮಾಡಿದ್ದರಿಂದ ಸದರಿ ಆಸ್ತಿಯು ಕಡಿಮೆ ಬೆಲೆಗೆ ವಿಕ್ರಯವಾಯಿತು.

ಸದರಿ ಮೋಸದ ತಪಶೀಲು–

ತಾರೀಖು ೧೮-೧೧-೧೯೨೮ನೇ ಇಶ್ವಿ ದಿವಸ ಮುಂಜಾನೆ ೧೧ಘಂಟೆಕ್ಕೆ ಸದರಿ ಆಸ್ತಿಯು ವಿಕ್ರಯವಾಗಬೇಕೆಂದು ಗೊತ್ತಾಗಿತ್ತು. ಹುಕುಮನಾಮೆ ಧಾರಣ ಮಾಡಿದವನು ಆ ದಿವಸ ಸದರಿ ಆಸ್ತಿಯ ವಿಕ್ರಯವಾಗುವದಿಲ್ಲ. ಅದು ತಹಕೂಬ ವಾಗಿದೆಂದು ಅರ್ಜದಾರನಿಗೆ ಮತ್ತು ಸದರಿ ವಿಕ್ರಯದಲ್ಲಿ ಬೇಡುವಂಥ ಪರಪ್ಪಾ ಜವಳಿ ಮತ್ತು ಲಕ್ಷ್ಮಪ್ಪಾ ಉಳ್ಳಾಗಡ್ಡಿ ವಗೈರೆ ಜನರಿಗೆ ತಿಳಿಸಿದನು. ಸದರಿ ಪ್ರಕಾರ ತಿಳಿಸಿದ್ದು ಅಸತ್ಯವಾಗಿರುತ್ತದೆ. ಮತ್ತು ಅದು ಸುಳ್ಳೆಂಬುದು ಆಗ ಸದರಿ ಅವನಿಗೆ ತಿಳಿದಿತ್ತು. ಸದರಿ ಎಲ್ಲ ಜನರಿಗೆ ಮೋಸುಮಾಡುವ ಉದ್ದೇಶ ದಿಂದ ಸದರಿ ಅವನ ಮೇಲಿನಂತೆ ತಿಳಿಸಿದನು. ಆದ್ದರಿಂದ ವಿಕ್ರಯದಲ್ಲಿ ಬೇಡಲಿಕ್ಕೆ ಮೇಲ್ಕಂಡವರ ಪೈಕಿ ಯಾರೂ ಹೋಗಲಿಲ್ಲ. ಫಕ್ತ ೪ ಅಥವಾ ೫ ಜನರಷ್ಟೇ ಹಾಜ ರರಿದ್ದರು. ಕಾರಣ ಸದರಿ ಆಸ್ತಿಯು ಕಡಿಮೆ ಬೆಲೆಗೆ ವಿಕ್ರಯವಾಯಿತು.

(೪) ಅರ್ಜಿದಾರನ ವಿನಂತಿ ಏನಂದರೆ–

ಮೇಲ್ಕಂಡ ವಿಕ್ರಯವು ರದ್ದ ಮಾಡಬೇಕು.

## ನಂಬರು ೨೫

ಕಿ. ಅರ್ಜಿನ ______
೧೯೨೯

### ಹುಬ್ಬಳ್ಳಿ ೨ ನೇ ವರ್ಗ ಸಬ್ಬಜಜ್ಜ ಕೋರ್ಟನಲ್ಲಿ

೧. ಕಮಲವ್ವಾ ಕೋಂ ರೇಣಪ್ಪಾ ಕಾಳೇನವರ ವಯಸ್ಸು ೩೫ ಜಾತಿ ಜೆಂಡೆರಾವುತ ಉದ್ಯೋಗ ಮನೆಕೆಲಸ ಸಾಕೀನ ಹುಬ್ಬಳ್ಳಿ } ಅರ್ಜದಾರ

## ವಿರುದ್ಧ

೧. ಶಿವರುದ್ರಪ್ಪಾ ಗುರುಶಿದ್ದಪ್ಪಾ ಕಿತ್ತೂರ ಸಾಕಿನ ಹುಬ್ಬಳ್ಳಿ } ಎದುರ
೨. ರೇಣಪ್ಪಾ ತಂದಿ ಚಿಂತಪ್ಪಾ ಕಾಳೆನವರ ಸಾಕಿನ ಹುಬ್ಬಳ್ಳಿ } ಗಾರರು

## ದಾವೆ ರೂಪಾಯಿ ೩೦೦

ಇವರಲ್ಲಿ ಅರ್ಜಿದಾರಳು ಆ. ೨೧, ರೂ. ೫೮ನೇ ಪ್ರಕಾರ ಮಾಡುವ ಅರ್ಜಿ ಏನಂದರೆ—

(೧) ಇದರಲ್ಲಿ ೧ನೇ ಎದುರಗಾರನು ಲಾ. ಅಸಲ ನಂ. ೩೩೩/೧೯೨೬ನೇದ್ದರಲ್ಲಿ ೨ನೇ ಎದುರಗಾರನ ಮೇಲೆ ಹುಕುಮನಾಮೆಯು ಪಡಕೊಂಡು ಅದರ ಅಮಲುಬಜಾವಣೆಯು ಈ ಕೋರ್ಟಿನ ಲಾ. ದ. ನಂ. ೨೨/೧೯೨೬ನೇದ್ದರಲ್ಲಿ ನಡಿಸಿ ಅದರಲ್ಲಿ ಕೆಳಗೆ ವರ್ಣಿಸಿದ ಆಸ್ತಿಯನ್ನು ಜಪ್ತ ಮಾಡಿಸಿರುತ್ತಾನೆ.

ಸದರೀ ಆಸ್ತಿಯ ವರ್ಣನೆ—

ಧಾರವಾಡ ಜಿಲ್ಹಾ ಹುಬ್ಬಳ್ಳಿ ಶಹರ ಪೈಕಿ ಭಂಡಿವಾಡ ಅಗಸಿಯಲ್ಲಿರುವ ಮನೆಯು ವಾರ್ಡ ನಂಬರು ೧ ಸಿಟಿಸರ್ವೆ ನಂ. ೪೦೧೬ ಮುನಸಿಪಾಲಟಿ ನಂಬರು ೫೨೩೮.

ಅಂದಾಜು ಬೆಲೆಯು ೨೫೦ ರೂಪಾಯಿ

(೨) ಅರ್ಜದಾರಳು ಸದರೀ ಅಸ್ತಿಯ ಮಾಲಕಳಾಗಿರುತ್ತಾಳೆ. ಮತ್ತು ಅದು ಜಪ್ತಿಯಾದ ದಿವಸ ಅವರ ಮಾಲಕಳಾಗಿದ್ದಳು.

(೩) ಸದರೀ ಆಸ್ತಿಯು ಜಪ್ತಿಯಾಗುವಾಗ್ಗೆ ಅರ್ಜದಾರಳ ವಶವಲ್ಲಿ ಇತ್ತು ಮತ್ತು ಅಂದನಿಂದ ಮುಂದೆ ಸಹಾ ಅದು ಅವಳ ವಶದಲ್ಲಿಯೇ ಅದೆ.

(೪) ಅರ್ಜದಾರಳು ಬೇಡುವದೇನಂದರೆ—

ಮೇಲ್ಕಂಡ ಆಸ್ತಿಯನ್ನು ಜಪ್ತಿಯಿಂದ ಖುಲಾಸೆ ಮಾಡಬೇಕು.

ತಾರೀಖು ೫-೬-೧೯೨೯.

ಸಹಿ— ಕಮಲವ್ವಾ ಕೋಂ ರೇಣಪ್ಪಾ ಕಾಳೇನವರ

ನಾನು ಕಮಲವ್ವಾ ಕೋಂ ರೇಣಪ್ಪಾ ಕಾಳೇನವರ ಇಕರಾರು ಮಾಡುವದೇನಂದರೆ, ಇದರಲ್ಲಿ ಮೇಲೆ ಬರೆದ ೧ರಿಂದ ೩ನೇ ಪ್ಯಾರಾಗ್ರಾಫುಗಳೊಳಗಿನ ಮಜಕೂರು ನನ್ನ ಒಳ್ಳೇ ತಿಳಿವಳಿಕೆಯಂತೆ ಮತ್ತು ನಂಬಿಕೆಯಂತೆ ನಿಜವಾಗಿದೆ. ಇದಕ್ಕೆ ನಾನು ರಾ. ರಾಮರಾವ ದೇಶಪಾಂಡೆ ವಕೀಲ ಇವರ ಆಫೀಸಿನಲ್ಲಿ, ತಾರೀಖು ಇಶ್ವಿ ದಿವಸ ನನ್ನ ಸಹಿ ಮಾಡಿರುತ್ತೇನೆ.

ಸಹಿ–ಕಮಲವ್ವಾ ಕೋಂ ರೇಣಪ್ಪಾ ಕಾಳೇನವರ

## ನಂಬರು ೨೬

## ವಿಕ್ರಯದ ಸರಟಿಫಿಕೇಟು ಪಡಕೊಳ್ಳುವ ಬಗ್ಗೆ—

( ಆ. ೨೧, ರೂ. ೯೪. )

(೧) ಅರ್ಜದಾರನು ಲಾ. ದ ಸ. ೫೬೩/೧೯೩೭ ನೇದ್ದರಲ್ಲಿ ತಾರೀಖು ೧೮–೧೦–೧೯೨೭ನೇ ಇಶ್ವಿ ದಿವಸ ವಿಕ್ರಿಯವಾದ ಆಸ್ತಿಯ ಖರೀದಿದಾರನಾಗಿರುತ್ತಾನೆ.

(೨) ಸದರಿ ವಿಕ್ರಯವು ತಾರೀಖು ೧೮–೧೧–೧೯೨೭ನೇ ಇಶ್ವಿ ದಿವಸ ಕಾಯಮ ಮಾಡಲ್ಪಟ್ಟಿತು; ಮತ್ತು ಅದು ನಿರ್ವಿವಾದವಾಯಿತು.

(೩) ಅರ್ಜದಾರನವಿನಂತಿ ಏನಂದರೆ—

ಅರ್ಜದಾರನಿಗೆ ಆ. ೨೧, ರೂ. ೯೪ನೇ ಪ್ರಕಾರ ಸರಟಿಫಿಕೇಟು ಕೊಡಬೇಕು.

**ಸೂಚನೆ**— ಈ ಅರ್ಜಿಗೆ ಸ್ಟ್ಯಾಂಪು ಹಚ್ಚಲಿಕ್ಕೆ ಕಾರಣವಿಲ್ಲ.

## ನಂಬರು ೨೭

## ವಿಕ್ರಯವಾದ ಆಸ್ತಿಯ ಕಬಜವನ್ನು ಪಡಕೊಳ್ಳುವಬಗ್ಗೆ

( ಫೈಸಲಿನ ಋಣಿಯು ಕಬಜೆಯಲ್ಲಿದ್ದಾಗ ) (ಆ. ೨೧, ರೂ. ೯೫)

(೧) ಅರ್ಜಿದಾರನು ಲಾ. ದ. ನ. ೫೭/೧೯೨೭ ನೇದ್ದರಲ್ಲಿ ತಾರೀಖು ೧೮–೧೦–೧೯೩೭ನೇ ಇಶ್ವಿ ದಿವಸ ವಿಕ್ರಯವಾದ ಸ್ಥಾವರ ಮಾಲಿನ ಖರೀದಿದಾರನಾಗುತ್ತಾನೆ. ಸವರಿ ಮಾಲಿನವರ್ಣನೆ:— ... ...

... ... ... ...

(೨) ಸದರಿ ಸ್ಥಾವರ ಮಾಲು ಫೈಸಲಿನ ಋಣಿಯಾದ ಎದುರಗಾರನ ಕಬಜೆಯಲ್ಲಿ ಇದೆ.

[ಅಥವಾ (೨) ಸದರಿ ಸ್ಥಾವರ ಮಾಲು ಫೈಸಲಿನ ಋಣಿಯ ಸಲುವಾಗಿ ಎದುರಗಾರನ ಕಬಜೆಯಲ್ಲಿ ಇದೆ].

[ಅಥವಾ (೨) ಸದರಿ ಮಾಲು ಜಪ್ತಿಯಾದ ಬಳಿಕ ಫೈಸಲಿನ ಋಣಿಯಿಂದ ಹುಟ್ಟಿಸಲ್ಪಟ್ಟ ಮಾಲಕಿಯ ಮೂಲಕವಾಗಿ ಬಾಧ್ಯನಾಗಿದ್ದಂಥ ಎದುರಗಾರ ಕಬಜೆಯಲ್ಲಿ ಇದೆ.]

(೩) ಆ. ೨೧, ರೂ. ೯೪ನೇ ಪ್ರಕಾರ ಸದರಿ ಮಾಲಿನ ವಿಷಯದ ಸರ್ಟಿಫಿಕೇಟು ಕೊಡಲ್ಪಟ್ಟಿರುತ್ತದೆ.

(೪) ಅರ್ಜಿದಾರನ ವಿನಂತಿ ಏನೆಂದರೆ:—

ಅರ್ಜದಾರನಿಗೆ ಯಾ ಅವನು ತನ್ನ ಸಲುವಾಗಿ ಅದನ್ನು ಒಪ್ಪಿಸಿಕೊಳ್ಳಲಿಕ್ಕೆ ನೇಮಿಸದಂಥ ಮನುಷ್ಯನಿಗೆ ಆ ಮಾಲಿನ ಕಬಜವನ್ನು ಕೊಟ್ಟು, ಅವಶ್ಯವಿದ್ದಲ್ಲಿ ಆ ಮಾಲನ್ನು ಬಿಟ್ಟುಕೊಡಲಿಕ್ಕೆ ಹರಕತು ಮಾಡುವಂಥ ಮನುಷ್ಯನನ್ನು ತಗೆದು ಅದನ್ನು ಒಪ್ಪಿಸಲಿಕ್ಕೆ ಹುಕುಮು ಮಾಡಬೇಕು.

[ಅಥವಾ (೪) ಅರ್ಜದಾರನಿಗೆ ಸದರಿ ಮಾಲನ್ನು ಒಪ್ಪಿಸಲಿಕ್ಕೆ ಹುಕುಮು ಮಾಡಬೇಕು.]

(**ಸೂಚನೆ:—** ವಿಕ್ರಯವು ನಿರ್ವಿವಾದವಾದ ತಾರೀಖಿನ ಮೂರು ವರ್ಷಗಳೊಳಗೆ ಸ್ಥಾವರಾಸ್ತಿಯ ಕಬಜೆಯನ್ನು ಪಡಕೊಳ್ಳುವಬಗ್ಗೆ ಅರ್ಜಿಯನ್ನು ಮಾಡಬಹುದು.)

## ನಂಬರು ೨೮

## ವಿಕ್ರಯವಾದ ಆಸ್ತಿಯ ಕಬಜವನ್ನು ಪಡಕೊಳ್ಳುವಬಗ್ಗೆ

(ಬಾಡಿಗೆದಾರನ ಕಬಜೆಯಲ್ಲಿದ್ದಾಗ) ... ... (ಆ. ೨೧, ರೂ. ೯೬.)

(೧) ಅರ್ಜಿದಾರನು ಲಾ. ದ. ನ. $\frac{೫೭}{೧೯೩೭}$ ನೇದ್ದರಲ್ಲಿ ತಾರೀಖು ೧೮–೧೦–೧೯೩೭ನೇ ಇಷ್ಟಿ ದಿವಸ ವಿಕ್ರಯವಾದ ಸ್ಥಾವರ ಮಾಲಿನ ಖರೀದಿದಾರನಾಗಿರುತ್ತಾನೆ. ಆ ಮಾಲಿನ ವರ್ಣನೆ:— ... ...

... ... ... ...

(೨) ಸದರಿ ಮಾಲು ಬಾಡಿಗೆದಾರನ ಕಬಜೆಯಲ್ಲಿ ಇದೆ.

[ ಅಥವಾ (೨):— ಸದರಿ ಮಾಲು ತನ್ನ ಕಬಜೆಯಲ್ಲಿ ಇಟ್ಟುಕೊಳ್ಳಲಿಕ್ಕೆ ಬಾಧ್ಯನಾದಂಥ ೨ನೇ ಎದುರಗಾರನ ಕಬಜೆಯಲ್ಲಿ ಇದೆ. ]

(೩) ಸದರಿ ಮಾಲಿಗಾಗಿ ಆ. ೨೧, ರೂ. ೯೪ನೇ ಪ್ರಕಾರ ಸರಟಿಫಿಕೇಟು ಕೊಡಲ್ಪಟ್ಟಿದೆ.

(೪) ಅರ್ಜದಾರನ ವಿನಂತಿ ಏನಂದರೆ:—

ಸದರಿ ಮಾಲನ್ನು ಒಪ್ಪಿಸಲಿಕ್ಕೆ ಹುಕುಮು ಮಾಡಬೇಕು.

## ನಂಬರು ೨೯

### ಸ್ಥಾವರಾಸ್ತಿಯ ಕಬಜೆಗೆ ಅಡ್ಡಿಯಾದ ವಿಷಯದಲ್ಲಿ

( ಸ್ಥಾವರಾಸ್ತಿಯ ಕಬಜೆಯಬಗ್ಗೆ ಹುಕುಮನಾಮೆ ಪಡೆದವನ ಅರ್ಜಿ. )

(ಆ. ೨೧, ರೂ. ೯೬.)

(೧) ಅರ್ಜಿದಾರನು ಕೆಳಗೆ ವರ್ಣಿಸಿದ ಸ್ಥಾವರಾಸ್ತಿಯ ಕಬಜೆಯಬಗ್ಗೆ ಲಾ॥ ಅಸಲ ನಂಬರ $\frac{೪೨೮}{೧೯೨೭}$ ನೇದ್ದರಲ್ಲಿಯ ಹುಕುಮನಾಮೆ ಧಾರಣಮಾಡುವವನಿರುತ್ತಾನೆ. ಸದರಿ ಆಸ್ತಿಯ ವರ್ಣನೆ:— ... ... ...

... ... ... ... ...

[ ಅಥವಾ (೧) ಅರ್ಜಿದಾರನು ಕೆಳಗೆ ವರ್ಣಿಸಿದ ಸ್ಥಾವರಾಸ್ತಿಯ ಕಬಜೆಯ ಬಗ್ಗೆ ಲಾ. ಅಸಲು ನ. $\frac{೪೨೮}{೧೯೨೭}$ ನೇದ್ದರಲ್ಲಿ ಹುಕುಮನಾಮೆಯನ್ನು ಪಡೆದವನಿರುತ್ತಾನೆ. ]

(೨) ಸದರಿ ಆಸ್ತಿಯು ತನಗೆ ಒಪ್ಪಿಸುವಬಗ್ಗೆ ಅರ್ಜದಾರನು ಹುಕುಮು ಪಡಕೊಂಡನು.

(೩) ಸದರೀ ಹುಕುಮಿನ ಅಮಲುಬಜಾವಣೆಗಾಗಿ ತಾರೀಖು ೧೫-೪-೧೯೨೮ನೇ ಇಶ್ವಿ ದಿವಸ ಬೇಲೀಫನು ಹೋಗಿದ್ದನು; ಆವರೆ ೧ನೇ ಎದುರಗಾರನು ಮತ್ತು ೧ನೇ ಎದುರಗಾರನ ಪ್ರೇರೇಪಣೆಯಿಂದ ೨ನೇ ಎದುರಗಾರನು ಸದರಿ

ಆಸ್ತಿಯನ್ನು ಒಪ್ಪಿಸುವಲ್ಲಿ ಬೇಲೀಫನಿಗೆ ಮತ್ತು ಅದರ ಕಬಜೆ ಪಡೆಯುವಲ್ಲಿ ಅರ್ಜಿದಾರನಿಗೆ ಅಡ್ಡಿಯನ್ನು ಮಾಡಿದರು.

(೪) ಅರ್ಜಿದಾರನ ವಿನಂತಿ ಏನಂದರೆ:--

ಎದುರಗಾರರು ಅರ್ಜದಾರನಿಗೆ ಸದರಿ ಆಸ್ತಿಯ ಕಬಜೆ ಕೊಡಬೇಕೆಂದು ಫರ್ಮಾಯಿಸಬೇಕು.

[ ಅಥವಾ (೪) ಎದುರಗಾರರು ಅರ್ಜಿದಾರನಿಗೆ ಸದರಿ ಆಸ್ತಿಯ ಕಬಜೆ ಕೊಡಬೇಕೆಂದು ಆ. ೨೧, ರೂ. ೯೮ನೇ ಪ್ರಕಾರ ಹುಕುಮು ಮಾಡಬೇಕು. ]

( **ಸೂಚನೆ:**— ಈ ಅರ್ಜಿಗೆ ಇಕರಾರು ಬರೆಯಬೇಕು. ಯಾವ ಸ್ಥಾವರಾಸ್ತಿಯ ವಿಷಯದಲ್ಲಿ ಹುಕುಮನಾಮೆಯಾಗಿದ್ದೀತೋ ಅಥವಾ ಯಾವದು ಹುಕುಮನಾಮೆ ಬಜಾಯಿಸುವಗೋಸ್ಕರ ಮಾರಿದ್ದೀತೋ ಅದರ ಕೈಕೊಳ್ಳುವಿಕೆ ಯನ್ನು ಕೊಡುವದಕ್ಕೆ ಹರಕತು ಯಾ ಅಡ್ಡಿಯನ್ನು ಮಾಡಿದಬಗ್ಗೆ ಅರ್ಜಿಯು ಹರಕತು ಅಥವಾ ಅಡ್ಡಿಯ ಮಾಡುವ ತಾರೀಖಿನ ಮೂವತ್ತು ದಿವಸಗಳಲ್ಲಿ ಮಾಡಬೇಕು. )

## ನಂಬರು ३೦

### ಸ್ಥಾವರಾಸ್ತಿಯ ಕಬಜೆಗೆ ಅಡ್ಡಿಯಾದ ವಿಷಯದಲ್ಲಿ

(ಖರೀದಿದಾರನ ಅರ್ಜಿ) ... ... ... (ಆ. ೨೧, ರೂ. ೯೭.)

(೧) ಅರ್ಜಿದಾರನು ಲಾ. ದ. ನ $\frac{೫೭}{೧೯೨೯}$ ನೇದ್ದರಲ್ಲಿ ತಾರೀಖು ೧೫-೧೦-೧೯೨೭ನೇ ದಿವಸ ವಿಕ್ರಯವಾದ ಸ್ಥಾವರಾಸ್ತಿಯ ಖರೀದಿದಾರನಾಗಿ ರುತ್ತಾನೆ. ಆ ಆಸ್ತಿಯ ವರ್ಣನೆ:-- ... ... ...

... ... ... ...

(೨) ಸದರಿ ಆಸ್ತಿಯನ್ನು ತನಗೆ ಒಪ್ಪಿಸುವ ಬಗ್ಗೆ ಅರ್ಜಿದಾರನು ಹುಕುಮು ಪಡಕೊಂಡನು.

(३) ಸದರೀ ಹುಕುಮಿನ ಅಮಲುಬಜಾವಣೆಗಾಗಿ ತಾರೀಖು ೧೪-೪-೧೯೨೮ನೇ ಇಶ್ವಿ ದಿವಸ ಬೇಲೀಫನು ಹೋಗಿದ್ದನು; ಆದರೆ ೧ನೇ ಎದುರ

ಗಾರನು ಮತ್ತು ೧ನೇ ಎದುರಗಾರನ ಪ್ರೇರೇಪಣೆಯಿಂದ ೨ನೇ ಎದುರಗಾರನು ಸದರಿ ಆಸ್ತಿಯನ್ನು ಒಪ್ಪಿಸುವಲ್ಲಿ ಬೇಲೀಫನಿಗೆ ಮತ್ತು ಅದರ ಕಬಜೆ ಪಡೆಯು ವಲ್ಲಿ ಅರ್ಜದಾರನಿಗೆ ಅಡ್ಡಿಯನ್ನು ಮಾಡಿದರು.

(೪) ಅರ್ಜದಾರನ ವಿನಂತಿ ಏನಂದರೆ:—

ಎದುರಗಾರರು ಅರ್ಜಿದಾರನಿಗೆ ಸದರಿ ಆಸ್ತಿಯ ಕಬಜೆ ಕೊಡಬೇಕೆಂದು ಆ. ೨೧, ರೂ. ೯೮ನೇ ಪ್ರಕಾರ ಹುಕುಮು ಮಾಡಬೇಕು.

## ನಂಬರು ೩೧

## ಸ್ಥಾವರಾಸ್ತಿಯ ಕಬಜೆ ತಪ್ಪಿಸಿದ ವಿಷಯದಲ್ಲಿ

(ಆ. ೨೧, ರೂ. ೧೦೦)

(೧) ಅರ್ಜಿದಾರನು ಕೆಳಗೆ ವರ್ಣಿಸಿದ ಸ್ಥಾವರಾಸ್ತಿಯ ಮಾಲಕ ನಾಗಿರುತ್ತಾನೆ ಮತ್ತು ಇದರಲ್ಲಿ ಮುಂದೆ ಬರೆದ ಎಲ್ಲ ಕಾಲಗಳಲ್ಲಿದ್ದನು. ಕೆಳಗೆ ಬರೆದ ತಾರೀಖಿನ ವರೆಗೆ ಅವನು ತನ್ನ ಸ್ವಂತದ ಸಲುವಾಗಿ ಸದರೀ ಆಸ್ತಿಯ ಕಬಜೆಯುಳ್ಳವನಾಗಿದ್ದನು. ಸದರಿ ಆಸ್ತಿಯ ವರ್ಣನೆ:— ...

... ... ... ...

(೨) ಎದುರಗಾರನು ಸದರಿ ಆಸ್ತಿಯ ಕಬಜೆಯ ಬಗ್ಗೆ ಲಾ. ಅಸಲ ನಂ. ೪೨೮/೧೯೨೭ನೇದ್ದರಲ್ಲಿ ಹುಕುಮುನಾಮೆಯನ್ನು ಪಡೆದನು.

[ ಅಥವಾ (೨) ಎದುರಗಾರನು ಲಾ. ಅಸಲು ನಂ. ೪೨೮/೧೯೨೭ನೇದ್ದರಲ್ಲಿಯ ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಸದರಿ ಆಸ್ತಿಯ ಖರೀದಿ ಮಾಡಿ ರುತ್ತಾನೆ. ]

(೩) ಅರ್ಜಿದಾರನು ಸದರಿ ಹುಕುಮನಾಮೆಗೆ ಪಕ್ಷಕಾರನಿರುವದಿಲ್ಲ.

(೪) ಎದುರಗಾರನು, ಸದರಿ ಹುಕುಮನಾಮೆಯ (ಯಾ ಸದರಿ ಖರೀ ದಿಯ ಆಧಾರದಿಂದ ಸದರಿ ಆಸ್ತಿಯನ್ನು ಒಪ್ಪಿಸುವ ಬಗ್ಗೆ ಈ ಕೋರ್ಟಿನಿಂದ ಹುಕುಮು ಪಡಕೊಂಡು, ಅದರ ಅಮಲುಬಜಾವಣೆಯಲ್ಲಿ ತಾರೀಖು

೧೫–೪–೧೯೩೮ನೇ ಇಸ್ವಿ ದಿವಸ ಅರ್ಜಿದಾರನ ಕಬಜೆಯಿಂದ ಸದರಿ ಆಸ್ತಿಯನ್ನು ತೆಗೆದುಕೊಂಡನು.

(೫) ಅರ್ಜಿದಾರನ ವಿನಂತಿ ಏನಂದರೆ:––

ಅರ್ಜಿದಾರನಿಗೆ ಸದರಿ ಆಸ್ತಿಯ ಕಬಜೆ ಎದುರಗಾರನು ಕೊಡಬೇಕೆಂದು ಫರ್ಮಾಯಿಸಬೇಕು.

## ನಂಬರು ೩೨

## ಸ್ಥಾವರಾಸ್ತಿಯ ಕಜಜೆ ತಪ್ಪಿಸಿದ ವಿಷಯದಲ್ಲಿ

(ಬಾಡಿಗೆದಾರನ ಕಬಜೆಯಲ್ಲಿದ್ದಾಗ) (ಆ. ೨೧, ರೂ. ೧೦೦)

(೧) ಭೀಮಪ್ಪಾ ಗಂಗಾಧರಪ್ಪಾ ದಿವಟೆ ಎಂಬುವವನು ಕೆಳಗೆ ವರ್ಣಿಸಿದ ಸ್ಥಾವರಾಸ್ತಿಯ ಮಾಲಕನಾಗಿರುತ್ತಾನೆ ಮತ್ತು ಇದರಲ್ಲಿ ಕೆಳಗೆ ಬರೆದ ಎಲ್ಲ ಕಾಲಗಳಲ್ಲಿದ್ದನು. ಕೆಳಗೆ ಬರೆದ ತಾರೀಖಿನ ದಿವಸ ಸದರಿ ಆಸ್ತಿಯು ಸದರಿ ಅವನ ಬಾಡಿಗೆದಾರನಾತೆಯಿಂದ ಅರ್ಜಿದಾರನ ಕಬಜೆಯಲ್ಲಿ ಇತ್ತು. ಸದರಿ ಆಸ್ತಿಯ ವರ್ಣನೆ:–

... ... ... ...

(೨) ಎದುರಗಾರನು ಸದರಿ ಆಸ್ತಿಯ ಕಬಜೆಯ ಬಗ್ಗೆ ಲಾ. ಅಸಲ ನ. ೪೨೮/೧೯೩೭ನೇದ್ದರಲ್ಲಿ ಹುಕುಮನಾಮೆಯನ್ನು ಪಡೆದನು.

[ಅಥವಾ (೨) ಎದುರಗಾರನು ಲಾ. ಅಸಲು ನಂಬರು ೪೨೮/೧೯೩೭ ನೇದ್ದರಲ್ಲಿಯ ಹುಕುಮನಾಮೆಯ ಅಮಲುಬಜಾವಣಿಯಲ್ಲಿ (ಲಾ. ದ. ನ. ೫೮/೧೯೩೮) ಸದರಿ ಆಸ್ತಿಯು ಖರೀದಿ ಮಾಡಿದನು].

(೩) ಸದರಿ ಭೀಮಪ್ಪನು ಅಥವಾ ಅರ್ಜಿದಾರನು ಸದರಿ ಹುಕುಮನಾಮೆಗೆ ಪಕ್ಷಕಾರರು ಇರುವದಿಲ್ಲ.

(೪) ಎದುರಗಾರನು ಸದರಿ ಹುಕುಮನಾಮೆಯ (ಯಾ ಸದರಿ ಖರೀದಿಯ) ಆಧಾರದಿಂದ ಸದರಿ ಆಸ್ತಿಯನ್ನು ಒಪ್ಪಿಸುವಬಗ್ಗೆ ಈ ಕೋರ್ಟ

ನಿಂದ ಹುಕುಮು ಪಡಕೊಂಡು ಅವರ ಅಮಲುಬಜಾವಣಿಯಲ್ಲಿ ತಾರೀಖು ೧೫-೭-೧೯೨೮ನೇ ಇಸ್ವಿ ದಿವಸ ಅರ್ಜಿದಾರನ ಕಬಜೆಯಿಂದ ಸದರಿ ಆಸ್ತಿಯು ತೆಗೆದು ಕೊಂಡನು.

(೫) ಅರ್ಜಿದಾರನ ವಿನಂತಿ ಏನಂದರೆ:—

ಅರ್ಜಿದಾರನಿಗೆ ಸದರಿ ಆಸ್ತಿಯ ಕಬಜೆ ಎದುರಗಾರನು ಕೊಡಬೇಕೆಂದು ಫರ್ಮಾಯಿಸಬೇಕು.

## ನಂಬರು ೩೩

**ಕಾಯದೆಶೀರ ಪ್ರತಿನಿಧಿಯನ್ನು ಪಕ್ಷಕಾರನ್ನಾಗಿ ಮಾಡುವ ವಿಷಯದಲ್ಲಿ** (ವಾದಿಯು ಮಯತವಾದರೆ) (ಆ. ೨೨, ರೂಲ. ೩)

**ಅ.** ಅಸಲು ನಂ. ——

## ಸರನಾಮೆ

(೧) ಇವರಲ್ಲಿ ಲಕ್ಷ್ಮಪ್ಪಾ ಫಕೀರಪ್ಪಾ ಮಾಳವದೆ ಎಂಬ ವಾದಿಯು ತಾರೀಖು ೧೪-೯-೧೯೨೭ನೇ ಇಸ್ವಿ ದಿವಸ ತೀರಿಕೊಂಡನು.

(೨) ಸದರೀ ದಾವೆಯನ್ನು ಮಾಡುವ ಹಕ್ಕು ಉಳಿವಿರುತ್ತದೆ.

(೩) ಅರ್ಜಿದಾರನು ಮಯತನ ದತ್ತಕಮಗನಾಗಿರುತ್ತಾನೆ.

(೪) ಅರ್ಜಿದಾರನ ವಿನಂತಿ ಏನಂದರೆ::—

ಸದರೀ ಮಯತ ವಾದಿಯು ಸ್ಥಳದಲ್ಲಿ ಆತನ ಕಾಯದೇಶೀರ ಪ್ರತಿನಿಧಿಯಾದ ಅರ್ಜಿದಾರನಿಗೆ ಪಕ್ಷಕಾರನನ್ನಾಗಿ ಮಾಡಿಕೊಂಡು ದಾವೆಯನ್ನು ಸಾಗಿಸಬೇಕು.

(**ಸೂಚನೆ:**— ಈ ಅರ್ಜಿಗೆ ಇಕರಾರು ಬರಿಯಬೇಕು. ಮೃತಪಟ್ಟ ವಾದಿಯ ಅಥವಾ ಮೃತಪಟ್ಟ ಅಪೆಲೆಂಟನ ಕಾಯದೆಶೀರ ಪ್ರತಿನಿಧಿಯನ್ನು ಪಕ್ಷಕಾರನನ್ನಾಗಿ ಮಾಡುವ ಬಗ್ಗೆ ಅರ್ಜಿಯು ಮೃತಪಟ್ಟವಾದಿಯ ಅಥವಾ ಅಪೆಲೆಂಟನ ಮರಣದ ತಾರೀಖಿನ ೯೦ ದಿವಸಗಳಲ್ಲಿ ಮಾಡಬೇಕು.)

## ನಂಬರು ೩೪

# ಕಾಯದೇಶೀರ ಪ್ರತಿನಿಧಿಯನ್ನು ಪಕ್ಷಕಾರರನ್ನಾಗಿ ಮಾಡುವ ವಿಷಯದಲ್ಲಿ

( ಪ್ರತಿವಾದಿಯು ಮಯತವಾದರೆ ) ( ಆ, ೨೨, ರೂ. ೪. )

ಲಾ. ಅಸಲು ನ. ______

## ಸರನಾಮೆ

(೧) ಇದರಲ್ಲಿ ೩ನೇ ಪ್ರತಿವಾದಿಯಾದ ದಾನಪ್ಪಾ ಗಂಗಪ್ಪಾ ಕೆಲಸಂಗಡ ಎಂಬುವವನು ತಾರೀಖು ೧೩–೪–೧೯೨೮ನೇ ಇಶ್ವಿ ದಿವಸ ತೀರಿಕೊಂಡನು.

(೨) ಸದರಿ ಮಯತನು ಬರೆದುಕೊಟ್ಟ ಸಾಲದ ಕತಿಬೆಯ ಆಧಾರದ ಮೇಲಿಂದ ಈ ದಾವೆಯನ್ನು ಮಾಡಲ್ಪಟ್ಟಿರುತ್ತದೆ.

(೩) ಕೆಳಗೆ ಬರೆದ ಜನರು ಮಯತನ ಸಮೀಪದ ಆಪ್ತರಾಗಬೇಕು.

(೧ ಕಮಲವ್ವಾ ಕೋಂ ದಾನಪ್ಪಾ ಕೆಲಸಂಗದ ವಯಸು ೨೦ ಜಾತಿ ಲಿಂಗಾಯತ ಉದ್ಯೋಗ ಮನೆಕೆಲಸ ಸಾಕೀನ ಹುಬ್ಬಳ್ಳಿ ಪೈಕಿ ಭಂಡಿವಾಡ ಅಗಸಿಯಲ್ಲಿ ಮನೆ ಮು. ನಂ. ೧೫೨೦ ಮಯತನ ಹೆಂಡತಿಯು.

(೨) ಬಸವಂತಪ್ಪಾ ಗಂಗಪ್ಪಾ ಕೆಲಸಂಗದ ವಯಸು ೪೦ ಜಾತಿ ಲಿಂಗಾಯತ ಉದ್ಯೋಗ ವ್ಯಾಪಾರ ಸಾಕೀನ ಸದರ. ಮಯತನ ಖಾಸ ಅಣ್ಣನು.

ಅರ್ಜದಾರನ ವಿನಂತಿ ಏನಂದರೆ—

ಸದರಿ ಮಯತ ಪ್ರತಿವಾದಿಯು ಸ್ಥಳದಲ್ಲಿ ಆತನ ಕಾಯದೇಶೀರ ಪ್ರತಿನಿಧಿಗಳಾದ ಮೆಲ್ಕಂಡ ಉಭಯತರಿಗೆ ಪಕ್ಷಕಾರರನ್ನಾಗಿ ಮಾಡಿಸಿ ದಾವೆಯನ್ನು ಸಾಗಿಸಬೇಕು.

**ಸೂಚನೆ:**—ಈ ಅರ್ಜಿಗೆ ಇಕಸಾರು ಬರೆಯಬೇಕು. ಮೃತಪಟ್ಟ ಪ್ರತಿವಾದಿಯ ಅಥವಾ ಮೃತಪಟ್ಟ ರಿಸ್ಪಾಂಡೆಂಟನ ಕಾಯದೇಶೀರ ಪ್ರತಿನಿಧಿಯನ್ನು ಪಕ್ಷಕಾರನನ್ನಾಗಿ ಮಾಡುವ ಬಗ್ಗೆ ಅರ್ಜಿಯು ಮೃತಪಟ್ಟ ಪ್ರತಿವಾದಿಯು ಅಥವಾ ರಿಸ್ಪಾಂಡೆಂಟನ ಮರಣದ ತಾರೀಖಿನ ೯೦ ದಿವಸಗಳಲ್ಲಿ ಮಾಡಬೇಕು.

# ನಂಬರು ೩೫

## ಬಲಗುಂದಿಸುವದನ್ನು ಕುರಿತು ಮಾಡಲ್ಪಟ್ಟದ್ದನ್ನು ತಿರಿಗಿಸುವ ಹುಕುಮಿನ ಬಗ್ಗೆ

( ಆ. ೨೨, ರೂ. ೯. )

### ಸರನಾಮೆ

(೧) ಅರ್ಜಿದಾರನು ಲಾ. ಅಸಲು ನಂ. $\frac{೬೨೮}{೧೯೨೭}$ ನೇದ್ದರಲ್ಲಿ ವಾದಿಯಾಗಿರುತ್ತಾನೆ.

[ ಅಥವಾ (೧) ಅರ್ಜದಾರನು ಮಯತ ರಾಮಕೃಷ್ಣ ವಿಠೋಬಾ ಎಂಬುವವನ ಕಾಯದೇಶೀರ ಪ್ರತಿನಿಧಿಯೆಂದು ಹಕ್ಕುತೋರಿಸುವವನಾಗಿರುತ್ತಾನೆ; ಮತ್ತು ಸದರಿ ಮಯುತನು ಲಾ. ಅಸಲು ನ. $\frac{೬೨೮}{೧೯೨೭}$ ನೇದರಲ್ಲಿ ವಾದಿಯಾಗಿದ್ದನು. ]

[ ಅಥವಾ (೧) ಅರ್ಜದಾರನು ನಾದಾರನಾದ ರಾಮಕೃಷ್ಣ ವಿಠೋಬಾ ಎಂಬುವವನ ಸಂಗತಿಯಲ್ಲಿ ಜಿಮ್ಮೆದಾರನು (ಅಥವಾ ಒಪ್ಪಿಸಿಕೊಳ್ಳುವವನು) ಆಗಿರುತ್ತಾನೆ; ಮತ್ತು ಸದರಿ ನಾದಾರನಾದವನು ಲಾ. ಅಸಲು ನಂ. $\frac{೬೨೮}{೧೯೨೭}$ ನೇದ್ದರಲ್ಲಿ ವಾದಿಯಾಗಿರುತ್ತಾನೆ. ]

(೨) ಸದರಿ ದಾವೆಯಲ್ಲಿಯ ಪ್ರತಿವಾದಿಯಾದ ದಾನಪ್ಪಾ ಗಂಗಪ್ಪಾ ಕೆಲಸಂಗದ ಎಂಬುವವನು ತಾರೀಖು ೧೩-೪-೧೯೨೮ನೇ ಇಸ್ವಿ ದಿವಸ ತೀರಿಹೋದನು. ಕಾಯದೆಯಿಂದ ಠರಾಯಿಸಿದ ಮುದ್ದತ್ತಿನಲ್ಲಿ ಸದರೀ ಮಯತ ಪ್ರತಿವಾದಿಯ ಕಾಯದೆಶೀರ ಪ್ರತಿನಿಧಿಯನ್ನು ಸದರಿ ದಾವೆಯಲ್ಲಿ ಪಕ್ಷಕಾರನ್ನಾಗಿ ಮಾಡಿಸಲಿಕ್ಕೆ ಅರ್ಜಿಯನ್ನು ಮಾಡದಿದ್ದಮೂಲಕಾ ಸದರಿ ದಾವೆಯು ತಾರೀಖು ೧೩-೭-೧೯೨೮ನೇ ಇಸ್ವಿ ದಿವಸ ಬಲಹೀನವಾಯಿತೆಂದು ಹುಕುಮು ಮಾಡಲ್ಪಟ್ಟಿತು.

(೩) ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಯೋಗ್ಯ ಕಾರಣದಿಂದ ಸದರಿ ದಾವೆಯನ್ನು ನಡೆಯಿಸಲಿಕ್ಕೆ ಅರ್ಜಿದಾರನಿಗೆ ಪ್ರತಿಬಂಧವಾಯಿತು.

(೪) ಅರ್ಜಿದಾರನ ವಿನಂತಿ ಏನಂದರೆ:—

ಮೇಲ್ಕಂಡ ಬಲಗುಂದಿಸುವದನ್ನು ಕುರಿತು ಮಾಡಲ್ಪಟ್ಟದ್ದನ್ನು ತಿರಿಗಿಸುವ ಹುಕುಮು ಮಾಡಬೇಕು; ಮತ್ತು ಸದರೀ ಮಯತ ಪ್ರತಿವಾದಿಯ ಸ್ಥಳದಲ್ಲಿ ಆತನ ಕಾಯದೇಶೀರ ಪ್ರತಿನಿಧಿಯಾದ ವಿನಾಯಕ ರಾಮಕೃಷ್ಣ ಎಂಬುವವನಿಗೆ ಪಕ್ಷಕಾರನ್ನಾಗಿ ಮಾಡಿಸಿ ಸದರಿ ದಾವೆಯನ್ನು ಸಾಗಿಸಬೇಕು.

**ಸೂಚನೆ**— ಈ ಅರ್ಜಿಗೆ ಇಕರಾರು ಬರೆಯಬೇಕು.

## ಪ್ರತಿಜ್ಞಾಲೇಖ

(೧) ದಾನಪ್ಪಾ ಗಂಗಪ್ಪಾ ಎಂಬವನನು ತೀರಿಕೊಂಡಿದ್ದ ಸಂಗತಿಯು ನನಗೆ ತಾರೀಖು ೧೧–೧೦–೧೯೨೮ ಇಶ್ವಿ ದಿವಸದ ಮೊದಲು ತಿಳಿಯಲಿಲ್ಲ.

(೨) ಸದರೀ ದಾನಪ್ಪಾ ಗಂಗಪ್ಪಾ ತೀರಿಕೊಂಡದ್ದು ಸಮನಿನ ಮೇಲಿನ ಬೇಲೀಫನ ಷರೇದ ಮೇಲಿಂದ ತಾರೀಖು ೧೧–೧೦–೧೯೨೮ನೇ ಇಶ್ವಿ ದಿವಸ ಮಟ್ಟ ಮೊದಲು ನನಗೆ ತಿಳಿಯಿತು.

(೩) ರಾಮಪ್ಪಾ ದಾನಪ್ಪಾ ಎಂಬುವವನು ಸದರಿ ಮೈಯತನ ಖಾಸ ಮಗನಾಗಿರುತ್ತಾನೆ. ಮತ್ತು ಮಯತನಿಗೆ ಸದರಿ ಅವನೊಬ್ಬನೆ ವಾರಸದಾರನಿರುತ್ತಾನೆ.

## ನಂಬರು ೩೬

## ಬಲಗುಂದಿಸುವದನ್ನು ಕುರಿತು ಮಾಡಲ್ಪಟ್ಟಿದ್ದನ್ನು ತಿರಿಗಿಸುವ ಹುಕುಮಿನ ಬಗ್ಗೆ

( ಆ. ೨೨, ರೂ. ೯. )

(೧) ಅರ್ಜದಾರಳ ಗಂಡನಾದ ಗುರುನಾಥ ಗೋವಿಂದ ಈತನು ಲಾ. ಅಸಲು ನಂ. $\frac{೯೨೫}{೧೯೨೭}$ನೇದ್ದರಲ್ಲಿ ಆ. ೩೪. ರೂ. ೪ನೇ ಪ್ರಕಾರ ಪ್ರಾಥಮಿಕ ಹುಕುಮನಾಮೆ ಪಡೆದವನಿದ್ದನು. ಸದರಿ ಅವನು ತಾರೀಖು ೧೨–೨–೧೯೨೮ನೇ ಇಶ್ವಿ ದಿವಸ ತೀರಿಕೊಂಡನು. ಕಾಯದೆಯಿಂದ ಠರಾಯಿಸಿದ ಮುದ್ದತಿನಲ್ಲಿ ಸದರಿ

ಮಯತ ವಾದಿಯ ಕಾಯದೆಶೀರ ಪ್ರತಿನಿಧಿಯನ್ನು ಸದರಿ ದಾವೆಯಲ್ಲಿ ಪಕ್ಷಕಾರನನ್ನಾಗಿ ಮಾಡಿಸಲಿಕ್ಕೆ ಅರ್ಜಿಯನ್ನು ಮಾಡಲ್ಪಡದಿದ್ದ ಮೂಲಕಾ ಸದರಿ ದಾವೆಯು ತಾರೀಖು ೧೨-೫-೧೯೨೮ನೇ ಇಸ್ವಿ ದಿವಸ ಬಲಹೀನವಾಯಿತೆಂದು ಹುಕುಮು ಮಾಡಲ್ಪಟ್ಟಿತು.

(೨) ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಯೋಗ್ಯಕಾರಣದಿಂದ ಸದರಿ ದಾವೆಯನ್ನು ನಡೆಯಿಸಲಿಕ್ಕೆ ಅರ್ಜಿದಾರನಿಗೆ ಪ್ರತಿಬಂಧವಾಯಿತು;

(೩) ಅರ್ಜಿದಾರನ ವಿನಂತಿ ಏನಂದರೆ:—

ಮೆಲ್ಕಂಡ ಬಲಗುಂದಿಸುವದನ್ನು ಕುರಿತು ಮಾಡಲ್ಪಟ್ಟದ್ದನ್ನು ತಿರಿಗಿಸುವ ಹುಕುಮು ಮಾಡಬೇಕು; ಮತ್ತು ಮಯತ ವಾದಿಯ ಸ್ಥಳದಲ್ಲಿ ಆತನ ಕಾಯದೆಶೀರ ಪ್ರತಿನಿಧಿಯಾದ ಅರ್ಜಿದಾರಳಿಗೆ ಪಕ್ಷಕಾರನನ್ನಾಗಿ ಮಾಡಿ ಸದರಿ ದಾವೆಯನ್ನು ಸಾಗಿಸಬೇಕು.

**ಸೂಚನೆ:—** ಈ ಅರ್ಜಿಗೆ ಈ ಕರಾರು ಬರೆಯಬೇಕು.

## ಪ್ರತಿಜ್ಞಾಲೇಖ

---

(೧) ನಾನು ಲಾ. ಅಸಲು ನಂಬರು $\frac{೯೨೫}{೯೨೭}$ ನೇ ದ್ದರಲ್ಲಿ ವಾದಿಯಾದ ಮಯತ ಗುರುನಾಥ ಗೋವಿಂದ ಈತನ ವಿಧವೆ ಇರುತ್ತೇನೆ.

(೨) ಸದರಿ ಗುರುನಾಥ ಗೋವಿಂದ ಈತನು ಮೆಲ್ಕಂಡ ದಾವೆಯಲ್ಲಿ ಪ್ರಾಥಮಿಕ ಹುಕುಮನಾಮೆ ಪಡಕೊಂಡದ್ದು ತಾರೀಖು ೧೨-೧೦-೧೯೨೮ನೇ ಇಸ್ವಿ ದಿವಸದ ವೊದಲು ನನಗೆ ತಿಳಿಯಲಿಲ್ಲ.

(೩) ನನ್ನ ಅಸ್ತಿಗಳ ವಹಿವಾಟು ಮಾಡತಕ್ಕ ನನ್ನ ಅಣ್ಣನಾದ ಗೋವಿಂದ ರಾಮಚಂದ್ರ ಈತನಿಗೆ ತಾರೀಖು ೧೨-೧೦-೧೯೨೮ನೇ ಇಸ್ವಿ ದಿವಸ ಮಯತನ ಕಾಗದಪತ್ರಗಳಲ್ಲಿ ಸದರಿ ಹುಕುಮನಾಮೆಯು ನಕಲು ಶಿಕ್ಕಿತು. ಆಗ ಸದರಿ ದಾವೆಯು ಸಂಗತಿ ನನಗೆ ತಿಳಿಯಿತು.

# ನಂಬರು ೩೭

## ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳುವ ವಿಷಯದಲ್ಲಿ

(ಆ. ೨೩, ರೂ. ೧)

## ಸರನಾಮೆ

(೧) ಇದರಲ್ಲಿ ಸಾಮೀಲು ಮಾಡಲಾಗದಂಥ ಪಕ್ಷಕಾರರನ್ನು ಸಾಮೀಲು ಮಾಡಿದ ಬಗ್ಗೆ ಹರಕತು ಮಾಡಲ್ಪಟ್ಟದೆ. ಮತ್ತು ಈ ಪದ್ಧತಿಯ ದೋಷದಿಂದ ಈ ದಾವೆಯು ರದ್ದಾಗುವದು.

(೨) ವಾದಿಯು ಬೇಡುವದೇನಂದರೆ:—

ವಾದಿಗೆ ಈ ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಕ್ಕೆ ಮತ್ತು ಈ ದಾವೆಯ ವಿಷಯವನ್ನು ಕುರಿತು ಹೊಸ ದಾವೆಯನ್ನು ತರುವದಕ್ಕೆ ಅಪ್ಪಣೆಯನ್ನು ಕೊಡಬೇಕು.

**ಸೂಚನೆ:**—ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳೋಣ ಅಥವಾ ಬೇಡಿದ ವಿಷಯದಲ್ಲಿ ಒಂದು ಭಾಗವನ್ನು ಬಿಟ್ಟುಬಿಡೋಣ (ಆ. ೨೩. ರೂ. ೧.)

(೧) ದಾವೆಯು ದಾಖಲಾದ ಬಳಿಕ ಬೇಕಾದಾಗ ವಾದಿಯು ಎಲ್ಲ ಅಥವಾ ಯಾರಾದರೂ ಪ್ರತಿವಾದಿಯರ ಸಂಬಂಧದಿಂದ ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳಬಹುದು. ಅಥವಾ ತನ್ನ ಬೇಡಿದ ವಿಷಯದ ಭಾಗವನ್ನು ಬಿಟ್ಟು ಬಿಡಬಹುದು.

(೨) ಕೋರ್ಟಿನವರು—

(ಅ) ಯಾವದೊಂದು ಪದ್ಧತಿಯ ದೋಷದಿಂದ ಒಂದು ದಾವೆಯು ರದ್ದಾಗುವದೆಂದು ಅಥವಾ

(ಬ) ಒಂದು ದಾವೆಯ ವಿಷಯದ ಬಗ್ಗೆ ಅಥವಾ ಬೇಡಿದ ವಿಷಯದ ಒಂದು ಭಾಗದ ಬಗ್ಗೆ ಹೊಸ ದಾವೆಯನ್ನು ತರುವದಕ್ಕೆ ವಾದಿಗೆ ಬಿಡಲು ಯೋಗ್ಯವಾದ ಇತರ ಕಾರಣಗಳಿಂದು ಮನಗಂಡಲ್ಲಿ, ವಾದಿಗೆ ಅಂಥ ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಕ್ಕೆ ಅಥವಾ ಬೇಡಿದ ವಿಷಯದ ಅಂಥಾ ಯಾವದೊಂದು

ಭಾಗವನ್ನು ಬಿಟ್ಟು ಬಿಟ್ಟು ಅಂಥಾ ದಾವೆಯ ವಿಷಯವನ್ನು ಕುರಿತು ಯಾ ಅಂಥಾ ಬೇಡಿದ ವಿಷಯದ ಭಾಗವನ್ನು ಕುರಿತು ಹೊಸದಾವೆಯನ್ನು ತರುವದಕ್ಕೆ ತಮಗೆ ಯೋಗ್ಯವಾಗಿ ತೋರಿದ ಶರತುಗಳಂತೆ ಅಪ್ಪಣೆಯನ್ನು ಕೊಡಬಹುದು. ಯಾರೊಬ್ಬ ಸಹವಾದಿಗೆ ಅಥವಾ ಸಹವಾದಿಗಳಿಗೆ ಉಳಿತವರ ಸಮ್ಮತಿಯ ಹೊರತು ದಾವೆಯನ್ನು ಬಿಟ್ಟುಕೊಡಲಿಕ್ಕೆ ಅಪ್ಪಣೆಕೊಡುವ ಅಧಿಕಾರವು ಕೋರ್ಟಿಗೆ ಇರುತ್ತದೆಂದು ಎಣಿಸಲಾಗದು.

## ನಂಬರು ३೮

### ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳುವ ವಿಷಯದಲ್ಲಿ

( ಆ. ೨३, ರೂ. ೧. )

### ಸರನಾಮೆ

(೧) ಇದರಲ್ಲಿ ದಾವೆಯ ಕಾರಣಗಳು ತಪ್ಪಾಗಿ ಸೇರಿಸಲ್ಪಟ್ಟ ಬಗ್ಗೆ ಹರ ಕತು ಮಾಡಲ್ಪಟ್ಟಿದೆ; ಮತ್ತು ಈ ಪದ್ಧತಿಯ ದೋಷದಿಂದ ಈ ದಾವೆಯು ರದ್ದಾಗುವದು.

(೨) ವಾದಿಯು ಬೇಡುವದೇನಂದರೆ:—

ವಾದಿಗೆ ಈ ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಕ್ಕೆ ಮತ್ತು ಈ ದಾವೆಯ ವಿಷಯವನ್ನು ಕುರಿತು ಹೊಸದಾವೆಯನ್ನು ತರುವದಕ್ಕೆ ಅಪ್ಪಣೆ ಯನ್ನು ಕೊಡಬೇಕು.

## ನಂಬರು ३೯

### ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳುವ ವಿಷಯದಲ್ಲಿ

(ಆ. ೨३. ರೂ.)

### ಸರನಾಮೆ

(೧) ವಾದಿಯು ದಾವೆಯ ಮನೆಯ ಮಾಲಕನಾಗಿರುತ್ತಾನೆ.

(೨) ಪ್ರತಿವಾದಿಯು ವಾದಿಯ ಒಕ್ಕಲಿದ್ದಾನೆಂದು ವಾದಿಯು ಸದರೀ ಮನೆಯ ಕಬಜವನ್ನು ಪಡಕೊಳ್ಳುವ ಬಗ್ಗೆ ಈ ದಾವೆಯನ್ನು ಮಾಡಿರುತ್ತಾನೆ.

(೩) ಪ್ರತಿವಾದಿಯು ತಾನು ಒಕ್ಕಲಿದ್ದದ್ದನ್ನು ನಿರಾಕರಿಸುತ್ತಾನೆ.

(೪) ಪ್ರತಿವಾದಿಯು ವಾದಿಯು ಒಕ್ಕಲಿದ್ದದನ್ನು ಸಾಬೀತು ಆಗದಿದ್ದ ಪಕ್ಷಕ್ಕೆವಾದಿದಾವೆ ರದ್ದಾಗುವ ಸಂಭವವಿದೆ; ಆದುದರಿಂದ ವಾದಿಯುಮಾಲಕೀಯು ಆಧಾರದಿಂದ ಸಹಾ ದಾವೆಯು ಮಾಡುವ ಆವಶ್ಯವಿದೆ ಕಾರಣಾ ವಾದಿಗೆ ಈ ದಾವೆಯು ಹಿಂದಕ್ಕೆ ತೆಗೆದುಕೊಳ್ಳಲಿಕ್ಕೆ ಮತ್ತು ಈ ದಾವೆಯ ವಿಷಯುವನ್ನು ಕುರಿತು ಹೊಸ ದಾವೆಯುನ್ನು ತರುವದಕ್ಕೆ ಅಪ್ಪಣೆಯನ್ನು ಕೊಡಬೇಕೆಂದು ವಾದಿಯ ಬೇಡುತ್ತಾನೆ.

## ನಂಬರು ೪೦

## ಬೇಡಿದ ವಿಷಯುದಲ್ಲಿ ಒಂದು ಭಾಗವನ್ನು ಬಿಟ್ಟು ಬಿಡೋಣ

(ಆ. ೨೩, ರೂ. ೧.)

### ಸರನಾಮೆ

(೧) ಪ್ರತಿವಾದಿಯು ದಾವೆಯ ಮನೆಯುನ್ನು ವಾದಿಯ ಕಡೆಗೆ ಕಬಜಾ ಒತ್ತೆ ಇಟ್ಟಿರುತ್ತಾನೆ. ಮತ್ತು ವಾದಿಯು ಪ್ರತಿವಾದಿಯ ಕಡೆಯಿಂದ ಕಬಜಾ ಒತ್ತೆ ಇಟ್ಟುಕೊಂಡಿರುತ್ತಾನೆ.

(೨) ಪ್ರತಿವಾದಿಯು ಅದನ್ನು ವಾದಿಯ ಕಡೆಯಿಂದ ಬಾಡಿಗೆಗೆ ತೆಗೆದು ಕೊಂಡಿರುತ್ತಾನೆ.

(೩) ಸದರೀ ಒತ್ತೆಯ ರಕಮಿನ ಬಗ್ಗೆ ಮತ್ತು ಬಾಡಿಗೆಯ ರಕಮಿನ ಬಗ್ಗೆ ಈ ದಾವೆಯನ್ನು ಮಾಡಿರುತ್ತದೆ.

(೪) ಸದರೀ ಒತ್ತೆಯ ಸಂಬಂಧದಿಂದ ಮತ್ತು ಬಾಡಿಗೆಯ ಸಂಬಂಧ ದಿಂದ ಸಹಾ ನ್ಯಾಯಾಶ್ರಯಗಳು ಈ ದಾವೆಯಲ್ಲಿ ದೋರೆಯಲಾಗದು.

(೫) ಇದರಲ್ಲಿ ಬೇಡಿದ ವಿಷಯದ ಬಾಡಿಗೆಯ ಸಂಬಂಧದ ಭಾಗವನ್ನು ಬಿಟ್ಟು ಬಿಡಲಿಕ್ಕೆ ಮತ್ತು ಆ ಭಾಗವನ್ನು ಕುರಿತು ಹೊಸ ದಾವೆಯನ್ನು ತರುವ ದಕ್ಕೆ ತನಗೆ ಅಪ್ಪಣೆಯನ್ನು ಕೊಡಬೇಕೆಂದು ವಾದಿಯು ಬೇಡುತ್ತಾನೆ.

## ನಂಬರು ೪೧

## ರಾಜಿಯಂತೆ ಹುಕುಮನಾಮೆಯನ್ನು ಮಾಡಬೇಕೆಂಬ ವಿಷಯದಲ್ಲಿ

(ಆ. ೨೩, ರೂ. ೩.)

### ಸರನಾಮೆ

(೧) ಈ ದಾವೆಯು ದಾಖಲಾದ ಬಳಿಕ ತಾರೀಖು ೧೫-೩-೧೯೨೭ನೇ ಇಸ್ವಿ ದಿವಸ ಅದನ್ನು ಪೂರಾ ರಾಜಿಯಿಂದ (ಯಾ ಕರಾರಿನಿಂದ) ತೀರಿಸಲ್ಪಟ್ಟಿತು.

(೨) ಸದರಿ ರಾಜಿಯ ಶರ್ತುಗಳ ತಪಶೀಲು ಕೆಳಗಿನಂತೆ ಇವೆ.

೧. ವಾದಿಯು ಈ ದಾವೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು.

೨. ಪ್ರತಿವಾದಿಯು ಆರು ತಿಂಗಳದಲ್ಲಿ ೨೫೦೦ ರೂಪಾಯಿಗಳನ್ನು ವಾದಿಗೆ ಕೊಡಬೇಕು.

೩. ಸದರೀ ರಾಜೀನಾಮೆಯನ್ನು ಕೋರ್ಟಿನಲ್ಲಿ ಹಾಜರು ಮಾಡಲಿಕ್ಕೆ ವಾದಿಯು ಇನಕಾರ ಮಾಡುತ್ತಾನೆ.

೪. ಅರ್ಜದಾರನ ವಿನಂತಿ ಏನಂದರೆ—

ಸದರೀ ರಾಜಿಯು ದಪ್ತರಿನಲ್ಲಿ ಬರೆದಿಡಬೇಕೆಂದು ಮತ್ತು ಅದರಂತೆ ಹುಕುಮನಾಮೆಯನ್ನು ಮಾಡಬೇಕೆಂದು ಹುಕುಮು ಮಾಡಬೇಕು.

## ನಂಬರ ೪೨

## ವೆಚ್ಚಕ್ಕಾಗಿ ಜಾಮೀನು ಬೇಡೋಣ

(ಆ. ೨೫, ರೂ. ೧.)

### ಸರನಾಮೆ

ಲಾ. ಅಸಲು ನಂ.———

ಈ ಅರ್ಜಿಗೆ ಜೋಡಿಸಿದ ಪ್ರತಿಜ್ಞಾ ಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ಅರ್ಜಿದಾರನು ಬೇಡುವದೇನಂದರೆ:—

ಈ ದಾವೆಯ ಉತ್ತರಪಕ್ಷದ ಬಗ್ಗೆ ಅರ್ಜಿದಾರನು ಹಿಂದೆ ಮಾಡಲ್ಪಟ್ಟದ್ದು ಮುಂದೆ ಮಾಡಲ್ಪಡಬಹುದಾದದ್ದು ಆದ ಯಾವತ್ತು ವೆಚ್ಚಕ್ಕಾಗಿ ಜಾಮೀನು ಕೊಡಲಿಕ್ಕೆ ವಾದಿಗೆ (ಯಾ ವಾದಿಗಳಿಗೆ) ಹುಕುಮು ಮಾಡಬೇಕು.

## ಪ್ರತಿಜ್ಞಾಲೇಖ

(೧) ವಾದಿಯು (ಯಾ ವಾದಿಯರೆಲ್ಲರು) ಬ್ರಿಟಿಷ ಹಿಂದುಸ್ಥಾನದ ಹೊರಗೆ ಜಮಖಂಡಿ ಸಂಸ್ಥಾನದ ಪೈಕಿ ಕುಂದಗೋಳದಲ್ಲಿ ವಾಸಿಸುತ್ತಾನೆ. ಯಾ (ವಾಸಿಸುತ್ತಾರೆ.)

ದಾವೆಯ ಸ್ವತ್ತಿನ ಹೊರತಾಗಿ ವಾದಿಯು (ಯಾ ವಾದಿಗಳಲ್ಲಿ ಯಾವನೊಬ್ಬನು) ಬ್ರಿಟಿಷ ಹಿಂದುಸ್ಥಾನದಲ್ಲಿ ಇತರ ತಕ್ಕಷ್ಟು ಸ್ಥಾವರ ಸೊತ್ತಿಗೆ ಮಾಲಕನಾಗಿರುವದಿಲ್ಲ.

## ನಂಬರ ೪೩

## ವೆಚ್ಚಕ್ಕಾಗಿ ಜಾಮೀನು ಬೇಡೋಣ

(ವಾದಿಯು ಹೆಂಗಸು ಇದ್ದಲ್ಲಿ) (ಆ. ೨೫ ರು. ೧)

(೧) ಹಣ ಕೊಡುವ ವಿಷಯದ ಬಗ್ಗೆ ಈ ದಾವೆಯಾಗಿರುತ್ತದೆ.

(೨) ವಾದಿಯು ಹೆಂಗಸು ಇರುತ್ತಾಳೆ.

(೩) ಮೇಲ್ಕಂಡ ಕಾರಣಗಳ, ಮತ್ತು ಈ ಅರ್ಜಿಗೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಕಾರಣಗಳ, ಆಧಾರದಿಂದ ಅರ್ಜದಾರನು ಬೇಡುವದೇನಂದರೆ—

ಈ ದಾವೆಯ ಪ್ರತಿವಾದದ ಬಗ್ಗೆ ಅರ್ಜಿದಾರನು ಹಿಂದೆ ಮಾಡಲ್ಪಟ್ಟ ಮುಂದೆ ಮಾಡಲ್ಪಡಬಹುದಾದ ಯಾವತ್ತು ವೆಚ್ಚಕ್ಕಾಗಿ ಜಾಮೀನು ಕೊಡಲಿಕ್ಕೆ ವಾದಿಗೆ ಹುಕುಮು ಮಾಡಬೇಕು.

## ಪ್ರತಿಜ್ಞಾ ಲೇಖ

(೧) ಈ ದಾವೆಯೊಳಗಿನ ಆಸ್ತಿಯು ಹೊರತು ಬ್ರಿಟಿಷ ಹಿಂದುಸ್ಥಾನದಲ್ಲಿ ಈ ವಾದಿಯ ಯಾವದಾದರೂ ಪ್ರಕಾರದ ಸಾಕಷ್ಟು ಸ್ಥಾವರ ಮಾಲು ಇಲ್ಲ.

## ನಂಬರು ೪೪

## ಅಲ್ಪವಯಸ್ಕನಾದ ಪ್ರತಿವಾದಿಯ ಬಗ್ಗೆ ಪಾಲಕನನ್ನು ನೇಮಿಸುವ ವಿಷಯದಲ್ಲಿ (ಆ. ३೨, ರೂ. ३.)

(೧) ಇದಕ್ಕೆ ಜೋಡಿಸಿದ ಪ್ರತಿಜ್ಞಾ ಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ವಾದಿಯು ಬೇಡುವದೇನಂದರೆ:—

ಈ ದಾವೆಯಲ್ಲಿ ಅಲ್ಪವಯಸ್ಕನಾದ ಬಸಪ್ಪಾ ತಂದಿ ವೀರಪ್ಪಾ ಎಂಬ ಪ್ರತಿವಾದಿಯ ಬಗ್ಗೆ ಗುರಪ್ಪಾ ತಂದಿ ಕಲ್ಲಪ್ಪಾ ನೀಲಿ ಎಂಬುವವನಿಗೆ ಈ ದಾವೆಯ ಸಂಬಂಧದ ಪಾಲಕನಾಗಿ ನೇಮಿಸಬೇಕು.

### ಪ್ರತಿಜ್ಞಾಲೇಖ

---

(೧) ಇದರಲ್ಲಿ ಪ್ರತಿವಾದಿಯಾದ ಬಸಪ್ಪಾ ತಂದಿ ವೀರಪ್ಪಾ ಈತನು ಅಲ್ಪವಯಸ್ಕನಾಗಿರುತ್ತಾನೆ.

(೨) ಸದರೀ ಬಸಪ್ಪನ ಬಗ್ಗೆ ಯೋಗ್ಯನಾದ ಅಧಿಕಾರಿಯಿಂದ ಯಾವನಾದರೂ ಪಾಲಕನನ್ನು ಜಾಹೀರು ಮಾಡಲ್ಪಟ್ಟಿಲ್ಲ ಅಥವಾ ನೇಮಿಸಲ್ಪಟ್ಟಿಲ್ಲ.

(३) ಸದರೀ ಬಸಪ್ಪನ ತಂದಿಯಾದ ವೀರಪ್ಪನು ಬರೆದುಕೊಟ್ಟ ಒತ್ತೆ ಪತ್ರದ ಆಧಾರದಿಂದ ಈ ದಾವೆಯಾಗಿರುತ್ತದೆ. ಸದರೀ ವೀರಪ್ಪನು ಒತ್ತೆ ಇಡುವವನಿರೋದರಿಂದ ಅವನಿಗೆ ಇದರಲ್ಲಿ ಪ್ರತಿವಾದಿಯನ್ನಾಗಿ ಮಾಡಿರುತ್ತದೆ. ಸದರೀ ವೀರಪ್ಪನಿಗೆ ಸದರೀ ಅಲ್ಪವಯಸ್ಕನಾದ ಬಸಪ್ಪನ ಸ್ವಾರ್ಥಸಂಬಂಧಕ್ಕೆ ಪ್ರತಿಕೂಲವಾದ ಸ್ವಾರ್ಥ ಸಂಬಂಧವು ದಾವೆಯೊಳಗಿನ ತಕರಾರಿನ ವಿಷಯಗಳಲ್ಲಿ ಇರುತ್ತದೆ.

(೪) ಸದರೀ ಬಸಪ್ಪನಿಗೆ ಬೇರೆಯುವನಾದ ಯಾರೂ ಸ್ವಭಾವತಃ ಪಾಲಕನಾಗಿರುವದಿಲ್ಲ.

(೫) ಸದರೀ ಬಸಪ್ಪನು ಆತನ ತಂದಿಯಾದ ಮೇಲ್ಕಂಡ ವೀರಪ್ಪನ ರಕ್ಷಣೆಯಲ್ಲಿರುವನು.

(೬) ಗುರಪ್ಪಾ ತಂದಿ ಕಲ್ಲಪ್ಪಾ ನೀಲಿ ಎಂಬುವವನು ಸದರೀ ಬಸಪ್ಪನ ಚಿಗಪ್ಪನ ಮಗನಾಗಿರುತ್ತಾನೆ.

(೭) ಸದರೀ ಗುರಪ್ಪನಿಗೆ ಸದರೀ ಬಸಪ್ಪನ ಸ್ವಾರ್ಥಸಂಬಂಧಕ್ಕೆ ಪ್ರತಿಕೂಲವಾದ ಸ್ವಾರ್ಥಸಂಬಂಧವು ಈ ದಾವೆಯೊಳಗಿನ ತಕರಾರಿನ ವಿಷಯಗಳಲ್ಲಿ ಇರುವದಿಲ್ಲ.

(೮) ಸದರೀ ಗುರಪ್ಪನು ಸದರೀ ಬಸಪ್ಪನ ಪಾಲಕನು ನೇಮಿಸಲ್ಪಡಲಿಕ್ಕೆ ಯೋಗ್ಯನಾಗಿರುತ್ತಾನೆ.

## ನಂಬರು ೪೫

## ದರಿದ್ರನಂತೆ ದಾವೆಯನ್ನು ಮಾಡುವ ಅಪ್ಪಣೆಗಾಗಿ ಅರ್ಜಿ

ಪ್ರತಿಯೊಂದು ಅಸಲರ್ಜಿಯಲ್ಲಿರತಕ್ಕ ಮಜಕೂರು ಬರೆಯಬೇಕು, ಮತ್ತು ವಿನಂತಿ ಕಲಮಿನ ಪೂರ್ವದಲ್ಲಿ ಕೆಳಗೆ ಬರೆದ ಮಜಕೂರು, ಒಂದು ಬೇರೆ ಪ್ಯಾರಾಗ್ರಾಫು ಮಾಡಿ ಬರೆಯಬೇಕು.

“ ವಾದಿಯು ಈ ದಾವೆಯ ಅಸಲರ್ಜಿಗೆ ಕಾಯಿದೆಯಿಂದ ನೇಮಿಸಲ್ಪಟ್ಟ ಫೀಯನ್ನು ಕೊಡಲಿಕ್ಕೆ ಗತಿಯಿಲ್ಲದಂಥವನಾಗಿರುತ್ತಾನೆ. ಕಾರಣಾ ದರಿದ್ರನಂತೆ ದಾವೆಯನ್ನು ಮಾಡುವ ಅಪ್ಪಣೆಯನ್ನು ಬೇಡುತ್ತಾನೆ ಅರ್ಜಿದಾರನ ಮಾಲಕಿಗೆ ಸೇರಿದಂಥ ಜಂಗಮ ಯಾ ಸ್ಥಾವರ ಮಾಲು ಅಂದಾಜಿನ ಬೆಲೆ ಸಹಿತವಾಗಿ ಕೆಳಗೆ ಬರೆದಿರುತ್ತದೆ. (ಯಾ ಬರೆಯಲ್ಪಟ್ಟಂಥ ಪಟ್ಟಿಯನ್ನು ಈ ಅರ್ಜಿಗೆ ಜೋಡಿಸಿರುತ್ತದೆ.”)

**ಸೂಚನೆ**:—ದಾವೆಯ ಅಸಲರ್ಜಿಯಲ್ಲಿ ಈ ಮಜಕೂರು ಬರೆದರೆ ಸಾಕಾಗುವದು. ಬೇರೆ ಅರ್ಜಿಯನ್ನು ಕೊಡಲಿಕ್ಕೆ ಕಾರಣವಿಲ್ಲ. ಯಾವದಾದರೊಂದು ದಾವೆಯ ಅಸಲರ್ಜಿಗೆ ಕಾಯಿದೆಯಿಂದ ಫೀಯನ್ನು ನೇಮಿಸಲ್ಪಟ್ಟಲ್ಲಿ ಮಾತ್ರ ಈ ಪ್ರಕಾರ ಮಜಕೂರು ಬರೆಯಬೇಕು. ಬಹುತರವಾಗಿ ಪ್ರತಿಯೊಂದು ದಾವೆಯ ಅಸಲರ್ಜಿಗೆ ಕಾಯಿದೆಯಿಂದ ಫೀಯನ್ನು ನೇಮಿಸಲ್ಪಟ್ಟಿರುತ್ತದೆ. ಆದರೆ ಹೀಗೆ ನೇಮಿಸಲ್ಪಡದಿದ್ದ ಸಂದರ್ಭದಲ್ಲಿ ಅನುಸರಿಸುವ ಕ್ರಮವು ಮುಂದಿನ

ನಂಬರದಲ್ಲಿ ಹೇಳುತ್ತೇವೆ. ಅಂದರೆ ಆ ಪ್ರಸಕ್ತಿಯಲ್ಲಿ ಮುಂದಿನ ನಂಬರದಲ್ಲಿ ಬರೆದ ಮಜಕೂರು ಬರೆಯಬೇಕು.

## ನಂಬರು ೪೬

## ದರಿದ್ರನಂತೆ ದಾವೆಯನ್ನು ಮಾಡುವ ಅಪ್ಪಣೆಗಾಗಿ ಅರ್ಜಿ

ಪ್ರತಿಯೊಂದು ಅಸಲರ್ಜಿಯಲ್ಲಿರತಕ್ಕ ಮಜಕೂರು ಬರೆಯಬೇಕು. ಮತ್ತು ವಿನಂತಿ ಕಲಮಿನ ಪೂರ್ವದಲ್ಲಿ ಕೆಳಗೆ ಬರೆದ ಮಜಕೂರು, ಬೇರೊಂದು ಪ್ಯಾರಾ ಗ್ರಾಫು ಮಾಡಿ ಬರೆಯಬೇಕು.

"ವಾದಿಯು ತನ್ನ ಮೈಮೇಲಿನ ಅವಶ್ಯಕವಾದ ವಸ್ತ್ರಗಳೂ ದಾವೆಯ ಒಡವೆಯೂ ಹೊರತಾಗಿ, ನೂರು ರೂಪಾಯಿ ಬೆಲೆಯಾಗುವಷ್ಟು ಸ್ವತ್ತಿಗೆ ಬಾಧ್ಯನಾಗಿರದಂಥವನಾಗಿರುತ್ತಾನೆ. ಕಾರಣ ದರಿದ್ರನಂತೆ ದಾವೆಯನ್ನು ಮಾಡುವ ಅಪ್ಪಣೆಯನ್ನು ಬೇಡುತ್ತಾನೆ. ಅರ್ಜಿದಾರನ ಮಾಲಕಿಗೆ ಸೇರಿದಂಥ ಜಂಗಮ ಯಾ ಸ್ಥಾವರ ಮಾಲು ಅಂದಾಜಿನ ಬೆಲೆಸಹಿತವಾಗಿ ಬರೆಯಲ್ಪಟ್ಟಂಥ ಪಟ್ಟಿಯನ್ನು ಈ ಅರ್ಜಿಗೆ ಜೋಡಿಸಿರುತ್ತದೆ."

**ಸೂಚನೆ:—** ಯಾವದಾದರೊಂದು ದಾವೆಯ ಅಸಲರ್ಜಿಗೆ ಕಾಯಿದೆಯಿಂದ ಫೀಯು ನೇಮಿಸಲ್ಪಡದಿದ್ದಲ್ಲಿ ಮಾತ್ರ ಈ ಪ್ರಕಾರ ಅರ್ಜಿಯನ್ನು ಮಾಡಬೇಕು. ಅಸಲರ್ಜಿಯಲ್ಲಿ ಈ ಮಜಕೂರು ಬರೆದರೆ ಸಾಕಾಗುವದು. ಬೇರೆ ಅರ್ಜಿಯು ಕೊಡಲಿಕ್ಕೆ ಕಾರಣವಿಲ್ಲ.

## ನಂಬರು ೪೭

## ಒತ್ತೆಬಿಡಿಸಿಕೊಳ್ಳುವ ಹಕ್ಕನ್ನು ಮುಣಿಗಿಸುವ ವಿಷಯದ ಕೊನೆಯ ಹುಕುಮುನಾಮೆಯ ಬಗ್ಗೆ (ಆ. ೩೪, ರೂ. ೩.)

### ಸರನಾಮೆ

(೧) ಒತ್ತೆಬಿಡಿಸಿಕೊಳ್ಳುವ ಹಕ್ಕು ಮುಣಿಗಿಸುವ ಸಂಬಂಧವ ಈ ದಾವೆಯಲ್ಲಿ (ಆ. ೩೪, ರೂ ೨ನೇ ಪ್ರಕಾರ) ತಾರೀಖು ೧೬-೪-೧೯೨೬ನೇ ಇಸ್ವಿ ದಿವಸ ಪ್ರಾಥಮಿಕ ಹುಕುಮುನಾಮೆಯು ಮಾಡಲ್ಪಟ್ಟಿತು.

(೨) ಸದರೀ ಹುಕುಮುನಾಮೆಯಲ್ಲಿ ತಾರೀಖು ೧೬–೧೦–೧೯೨೬ನೇ ಇಸ್ವಿ ದಿವಸವರೆಗೆ ವಾದಿಗೆ ಸಲ್ಲತಕ್ಕದ್ದಾಗುವ ಹಣವು ೪೫೪೭ ರೂಪಾಯಿಗಳು ಆಗಿರುತ್ತವೆಂದು ಮತ್ತು ಸದರೀ ದಿವಸ ಹಣಕೊಡಲಿಕ್ಕೆ ಗೊತ್ತುಪಡಿಸಿದೆಂದು ಠರಾಯಿಸಲ್ಪಟ್ಟಿತು.

(೩) ಪ್ರತಿವಾದಿಯು ಈ ಹಣ ಅಥವಾ ಇದರ ಪೈಕಿ ಯಾವ ಭಾಗವೂ ಕೊಟ್ಟಿಲ್ಲ.

(೪) ವಾದಿಯು ಬೇಡುವದೆನಂದರೆ—

ಪ್ರತಿವಾದಿಯು ಮತ್ತು ಅವನ ತರ್ಫನಿಂದ ಅಥವಾ ಅವನ ಕಡೆಯಿಂದ ಹಕ್ಕು ಹೇಳುವ ಎಲ್ಲ ಜನರು ಒತ್ತೆಬಿಡಿಸಿಕೊಳ್ಳುವ ಯಾವತ್ತು ಹಕ್ಕುಗಳನ್ನು ಕಳಕೊಂಡರೆಂದು ಮತ್ತು ಸದರಿ ಆಸ್ತಿಯನ್ನು ವಾದಿಯ ತಾಬೆಯಲ್ಲಿ ಕೊಡಬೇಕೆಂದು ಪ್ರತಿವಾದಿಗೆ ಹುಕುಮುಮಾಡಿ ಕೊನೆಯ ಹುಕುಮನಾಮೆ ಮಾಡಬೇಕು.

( **ಸೂಚನೆ:** – ಈ ಅರ್ಜಿಗೆ ಇಕರಾರು ಬರೆಯಬೇಕು.)

## ನಂಬರು ೪೮

## (ಒತ್ತೆಯ ಆಸ್ತಿಯ) ವಿಕ್ರಯದ ಬಗ್ಗೆ ಮಾಡಿದ ದಾವೆಯಲ್ಲಿ ಪಕ್ಕಾ ಹುಕುಮುನಾಮೆಯ ಬಗ್ಗೆ (ಆ. ೩೪, ರೂ. ೫.)

### ಸರನಾಮೆ

(೧) ವಿಕ್ರಯದ ಬಗ್ಗೆ ಮಾಡಿದ ಈ ದಾವೆಯಲ್ಲಿ (ಆ. ೩೪, ರೂ. ೪ನೇ ಪ್ರಕಾರ) ತಾರೀಖು ೧೬–೪–೧೯೨೬ನೇ ಇಸ್ವಿ ದಿವಸ ಪ್ರಾಥಮಿಕ ಹುಕುಮ ನಾಮೆಯು ಮಾಡಲ್ಪಟ್ಟಿತು.

(೨) ಸದರೀ ಹುಕುಮುನಾಮೆಯಲ್ಲಿ ತಾರೀಖು ೧೬–೧೦–೧೯೨೬ನೇ ಇಸ್ವಿ ದಿವಸದ ವರೆಗೆ ವಾದಿಗೆ ಸಲ್ಲತಕ್ಕದ್ದಾಗುವ ಹಣವು ೨೫೬೮ ರೂಪಾಯಿಗಳು ಆಗಿರುತ್ತವೆಂದು ಮತ್ತು ಸದರೀ ದಿವಸ ಹಣ ಕೊಡಲಿಕ್ಕೆ ಗೊತ್ತು ಪಡಿಸಿದೆಂದು ಠರಾಯಿಸಲ್ಪಟ್ಟಿತು.

(೩) ಪ್ರತಿವಾದಿಯು ಇವರಲ್ಲಿ ಏನೂ ಕೊಟ್ಟಿಲ್ಲ.

(೪) ವಾದಿಗೆ ಸಲ್ಲತಕ್ಕ ಹಣದ ತಪಶೀಲು

೨೫೬೪ ರೂಪಾಯಿ ಪ್ರಾಥಮಿಕ ಹುಕುಮನಾಮೆಯಲ್ಲಿ ನಮೂದ ಮಾಡಿದ ಮೊಬಲಗು

೧೫೦ ರೂಪಾಯಿ ತಾರೀಖು ೧೬-೧೦-೧೯೨೬ನೇ ಇಸ್ವಿ ದಿವಸದಿಂದ ಇವತ್ತಿನ ವರೆಗೆ ಆಗುವ ಬಡ್ಡಿ

---

ಅಂತು ೨೭೧೪ ರೂಪಾಯಿಗಳನ್ನು ವಾದಿಗೆ ಸಲ್ಲತಕ್ಕದ್ದಾಗುತ್ತದೆ.

(೫) ವಾದಿಯು ಬೇಡುವದೇನಂದರೆ:—

ಮುಂದಿನ ಬಡ್ಡಿ ಸಹಿತವಾಗಿ ಮೇಲ್ಕಂಡ ೨೭೧೪ ರೂಪಾಯಿಗಳ ಬಗ್ಗೆ ಒತ್ತೆ ಇಟ್ಟ ಆಸ್ತಿಯನ್ನು ಮಾರಬೇಕೆಂದಲು ಸದರೀ ಮಾರಾಟದಿಂದ ಬಂದ ಉತ್ಪನ್ನದ ವ್ಯವಸ್ಥೆಯನ್ನು ಆ. ೩೪, ರೂ. ೪ನೇ ಕಾನೂನಿನಲ್ಲಿ ಹೇಳಿದಂತೆ ಮಾಡಬೇಕೆಂದಲು ಪಕ್ಕಾ ಹುಕುಮನಾಮೆ ಮಾಡಬೇಕು.

[**ಸೂಚನೆ**:— ಈ ಅರ್ಜಿಗೆ ಇಕಾರಾರು ಬರೆಯಬೇಕು.]

## ನಂಬರು ೪೯

## ಒತ್ತೆಯನ್ನು ಬಿಡಿಸಿಕೊಳ್ಳುವ ಬಗ್ಗೆ ಮಾಡಿದ ದಾವೆಯಲ್ಲಿ ಪಕ್ಕಾ ಹುಕುಮನಾಮೆಯ ಬಗ್ಗೆ (ಆ. ೩೪, ರೂ.)

### ಸರನಾಮೆ

೧. ಒತ್ತೆ ಬಿಡಿಸಿಕೊಳ್ಳುವ ವಿಷಯದ ಈ ದಾವೆಯಲ್ಲಿ [ಆ. ೩೪, ರೂ. ೭ನೇ ಪ್ರಕಾರ] ತಾರೀಖು ೧೫-೩-೧೯೨೭ನೇ ಇಸ್ವಿ ದಿವಸ ಪ್ರಾಥಮಿಕ ಹುಕುಮನಾಮೆಯು ಮಾಡಲ್ಪಟ್ಟಿತು.

೨. ಸದರೀ ಹುಕುಮನಾಮೆಯಲ್ಲಿ ತಾರೀಖು ೧೫-೯-೧೯೨೭ನೇ ಇಸ್ವಿ ದಿವಸದ ವರೆಗೆ ಪ್ರತಿವಾದಿಗೆ ಸಲ್ಲತಕ್ಕದ್ದಾಗುವ ಮೊಬಲಗು ೧೫೨೦

ರೂಪಾಯಿಗಳು ಆಗಿರುತ್ತವೆಂದು ಮತ್ತು ಸದರೀ ದಿವಸದಲ್ಲಿ ಅಥವಾ ಅದರ ಮುಂಚೆ ಸದರೀ ಮೊಬಲಗನ್ನು ಕೊಡಬೇಕೆಂದು ಠರಾಯಿಸಲ್ಪಟ್ಟಿತು.

೩. ತಾರೀಖು ೧-೯-೧೯೬೭ನೇ ಇಸ್ವಿ ದಿವಸ ವಾದಿಯು ಸದರೀ ಮೊಬಲಗನ್ನು ಕೋರ್ಟಿನಲ್ಲಿ ಕೊಟ್ಟನು.

೪. ವಾದಿಯು ಬೇಡುವದೇನಂದರೆ: —

ಆ. ೩೪, ರೂ. ೮ ಪ್ರಕಾರ ಪಕ್ಕಾ ಹುಕುಮನಾಮೆ ಮಾಡಬೇಕು. [ಅಥವಾ (೪) ಪ್ರಾಥಮಿಕ ಹುಕುಮನಾಮೆಯ ಶರತುಗಳನ್ವಯ ಯಾವ ದಸ್ತೈವಜುಗಳನ್ನು ಒಪ್ಪಿಸಿಕೊಡುವಕ್ಕೆ ಪ್ರತಿವಾದಿಯು ಬದ್ಧನಾಗಿದ್ದನೋ ಅವನ್ನು ಒಪ್ಪಿಸಿ ಕೊಡುವದಕ್ಕೆ ಮತ್ತು ಸದರೀ ಹುಕುಮನಾಮೆಯಲ್ಲಿ ಫರ್ಮಾಯಿಸಲ್ಪಟ್ಟಂತೆ ಒತ್ತೆಯಿದ್ದ ಆಸ್ತಿಯನ್ನು ಪುನಃ ತಬದಿಲು ಮಾಡಿ ಕೊಡುವದಕ್ಕೆ ಮತ್ತು ಸದರೀ ಆಸ್ತಿಯನ್ನು ವಾದಿಯ ಸ್ವಾಧೀನಕ್ಕೆ ಕೊಡುವದಕ್ಕೆ ಹುಕುಮಗಳು ಮಾಡಿ ಪಕ್ಕಾ ಹುಕುಮನಾಮೆ ಮಾಡಬೇಕು.

[**ಸೂಚನೆ**:— ಈ ಅರ್ಜಿಗೆ ಇಕರಾರು ಬರೆಯಬೇಕು.]

## ನಂಬರು ೫೦

## ಒತ್ತೆಬಿಡಿಸಿಕೊಳ್ಳುವ ಬಗ್ಗೆ ಮಾಡಿದ ದಾವೆಯಲ್ಲಿ ಪಕ್ಕಾ ಹುಕುಮನಾಮೆಯ ಬಗ್ಗೆ (ಆ. ೩೪, ರೂ. ೮.)

## ಸರನಾಮೆ

(೧) ಒತ್ತೆ ಬಿಡಿಸಿಕೊಳ್ಳುವ ವಿಷಯದ ಈ ದಾವೆಯಲ್ಲಿ (ಆ. ೩೪, ರೂ. ೭ನೇ ಪ್ರಕಾರ) ತಾರೀಖು ೧೭-೪-೧೯೬೭ನೇ ಇಸ್ವಿ ದಿವಸ ಪ್ರಾಥಮಿಕ ಹುಕುಮನಾಮೆ ಮಾಡಲ್ಪಟ್ಟಿತು.

(೨) ಸದರೀ ಹುಕುಮನಾಮೆಯಲ್ಲಿ ತಾರೀಖು ೧೭-೧೦-೧೯೬೭ನೇ ಇಸ್ವಿ ದಿವಸದ ವರೆಗೆ ಪ್ರತಿವಾದಿಗೆ ಸಲ್ಲತಕ್ಕದ್ದಾಗುವ ಮೊಬಲಗು ೧೫೬೫ ರೂಪಾಯಿಗಳು ಆಗಿರುತ್ತವೆಂದು ಮತ್ತು ಸದರೀ ದಿವಸ ಸದರೀ ಮೊಬಲಗು ಕೊಡಲಿಕ್ಕೆ ಗೊತ್ತುಪಡಿಸಿದೆಂದು ಠರಾಯಿಸಲ್ಪಟ್ಟಿತು.

(೩) ವಾದಿಯು ಇದರಲ್ಲಿ ಏನೂ ಕೊಟ್ಟಿಲ್ಲ.

(೪) ಪ್ರತಿವಾದಿಯು ಬೇಡುವದೇನಂದರೆ—

ಆ ೯೩, ರೂ. ೮ ಪ್ರಕಾರ ಪಕ್ಕಾ ಹುಕುಮನಾಮೆ ಮಾಡಬೇಕು.

ಅಥವಾ - (೪) (ಇಟ್ಟ ಒತ್ತೆಯು ಸಾಧಾ ಯಾ ಕಬಜಾ ಒತ್ತೆಯಾಗದಿದ್ದರೆ) ಒತ್ತೆಯ ಆಸ್ತಿಯನ್ನು ಬಿಡಿಸಿಕೊಳ್ಳುವ ವಾದಿಯ ಯಾ ಅವನ ತರ್ಫಿನಿಂದ ಹಕ್ಕು ಹೇಳುವ ಎಲ್ಲ ಜನರ ಯಾವತ್ತು ಮುಣಿಗಿಹೋಯಿತೆಂದು ಮತ್ತು ಒತ್ತೆಯ ಆಸ್ತಿಯನ್ನು ಪ್ರತಿವಾದಿಯ ಸ್ವಾಧೀನಕ್ಕೆ ಕೊಡಬೇಕೆಂದು ಪಕ್ಕಾ ಹುಕುಮನಾಮೆ ಮಾಡಬೇಕು.

(ಇಟ್ಟ ಒತ್ತೆಯು ವಿಕ್ರಯದ ಶರತಿನದಲ್ಲವಾಗಿದ್ದರೆ)

ಒತ್ತೆಯ ಆಸ್ತಿಯನ್ನು ಮಾರಬೇಕು. ಮತ್ತು ಮಾರಾಟದಿಂದ ಬಂದ ಉತ್ಪನ್ನವನ್ನು ಅದರೊಳಗಿಂದ ಮಾರಾಟದ ಬಗ್ಗೆ ಆದ ಎಲ್ಲ ಖರ್ಚನ್ನು ಕಳೆದು ಕೋರ್ಟಿನಲ್ಲಿ ಕೊಡಬೇಕು, ಮತ್ತು ಪ್ರತಿವಾದಿಗೆ ಕೊಡತಕ್ಕದ್ದಾದ ಹಣವನ್ನು ಕೊಡುವದಕ್ಕೆ ಉಪಯೋಗಿಸಬೇಕು ಮತ್ತು ಉಳಿದದ್ದು (ಏನಾದರು ಇದ್ದರೆ) ವಾದಿಗೆ ಯಾ ಅವನ್ನು ತೆಗೆದುಕೊಳ್ಳುವದಕ್ಕೆ ಹಕ್ಕು ಇದ್ದ ಮನುಷ್ಯನಿಗೆ ಕೊಡಬೇಕೆಂದು ಪಕ್ಕಾ ಹುಕುಮನಾಮೆ ಮಾಡಬೇಕು.

(**ಸೂಚನೆ**—ಈ ಅರ್ಜಿಗೆ ಇಕರಾರು ಬರೆಯಬೇಕು.)

## ನಂಬರು ೫೧

## ಫೈಸಲಿನ ಪೂರ್ವದಲ್ಲಿ ಕೈದುಮಾಡುವ ವಿಷಯದಲ್ಲಿ

(ಆ. ೩೮, ರೂ. ೧.)

### ಸರನಾಮೆ

೧. ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ಹೇಳಿದ ಸಂಗತಿಗಳಿಂದ ಈ ದಾವೆಯಲ್ಲಿ ಪ್ರತಿವಾದಿಯ ಮೇಲೆ ಮಾಡಲ್ಪಡಬಹುದಾದ ಹುಕುಮನಾಮೆಯ ಅಮಲುಬಜಾವಣಿಯಲ್ಲಿ ವಾದಿಗೆ ಹರಕತಾಗಲೀ ತಡೆಯಾಗಲೀ ಆಗುವದೆಂಬುದು ಯಾ ಆಗಬಹುದೆಂಬುದು ತೋರುತ್ತದೆ.

೨. ವಾದಿಯು ಬೇಡುವದೇನಂದರೆ:—

ಸದರೀ ಪ್ರತಿವಾದಿಯನ್ನು ಕೈದುಮಾಡುವ ಬಗ್ಗೆ ವಾರಂಟು ಹೊರಡಿಸ ಬೇಕು, ಮತ್ತು ಅವನನ್ನು ಕೋರ್ಟಿನಮುಂದೆ ತಂದಬಳಿಕ, ಹಣವನ್ನಾಗಲೀ ಬೇರೊಂದು ಮಾಲನ್ನಾಗಲೀ ಅಮಾನತು ಇಡುವದಕ್ಕಾಗಿ, ಅಥವಾ ಹಾಜರಾ ಗುವ ಬಗ್ಗೆ ಜಾಮೀನು ಕೊಡುವದಕ್ಕಾಗಿ, ಅಥವಾ ದಿವಾಣಿ ತುರಂಗದಲ್ಲಿ ಇಡು ವದಕ್ಕಾಗಿ ದಾವೆಯೊಳಗಿನ ಮತ್ತು ಮುಂದೆ ಪಡೆಯಬಹುದಾದ ಹುಕುಮನಾಮೆ ಯೊಳಗಿನ ವಾದಿಯ ಹಕ್ಕನ್ನು ಸಂರಕ್ಷಣವಾಗುವಂತೆ ಕೋರ್ಟಿಗೆ ಯೋಗ್ಯ ವಾಗಿ ತೋರಿದಂಥ ಹುಕುಮು ಮಾಡಬೇಕು.

## ಪ್ರತಿಜ್ಞಾಲೇಖ

೧. ಇದರಲ್ಲಿ ತಾರೀಖು ೧೫–೨–೧೯೦೪ನೇ ಇಸ್ವಿ ದಿವಸ ಪ್ರತಿ ವಾದಿಯ ಮೇಲೆ ಸಮನು ಬಜಾಯಿಸಲ್ಪಟ್ಟಿತು.

೨. ಸದರೀ ಸಮನು ಬಜಾಯಿಸಲ್ಪಟ್ಟ ಕೂಡಲೆ ಪ್ರತಿವಾದಿಯು ತನ್ನ ಕುಟುಂಬಸಹಿತವಾಗಿ ಯಾವತ್ತು ಜಂಗಮ ಮಾಲು ಜಮಖಂಡಿಗೆ ಕಳು ಹಿಸಿದನು.

೩. ಪ್ರತಿವಾದಿಯು ದಾಜಿ ದೇವಿಚಂದ ಎಂಬ ಪೇಢಿಯಲ್ಲಿ ನೌಕರಿಯನ್ನು ಮಾಡುತ್ತಿದ್ದು ಈ ತಿಂಗಳದ ಅಖೈರಿಗೆ ಸದರಿ ನೌಕರಿಯನ್ನು ಬಿಡುವನೆಂದು ಸದರೀ ಪೇಢಿಯ ಮಾಲಿಕರಿಗೆ ತಿಳಿಸಿರುತ್ತಾನೆ.

೪ ಪ್ರತಿವಾದಿಯ ನೌಕರನಾದ ಕಲ್ಲಪ್ಪನು ಹೇಳಿದ್ದೇನಂದರೆ:–– ಪ್ರತಿ ವಾದಿಯು ಈ ತಿಂಗಳದ ಅಖೈರಿಗೆ ಈ ಕೋರ್ಟಿನ ಅಧಿಕಾರದ ಸ್ಥಳ ಸೀಮೆಯ ಹೊರಗೆ ಜಮಖಂಡಿಗೆ ಹೋಗತಕ್ಕವನಿರುತ್ತಾನೆ.

೫. ಪ್ರತಿವಾದಿಯು, ವಾದಿಗೆ ವಿಳಂಬ ಉಂಟುಮಾಡುವ, ಅಥವಾ ಕೋರ್ಟಿನ ಪ್ರೊಸೆಸ್ಸನ್ನು ತಪ್ಪಿಸುವ, ಅಥವಾ ತನಗೆ ವಿರುದ್ಧವಾಗಿ ಮಾಡಲ್ಪಡ ಬಹುದಾದ ಹುಕುಮನಾಮೆಯ ಅನುಲುಬಜಾವಣೆಗೆ ಹರಕತುಮಾಡುವ ಯಾ ತಡೆಹಾಕುವ ಉದ್ದೇಶದಿಂದ ಮೇಲೆ ಹೇಳಿದಂತೆ ಈ ಕೋರ್ಟಿನ ಅಧಿಕಾರದ ಸ್ಥಳ ಸೀಮೆಯನ್ನು ಬಿಟ್ಟು ಹೋಗುವ ಪ್ರಯತ್ನದಲ್ಲಿ ಇರುತ್ತಾನೆ.

## ನಂಬರು ೫೨

### ಜಾಮೀನದಾರನು ತನ್ನ ಜಾಮೀನನ್ನು ಬಿಡಿಸಿಕೊಳ್ಳುವ ವಿಷಯದಲ್ಲಿ (ಆ. ೩೮, ರೂ. ೩.)

### ಸರನಾಮೆ

(೧) ಇದರಲ್ಲಿ ಪ್ರತಿವಾದಿಯು ಹಾಜರಿಗಾಗಿ ತಾರೀಖು ೧೫–೪–೧೯೨೫ ನೇ ಇಸ್ವಿ ದಿವಸ ಅರ್ಜಿದಾರನು ಜಾಮೀನು ನಿಂತಿದ್ದನು.

(೨) ಈಗ ಅರ್ಜಿದಾರನು ತನ್ನ ಜಾಮೀನು ಬಿಡಿಸಿಕೊಳ್ಳಲಿಕ್ಕೆ ಇಚ್ಛಿಸುತ್ತಾನೆ, ಕಾರಣಾ ಜಾಮೀನು ನಿಂತದ್ದರಿಂದ ಉಂಟಾಗಿದ್ದ ಬದ್ಧತೆಯಿಂದ ಅರ್ಜಿದಾರನನ್ನು ಬಿಡಿಸಬೇಕೆಂದು ಪ್ರಾರ್ಥಿಸುತ್ತಾನೆ.

## ನಂಬರು ೫೩

### ಫೈಸಲಿನ ಪೂರ್ವದಲ್ಲಿ ಜಪ್ತಿಮಾಡುವ ವಿಷಯದಲ್ಲಿ

(ಆ. ೩೮, ರೂ. ೫.)

### ಸರನಾಮೆ

(೧) ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ವಾದಿಯು ಬೇಡುವದೇನಂದರೆ:— ಕೋರ್ಟಿಗೆ ಯೋಗ್ಯವಾಗಿ ತೋರುವಂಥ ತಾರಣ (ಯಾ ಜಾಮೀನು) ಕೊಡಲಿಕ್ಕೆ ಪ್ರತಿವಾದಿಗೆ ಫರ್ಮಾಯಿಸಬೇಕು, ಮತ್ತು ಆ ತಾರಣವನ್ನು (ಯಾ ಆ ಜಾಮೀನನ್ನು) ಅವನು ಕೊಡದಿದ್ದಲ್ಲಿ ಕೆಳಗೆ ವಿವರಿಸಿದ ಆಸ್ತಿಯನ್ನು ಜಪ್ತುಮಾಡಲಿಕ್ಕೆ ಹುಕುಮು ಮಾಡಬೇಕು.

(೨) ಪ್ರತಿವಾದಿಯು ಸದರೀ ಆಸ್ತಿಯು ಸಾಧ್ಯವಾದಷ್ಟು ತ್ವರೆಯಾದ ವೇಳೆಯಲ್ಲಿ ವಿನಿಯೋಗಿಸುವದರಲ್ಲಿರುವದರಿಂದ ವಾದಿಯು ಪುನಃ ಬೇಡುವದೇನಂದರೆ:—

ಕೋರ್ಟಿನ ಕೊನೆಯ ಹುಕುಮುಗಳಾಗುವ ಮೊದಲು ಸದರೀ ಆಸ್ತಿಯ ಸಾಂಕೇತಿಕ ಜಪ್ತಿಮಾಡುವ ಬಗ್ಗೆ ಹುಕುಮು ಮಾಡಬೇಕು.

ಜಪ್ತು ಮಾಡತಕ್ಕ ಆಸ್ತಿಯ ವಿವರ—

ಅಂದಾಜಿನ ಬೆಲೆ.

## ಪ್ರತಿಜ್ಞಾ ಲೇಖ

---

(೧) ಇದರಲ್ಲಿ ತಾರೀಖು ೧೫–೭–೧೯೨೭ನೇ ಇಸ್ವಿ ದಿವಸ ಪ್ರತಿವಾದಿಯ ಮೇಲೆ ಸಮನು ಬಜಾಯಿಸಲ್ಪಟ್ಟಿತು.

(೨) ಕೆಳಗೆ ವಿವರಿಸಿದ ಹೊರತಾಗಿ ಬೇರೆ ಯಾವದೇ ಆಸ್ತಿಯು ಪ್ರತಿವಾದಿಯು ಮಾಲಕನಾಗಿರುವದಿಲ್ಲ. (ಯಾ ಆಸ್ತಿಯು ಪ್ರತಿವಾದಿಯು ಮಾಲಕಿಯುಳ್ಳದ್ದು ಇರುವದಿಲ್ಲ.) ಸದರೀ ಆಸ್ತಿಯ ವಿವರ —

... ... ... ...

(೩) ಇದರಲ್ಲಿ ಸಮನು ಮುಟ್ಟಿದ ಬಳಿಕ ಸದರೀ ಆಸ್ತಿಯು ನೀಲಪ್ಪಾ ತಂದಿ ಪರಪ್ಪಾ ಎಂಬುವವನಿಗೆ ವಿಕ್ರಯಮಾಡುವ ಪ್ರಯತ್ನದಲ್ಲಿ ಪ್ರತಿವಾದಿಯು ಇದ್ದಾನೆ ಮತ್ತು ಇರುತ್ತಾನೆ.

(೪) ಸದರೀ ನೀಲಪ್ಪನು ಸದರೀ ಆಸ್ತಿಯ ವಿಕ್ರಯದ ಬಗ್ಗೆ ಸಂಚಕಾರದ ಬಾಬತು ೨೦೦ ರೂಪಾಯಿಗಳನ್ನು ಪ್ರತಿವಾದಿಗೆ ಕೊಟ್ಟಿರುತ್ತಾನೆಂದು ಮತ್ತು ತಾರೀಖು ೨೦–೭–೧೯೨೭ನೇ ಇಸ್ವಿ ದಿವಸ ಅಥವಾ ಅದರ ಪೂರ್ವದಲ್ಲಿ ಸದರಿ ಆಸ್ತಿಯು ವಿಕ್ರಯವಾಗುತ್ತದೆಂದು ವಾದಿಗೆ ತಿಳಿದಿರುತ್ತದೆ, ಮತ್ತು ಅದನ್ನು ವಾದಿಯು ನಿಜವೆಂದು ನಂಬುತ್ತಾನೆ.

(೫) ಪ್ರತಿವಾದಿಯು ಇದರಲ್ಲಿ ತನ್ನ ಮೇಲೆ ಮಾಡಲ್ಪಡಬಹುದಾದ ಹುಕುಮನಾಮೆಯ ಅಮಲುಬಜಾವಣಿಗೆ ಹರಕತು ಮಾಡುವ ಯಾ ತಡೆಹಾಕುವ ಉದ್ದೇಶದಿಂದ ತ್ವರೆಯಾಗಿ ಸದರೀ ಆಸ್ತಿಯ ವಿಕ್ರಯವನ್ನು ನಡಿಸಿರುತ್ತಾನೆಂದು ವಾದಿಗೆ ತಿಮ್ಮಪ್ಪಾ ಎಂಬುವವನ ಕಡೆಯಿಂದ ತಿಳದದೆ, ಮತ್ತು ವಾದಿಯು ಅದು ನಿಜವೆಂದು ನಂಬುತ್ತಾನೆ.

## ನಂಬರು ೫೪

### ತುರುತಿನ ತಾಕೀದಿಗಳ ಬಗ್ಗೆ

(ಆ. ೩೯, ರೂ. ೧.)

### ಸರನಾಮೆ

ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖನಲ್ಲಿ ತೋರಿಸಿನ ಕಾರಣಗಳ ಆಧಾರ ದಿಂದ ವಾದಿಯು ಬೇಡುವದೇನಂದರೆ:—

ಕೆಳಗೆ ವಿವರಿಸಿದ ಮಾಲನ್ನು ಕೆಡಿಸುವದನ್ನಾಗಲಿ ನಾಶಮಾಡುವದನ್ನಾಗಲಿ, ಮತ್ತೊಬ್ಬರಿಗೆ ಕೊಡುವದನ್ನಾಗಲಿ ಮಾರುವದನ್ನಾಗಲಿ ಸ್ಥಳಾಂತರಕ್ಕೆ ಕಳುಹಿಸುವದನ್ನಾಗಲಿ ವಿನಿಯೋಗಿಸುವದನ್ನಾಗಲಿ ತಡೆಯಿಸುವದೋಸ್ಕರವಾಗಿಯೂ ನಿಲ್ಲಿಸುವದೋಸ್ಕರವಾಗಿಯೂ ತುರುತಿನ ತಾಕೀದು ಕೊಡಬೇಕು, ಯಾ ಕೋರ್ಟಿಗೆ ಯೋಗ್ಯವಾಗಿ ತೋರಿದಂಥ ಬೇರೊಂದು ಹುಕುಮು ಮಾಡಬೇಕು.

ಸದರಿ ಮಾಲಿನ ವಿವರ:—

೧. ವಾದಿಯ ಅಜ್ಜನ ತಸಬೀರು.

... ... ... ...

... ... ... ...

### ಪ್ರತಿಜ್ಞಾ ಲೇಖ

---

೧. ನಾನು ನನ್ನ ಅಜ್ಜನ ತಸಬೀರಿನ ಮಾಲಕನಾಗಿರುತ್ತೇನೆ ಮತ್ತು ಇದರಲ್ಲಿ ಕೆಳಗೆ ಬರೆದ ಎಲ್ಲ ಕಾಲಗಳಲ್ಲಿದ್ದೇನು.

೨. ಸದರೀ ತಸಬೀರಿನ ಎರಡನೇ ಪ್ರತಿಯು ಇಲ್ಲ.

೩. ಹಣ ವೆಚ್ಚಮಾಡಿ ಅದರಿಂದ ತಸಬೀರು ಪಡೆಯುವದು ಅಸಾಧ್ಯವಿದೆ,

೪. ಸದರೀ ತಸಬೀರು ನಾಶವಾದಲ್ಲಿ ಹಣದಿಂದ ಯೋಗ್ಯವಾದ ಪ್ರತಿ ಫಲವನ್ನು ದೋರಿಯುವಂತೆ ಇಲ್ಲ.

೫. ಸದರೀ ತಸಬೀರನ್ನು ಜೇಡಿದರೆ ಪ್ರತಿವಾದಿಯು ಅದನ್ನು ಕೆಡಿಸುವ ಯಾ ನಾಶಮಾಡುವ ಯಾ ಮತ್ತೊಬ್ಬರಿಗೆ ಕೊಡುವ ಭಯವನ್ನುಂಟುಮಾಡುತ್ತಾನೆ.

**ಸೂಚನೆ:** - ಕೆಳಗಿನ ಪ್ರಸಕ್ತಿಗಳಲ್ಲಿ ತುರುತಿನ ತಾಕೀದಿಗಳನ್ನು ಕೊಡಬಹುದು. (ಆ. ೩೯, ರೂ. ೧).

(ಅ) ದಾವೆಯಲ್ಲಿ ವಿವಾದದ ಮಾಲನ್ನು ಆ ದಾವೆಯ ಯಾವನೊಬ್ಬ ಪಕ್ಷಕಾರನು ಕೆಡಿಸುವ ಯಾ ನಾಶಮಾಡುವ ಯಾ ಮತ್ತೊಬ್ಬರಿಗೆ ಕೊಡುವ ಭಯವುಂಟೆಂದು ಅಥವಾ ಅದು ಹುಕುಮನಾಮೆಯ ಅಮಲುಬಜಾವಣಿಯಲ್ಲಿ ಅನ್ಯಾಯವಾಗಿ ಮಾರಲ್ಪಡುವ ಭಯವುಂಟೆಂದು, ಅಥವಾ

(ಬ) ಪ್ರತಿವಾದಿಯು ತನ್ನ ಸಾಲಗಾರರಿಗೆ ಮೋಸಮಾಡುವ ಉದ್ದೇಶದಿಂದ ತನ್ನ ಸ್ವತ್ತನ್ನು ಸ್ಥಳಾಂತರಕ್ಕೆ ಕಳುಹುವ ಯಾ ವಿನಿಯೋಗಿಸಿರುವ ಪ್ರಯತ್ನದಲ್ಲಿ ಇರುತ್ತಾನೆಂದು ಅಥವಾ ಹಾಗೆ ಮಾಡುತ್ತೇನೆಂಬುದಾಗಿ ಹೆದರಿಸುತ್ತಾನೆಂದು ಯಾವದೊಂದು ದಾವೆಯಲ್ಲಿ ಸಾಬೀತು ಮಾಡಿದ್ದಲ್ಲಿ ಅಂಥಾ ಕೃತ್ಯಕ್ಕೆ ತಡೆಯನ್ನುಂಟುಮಾಡುವದಕ್ಕೋಸ್ಕರ ತುರುತಿನ ತಾಕೀದು ಕೊಡಬಹುದು.

## ನಂಬರು ೫೫

## (Receiver) ರಿಸೀವರರನ್ನು ಅಂದರೆ ಒಪ್ಪಿಸಿಕೊಳ್ಳುವವನನ್ನು ನೇಮಿಸುವ ವಿಷಯದಲ್ಲಿ

(ಆ. ೪೦, ರೂ. ೧.)

### ಸರನಾಮೆ

ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ವಾದಿಯು ಬೇಡುವದೇನಂದರೆ:––

ಕೆಳಗೆ ವಿವರಿಸಿದ ಆಸ್ತಿಯ ಬಗ್ಗೆ ಒಬ್ಬ ಒಪ್ಪಿಸಿಕೊಳ್ಳುವವನನ್ನು ನೇಮಿಸ ಬೇಕು, ಪ್ರತಿವಾದಿಯನ್ನು ಸದರಿ ಆಸ್ತಿಯ ಕಬಜೆಯಿಂದ (ಯಾ ಕಾವಲಿನಿಂದ) ತೆಗೆಯಬೇಕು, ಸದರಿ ಆಸ್ತಿಯು ಸದರೀ ಒಪ್ಪಿಸಿಕೊಳ್ಳುವವನ ಕಬಜೆಯಲ್ಲಿ ಯಾ ಕಾವಲಿನಲ್ಲಿ ಯಾ ಆಡಳತೆಯಲ್ಲಿ ಇಡಬೇಕು ಮತ್ತು ಸದರಿ ಆಸ್ತಿಯ ವ್ಯವಸ್ಥೆ ಪಡಿಸುವ ಬಗ್ಗೆ ವಗೈರೆ ಕೋರ್ಟಿಗೆ ಯೋಗ್ಯವಾಗಿ ತೋರಿದಂಥ ಹುಕುಮು ಮಾಡಬೇಕು.

ಸದರಿ ಆಸ್ತಿಯ ವರ್ಣನೆ:—

... ... ... ...

... ... ... ...

## ಪ್ರತಿಜ್ಞಾ ಲೇಖ

೧. ಈ ದಾವೆಯಲ್ಲಿ ವಿವಾದದ ಕೆಳಗೆ ವಿವರಿಸಿದ ಆಸ್ತಿಯ ಮಯತ ರಾಚಪ್ಪ ಎಂಬುವವನು ಮಾಲಕನಾಗಿದ್ದನು. ಸದರೀ ಆಸ್ತಿಯು ... ...

೨. ಸದರೀ ರಾಚಪ್ಪನು ತಾರೀಖು ೨೫-೫-೧೯೨೬ನೇ ಇಶ್ವಿ ದಿವಸ ಮೃತ್ಯುಪತ್ರದಿಂದ ಸದರಿ ಆಸ್ತಿಯನ್ನು ನನಗೆ ಕೊಟ್ಟನು.

೩. ಸದರೀ ರಾಚಪ್ಪನು ತಾರೀಖು ೧೧-೭-೧೯೨೬ನೇ ಇಶ್ವಿ ದಿವಸ ತೀರಿಕೊಂಡನು.

೪. ಆ ವೇಳೆಗೆ ವಿದ್ಯ ಕಲಿಯುವ ಸಲುವಾಗಿ ನಾನು ದಿಲ್ಲೀ ಪಟ್ಟಣಕ್ಕೆ ಹೋಗಿದ್ದೇನು.

೫. ಪ್ರತಿವಾದಿಯು ಅನ್ಯಾಯವಾಗಿ ಸದರಿ ಆಸ್ತಿಯ ಕಬಜೆ ಪಡ ಕೊಂಡನು.

೬. ಪ್ರತಿವಾದಿಯು ತೀರ ಕಮ್ಮಿ ಬೆಲೆಗೆ ಸದರಿ ಆಸ್ತಿಯನ್ನು ಬಾಡಿಗೆಗೆ ಕೊಟ್ಟಿರುತ್ತಾನೆಂದೂ, ಮತ್ತು ಅದರಲ್ಲಿಯ ಕೆಲವು ಮರಗಳನ್ನು ಕಡಿದಿರು ತ್ತಾನೆಂದೂ ಮತ್ತು ಇನ್ನೂ ಹೆಚ್ಚಿಗೆ ಕಡಿಯುವ ಹೆದರಿಕೆಯನ್ನು ತೋರಿಸಿರು ತ್ತಾನೆಂದೂ ನನಗೆ ಅವನ ನೌಕರನಾದ ಅಲ್ಲಾಬಕ್ಸ ಇವನಿಂದ ತಿಳಿದಿರುತ್ತದೆ, ಮತ್ತು ಅದನ್ನು ನಾನು ನಂಬುತ್ತೇನೆ.

## ನಂಬರು ೫೬

## ಹುಕುಮನಾಮೆಯ ಅಮಲುಬಜಾವಣೆಯನ್ನು ತಹಕೂಬು ಮಾಡುವ ವಿಷಯದಲ್ಲಿ (ಆ. ೪೧, ರೂ. ೫. ೨.)

ಲಾ. ಅಸಲು ನಂ $\frac{೫೪}{೧೯೨೬}$

### ಸರನಾಮೆ

೧. ಅರ್ಜಿದಾರನು ಲಾ. ಅಸಲು ನ. $\frac{೫೪}{೧೯೨೬}$ನೇ ದಾವೆಯೊಳಗಿನ ತಾರೀಖು ೧೬-೧೮-೧೯೨೭ನೇ ಇಶ್ವಿ ದಿವಸ ಹುಕುಮನಾಮೆಯ (ಯಾ ಹುಕುಮಿನ) ಮೇಲೆ ಅಪೀಲು ಮಾಡತಕ್ಕವನಿರುತ್ತಾನೆ.

೨. ಅರ್ಜಿದಾರನು ತಾನು ಕಡೆಯಲ್ಲಿ ಯಾವ ಹುಕುಮನಾಮೆಯಿಂದಾಗಲೀ ಹುಕುಮನಿಂದಾಗಲೀ ಬದ್ಧನಾಗಿರುವನೋ ಅದನ್ನು ಸರಿಯಾಗಿ ಕಡೆಗಾಣಿಸುವದನ್ನು ಕುರಿತು ಜಾಮೀನು ಕೊಟ್ಟಿದ್ದಾನೆ (ಯಾ ಕೊಡುವದಕ್ಕೆ ಸಿದ್ಧನಾಗಿರುತ್ತಾನೆ.)

೩. ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ಅರ್ಜಿದಾರನು ಬೇಡುವದೇನಂದರೆ:— ಸದರೀ ಹುಕುಮನಾಮೆಯ (ಯಾ ಹುಕುಮಿನ) ಮೇಲಿನ ಅಪೀಲಿನ ನಿರ್ಣಯವಾಗುವ ವರೆಗೆ ಸದರೀ ಹುಕುಮನಾಮೆಯ [ಯಾ ಹುಕುಮಿನ] ಅಮಲುಬಜಾವಣೆಯ ತಹಕೂಬಿಗಾಗಿ ಹುಕುಮು ಮಾಡಬೇಕು.

ಇದಕ್ಕೆ ಪ್ರತಿಜ್ಞಾಲೇಖವನ್ನು ಜೋಡಿಸಬೇಕು ಮತ್ತು ಅದರಲ್ಲಿ ಹುಕುಮನಾಮೆಯ [ಯಾ ಹುಕುಮಿನ] ಅಮಲುಬಜಾವಣೆಯನ್ನು ನಿಲ್ಲಿಸುವ ಬಗ್ಗೆ ಸಾಕಷ್ಟು ಕಾರಣವನ್ನು ತೋರಿಸಬೇಕು. ವಿಶೇಷತಃ ಸದರೀ ಹುಕುಮನಾಮೆಯ [ಯಾ ಹುಕುಮಿನ] ತಹಕೂಬಿಗಾಗಿ ಹುಕುಮು ಮಾಡದಿದ್ದರೆ ಆ ಹುಕುಮು ಬೇಡುವ ಪಕ್ಷಕಾರನಿಗೆ ದೊಡ್ಡ ಲುಕ್ಸಾನು ಆಗಬಹುದೆಂತ ಸಂಗತಿಯನ್ನು ತೋರಿಸತಕ್ಕದ್ದು.

## ನಂಬರು ೫೭

## ಹುಕುಮನಾಮೆಯ ಅಮಲುಬಜಾವಣೆಯನ್ನು ತಹಕೂಬು ಮಾಡುವ ಬಗ್ಗೆ

( ಅಪೀಲು ಕೋರ್ಟಿಗೆ ) (ಆ. ೪೧, ರೂ. ೫೧.)

### ಸರನಾಮೆ

ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ಅರ್ಜಿದಾರನು ಬೇಡುವದೇನಂದರೆ:— **ಗದಗ ೨ನೇ ವರ್ಗ ಸಬಜಜ್ಜ ಕೋರ್ಟಿನ** ಲಾ. ಅಸಲು ನಂ $\frac{೫೪}{೧೯೩೭}$ ನೇ ದಾವೆಯೊಳಗಿನ ತಾ॥ ೧೬-೧೦-೧೯೩೭ ನೇ ಇಷ್ವಿ ದಿವಸದ ಹುಕುಮನಾಮೆಯ ಮೇಲೆ ಈ ಅಪೀಲು ಮಾಡಿದ್ದು ಅದರ ನಿರ್ಣಯವಾಗುವವರೆಗೆ ಸದರೀ ಹುಕುಮನಾಮೆಯ ಅಮಲುಬಜಾವಣೆಯನ್ನು ತಹಕೂಬು ಮಾಡುವ ಹುಕುಮು ಮಾಡಬೇಕು.

ಅರ್ಜಿದಾರನು ತಾನು ಕಡೆಯಲ್ಲಿ ಯಾವ ಹುಕುಮನಾಮೆಯಿಂದಾಗಲೀ ಹುಕುಮಿನಿಂದಾಗಲೀ ಬದ್ಧನಾಗಿರುವನೋ ಅವನ್ನು ಸರಿಯಾಗಿ ಕಡೆಗಾಣಿಸುವದನ್ನು ಕುರಿತು ಜಾಮೀನು ಕೊಡುವದಕ್ಕೆ ಸಿದ್ಧನಾಗಿರುತ್ತಾನೆ.

ಇದಕ್ಕೆ ಪ್ರತಿಜ್ಞಾಲೇಖ ಜೋಡಿಸಬೇಕು. ಅದರಲ್ಲಿ ಹುಕುಮನಾಮೆಯ ಅಮಲುಬಜಾವಣೆಯನ್ನು ನಿಲ್ಲಿಸುವಬಗ್ಗೆ ಸಾಕಷ್ಟು ಕಾರಣವನ್ನು ತೋರಿಸಬೇಕು.

## ನಂಬರು ೫೮

## ಅಪೀಲಿಗೆ ಪಾತ್ರವಾದ ಹುಕುಮನಾಮೆಯ ಅಮಲುಬಜಾವಣೆಯ ಹುಕುಮು ಕೊಟ್ಟ ಪಕ್ಷದಲ್ಲಿ ಜಾಮೀನು ಬೇಡೋಣ

(ಆ. ೪೧, ರೂ. ೬. (೧.)

### ಸರನಾಮೆ

೧. ಇದೇ ಕೋರ್ಟಿನ ಲಾ. ಅಸಲು ನಂಬರು $\frac{೫೮}{೧೯೩೮}$ ನೇ ದಾವೆಯೊಳಗಿನ ಹುಕುಮನಾಮೆಯ ಮೇಲೆ ಕಾರವಾರ ಡಿಸ್ಟ್ರಿಕ್ಟ ಜಜ್ಜಕೋರ್ಟಿನಲ್ಲಿ ಅಪೀಲು ಆಗಿರುತ್ತದೆ; ಮತ್ತು ಅದು ಇನ್ನೂ ನಡೆದಿರುತ್ತದೆ.

೨. ಮೇಲ್ಕಂಡ ಹುಕುಮನಾಮೆಯು ಅಮಲುಬಜಾವಣಿಗಾಗಿ ಲಾ. ದ. ನ. $\frac{೧೨೭}{೧೯೨೯}$ನೇದ್ದರಲ್ಲಿ ಹುಕುಮು ಮಾಡಲ್ಪಟ್ಟಿರುತ್ತದೆ.

೩. ಇದಕ್ಕೆ ಜೋಡಿಸಿದ ಪ್ರತಿಜ್ಞಾಲೇಖದಲ್ಲಿ ತೋರಿಸಿದ ಕಾರಣಗಳ ಆಧಾರದಿಂದ ಅರ್ಜಿದಾರನು ಬೇಡುವದೇನಂದರೆ:—

ಸದರೀ ಹುಕುಮನಾಮೆಯು ಅಮಲುಬಜಾವಣಿಯಲ್ಲಿ ತೆಗೆದುಕೊಳ್ಳ ಬಹುದಾದಂಥ ಅಥವಾ ತೆಗೆದುಕೊಂಡಂಥ ಯಾವದೊಂದು ಸ್ವತ್ತನ್ನು ಹಿಂದಕ್ಕೆ ಕೊಡುವದನ್ನು ಕುರಿತು, ಅಥವಾ ಅಂಥಾ ಸ್ವತ್ತಿನ ಬೆಲೆಯನ್ನು ಹಿಂದಕ್ಕೆ ಕೊಡು ವವನ್ನು ಕುರಿತು ಮತ್ತು ಅಪೀಲು ಕೋರ್ಟಿನವರ ಹುಕುಮನಾಮೆಯನ್ನಾಗಲಿ ಹುಕುಮನ್ನಾಗಲಿ ಸರಿಯಾಗಿ ಕಡೆಗಾಣಿಸುವದನ್ನು ಕುರಿತು, ಎದುರಗಾರನಿಗೆ ಜಾಮೀನು ಕೊಡಲಿಕ್ಕೆ ಹುಕುಮು ಮಾಡಬೇಕು.

## ಪ್ರತಿಜ್ಞಾಲೇಖ

೧. ನಾನು ಇದೇ ಕೋರ್ಟಿನ ಲಾ. ಅಸಲು ನಂಬರ $\frac{೫೮}{೧೯೨೮}$ ನೇ ದಾವೆ ಯೊಳಗಿನ ಹುಕುಮನಾಮೆಯ ಮೇಲೆ ಕಾರವಾರ ಡಿಸ್ಟ್ರಿಕ್ಟ ಜಜ್ಜಕೋರ್ಟಿನಲ್ಲಿ ದಿವಾಣಿ ಅಪೀಲು ನಂ $\frac{೨೭}{೧೯೨೯}$ ನೇ ಅಪೀಲು ಮಾಡಿರುತ್ತೇನೆ. ಅದರ ನಿರ್ಣಯ ವಾಗಿರುವದಿಲ್ಲ.

೨. ಎದುರುಗಾರರಳು ಹೆಂಗಸು ಇದ್ದು; ಲಾ. ಅಸಲ ನ.—ನೇ ದಾವೆ ಯೊಳಗಿನ ಆಸ್ತಿಯು ಹೊರತು ಬ್ರಿಟಿಷ ಹಿಂದುಸ್ಥಾನದಲ್ಲಿ ಈ ಎದುರಗಾರಳ ಯಾವದಾದರೂ ಪ್ರಕಾರದ ಸಾಕಷ್ಟು ಸ್ಥಾವರ ಮಾಲು ಇಲ್ಲ.

**ಸೂಚನೆ:**— ಈ ಪ್ರಕಾರದ ಅರ್ಜಿಯು ಅಪೀಲುಕೋರ್ಟಿಗೆ ಸಹಾ ಮಾಡಬಹುದು.

## ನಂಬರು ೫೯

## ವಿಕ್ರಯುವನ್ನು ತಹಕೂಬಮಾಡುವ ವಿಷಯುದಲ್ಲಿ

(ಆ. ೪೧, ರೂ. ೬. (೨))

### ಸರನಾಮೆ

೧. ಇದೇ ಕೋರ್ಟಿನ ಲಾ. ಅಸಲು ನಂ. $\frac{೬೭}{೧೯೨೭}$ ನೇ ದಾವೆಯೊಳಗಿನ

ಹುಕುಮುನಾಮೆಯ ಮೇಲೆ ವಿಜಾಪೂರ ಡಿಸ್ಟ್ರಿಕ್ಟ ಜಜ್ಜಕೋರ್ಟಿನಲ್ಲಿ ದಿವಾಣಿ ಅಪೀಲು ನ. ೨೭/೧೯೨೮ ನೇ ಅಪೀಲು ಆಗಿರುತ್ತದೆ. ಅದರ ನಿರ್ಣಯವಾಗಿಲ್ಲ.

೨. ಸದರೀ ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಅಂದರೆ ಲಾ. ದ. ನ. ೯೩೭/೧೯೨೭ ನೇದ್ದರಲ್ಲಿ ಸ್ಥಾವರ ಮಾಲು ಮಾರುವ ಹುಕುಮು ಮಾಡಲ್ಪಟ್ಟಿರುತ್ತದೆ.

೩. ಜಾಮೀನು ಕೊಡಲಿಕ್ಕೆ ಅರ್ಜಿದಾರನು ಸಿದ್ಧನಿರುತ್ತಾನೆ.

೪. ಫೈಸಲಿನ ಋಣಿಯಾದ ಅರ್ಜಿದಾರನು ಬೇಡುವದೇನಂದರೆ:—ಸದರೀ ಅಪೀಲಿನ ನಿರ್ಣಯವಾಗುವವರೆಗೆ ಸದರೀ ವಿಕ್ರಯವನ್ನು ತಹಕೂಬು ಮಾಡಬೇಕು.

## ನಂಬರು ೬೦

## ದರಿದ್ರನಂತೆ ಅಪೀಲು ಮಾಡಗೊಡುವಬಗ್ಗೆ ಅರ್ಜಿಯು

(ಆ. ೪೪, ರೂ. ೧.)

### ಸರನಾಮೆ

೧. ಮೇಲೆ ಹೇಳಿದ ಅಪೆಲಂಟನಾದ ಅಶ್ವಥಭಟ್ಟ ಜೀಮಭಟ್ಟ ಎಂಬ ನಾನು ಹುಬ್ಬಳ್ಳಿ ೨ನೇವರ್ಗ ಸಬ್‌ಜಜ್ಜಕೋರ್ಟಿನ ಲಾ. ಅಸಲು ನ. ——— ನೇ ದಾವೆಯೊಳಗಿನ ಹುಕುಮನಾಮೆಯಮೇಲೆ ದರಿದ್ರನಂತೆ ಅಪೀಲು ಮಾಡಲಿಕ್ಕೆ ನನಗೆ ಪರವಾನಗಿ ಸಿಗಬೇಕೆಂದು, ಅಪೀಲಿನ ಯಾದಿಯನ್ನು ಇದರ ಸಂಗಡ ಇಟ್ಟು, ಅರ್ಜಿ ಮಾಡುತ್ತೇನೆ.

೨. ನನ್ನಲ್ಲಿ ಈ ಅಪೀಲಿನ ಯಾದಿಗೆ ಬೇಕಾಗುವ ಫೀಯನ್ನು ಕೊಡುವ ಸಾಮರ್ಥ್ಯ ಇರುವದಿಲ್ಲ.

೩. ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನನ್ನ ಎಲ್ಲ ಸ್ಥಾವರ ಮತ್ತು ಜಂಗಮ ಸ್ವತ್ತಿನ ಮತ್ತು ಅದರ ಅಜಮಾಸಿನ ಬೆಲೆಯ ಯಾವ ತಪಶೀಲು ಕೊಡಲ್ಪಟ್ಟಿದೆಯೋ ಅದು ಪೂರ್ಣವಾದದ್ದಾಗಿಯೂ ನಿಜವಾದದ್ದಾಗಿಯೂ ಇರುತ್ತದೆ.

(೪) ಮಿಪ್ರನಂತೆ ಅಪೀಲು ಮಾಡಲಿಕ್ಕೆ ನನಗೆ ಅಪ್ಪಣೆ ಕೊಡಬೇಕೆಂದು ಬೇಡುತ್ತೇನೆ.

## ಪರಿಶಿಷ್ಟ

**ಸೂಚನೆ:**—ಸದರೀ ಅರ್ಜಿಯು ವಾದಿಯಿಂದ ಮಾಡಲ್ಪಟ್ಟಲ್ಲಿ, ಮೂಲ ಕೋರ್ಟಿನಲ್ಲಿ ದಿದ್ರನಂತೆ ದಾವೆ ಮಾಡಲಿಕ್ಕೆ ಪರವಾನಗಿ ಸಿಗುವ ಬಗ್ಗೆ ಅವನಿಂದ ಅರ್ಜಿಯು ಮಾಡಲ್ಪಟ್ಟಿತ್ತೋ ಇಲ್ಲವೋ ಮತ್ತು ಆ ಪರವಾನಗಿಯು ಅವನಿಗೆ ಸಿಕ್ಕಿತೋ ಇಲ್ಲವೋ ಎಂಬುದನ್ನು ಅವನು ಬರೆಯಬೇಕು.

## ನಂಬರು ೬೧

### ಫೈಸಲಿನ ತಪಾಸಿಗಾಗಿ ಅರ್ಜಿಯು (ಆ. ೪೭, ರೂ. ೧.)

ಲಾ. ಅಸಲು ನಂ.————

(೧) ... ... ... (ಅರ್ಜಿದಾರ)

(ವಾದಿ)

**ವಿರುದ್ಧ**

(೧) ... ... ... ಎದುರಗಾರ

(ಪ್ರತಿವಾದಿ)

**ದಾವೆ ರೂಪಾಯಿ**

ಮೇಲ್ಕಂಡ ಅರ್ಜಿದಾರನು ಇದೇ ಕೋರ್ಟಿನ ಲಾ ಅಸಲು ನಂಬರು——ನೇ ದಾವೆಯೊಳಗಿನ ತಾರೀಖು ... ... ... ದಿವಸದ ಹುಕುಮನಾಮೆಯಿಂದ (ಯಾ ಹುಕುಮಿನಿಂದ) ತನಗೆ ಅನ್ಯಾಯವಾಯಿತೆಂದು ಎಣಿಸಿ, ತನಗೆ ವಿರುದ್ಧವಾಗಿ ಮಾಡಲ್ಪಟ್ಟ ಸದರೀ ಹುಕುಮನಾಮೆಯು ( ಯಾ ಸದರೀ ಹುಕುಮು ) ತಪಾಸಿಸಲ್ಪಡಬೇಕೆಂದು ಅಪೇಕ್ಷಿಸಿ ಫೈಸಲಿನ ತಪಾಸಿಗಾಗಿ ಅರ್ಜಿಯನ್ನು ಮಾಡುತ್ತಾನೆ.

ಸದರಿ ಹುಕುಮನಾಮೆಯು ( ಯಾ ಹುಕುಮಿನ ) ಮೇಲೆ ಅಪೀಲು ಮಾಡಿಲ್ಲ (ಯಾ ಸದರೀ ಹುಕುಮನಾಮೆಯು ಯಾ ಹುಕುಮು ಅಪೀಲಿಗೆ ಒಳಗಾಗದಂಥದ್ದಾಗಿರುತ್ತದೆ.) ಅರ್ಜಿದಾರನು ಸದರೀ ಪೈಸಲಿಗೆ ಇರುವ ಹರಕತಿನ ಕಾರಣಗಳನ್ನು ಕೆಳಗೆ ವಿವರಿಸುತ್ತಾನೆ. ಎಂದರೆ:—

ಕೆಳಗೆ ಬರೆದ ಪೈಕಿ ಯಾವದಾದರೂ ಕಾರಣದ ಆಧಾರದಿಂದ ಅರ್ಜಿಯನ್ನು ಮಾಡಬಹುದು:—

(೧) (ಸದರೀ ಹುಕುಮು ಯಾ ಹುಕುಮನಾಮೆಯು ಮಾಡಲ್ಪಟ್ಟ ಕಾಲದಲ್ಲಿ ತಕ್ಕ ಆಸಕ್ತಿಯಿಂದ ವರ್ತಿಸಿದ್ದಾಗ್ಯೂ ತಾನು ಹಾಜರು ಮಾಡಲಶಕ್ಯವಾದಂಥ ಯಾ ತನಗೆ ತಿಳಿಯದಿದ್ದಂಥ ಗೌರವವುಳ್ಳ ಹೊಸ ಪುರಾವೆಯು ಯಾ ಸಂಗತಿಯು ಹುಡುಕಿ ತೆಗೆಯಲ್ಪಟ್ಟ ಕಾರಣದಿಂದ (೨) ಅಥವಾ ದಪ್ತರಿನಲ್ಲಿ ಮೇಲೆ ತೋರುವಂಥ ಯಾವದೊಂದು ತಪ್ಪಿನ ಯಾ ದೋಷದ ಸಬಬಿನಿಂದ ಅಥವಾ (೩) ಬೇರೆ ಯಾವದೊಂದು ಸರಿಯಾದ ಕಾರಣದಿಂದ ಫೈಸಲಿನ ತಪಾಸಿಗಾಗಿ ಅರ್ಜಿಯನ್ನು ಮಾಡಬಹುದು.)

ಅರ್ಜಿದಾರನು ಬೇಡುವದೇನಂದರೆ:—

ಈ ಅರ್ಜಿಯನ್ನು ಸ್ವೀಕರಿಸಿ ಮೇಲ್ಕಂಡ ಹುಕುಮನಾಮೆಯನ್ನು [ಯಾ ಹುಕುಮನ್ನು] ರಹಿತ ಮಾಡುವ ಹುಕುಮು ಮಾಡಿ ಮೇಲ್ಕಂಡ ದಾವೆಯನ್ನು ಪುನಃ ಚೌಕಶಿ ಮಾಡಿ ನಿರ್ಣಯ ಕೊಡಬೇಕೆಂದು ಅರ್ಜಿದಾರನು ಪ್ರಾರ್ಥಿಸುತ್ತಾನೆ.

## ನಂಬರು ೬೨

## ಪಂಚಾಯತಿಗೆ ನೇಮಿಸಿಕೊಡುವ ಹುಕುಮಿನ ಬಗ್ಗೆ ಅರ್ಜಿಯು

(ಪರಿಶಿಷ್ಟ ೨, ಕಲಮು ೧.)

## ದಾವೆಯ ಸರನಾಮೆ

೧. [ದಾವೆಯ ಸ್ವರೂಪವನ್ನು ಬರೆಯಬೇಕು] ಈ ಬಗ್ಗೆ ದಾವೆಯನ್ನು ಮಾಡಲ್ಪಟ್ಟಿದೆ.

೨. ಪಕ್ಷಕಾರರೊಳಗಿನ ವಾದದ ಪ್ರಸಕ್ತಿಯು [ವಾದದ ಪ್ರಸಕ್ತಿಯನ್ನು ಬರೆ] ಆಗಿದೆ.

೩. ಅರ್ಜಿದಾರರು ಸಂಬಂಧವುಳ್ಳ ಯಾವತ್ತು ಪಕ್ಷಕಾರರಾಗಿದ್ದು ತಮ್ಮೊಳಗಿನ ವಾದದ ಪ್ರಸಕ್ತಿಯನ್ನು ಪಂಚಾಯತಿಗೆ ನೇಮಿಸಿಕೊಡುವ ಬಗ್ಗೆ ಅವರ ಐಕ್ಯಮತವಾಗಿದೆ.

೪. ಆದದರಿಂದ ಅರ್ಜಿದಾರರು ಪಂಚಾಯತಿ ನೇಮಿಸಿ ಕೊಡುವ ಹುಕು ಮಿನ ಬಗ್ಗೆ ಅರ್ಜಿ ಮಾಡುತ್ತಾರೆ.

ಸಹಿ ... ... ಅ, ಬ

ತಾರೀಖು ,, ... .. ಕ, ಬ

[ಸೂಚನೆ:—ಪಂಚರ ಸಂಬಂಧದಿಂದ ಪಕ್ಷಕಾರರ ಐಕ್ಯಮತ್ಯವಾಗಿ ಗಿದ್ದರೆ ಹಾಗೆ ಬರೆಯಬೇಕು.]

## ನಂಬರು ೬೩

## ಪಂಚಾಯತಿಗೆ ನೇಮಿಸಿಕೊಡುವ ಹುಕುಮಿನ ಬಗ್ಗೆ ಅರ್ಜಿಯು

(ಪರಿಶಿಷ್ಟ ೨, ಕಲಮು ೧.)

### ಸರನಾಮೆ

೧. ಅರ್ಜಿದಾರರು ಈ ದಾವೆಯಲ್ಲಿ ಹಿತಸಂಬಂಧವಿರುವ ಯಾವತ್ತು ಪಕ್ಷಕಾರರಾಗಿರುತ್ತಾರೆ.

೨. ಅರ್ಜಿದಾರರೊಳಗೆ ವಿವಾದದಲ್ಲಿರಕ್ಕ ಕೆಳಗೆ ಬರೆದ ಪ್ರಸಕ್ತಿಯನ್ನು [ಯಾ ಪ್ರಸಕ್ತಿಗಳನ್ನು]

೧. ಸದಾಶಿವ ರಾಮಚಂದ್ರ

೨. ವಿಶ್ವನಾಥ ನಾರಾಯಣ

೩. ಹರಿ ರಾಮಕೃಷ್ಣ

ಎಂಬ ಪಂಚರ ಪಂಚಾಯತಿಗೆ ನೇಮಿಸಿಕೊಡುವ ಬಗ್ಗೆ ಎಲ್ಲ ಅರ್ಜಿ ದಾರರ ಐಕ್ಯಮತವಾಗಿದೆ.

ವಿವಾದದಲ್ಲಿರತಕ್ಕ ಪ್ರಸಕ್ತಿಗಳು:—

೧. ಪ್ರತಿವಾದಿಯು ದಾವೆಯ ಪ್ರಾಮಿಸರಿನೋಟು ಬರೆದು ಕೊಟ್ಟಿರು ತ್ತಾನೆ ಯಾ ಇಲ್ಲಾ.

೨. ದಾವೆಯು ದಸ್ತೈವಜು ರೋಖು ಹಣದ ಬಗ್ಗೆ ಬರೆದುಕೊಟ್ಟಿರು ತ್ತದೆಯೋ ಯಾ ಪ್ರತಿವಾದಿಯು ವಾದಿಯ ಅಂಗಡಿಯಲ್ಲಿ ವ್ಯವಹಾರ ಮಾಡಿದ್ದ ರಿಂದ ಹೊರಡುವ ಖಾತೆ ಬಾಕಿ ಬಗ್ಗೆ ಬರೆದು ಕೊಟ್ಟಿರುತ್ತದೆಯೋ ?

೩. ಪ್ರವಾದಿಯು ವಾದಿಗೆ ಎಷ್ಟು ಹಣ ಕೊಡಬೇಕಾಗುತ್ತದೆ ?

೩. ಸದರೀ ಪಂಚರಲ್ಲಿ ಮತಭೇದವುಂಟಾಗಿದ್ದಲ್ಲಿ ಪಂಚರಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಯಾವ ಅಭಿಪ್ರಾಯವನ್ನು ಕೊಡುವರೋ ಆ ಅಭಿಪ್ರಾಯದಂತೆ ನಿರ್ಣಯವಾಗತಕ್ಕದ್ದೆಂದು ಅರ್ಜದಾರರು ತಮ್ಮೊಳಗೆ ಕರಾರು ಮಾಡಿಕೊಂಡಿ ರುತ್ತಾರೆ.

೪. ಅರ್ಜಿದಾರರು ಸದರೀ ಪ್ರಸಕ್ತಿಗಳನ್ನು ಸದರೀ ಪಂಚಾಯತಿಗೆ ನೇಮಿಸಿ ಕೊಡುವ ಹುಕುಮು ಮಾಡಬೇಕೆಂದು ಬೇಡುತ್ತಾರೆ.

## ನಂಬರು ೬೪

## ಪಂಚಾಯತಿಗೆ ನೇಮಿಸಿ ಕೊಡುವದನ್ನು ಕುರಿತು ಕೊಟ್ಟ ಕಬೂಲಾಯತಿಯನ್ನು ಕೋರ್ಟಿನಲ್ಲಿ ದಾಖಲು ಮಾಡುವ ವಿಷಯದಲ್ಲಿ ಅರ್ಜಿಯು

(ಪರಿಶಿಷ್ಟ ೨, ಕಲಮು ೧೭.)

### ಸರನಾಮೆ

೧. ಅರ್ಜಿದಾರನು ಮತ್ತು ಎದುರಗಾರನು ತಾರೀಖು ೧೭-೩-೧೯೨೭ನೇ ಇಸ್ವಿ ದಿವಸ ಅವರೊಳಗೆ ಹುಟ್ಟಿದ, ಅರ್ಜಿದಾರನು ಮಯತ ಸಂಗಪ್ಪಾ ತಂದಿ ಸಿಂಗಪ್ಪಾ ಈತನ ದತ್ತಕಮಗನಾಗಿರುತ್ತಾನೆ ಯಾ ಇಲ್ಲಾ, ಎಂಬ ತಕರಾರಿನ ಪ್ರಸಕ್ತಿಯನ್ನು ರಾವಬಹಾದ್ದೂರ ನಾಯಿಕ ಇವರ ಪಂಚಾಯತಿಗೆ ನೇಮಿಸಿಕೊಡ ಲಿಕ್ಕೆ ಲೇಖದಿಂದ ಒಡಂಬಟ್ಟಿದ್ದರು. ಅಸಲು ಲೇಖವೂ ಈ ಅರ್ಜಿಯ ಲಗತು ಇರುತ್ತದೆ.

೨. ಅರ್ಜಿದಾರನು ಬೇಡುವದೇನಂದರೆ:—

೧. ಸದರೀ ಕಬೂಲಾಯತಿಯನ್ನು ದಾಖಲು ಮಾಡಿಸಬೇಕು;

೨. ಸದರೀ ಕಬೂಲಾಯುತಿನ ಠರಾವುಗಳ ಪ್ರಕಾರ ನೇಮಿಸಲ್ಪಟ್ಟ ಪಂಚನ [ಯಾ ಪಂಚರ] ಕಳುಹಿಸಿಕೊಡುವ ಹುಕುಮು ಮಾಡಬೇಕು.

೩. ಸದರೀ ಪಂಚನ ನಿವಾಡೆಯನ್ನು ಅನುಸರಿಸಿ ಫೈಸಲು ಮಾಡಿ ಅದರಂತೆ ಹುಕುಮನಾಮೆ ಮಾಡಬೇಕು.

**ಸೂಚನೆ:**—ಕಬೂಲಾಯುತಿಯಲ್ಲಿ ಮೇಲಿನಂತೆ ಠರಾವೂ ಇರದಿದ್ದು ಪಕ್ಷಕಾರರ ಐಕ್ಯಮತ್ಯವಾಗದಿದ್ದಲ್ಲಿ ಕೋರ್ಟಿನವರು ಒಬ್ಬ ಪಂಚನನ್ನು ನೇಮಿಸಬಹುದು.

## ನಂಬರು ೬೫

## ಕೋರ್ಟಿನವರ ಮಧ್ಯಸ್ಥಿಕೆ ಇಲ್ಲದ ಪಂಚಾಯುತಿಗೆ ನೇಮಿಸಿ ಕೊಟ್ಟ ಪ್ರಸಕ್ತಿಯನ್ನು ಕುರಿತು ಮಾಡಿದ ನಿವಾಡೆಯನ್ನು ಕೋರ್ಟಿನಲ್ಲಿ ದಾಖಲುಮಾಡುವ ವಿಷಯದಲ್ಲಿ ( ಪರಿಶಿಷ್ಟ ೨, ಕಲಮು ೨೦.)

## ಸರನಾಮೆ

(೧) ಅರ್ಜದಾರನು ಮತ್ತು ಎದುರಗಾರರು ತಾ॥ ೧೧—೨—೯೨ಲನೇ ಇಸ್ವಿ ದಿವಸ, ಅವರೊಳಗೆ ಹುಟ್ಟಿದ ಅವರ ಮನೆತನ ವಾಟಣಿ ಸಂಬಂಧಿ ವಿವಾದದ ಪ್ರಸಕ್ತಿಯನ್ನು ಭೀಮಪ್ಪಾ ಗಂಗಾಧರಪ್ಪಾ ದಿವಟೆ ಎಂಬುವವನ ಪಂಚಾಯುತಿಗೆ ನೇಮಿಸಿ ಕೊಡಲಿಕ್ಕೆ ಬರಹದಿಂದ ಒಡಂಬಟ್ಟರು.

(೨) ಸದರೀ ಪಂಚನು ತಾರೀಖು ೧೦—೩—೧೯೨ಲನೇ ಇಸ್ವಿ ದಿವಸ ಲೇಖದ ಮೂಲಕವಾಗಿ ನಿವಾಡೆಯನ್ನು ಮಾಡಿದನು.

(೩) ಸದರೀ ನಿವಾಡೆಯು ಈ ಅರ್ಜಿಯು ಲಗತು ಇರುತ್ತದೆ.

(೪) ಅರ್ಜಿದಾರನು ಬೇಡುವದೇನಂದರೆ:—

ಸದರೀ ನಿವಾಡೆಯನ್ನು ಫೈಸಲಿಗೆ ದಾಖಲು ಮಾಡಲಿಕ್ಕೆ ಹುಕುಮು ಮಾಡಬೇಕು, ಅದಕ್ಕೆ ಅನುಸರಿಸಿ ಫೈಸಲು ಕೊಡಬೇಕು.

**ಸೂಚನೆ:**— ಈ ಅರ್ಜಿಗೆ ಇಕರಾರು ಬರೆಯಬೇಕು. ಕೋರ್ಟಿನ ಹುಕುಮಿನಿಂದ ಪಂಚರ ಕಡೆಗೆ ಕಳುಹಿಸಲ್ಪಟ್ಟ ಯಾವದಾದರೂ ಸಂಗತಿಯಲ್ಲಿ ಮಾಡಿದ ದಾವೆಯೊಳಗಿನ ನಿವಾಡೆಯನ್ನು ಅಥವಾ ಕೋರ್ಟಿನ ಮಧ್ಯಸ್ಥಿಕೆಯ ಹೊರತು ಪಂಚರ ಕಡೆಗೆ ಕಳುಹಿಸಲ್ಪಟ್ಟ ಯಾವದಾದರೂ ಸಂಗತಿಯಲ್ಲಿ ಮಾಡಿದ ನಿವಾಡೆಯನ್ನು ಕೋರ್ಟಿನಲ್ಲಿ ಫೈಸಲು ಮಾಡಬೇಕೆಂದು ಮಾಡತಕ್ಕ ಅರ್ಜಿಯ ನಿವಾಡೆಯ ತಾರೀಖಿನ ಆರುತಿಂಗಳಗಳಲ್ಲಿ ಮಾಡಬೇಕು.

# ೭ನೆಯ ಪ್ರಕರಣ

## ಸಾದಾರಿಯ ಸಂಬಂಧದ ಪ್ರಾಂತಿಕ ಆಕ್ಟ

## ಸನ್ನ ೧೯೨೦ನೇ ಇಸ್ವಿಯು

ಈ ಕೆಳಗೆ ಬರೆದ ಉದಾಹರಣದ ಆಧಾರದಿಂದ ಸದರೀ ಆಕ್ಟಿನೊಳಗಿನ ಮುಖ್ಯ ಮುಖ್ಯ ಕಲಮುಗಳ ವಿವೇಚನ ಮಾಡೋಣ, ಮತ್ತು ಸದರೀ ಆಕ್ಟಿನ ಸಾರಾಂಶ ಹೇಳೋಣ,

**ಕ್ಷ** ಎಂಬುವವನು ನಾದಾರನೆಂದು ಠರಾಯಿಸುವದಕ್ಕೆ ಅಪೇಕ್ಷಿಸುತ್ತಾನೆ.

**ಕ್ಷ** ಎಂಬುವನು **ಅ** ಎಂಬುವವನಿಗೆ ಪ್ರಾಮಿಸರಿ ನೋಟು ಬರೆದುಕೊಟ್ಟ ಬಾಬತಿನಲ್ಲಿ ೫೦೦ ರೂಪಾಯಿ ಕೊಡಬೇಕಾಗುತ್ತದೆ.

**ಕ್ಷ** ಎಂಬುವವನು **ಬ** ಎಂಬುವವನಿಗೆ ದಸ್ತೈವಜು ಬರೆದುಕೊಟ್ಟ ಬಾಬತಿನಲ್ಲಿ ೫೦೦ ರೂಪಾಯಿ ಕೊಡಬೇಕಾಗುತ್ತದೆ.

**ಕ್ಷ** ಎಂಬುವವನು **ಕ** ಎಂಬುವವನ ಅಂಗಡಿಯಲ್ಲಿ ವ್ಯವಹಾರ ಮಾಡಿದ ಬಾಬತ್ತು ೧೫೦೦ ರೂಪಾಯಿ ಕೊಡಬೇಕಾಗುತ್ತದೆ.

**ಕ್ಷ** ಎಂಬುವವನು **ಡ** ಎಂಬುವವನ ಕಡೆಗೆ ತನ್ನ ಮನೆಯನ್ನು ಯಾ ಭೂಮಿಯನ್ನು ಒತ್ತೆಇಟ್ಟ ಬಾಬತಿನಲ್ಲಿ ೨೫೦೦ ರೂಪಾಯಿ ಕೊಡಬೇಕಾಗುತ್ತದೆ.

**ಕ್ಷ** ಎಂಬುವವನು **ಇ** ಎಂಬುವವನು ಪಡಕೊಂಡ ಹುಕುಮನಾಮೆಯ ಬಾಬತಿನಲ್ಲಿ ೫೦೦ ರೂಪಾಯಿ ಕೊಡಬೇಕಾಗುತ್ತದೆ.

ಇವುಗಳಲ್ಲಿ **ಅ, ಬ, ಕ, ಡ** ಮತ್ತು **ಇ** ಎಂಬುವವರ "ಸಾವುಕಾರರು" **ಕ್ಷ** ಎಂಬುವವನು 'ಋಣಿಯು;' **ಕ್ಷ** ಇವನು ಕೊಡತಕ್ಕಂಥ ಮೇಲ್ಕಂಡ ರಕಮುಗಳು 'ಸಾಲಗಳು' ಇರುತ್ತವೆ. ಇವುಗಳಲ್ಲಿ **ಡ** ಇವನು 'ತಾರಣವುಳ್ಳ ಸಾವುಕಾರನು' ಇರುತ್ತಾನೆ.

**ಕ್ಷ ಇವನು ನಾದಾರಿತನದ ಕೃತ್ಯಗಳು ಯಾವಾಗ ಮತ್ತು ಯಾವ ಯಾವ ಪ್ರಸಕ್ತಿಗಳಲ್ಲಿ ಮಾಡಿದ್ದಾನೆಂದು ತಿಳಿಯಬೇಕು?**

ಋಣಿಯಾದ ಕ್ಷ ಇವನು ಕೆಳಗೆ ಹೇಳಿದ ಪ್ರತಿಯೊಂದು ಸಂಗತಿಯಲ್ಲಿ ನಾದಾರತನದ ಕೃತ್ಯವನ್ನು ಮಾಡಿದ್ದಾನೆಂದು ತಿಳಿಯಬೇಕು; ಎಂದರೆ—

(ಅ) ಬ್ರಿಟಿಶ ಹಿಂದುಸ್ಥಾನದಲ್ಲಿ. ಅಥವಾ ಬೇರೆ ಕಡೆಯಲ್ಲಿ ಅವನು ಸಾಮಾನ್ಯತಃ ತನ್ನ ಸಾವುಕಾರರ ಹಿತದ ದೆಸೆಯಿಂದ ಯಾವನೊಬ್ಬ ಮೂರನೆಯ ಮನುಷ್ಯನಿಗೆ ತನ್ನ ಎಲ್ಲ ಇಲ್ಲವೆ ಬಹುತರ ಎಲ್ಲ ಸಾಲನ್ನು ತಬದಿಲು ಮಾಡಿಕೊಟ್ಟರೆ.

(ಬ) ಬ್ರಿಟಿಶ ಹಿಂದುಸ್ಥಾನದಲ್ಲಿ ಅಥವಾ ಬೇರೆ ಕಡೆಯಲ್ಲಿ ಅವನು, ತನ್ನ ಸಾವುಕಾರರನ್ನು ಠಕ್ಕಿಸುವ ಅಥವಾ ಅವರಿಗೆ ವಿಲಂಬವನ್ನುಂಟುಮಾಡುವ ಉದ್ದೇಶದಿಂದ ತನ್ನ ಸಾಲವನ್ನು ಅಥವಾ ಅದರ ಯಾವದಾದರೂ ಭಾಗವನ್ನು ತಬದಿಲು ಮಾಡಿಕೊಟ್ಟರೆ.

(ಕ) ಬ್ರಿಟಿಶ ಹಿಂದುಸ್ಥಾನದಲ್ಲಿ ಅಥವಾ ಬೇರೆಕಡೆಗೆ ಅವನು ತನ್ನ ಆಸ್ತಿಯನ್ನು ಅಥವಾ ಯಾವದಾದರೂ ಭಾಗವನ್ನು, ಅವನು ನಾದಾರನೆಂದು ಠರಾಯಿಸಲ್ಪಟ್ಟಿದ್ದರೆ ಈ ಆಕ್ಟಿನನ್ವಯ ಅಥವಾ ಆಯಾ ಕಾಲದಲ್ಲಿ ಅಮಲಿನಲ್ಲಿರುವ ಬೇರೆ ಯಾವದಾದರೂ ಕಾಯಿದೆಯನ್ವಯ ಕಪಟದಿಂದ ಕೊಟ್ಟ ಅಗ್ರತೆಯೆಂದು ರದ್ದಾಗ ಬಹುದಾದ ರೀತಿಯಿಂದ ತಬದಿಲು ಮಾಡಿಕೊಟ್ಟರೆ;

(ಡ) ತನ್ನ ಸಾವುಕಾರರಿಗೆ ಠಕ್ಕಿಸುವ ಅಥವಾ ವಿಲಂಬವನ್ನುಂಟುಮಾಡುವ ಇರಾದೆಯಿಂದ—

೧. ಅವನು ಬ್ರಿಟಿಶ ಹಿಂದುಸ್ಥಾನದ ಹೊರಗೆ ಹೊರಟು ಹೋದರೆ ಅಥವಾ ಉಳಿದರೆ;

೨. ಅವನು ತಾನು ಇರುವ ಮನೆಯೊಳಗಿಂದ ಅಥವಾ ವಾಡಿಕೆಯ ಉದ್ಯೋಗದ ಸ್ಥಳದಿಂದ ಹೊರಟು ಹೋದರೆ ಅಥವಾ ಇತರ ರೀತಿಯಿಂದ ಗೈರ ಹಾಜರು ಆದರೆ;

೩. ಅವನು ತನ್ನ ಸಾವುಕಾರರಿಗೆ ತನ್ನ ಸಂಗಡ ಸಂಬಂಧವಿಡಲಿಕ್ಕೆ ಬರಬಾರದೆಂದು ಏಕಾಂತದಲ್ಲಿದ್ದುಕೊಂಡರೆ;

(ಇ) ಅವನ ಯಾವದಾದರೂ ಮಾಲು ಹಣದ ರಕಮನ್ನು ಕೊಡುವ ಸಂಬಂಧದ ಯಾವನಾದರೂ ಕೋರ್ಟಿನ ಹುಕುಮನಾಮೆಯು ಬಜಾವಣಿಯಲ್ಲಿ ಮಾಡಲ್ಪಟ್ಟರೆ.

**(ಫ)** ಅವನು ಈ ಆಕ್ಟಿನ ಠರಾವುಗಳ್ವಯ ತನ್ನನ್ನು ನಾದಾರನೆಂದು ಠರಾಯಿಸುವ ವಿಷಯದಲ್ಲಿ ಅರ್ಜಿಮಾಡಿದರೆ;

**(ಗ)** ಅವನು ತನ್ನ ಸರಕುಗಳನ್ನು ಕೊಡುವದನ್ನು ತಾನು ತಹಕೂಬು ಮಾಡಿದ್ದೇನೆ ಅಥವಾ ತಹಕೂಬು ಮಾಡುವವನಾಗಿದ್ದೇನೆಂದು ತನ್ನ ಸಾವುಕಾರರ ಪೈಕಿ ಯಾರಿಗಾದರೂ ನೋಟೀಸು ಕೊಟ್ಟರೆ; ಇಲ್ಲವೆ

**(ಹ)** ಅವನು ಯಾವದೊಂದು ಹಣದ ರಕಮನ್ನು ಕೊಡುವ ಸಂಬಂಧದಿಂದ ಯಾವದೊಂದು ಕೋರ್ಟಿನ ಹುಕುಮನಾಮೆಯ ಬಜಾವಣಿಯಲ್ಲಿ ಕೈದಿನಲ್ಲಿಡಲ್ಪಟ್ಟರೆ.

**ವಿವರಣೆ** — ಈ ಕಲಮಿನ ಕಾರಣಗಳ ಬಗ್ಗೆ ಏಜಂಟನ ಕೃತ್ಯವು ಮುಖ್ಯನ ಕೃತ್ಯವಾಗಿ ತಿಳಿಯಲ್ಪಡಬಹುದು. [ಕಲಮು ೬.]

ಇವುಗಳ ಪೈಕಿ ಯಾವದಾದರೂ ಕೃತ್ಯವನ್ನು ಮಾಡಿದ್ದಲ್ಲಿ ಋಣಿಯಾದ **ಕ್ಷ** ಇವನು ನಾದಾರತನದ ಕೃತ್ಯವನ್ನು ಮಾಡಿದ್ದಾನೆಂದು ಎಣಿಸಲ್ಪಡುವದು.

**ಯಾವ ಕೋರ್ಟಿನಲ್ಲಿ ಅರ್ಜಿಯನ್ನು ಮಾಡುವದು?**— **ಕ್ಷ** ಇವನು ಯಾ **ಕ್ಷ** ಇವನನ್ನು ನಾದಾರನೆಂದು ಠರಾಯಿಸುವ ವಿಷಯದಲ್ಲಿ ಯಾವ ಕೋರ್ಟಿನಲ್ಲಿ ಅರ್ಜಿಯನ್ನು ಮಾಡಬೇಕು? ಇಂಥ ಅರ್ಜಿಗಳ ಚೌಕಶಿ ಮಾಡುವ ಹುಕುಮತ್ತು ಡಿಸ್ಟ್ರಿಕ್ಟ ಕೋರ್ಟಿಗೆ ಉಂಟು; ಅಥವಾ ಡಿಸ್ಟ್ರಿಕ್ಟ ಕೋರ್ಟಿನ ಅಧಿಕಾರನೊಳಗಿನ ಯಾವದಾದರೂ ಕೋರ್ಟಿಗೆ ಇಂಥ ಹುಕುಮತ್ತು ಕೊಟ್ಟಿದ್ದರೆ ಆ ಕೋರ್ಟಿಗೆ ಉಂಟು.

ನಾದಾರಿತನದ ಪ್ರತಿಯೊಂದು ಅರ್ಜಿಯನ್ನು, ಯಾವ ಸ್ಥಾನಿಕ ಸೀಮೆಯೊಳಗೆ ಋಣಿಯು ವಾಡಿಕೆಯಾಗಿ ಇರುತ್ತಿದ್ದಾನೋ ಅಥವಾ ಉದ್ಯೋಗವನ್ನು ನಡಿಸುತ್ತಿದ್ದಾನೋ ಅಥವಾ ಫಾಯಿದೆಯ ಸಲುವಾಗಿ ಸ್ವತಃ ಕೆಲಸಮಾಡುತ್ತಿದ್ದಾನೋ ಆ ಸ್ಥಾನಿಕ ಸೀಮೆಯಲ್ಲಿ;

ಅಥವಾ ಅವನು ದಸ್ತಗೀರು ಮಾಡಲ್ಪಟ್ಟಿದ್ದರೆ ಅಥವಾ ತುರಂಗದೊಳಗೆ ಕೈದು ಮಾಡಲ್ಪಟ್ಟಿದ್ದರೆ, ಅವನನ್ನು ಎಲ್ಲಿ ಅಟಕಾಯಿಸಿದ್ದೀತೋ ಅಲ್ಲಿ, ಹುಕುಮತ್ತು ಇರುವ ಕೋರ್ಟಿಗೆ ಮಾಡಬೇಕು. ( ಕಲಮು ೧೧ ).

**ಅರ್ಜಿಯನ್ನು ಯಾರು ಮಾಡಬಹುದು ?** —ಯಾವನೊಬ್ಬ ಋಣಿಯು ಮೇಲೆ ಹೇಳಿದ ಪೈಕಿ ಯಾವದಾದರೂ ನಾದಾರತನದ ಕೃತ್ಯವನ್ನು ಮಾಡಿದರೆ ಯಾವನೊಬ್ಬ ಸಾವುಕಾರನು ಅಥವಾ ಆ ಋಣಿಯು ನಾದಾರಿತನದ ಅರ್ಜಿಯನ್ನು ಸಾದರ ಮಾಡಬಹುದು (ಕಲಮು ೬.) ಕ್ಷ ಇವನು ನಾದಾರಿತನದ ಕೃತ್ಯವನ್ನು ಮಾಡಿದರೆ, ಅವನ ಸಾವುಕಾರರಾದ **ಅ, ಬ, ಕ, ಡ** ಮತ್ತು **ಇ** ಇವರ ಪೈಕಿ ಯಾರಾದರೂ ಅಥವಾ ಋಣಿಯಾದ ಸ್ವತಃ **ಕ್ಷ** ಇವನು ನಾದಾರಿತನದ ಅರ್ಜಿಯನ್ನು ಸಾದರ ಮಾಡಬಹುದು.

**ಸಾವುಕಾರನು ಅರ್ಜಿಯನ್ನು ಯಾವ ಪ್ರಸಕ್ತಿಯಲ್ಲಿ ಮಾಡಬಹುದು ?**— ಸಾವುಕಾರನು ಅರ್ಜಿಮಾಡಲಿಕ್ಕೆ ಬೇಕಾಗುವ ಶರ್ತುಗಳ ಕೆಳಗೆ ಹೇಳುತ್ತೇವೆ. ಯಾವನೆಂದರೆ :—

ಯಾವನೊಬ್ಬ ಸಾಕಾರನು :—

(ಅ) ಋಣಿಯ ಕಡೆಯಿಂದ ಸದರೀ ಸಾವುಕಾರನಿಗೆ ಬರತಕ್ಕ ಸಾಲದ ರಕಮು, ಅಥವಾ ಇಬ್ಬರು ಅಥವಾ ಹೆಚ್ಚು ಸಾವುಕಾರರು ಕೂಡಿ ಅರ್ಜಿಯನ್ನು ಮಾಡುತ್ತಿದ್ದರೆ, ಇಂಥ ಸಾವುಕಾರರಿಗೆ ಬರತಕ್ಕ ಸಾಲಗಳ ಒಟ್ಟು ರಕಮು ೫೦೦ ರೂಪಾಯಿಯಾದ ಹೊರ್ತು, ಮತ್ತು;

(ಬ) ಸದರೀ ಸಾಲವು ಕೂಡಲೇ ಕೊಡತಕ್ಕ ಅಥವಾ ಮುಂದಿನ ಒಂದ ವಿವಕ್ಷಿತ ವೇಳೆಯಲ್ಲಿ ಕೊಡತಕ್ಕ ಒಂದು ಠರಾಯಿಸಿದ ರಕಮು ಆಗಿದ್ದಹೊರ್ತು ಮತ್ತು

(ಕ) ನಾದಾರತನದ ಯಾವ ಕೃತ್ಯದ ಆಧಾರದಿಂದ ಅರ್ಜಿಮಾಡತಕ್ಕದ್ದಿರುವದೋ ಆ ಕೃತ್ಯವು ಆ ಅರ್ಜಿಯನ್ನು ಹಾಜರುಮಾಡುವ ವೇಳೆಯ ಮುಂಚೆ ಮೂರು ತಿಂಗಳೊಳಗೆ ಆಗಿದ್ದಹೊರ್ತು, ಯಾವನೊಬ್ಬ ಋಣಿಯ ವಿರುದ್ಧವಾಗಿ ನಾದಾರಿತನದ ಅರ್ಜಿಯನ್ನು ಸಾದರಮಾಡಲಿಕ್ಕೆ ಹಕ್ಕುವುಳ್ಳವನಾಗಲಿಕ್ಕಿಲ್ಲ.

೨. ಅರ್ಜಿಮಾಡುವ ಸಾವುಕಾರನು ತಾರಣವುಳ್ಳ ಸಾವುಕಾರನಾಗಿದ್ದರೆ, ಅವನು ತನ್ನ ಅರ್ಜಿಯಲ್ಲಿ, ಋಣಿಯು ನಾದಾರನೆಂದು ಠರಾಯಿಸಲ್ಪಟ್ಟ ಪಕ್ಷದಲ್ಲಿ ತಾನು ತನ್ನ ತಾರಣವನ್ನು ಸಾವುಕಾರರ ಹಿತದ ಬಗ್ಗೆ ಬಿಟ್ಟುಕೊಡಲಿಕ್ಕೆ ಒಪ್ಪುತ್ತೇನೆಂದು ಬರೆಯಬೇಕು, ಅಥವಾ ಸದರೀ ತಾರಣದ ಬೆಲೆಯ ಅಂದಾಜನ್ನು ಕೊಡಬೇಕು. ಅವನು ತಾರಣದ ಬೆಲೆಯ ಅಂದಾಜನ್ನು ಕೊಟ್ಟ ಸಂಗತಿಯಲ್ಲಿ, ಅವನು ತಾರಣವಿಲ್ಲದ ಸಾವುಕಾರನಾಗಿದ್ದರೆ ಹ್ಯಾಗೋ ಹಾಗೆಯೇ ಅವನನ್ನು, ಆ ಪ್ರಕಾರ ಅಂದಾಜು ಮಾಡಿದ ಬೆಲೆಯನ್ನು ಅವನಿಗೆ ಸಲ್ಲತಕ್ಕ ಸಾಲದೊಳಗಿಂದ ಕಳೆಯಲಾಗಿ ಬಾಕೀ ಉಳದ ರಕಮಿನ ಮಟ್ಟಿಗೆ ಅರ್ಜಿಮಾಡುವ ಸಾವುಕಾರನ್ನಾಗಿ ದಾಖಲು ಮಾಡಬಹುದು. ( ಕಲಮು ೯. )

**ಋಣಿಯು ಅರ್ಜಿಯನ್ನು ಯಾವ ಪ್ರಸಕ್ತಿಯಲ್ಲಿ ಮಾಡಬಹುದು ?**— ಋಣಿಯು ಅರ್ಜಿಮಾಡಲಿಕ್ಕೆ ಬೇಕಾಗುವ ಶರ್ತುಗಳ ಕೆಳಗೆ ಹೇಳುತ್ತೇವೆ. ಯಾವವೆಂದರೆ:—

೧. ಯಾವನಾದರೂ ಋಣಿಯು ತನ್ನ ಸಾಲವನ್ನು ತೀರಿಸಲಿಕ್ಕೆ ಅಸಮರ್ಥನಾಗಿದ್ದ ಹೊರ್ತು ಮತ್ತು:—

(ಅ) ಅವನ ಸಾಲಗಳ ರಕಮು ಐನೂರು ರೂಪಾಯಿಯಷ್ಟು ಆಗಿದ್ದ ಹೊರ್ತು, ಅಥವಾ

(ಬ) ಹಣ ಕೊಡುವ ವಿಷಯದ ಯಾವದಾದರೂ ಕೋರ್ಟಿನ ಹುಕುಮನಾಮೆಯ ಬಜಾವಣೆಯಲ್ಲಿ ಅವನು ದಸ್ತಗೀರು ಮಾಡಲ್ಪಟ್ಟಿದ್ದ ಹೊರ್ತು ಅಥವಾ ತುರಂಗದೊಳಗೆ ಕೈದುಮಾಡಿ ಇಡಲ್ಪಟ್ಟಿದ್ದ ಹೊರ್ತು ಅಥವಾ

(ಕ) ಇಂಥ ಹುಕುಮನಾಮೆಯ ಬಜಾವಣೆಯಲ್ಲಿ ಅವನ ಮಾಲಿನ ವಿರುದ್ಧ ಜಪ್ತಿಯ ಹುಕುಮು ಆಗಿದ್ದು ಅದು ಅಮಲಿನಲ್ಲಿದ್ದ ಹೊರ್ತು,

ತನಗೆ ನಾದಾರನೆಂದು ಠರಾಯಿಸುವ ವಿಷಯದಲ್ಲಿ ಅರ್ಜಿಮಾಡಲಿಕ್ಕೆ ಹಕ್ಕುಳ್ಳವನಾಗಲಿಕ್ಕಿಲ್ಲ.

೨. ಯಾವ ಋಣಿಯು ಸಂಬಂಧದಿಂದ ಈ ಆಕ್ಟಿನನ್ವಯ ಮಾಡಿದ ನಾದಾರತನದ ಠರಾವಿನ ಹುಕುಮು, ಅವನು ತನ್ನನ್ನು ಬಿಟ್ಟುಬಿಡಬೇಕೆಂಬ ಬಗ್ಗೆ

ಅರ್ಜಿ ಮಾಡಲಿಕ್ಕೆ ತಪ್ಪಿದ್ದರಿಂದ ಅಥವಾ ಅರ್ಜಿಯ ಕೆಲಸ ನಡಿಸಲಿಕ್ಕೆ ತಪ್ಪಿದ್ದ ರಿಂದ ರದ್ದು ಮಾಡಲ್ಪಟ್ಟಿರುವದೋ, ಆ ಋಣಿಗೆ ನಾದಾರತನ ಠರಾವಿನ ಹುಕುಮು ರದ್ದು ಮಾಡಿದ ಕೋರ್ಟಿನ ಪರವಾನಗಿ ಇಲ್ಲದೆ, ನಾದಾರಿತನದ ಅರ್ಜಿ ಮಾಡಲಿಕ್ಕೆ ಹಕ್ಕು ಇರಲಿಕ್ಕಿಲ್ಲ. ಇಂಥ ಕೋರ್ಟು ಸದರಿ ಪರವಾನಗಿ ಯನ್ನು, ಆ ಋಣಿಗೆ ಅರ್ಜಿ ಮಾಡುವದರಲ್ಲಿ ಇಲ್ಲವೆ ಅರ್ಜಿಯ ಕೆಲಸ ನಡಿಸು ವದರಲ್ಲಿ ಯೋಗ್ಯ ಕಾರಣದಿಂದ ಅಡ್ಡಿ ಆಯಿತೆಂತಾಗಲೀ, ಇಲ್ಲವೆ ಯಾವ ಅರ್ಜಿಯ ಮೇಲಿಂದ ನಾದಾರತನದ ಠರಾವಿನ ಹುಕುಮು ಮಾಡಲ್ಪಟ್ಟಿರುವದೋ ಆ ಅರ್ಜಿಯಲ್ಲಿರುವ ಸಂಗತಿಗಳಗಿಂತ ತೀರ ಭಿನ್ನವಾದ ಸಂಗತಿಗಳ ಆಧಾರದ ಮೇಲೆ ಆ ಅರ್ಜಿಯು ಮಾಡಲ್ಪಟ್ಟಿದೆಯೆಂತಾಗಲೀ ಕೋರ್ಟಿಗೆ ಖಾತ್ರಿಯಾಗದ ಹೊರ್ತು, ಕೊಡಬಾರದು. (ಕಲಮು ೧೦)

## ಅರ್ಜಿಯೊಳಗೆ ಯಾವ ಮಜಕೂರು ಇರತಕ್ಕದ್ದು? (ಕ. ೧೩)

**ಋಣಿಯು ಹಾಜರು** ಮಾಡಿದ ಪ್ರತಿಯೊಂದು ನಾದಾರತನದ ಅರ್ಜಿ ಯಲ್ಲಿ ಕೆಳಗಿನ ತಪಶೀಲು ಇರಬೇಕು, ಯಾವದೆಂದರೆ:— (ಕಲಮು ೧೩ (೧))

(ಅ) ಋಣಿಯು ತನ್ನ ಸಾಲಗಳನ್ನು ಕೊಡಲಿಕ್ಕೆ ಅಸಮರ್ಥನಾಗಿದ್ದಾ ನೆಂದು ಬರೆಯುಕೊಡುವದು;

(ಬ) ಅವನು ಯಾವ ಸ್ಥಳದಲ್ಲಿ ವಾಡಿಕೆಯಾಗಿ ಇರುತ್ತಾನೆ ಅಥವಾ ಉದ್ಯೋಗ ನಡೆಯಿಸುತ್ತಾನೆ ಅಥವಾ ಫಾಯಿದೆಗಾಗಿ ಸ್ವತಃ ಕೆಲಸಮಾಡುತ್ತಾ ನೆಂಬುದು, ಅಥವಾ ಅವನು ದಸ್ತಗೀರು ಮಾಡಲ್ಪಟ್ಟಿದ್ದರೆ ಅಥವಾ ತುರಂಗ ದೊಳಗೆ ಇಡಲ್ಪಟ್ಟಿದ್ದರೆ ಅವನಿಗೆ ಯಾವ ಸ್ಥಳದಲ್ಲಿ ಅಟಕಾಯಿಸಿಟ್ಟಿರುತ್ತ ದೆಂಬುದು;

(ಕ) ಯಾವದಾವದರೂ ಕೋರ್ಟಿನ ಹುಕುಮಿನ ಮೇಲಿಂದ ಅವನು ದಸ್ತ ಗೀರು ಮಾಡಲ್ಪಟ್ಟಿದ್ದರೆ, ಅಥವಾ ತುರಂಗದೊಳಗೆ ಕೈದು ಮಾಡಲ್ಪಟ್ಟಿದ್ದರೆ, ಅಥವಾ ಯಾವದಾವದರೂ ಕೋರ್ಟಿನಿಂದ ಅವನ ಮಾಲು ಜಪ್ತುಮಾಡುವ ವಿಷಯ ದಲ್ಲಿ ಹುಕುಮು ಮಾಡಲ್ಪಟ್ಟಿದ್ದರೆ, ಆ ಕೋರ್ಟು ಯಾವದೆಂಬುದು; ಮತ್ತು ಯಾವ ಹುಕುಮನಾಮೆಯ ಸಂಬಂಧದಲ್ಲಿ ಅಂಥ ಯಾವದಾವದರೂ ಹುಕುಮು ಮಾಡಲ್ಪಟ್ಟಿದೆಯೋ ಆ ಹುಕುಮನಾಮೆಯ ತಪಶೀಲು;

(ಡ) ಅವನ ವಿರುದ್ಧ ಇರುವ ಹಣದ ಸಂಬಂಧದ ಎಲ್ಲ ಬೇಡುವಿಕೆಗಳ ಮೊಬಲಗು ಮತ್ತು ತಪಶೀಲು, ಮತ್ತು ಅವನಿಗೆ ಗೊತ್ತಿರುವಷ್ಟರ ಮಟ್ಟಿಗೆ ಅಥವಾ ಯೋಗ್ಯ ಜಾಗ್ರತೆಯಿಂದ ಮತ್ತು ಮೆಹನತಿನಿಂದ ಅವನಿಗೆ ಗೊತ್ತಾಗುವ ಹಾಗೆ ಇರುವಷ್ಟರ ಮಟ್ಟಿಗೆ ಅವನ ಸಾವುಕಾರರ ಹೆಸರುಗಳು ಮತ್ತು ಅವರು ಇರುವ ಸ್ಥಳಗಳು;

(ಇ) ಅವನ ಪೂರಾ ಸ್ವತ್ತು ಎಷ್ಟು ಎಂಬುದು ಮತ್ತು ಅದರ ತಪಶೀಲು ಮತ್ತು:—

೧. ಇಂಥ ಯಾವ ಸ್ವತ್ತು ಹಣದ ರೂಪದಿಂದಿಲ್ಲದೆ ಇದ್ದೀತೋ ಆ ಎಲ್ಲಾ ಸ್ವತ್ತಿನ ಬೆಲೆಯ ತಪಶೀಲು.

೨. ಇಂಥ ಯಾವದಾದರೂ ಸ್ವತ್ತು ಯಾವ ಸ್ಥಳದಲ್ಲಿ ಅಥವಾ ಸ್ಥಳಗಳಲ್ಲಿ ಸಿಗುವ ಹಾಗೆ ಇದೆ ಎಂಬುದು; ಮತ್ತು.

೩. ಹುಕುಮನಾಮೆಯ ಬಜಾವಣೆಯಲ್ಲಿ ಜಪ್ತು ಮಾಡಲ್ಪಡುವ ಮತ್ತು ಮಾರಲ್ಪಡುವ ಪಾತ್ರತೆಯೊಳಗಿಂದ ದಿವಾಣೀ ಕೆಲಸ ನಡೆಯಿಸುವ ರೀತಿಯ ವಿಷಯದ ಕಾಯಿದೆಯಿಂದ ಮುಕ್ತಮಾಡಲ್ಪಟ್ಟ (ಅವನ ಲೆಕ್ಕದ ವಹಿಗಳಾಗಿರ ದಂಥ) ಯಾವ ಬಾಬತುಗಳು ಇಂಥ ಸ್ವತ್ತಿನಲ್ಲಿ ಬರುವವೋ ಅವುಗಳನ್ನು ಹೊರ್ತುಪಡಿಸಿ, ಇಂಥ ಇಡೀ ಸ್ವತ್ತನ್ನು ಕೋರ್ಟಿನ ವ್ಯವಸ್ಥೆಯೊಳಗೆ ಕೊಡಲಿಕ್ಕೆ ಅವನು ಕಬೂಲು ಇದ್ದಬಗ್ಗೆ ಇಕರಾರು;

(ಫ) ಋಣಿಯು ತಾನು ನಾದಾರನೆಂದು ಠರಾಯಿಸಲ್ಪಡಬೇಕೆಂದು ಇದಕ್ಕಿಂತ ಮೊದಲು ಎಂದಾದರೂ ಅರ್ಜಿಯನ್ನು ಮಾಡಿದ್ದಾನೋ ಹ್ಯಾಗೆ ಎಂಬುವದು, ಮತ್ತು (ಇಂಥ ಅರ್ಜಿಯನ್ನು ಮಾಡಿದ್ದರೆ):—

೧. ಆ ಅರ್ಜಿಯನ್ನು ನಾಕಾರಿಸಿದ್ದರೆ ಅದರ ಕಾರಣಗಳು, ಇಲ್ಲವೆ,

೨. ಋಣಿಯು ನಾದಾರನೆಂದು ಠರಾಯಿಸಲ್ಪಟ್ಟಿದ್ದರೆ, ನಾದಾರತನದ ಸಂಕ್ಷಿಪ್ತ ವಿವರಣೆ, ಹಾಗು, ಮೊದಲಿನ ಠರಾವು ರದ್ದು ಮಾಡಲ್ಪಟ್ಟಿದೆಯೋ ಹ್ಯಾಗೆ ಎಂಬುವದು ಮತ್ತು ಮಾಡಲ್ಪಟ್ಟಿದ್ದರೆ ಅದರ ಕಾರಣಗಳು.

**ಸಾವುಕಾರನ ಅರ್ಜಿಯೊಳಗೆ ಯಾವ ಮಜಕೂರು ಇರತಕ್ಕದ್ದು ? ( ಕಲಮು ೧೩ (೨) )**

೨. ಯಾವನೊಬ್ಬ ಸಾವುಕಾರನು ಅಥವಾ ಸಾವುಕಾರರು ಹಾಜರ ಮಾಡಿದ ಪ್ರತಿಯೊಂದು ನಾದಾರತನದ ಅರ್ಜಿಯಲ್ಲಿ ಮೇಲ್ಕಂಡ ಪೋಟ ಕಲಮು (೧) ರಕಮು (ಬ) ಇವರಲ್ಲಿ ನಿರ್ದಿಷ್ಟಗೊಳಿಸಿದ ಋಣಿಯ ಸಂಬಂಧದ ತಪಶೀಲನ್ನು ಬರೆದು, ಈ ಕೆಳಗೆ ಹೇಳಿದ ತಪಶೀಲನ್ನು ಸಹ ಬರೆಯಬೇಕು. ಅಂದರೆ —

(ಅ) ಇಂಥ ಋಣಿಯು ನಾದಾರತನದ ಯಾವ ಕೃತ್ಯವನ್ನು ಮಾಡಿದನೆಂಬುದು ಅದನ್ನು ಮಾಡಿದ ತಾರೀಖಿನ ಸಹಿತವಾಗಿ; ಮತ್ತು,

(ಬ) ಇಂಥ ಋಣಿಯು ವಿರುದ್ಧ ಅವನ ಅಥವಾ ಅವರ ಹಣದ ಸಂಬಂಧದ ಯಾವ ಬೇಡುವಿಕೆಯು ಇದ್ದೀತೋ ಅಥವಾ ಯಾ ಬೇಡುವಿಕೆಗಳಿರುವವೋ ಅದರ ಅಥವಾ ಅವುಗಳ ಮೊಬಲಗು ಮತ್ತು ತಪಶೀಲು.

ನಾದಾರತನದ ಪ್ರತಿಯೊಂದು ಅರ್ಜಿಯನ್ನು ಬರಹಮೂಲಕವಾಗಿ ಮಾಡಬೇಕು; ಮತ್ತು ಅದರ ಮೇಲೆ ಸಹಿ ಮಾಡಬೇಕು ಮತ್ತು ಅದರ ಮೇಲೆ ಖರೆತನದ ಬಗ್ಗೆ ಇಕರಾರು ಬರೆಯಬೇಕು.

ಯಾವನೊಬ್ಬ ಋಣಿಯಾಗಲೀ ಸಾವುಕಾರನಾಗಲೀ ಸಾದರ ಮಾಡಿದ ಯಾವದಾದರೂ ಅರ್ಜಿಯನ್ನು ಕೋರ್ಟಿನ ಪರವಾನಗಿಯ ಹೊರ್ತು ಹಿಂದಕ್ಕೆ ತೆಗೆದುಕೊಳ್ಳಲಾಗದು. (ಕಲಮು ೧೪).

ಕ್ಷ ಇವನಿಗೆ ನಾದಾರತನದ ಅರ್ಜಿಯನ್ನು ಮಾಡಬೇಕಾಗಿದ್ದಲ್ಲಿ ಋಣಿಯು ಹಾಜರು ಮಾಡತಕ್ಕ ಅರ್ಜಿಯಲ್ಲಿ ಇರತಕ್ಕ ತಪಶೀಲನ್ನು ಬರೆಯಬೇಕು. ಸದರೀ ಅರ್ಜಿಯಮೇಲೆ ಸಹಿ ಮಾಡಬೇಕು ಮತ್ತು ಅದಕ್ಕೆ ಇಕರಾರು ಬರೆಯಬೇಕು.

ಅ, ಬ ವಗೈರೆ ಪೈಕಿ ಯಾವನಾದರೂ ಸಾವುಕಾರನು ಕ್ಷ ಈತನಿಗೆ ನಾದಾರನೆಂದು ಠರಾಯಿಸಬೇಕೆಂದು ನಾದಾರತನದ ಅರ್ಜಿಯನ್ನು ಮಾಡಬೇಕಾಗಿದ್ದಲ್ಲಿ ಸಾವುಕಾರನು ಹಾಜರ ಮಾಡತಕ್ಕ ಅರ್ಜಿಯಲ್ಲಿ ಇರತಕ್ಕ ತಪಶೀಲನ್ನು ಅವನು ಅರ್ಜಿಯಲ್ಲಿ ಬರೆಯಬೇಕು, ಸದರೀ ಅರ್ಜಿಗೆ ಅವನು ಸಹಿ ಮಾಡಬೇಕು. ಮತ್ತು ಅದಕ್ಕೆ ಇಕರಾರು ಬರೆಯಬೇಕು.

ಈ ಪ್ರಕಾರ ಮಾಡಿದ ಅರ್ಜಿಯನ್ನು ದಾಖಲಾದ ಬಳಿಕ ಕೋರ್ಟಿನವರು ಆ ಅರ್ಜಿಯನ್ನು ತಕ್ಕೊಳ್ಳಬೇಕು ಮತ್ತು ವಿರುದ್ಧ ಪಕ್ಷಕಾರನಿಗೆ ಯಾ ಪಕ್ಷಕಾರರಿಗೆ ನೋಟೀಸು ಯಾ ನೋಟೀಸುಗಳು ಕೊಡಬೇಕು.

ಕೋರ್ಟು ಅರ್ಜಿಯನ್ನು ತಕ್ಕೊಳ್ಳುವ ಹುಕುಮು ಮಾಡುವಾಗ್ಗೆ ಋಣಿಯ ಆಸ್ತಿಯ ದಸೆಯಿಂದ ಮಧ್ಯಂತರದ ಒಪ್ಪಿಸಿಕೊಳ್ಳುವವನನ್ನು ನೇಮಿಸಬಹುದು; ಆಗ್ಗೆ ನೇಮಿಸಿದ್ದಿದ್ದರೆ ಅನಂತರದಲ್ಲಿ ಅವನನ್ನು ನೇಮಿಸಬಹುದು. (ಕಲಮು ೨೦) ಋಣಿಯು ದಸ್ತಗೀರು ಮಾಡಲ್ಪಟ್ಟಿದ್ದರೆ ಇಲ್ಲವೆ ಕೈದಿನಲ್ಲಿ ಹಿಡಿಯಲ್ಪಟ್ಟಿದ್ದರೆ, ಕೋರ್ಟು ಅರ್ಜಿಯನ್ನು ತಕ್ಕೊಳ್ಳುವ ಹುಕುಮು ಮಾಡುವಾಗ್ಗೆ ಅವನ ಬಿಡುಗಡೆ ಮಾಡುವ ಹುಕುಮು ಮಾಡಬಹುದು. ಕೋರ್ಟು ಸದರಿ ಅರ್ಜಿಯ ಚೌಕಶಿಯನ್ನು ಮಾಡಿ ಅದನ್ನು ತೆಗೆದುಹಾಕಬೇಕು ಅಥವಾ ನಾದಾರಿಯ ಠರಾವಿನ ಹುಕುಮನ್ನು ಕೊಡಬೇಕು. ನಾದಾರಿಯ ಠರಾವಿನ ಹುಕುಮಿನಲ್ಲಿ ಋಣಿಯು ತನ್ನ ಬಿಡುಗಡೆಯ ಬಗ್ಗೆ ಎಷ್ಟು ವೇಳೆಯ ಒಳಗಾಗಿ ಅರ್ಜಿಯನ್ನು ಮಾಡಬೇಕೆಂಬದನ್ನು ಬರೆಯಬೇಕು. ಈ ಪ್ರಕಾರ ಋಣಿಯು ನಾದಾರನೆಂದು ಠರಾಯಿಸಿದ ಬಳಿಕ ಅವನ ಇಡೀ ಸ್ವತ್ತು ಕೋರ್ಟಿನಲ್ಲಿ ಯಾ ರಿಸೀವರನಲ್ಲಿ ನಿವಿಷ್ಟವಾಗುವದು. ಕೋರ್ಟಿನ ಪರವಾನಿಗಿಯ ಹೊರತು ಅವನ ವಿರುದ್ಧ ಯಾವದಾದರೂ ದಾವೆಯನ್ನು ಅಥವಾ ಬೇರೆ ಕಾಯಿದೆಯ ವ್ಯವಹಾರವನ್ನು ಪ್ರಾರಂಭಿಸಲಿಕ್ಕೆ ಬರಲಿಕ್ಕಿಲ್ಲ; ಮತ್ತು ನಡೆದ ಕಜ್ಜೆಯನ್ನು ಯಾ ಕಜ್ಜೆಗಳನ್ನು ಕೋರ್ಟು ತಹಕೂಬು ಮಾಡಬಹುದು.

ಯಾವ ನಾದಾರನ ಸಂಬಂಧದಿಂದ ನಾದಾರತನದ ಠರಾವಿನ ಹುಕುಮಾಗಿರುವದೋ ಅವನು ಜಚಾವಿನ ಬಗ್ಗೆ ಕೋರ್ಟಿಗೆ ಅರ್ಜಿ ಮಾಡಬಹುದು ಮತ್ತು ಇಂಥ ಅರ್ಜಿಯ ಮೇಲಿಂದ ಕೋರ್ಟು ನಾದಾರನಿಗೆ ಕೈದು ಮಾಡದಿರುವ ವಿಷಯದಲ್ಲಿ ಅಥವಾ ಅಟಕಾವಿನಲ್ಲಿಡದಿರುವ ವಿಷಯದಲ್ಲಿ ಹುಕುಮು ಮಾಡಬಹುದು. (ಕಲಮು ೩೧)

**ನಾದಾರಿಯ ಠರಾವಿನ ಹುಕುಮು ಆದ ಬಳಿಕ ಮುಂದಿನ ಕ್ರಮ** —ಋಣಿಯಾದವನು ಇವನು ತನಗೆ ದಸ್ತಗೀರು ಮಾಡಬಾರದೆಂಬ ಮತ್ತು ಅಟಕಾವಿನಲ್ಲಿ ಇಡಬಾರದೆಂಬ ಉದ್ದೇಶದಿಂದ ತನ್ನ ಜಚಾವಿನ ಬಗ್ಗೆ ಕೋರ್ಟಿನಿಂದ ಹುಕುಮು ಪಡೆಯಬೇಕು.

ಈ ಆಕ್ಟಿನನ್ವಯ ಸಾಬೀತು ಮಾಡಬಹುದಾದ ಸಾಲಗಳ ಸಂಬಂಧವಲ್ಲಿ ತಾವು ನಾದಾರನ ಸಾವುಕಾರರೆಂದು ಯಾರ ಅಂಬೋಣವಿದೆಯೋ ಆ ಎಲ್ಲಾ ಮನುಷ್ಯರು ತಮ್ಮ ತಮ್ಮ ಸಾಲಗಳ ರಕಮಿನ ಮತ್ತು ತಪಶೀಲಿನ ಸಂಬಂಧವ ಪುರಾವೆಯನ್ನು ಹಾಜರುಮಾಡಿ, ಅವುಗಳನ್ನು ಸಾಬೀತು ಪಡಿಸಬೇಕು. (ಕಲಮು ೩೩) **ಅ, ಬ, ಕ** ವಗೈರೆ ಸಾವುಕಾರರು ತಮ್ಮ ತಮ್ಮ ಸಾಲಗಳನ್ನು ಸಾಬೀತು ಮಾಡಬೇಕು.

**ಈ ಆಕ್ಟಿನನ್ವಯ ಸಾಬೀತು ಮಾಡಬಹುದಾದ ಸಾಲಗಳು ಯಾವವು?—** (೧) ಯಾವವುಗಳ ಬೆಲೆಯನ್ನು ಯೋಗ್ಯವಾಗಿ ಕಟ್ಟುವದು ಅಶಕ್ಯವದೆಯೆಂಬ ಕಾರಣದಿಂದ ಯಾದಿಯಲ್ಲಿ ನಮೂದ ಮಾಡಿಸಲ್ಪಟ್ಟಿ ಲ್ಲವೋ ಅಂಥ ಸಾಲಗಳು, ಕರಾರು ಇಲ್ಲವೆ ವಿಶ್ವಾಸಘಾತವಲ್ಲದಂಥ ಕಾರಣ ದಿಂದ ಉತ್ಪನ್ನವಾಗಿದ್ದು ತೀರಿಸಲ್ಪಡದಿದ್ದ ಲುಕ್ಸಾನಿಯ ಸ್ವರೂಪದ ಮಾಗಣಿ ಗಳು ಈ ಆಕ್ಟಿನನ್ವಯ ಸಾಬೀತು ಮಾಡಲ್ಪಡಲಾಗದಂಥವು ಆಗಿರುತ್ತವೆ.

(೨) ಮೇಲ್ಕಂಡ ೧ನೇ ಪೋಟಕಲಮಿನಲ್ಲಿ ಠರಾಯಿಸಿದ್ದನ್ನು ಹೊರ್ತು ಪಡಿಸಿ ಋಣಿಯನ್ನು ನಾದಾರನೆಂದು ಠರಾಯಿಸುವಾಗ್ಗೆ ಅವನ ಮೇಲಿರುವ ಅಥವಾ ಇಂಥ ನಾದಾರತನದ ಠರಾವಿನ ತಾರೀಖಿನ ಮುಂಚೆ ಅವನ ಮೇಲೆ ಬಂದ ಯಾವದಾದರೂ ಪಾತ್ರತೆಯ ಕಾರಣದಿಂದ ಅವನಿಗೆ ಬಿಟ್ಟುಕೊಡುವ ಮುಂಚೆ ಅವನ ಮೇಲೆ ಬರಬಹುದಾದ ಈಗ ಇರುವ ಅಥವಾ ಮುಂದೆ ಉಪಸ್ಥಿತವಾಗುವ ನಿಶ್ಚಿತವಾದ ಅಥವಾ ಅನುಷಂಗಿಕವಾದ ಎಲ್ಲ ಸಾಲಗಳು ಮತ್ತು ಜವಾಬದಾರಿ ಗಳು ಈ ಆಕ್ಟಿನನ್ವಯ ಸಾಬೀತು ಮಾಡಬಹುದಾದ ಸಾಲಗಳೆಂದು ತಿಳಿಯಬೇಕು. (ಕಲಮು ೩೪)

ಋಣಿಯು ನಾದಾರನಾಗಿದ್ದಾನೆಂಬ ಠರಾವು ಮಾಡುವದು ಯೋಗ್ಯವಿದ್ದಿಲ್ಲ ವೆಂದು ಕೋರ್ಟಿಗೆ ಕಂಡಲ್ಲಿ ಅಥವಾ ನಾದಾರನ ಸಾಲಗಳು ಪೂರ್ಣವಾಗಿ ತೀರಿ ಸಲ್ಪಟ್ಟವೆಂದು ಕೋರ್ಟಿನ ಖಾತ್ರಿಯಾಗುವಂತೆ ಸಾಬೀತು ಮಾಡಿದ್ದಲ್ಲಿ ಕೋರ್ಟು ಋಣಿಯು ಅಥವಾ ಹಿತಂಬಂಧವಿರುವ ಬೇರೆ ಮನುಷ್ಯನ ಅರ್ಜಿಯ ಮೇಲಿಂದ ಲೇಖಿ ಹುಕುಮು ಮಾಡಿ ಆ ಠರಾವು ರಪ್ಪುಮಾಡಬೇಕು. (ಕಲಮು ೩೫)

ಯಾವನೊಬ್ಬ ಋಣಿಯು ನಾದಾರನೆಂದು ಠರಾಯಿಸುವ ಹುಕುಮು ಮಾಡಿದಮೇಲೆ ತನ್ನ ಸಾಲಗಳನ್ನು ತೀರಿಸುವ ಬಗ್ಗೆ ರಾಜಿಯ ಯೋಜನೆಯನ್ನು ಅಥವಾ ತನ್ನ ಕೆಲಸಗಳ ವ್ಯವಸ್ಥೆಯ ಬಗ್ಗೆ ಯೋಜನೆಯನ್ನು ಸಾದರ ಮಾಡಿದ್ದಲ್ಲಿ ಕೋರ್ಟು ಅದರ ಆಲೋಚನೆಯ ಬಗ್ಗೆ ಒಂದು ಮುದ್ದತು ನೇಮಿಸಿ ಸಾವುಕಾರರಿಗೆ ನೋಟೀಸು ಕೊಡಬೇಕು. ಮುಂದೆ ಸದರೀ ಯೋಜನೆಯ ವಿಚಾರಮಾಡಿ ಕೋರ್ಟು ಸದರಿ ಯೋಜನೆಯನ್ನು ಮಂಜೂರು ಮಾಡಬಹುದು. ಅಥವಾ ಮಂಜೂರ ಮಾಡುವದಕ್ಕೆ ನಾಕಾರಿಸಬಹುದು. (ಕಲಮು ೩೮) ಋಣಿಯಾದ ಕ್ಷ ಇವನು ತನ್ನ ಸಾಲಗಳನ್ನು ತೀರಿಸುವ ಬಗ್ಗೆ ರಾಜಿಯ ಯೋಜನೆಯನ್ನು ಅಥವಾ ತನ್ನ ಕಲಸಗಳ ವ್ಯವಸ್ಥೆಯ ಬಗ್ಗೆ ಯೋಜನೆಯನ್ನು ಸಾದರ ಮಾಡಿದ್ದಲ್ಲಿ ಕೋರ್ಟು ಆ ಯೋಜನೆಯ ಆಲೋಚನೆಯ ಬಗ್ಗೆ ಒಂದು ತಾರೀಖು ನೇಮಿಸಿ ಸಾವುಕಾರರಾದ **ಅ, ಬ, ಕ, ಡ** ಮತ್ತು ಈ ಇವರಿಗೆ ಇದರ ನೋಟೀಸ ಕೊಡಬೇಕು. ಸದರಿ ಸಾವುಕಾರರ ಅಂಬೋಣವನ್ನು ಕೇಳಿಕೊಂಡು ಕೋರ್ಟ ಸದರಿ ಯೋಜನೆಯನ್ನು ಮಂಜೂರು ಮಾಡಬಹುದು ಅಥವಾ ಮಂಜೂರು ಮಾಡುವದಕ್ಕೆ ನಾಕಾರಿಸಬಹುದು.

ಸದರೀ ಯೋಜನೆಯನ್ನು ಮಂಜೂರ ಮಾಡಿದ್ದರೆ ಅದು ಕೋರ್ಟಿನ ಹುಕುಮಿನಲ್ಲಿ ಸಮಾವೇಶಗೊಳಿಸಬೇಕು, ಮತ್ತು ಕ್ಷ ಇವನು ನಾದಾರನೆಂದು ಮಾಡಿದ ಠರಾವು ರದ್ದು ಮಾಡಬೇಕು. ಈ ಯೋಜನೆಯಂತೆ ಕ್ಷ ಇವನು ನಡಿಯದಿದ್ದರೆ ಅವನನ್ನು ಪುನಃ ನಾದಾರನೆಂದು ಠರಾಯಿಸಬಹುದು ಮತ್ತು ಆ ಬಗ್ಗೆ ಹುಕುಮು ಮಾಡಬಹುದು.

ನಾದಾರನೆಂದು ಠರಾಯಿಸುವ ಹುಕುಮು ಮಾಡಲ್ಪಟ್ಟ ನಂತರ ಕೋರ್ಟು ನೇಮಿಸಿದ ವೇಳೆಯ ಒಳಗಾಗಿ ಯಾವದಾದರೂ ವೇಳೆಯಲ್ಲಿ ಋಣಿಯು ತನ್ನನ್ನು ಬಿಟ್ಟು ಕೊಡುವ ವಿಷಯದಲ್ಲಿ ಹುಕುಮು ಆಗಬೇಕೆಂದು ಕೋರ್ಟಿಗೆ ಅರ್ಜಿ ಮಾಡಬಹುದು. ಆ ಅರ್ಜಿಗೆ ಯಾವದಾದರೂ ಹರಕತನ್ನು ಯಾ ಯಾವದಾದರೂ ಹರಕತುಗಳನ್ನು ಮಾಡಲ್ಪಟ್ಟರೆ ಕೋರ್ಟು ಅವುಗಳನ್ನೆಲ್ಲಾ ವಿಚಾರಿಸಿ ಪ್ರಸಕ್ತಿಯಿದ್ದಂತೆ ಮತ್ತು ಯೋಗ್ಯಕಾಣುವಂತೆ ಕೆಳಗಿನಪೈಕಿ ಯಾವದಾದರೂ ಹುಕುಮು ಮಾಡಬಹುದು; ಆ ಹುಕುಮುಗಳು ಯಾವವೆಂದರೆ:—

(ಅ) ಬಿಟ್ಟುಕೊಡುವ ಕೊನೆಯ ಹುಕುಮು ಮಾಡಬಹುದು, ಅಥವಾ ಅಂಥ ಹುಕುಮು ಮಾಡುವದನ್ನು ನಾಕಾರಿಸಬಹುದು; ಅಥವಾ

(ಬ) ನಿರ್ದಿಷ್ಟ ಮಾಡಿದ ವೇಳೆಯುವರೆಗೆ ಆ ಹುಕುಮು ಅಮಲಿನಲ್ಲಿ ತರುವದನ್ನು ತಹಕೂಬು ಮಾಡಬಹುದು, ಅಥವಾ

(ಕ) ನಾದಾರನಿಗೆ ಮುಂದೆ ಸಿಗತಕ್ಕ ಯಾವದಾದರೂ ಸಂಪಾದನೆಯ ಅಥವಾ ಉತ್ಪನ್ನದ ಸಂಬಂಧದಿಂದ ಅಥವಾ ಅವನು ಮುಂದೆ ಸಂಪಾದಿಸಬಹುದಾದ ಸ್ವತ್ತಿನ ಸಂಬಂಧದಿಂದ ಯಾವದಾದರೂ ಶರ್ತುಗಳಿಗೊಳಪಡಿಸಿ ಬಿಟ್ಟುಕೊಡುವ ಹುಕುಮು ಮಾಡಬಹುದು. (ಕಲಮು ೪೭)

ಈ ಕೆಳಗೆ ಹೇಳಿದ ಸಂಗತಿಗಳ ಪೈಕಿ ಯಾವದಾದರೂ ಸಂಗತಿಗಳು ಸಾಬೀತು ಆದರೆ ಕೋರ್ಟು ಮೇಲೆ ಹೇಳಿದ ಪ್ರಕಾರ ಬಿಟ್ಟು ಬಿಡುವ ಕೊನೆಯ ಹುಕುಮು ಮಾಡಲಿಕ್ಕೆ ನಾಕಾರಿಸಬೇಕು; ಅವು ಯಾವವೆಂದರೆ—

(ಅ) ನಾದಾರನ ತಾರಣವಿಲ್ಲದ ಜವಾಬದಾರಿಗಳ ರಕಮಿನ ಮೇಲೆ ರೂಪಾಯಿಗೆ ಎಂಟು ಆಣೆಯಷ್ಟು ಕಿಮ್ಮತ್ತಿನ ನಾದಾರನ ಐವಜು ಇಲ್ಲ. ಆದರೆ ತನ್ನ ತಾರಣವಿಲ್ಲದ ಜವಾಬದಾರಿಗಳ ರಕಮಿನ ಮೇಲೆ ರೂಪಾಯಿಗೆ ಎಂಟು ಆಣೆಯಷ್ಟು ಕಿಮ್ಮತಿನ ತನ್ನ ಐವಜು ಇಲ್ಲದಂತೆ ಯಾವ ಸಂಗತಿಗಳ ಮೇಲಿಂದ ಸಂಭವಿಸಿದ್ದೀತೋ ಆ ಸಂಗತಿಗಳ ಬಗ್ಗೆ ತನಗೆ ನ್ಯಾಯವಾಗಿ ಜವಾಬದಾರನಾಗಿ ಹಿಡಿಯಲಿಕ್ಕೆ ಬರುವದಿಲ್ಲವೆಂದು ನಾದಾರನು ಕೋರ್ಟಿನ ಖಾತ್ರಿಮಾಡಿದರೆ ಸದರಿ ಠರಾವು ಅವನಿಗೆ ಲಾಗೂ ಆಗಲಿಕ್ಕಿಲ್ಲ;

(ಬ) ನಾದಾರನು ನಡೆಯಿಸಿದ ಉದ್ಯೋಗದ ಸಂಬಂಧದಿಂದ ವಹಿವಾಟಿನ ಪ್ರಕಾರ ಮತ್ತು ವಾಜವಿಯಾದ, ಮತ್ತು ಅವನ ನಾದಾರಿಯ ಲಗತು ಮುಂಚಿನ ಮೂರು ವರ್ಷಗಳೊಳಗಿನ ಅವನ ಉದ್ಯೋಗದ ಸಂಬಂಧದ ವ್ಯವಹಾರಗಳು ಮತ್ತು ಅವನ ಹಣದ ಸಂಬಂಧದ ಸ್ಥಿತಿಯು ಯಾವವುಗಳ ಮೇಲಿಂದ ಸಾಕಷ್ಟು ರೀತಿಯಿಂದ ಕಂಡು ಬಂದೀತೋ ಅಂಥ ಲೆಖ್ಖದ ವಹಿಗಳನ್ನು ಅವನು ಇಡಲಿಲ್ಲ.

(ಕ) ನಾದಾರನು, ತಾನು ನಾದಾರನಾಗಿದ್ದೇನೆಂದು ಅವನಿಗೆ ತಿಳಿದು ಬಂದನಂತರ ವ್ಯಾಪಾರವನ್ನು ಚಾಲೂ ಇಟ್ಟಿದ್ದಾನೆ.

(ಡ) ನಾದಾರನು ಈ ಆಕ್ಟಿನನ್ವಯ ಸಾಬೀತು ಆಗತಕ್ಕ ಯಾವದಾದರೂ ಸಾಲವನ್ನು ಅದನ್ನು ತನಗೆ ತೀರಿಸಲಿಕ್ಕೆ ಬಂದಿದೆಂದು ಅವನಿಗೆ ಕಾಣಲಿಕ್ಕೆ (ಈ ವಿಷಯದ ಪ್ರಮಾಣಭಾರವು ಅವನ ಮೇಲಿರುವದು) ಅದನ್ನು ಮಾಡುವಾಗ್ಗೆ ಯಾವದೇ ವಾಜವಿ ಅಥವಾ ಸಂಭವನೀಯ ಕಾರಣವಿರದೆ ಮಾಡಿದ್ದಾನೆ;

(ಇ) ಐವಜಿನ ಯಾವದಾದರೂ ಲುಕ್ಸಾನು ಆಗಿದ್ದರೆ, ಅದು ಹ್ಯಾಗಾಯಿತೆಂಬ ಬಗ್ಗೆ, ಅಥವಾ ಅವನ ಜವಾಬದಾರಿಗಳ ಭರಪಾಯಿಯಾಗುವವಕ್ಕೆ ಐವಜಿನಲ್ಲಿ ಕಡಿಮೆ ಬಂದಿದ್ದರೆ, ಹ್ಯಾಗೆ ಕಡಿಮೆ ಬಂತೆಂಬ ಬಗ್ಗೆ ನಾದಾರನು ನಂಬಿಕೆಗೆ ಯೋಗ್ಯವಾದ ರೀತಿಯಿಂದ ಉತ್ತರ ಕೊಡಲಿಲ್ಲ.

(ಫ) ನಾದಾರನು, ಅವಿಚಾರಿತನದ ಮತ್ತು ಜೋಖಿಮಿನ ಸಟ್ಟೆಗಳನ್ನು ಮಾಡಿ ಅಥವಾ ಗೈರ ವಾಜವಿ ದುಂದುಗಾರಿಕೆಯಿಂದಿದ್ದು, ಅಥವಾ ಜೂಜಾಡಿ, ಅಥವಾ ತನ್ನ ಉದ್ಯೋಗದ ಸಂಬಂಧದ ಕೆಲಸದಲ್ಲಿ ಸದೋಷ ಅಲಕ್ಷ್ಯಮಾಡಿ, ನಾದಾರಿಯನ್ನು ತಂದುಕೊಂಡಿದ್ದಾನೆ, ಅಥವಾ ಅವನು ನಾದಾರನಾಗಲಿಕ್ಕೆ ಆ ಸಂಗತಿಗಳು ಅಂಶತಃ ಕಾರಣವಾಗಿವೆ.

(ಗ) ನಾದಾರನು, ಅರ್ಜಿಯು ಹಾಜರು ಮಾಡಲ್ಪಟ್ಟ ತಾರೀಖಿನ ಲಗತು ಮುಂಚಿನ ಮೂರು ತಿಂಗಳ ಮುದ್ದತಿನಲ್ಲಿ ಅವನ ಸಾಲಗಳು ಸಲ್ಲತಕ್ಕವಾದ ಹಾಗೆ ಅವುಗಳನ್ನು ತೀರಿಸಲಿಕ್ಕೆ ಅವನು ಸಮರ್ಥನಾಗಿದ್ದು, ಅಯೋಗ್ಯ ರೀತಿಯಿಂದ ಅವನ ಬೇರೆ ಸಾವುಕಾರರಿಗೆ ಬಿಟ್ಟು ಯಾವನಾದರೂ ಸಾವುಕಾರನ ಸಾಲವನ್ನು ತೀರಿಸಿದ್ದಾನೆ.

(ಹ) ನಾದಾರನ ಮೇಲೆ ಮುಂಚೆ ಯಾವದಾದರೂ ವೇಳೆಯಲ್ಲಿ ಅವನು ನಾದಾರನಾಗಿದ್ದ ಬಗ್ಗೆ ಠರಾವು ಆಗಿದೆ, ಅಥವಾ ಅವನು ಆ ಕಾಲದಲ್ಲಿ ತನ್ನ ಸಾವುಕಾರರ ಕೂಡ ಯಾವದಾದರೂ ರಾಜಿಯನ್ನು ಅಥವಾ ವ್ಯವಸ್ಥೆಯನ್ನು ಮಾಡಿದ್ದಾನೆ.

(ಆಯ್) ನಾದಾರನು ತನ್ನ ಆಸ್ತಿಯನ್ನು ಅಥವಾ ಅದರ ಯಾವದಾದರೂ ಭಾಗವನ್ನು ಅಡಗಿಸಿದ್ದಾನೆ ಅಥವಾ ಒಯ್ದಿದ್ದಾನೆ ಅಥವಾ ಬೇರೆ ಯಾವದಾದರೂ ಕಪಟದ ಅಥವಾ ಕಪಟದಿಂದ ವಿಶ್ವಾಸಘಾತ ಮಾಡಿದ್ದರ ಅಪರಾಧ ಮಾಡಿದ್ದಾನೆ. (ಕಲಮು ೪೨) ತನ್ನ ಬಿಡುಗಡೆಯ ದಶೆಯಿಂದ ಮಾಡಿದ ಅರ್ಜಿಯ ವಿಚಾರಣೆ ಮಾಡಲಿಕ್ಕೆ ನೇಮಿಸಿದ ದಿವಸ ಇಲ್ಲವೆ ಕೋರ್ಟು ಹುಕುಮು ಮಾಡಿದ ಅನಂತ

ರದ ಯಾವದಾದರೂ ದಿವಸ ಋಣಿಯು ಹಾಜರಾಗಲಿಕ್ಕೆ ತಪ್ಪಿದ್ದರೆ ಅಥವಾ ಕೋರ್ಟು ನೇಮಿಸಿದ ವೇಳೆಯ ಒಳಗಾಗಿ ಋಣಿಯು ಬಿಡುಗಡೆಯ ಹುಕು ಮಿನ ಸಲುವಾಗಿ ಅರ್ಜಿ ಮಾಡದಿದ್ದರೆ, ನಾದಾರಿನ ಠರಾವಿನ ಹುಕುಮು ರದ್ದು ಮಾಡಬೇಕು ಮತ್ತು ಅದನ್ನು ಹಾಗೆ ಜಾಹೀರು ಮಾಡಬೇಕು. (ಕಲಮು ೪೩) ಈ ಪ್ರಕಾರ ನಾದಾರಿಯ ಠರಾವು ಯಾ ಠರಾವಿನ ಹುಕುಮು ರದ್ದು ಮಾಡಿದ್ದಲ್ಲಿ ನಾದಾರನಿಗೆ ಆ ಕೋರ್ಟಿನ ಪರವಾನಗಿ ಹೊರ್ತು ಪುನಃ ನಾದಾರಿತನದ ಅರ್ಜಿ ಮಾಡಲಿಕ್ಕೆ ಹಕ್ಕು ಇರಲಿಕ್ಕಿಲ್ಲ. ಮತ್ತು ಕೋರ್ಟಿನ ಪರವಾನಗಿ ಸಹಾ ಸಹಜ ವಾಗಿ ದೊರೆಯುವಂತೆ ಇಲ್ಲ. ( ಮೇಲಿನ ಕಲಮು ೧೦ ನೋಡು. )

(೧) ಬಿಟ್ಟುಕೊಡುವ ವಿಷಯದ ಹುಕುಮಿನ ಮೇಲಿಂದ, ಕೆಳಗೆ ಹೇಳಿದ ಸಾಲಗಳೊಳಗಿಂದ ಅಥವಾ ಜವಾಬದಾರಿಗಳೊಳಗಿಂದ ನಾದಾರನು ಅವು ಮುಕ್ತನಾಗಲಿಕ್ಕಿಲ್ಲ. ಅವು ಯಾವವೆಂದರೆ—

(ಅ) ಸರಕಾರಕ್ಕೆ ಸಲ್ಲತಕ್ಕ ಯಾವದಾದರೂ ಸಾಲದೊಳಗಿಂದ

(ಬ) ಯಾತರೊಳಗೆ ಅವನು ಸಾಮೀಲು ಇದ್ದನೋ ಅಂಥ ಯಾವ ದಾದರು ಕಪಟವನ್ನು ಅಥವಾ ಕಪಟದಿಂದ ವಿಶ್ವಾಸಘಾತವನ್ನು ಮಾಡಿ ಮಾಡಿದ ಯಾವದಾದರೂ ಸಾಲದೊಳಗಿಂದ ಅಥವಾ ತನ್ನ ಮೇಲೆ ತೆಗೆದುಕೊಂಡ ಯಾವ ದಾದರೂ ಜವಾಬದಾರಿಯೊಳಗಿಂದ

(ಕ) ಯಾತರೊಳಗೆ ಅವನು ಸಾಮೀಲು ಇದ್ದನೋ ಅಂಥ ಯಾವದಾ ದರೂ ಕಪಟವನ್ನು ಮಾಡಿ ಯಾವ ಸಾಲದ ಅಥವಾ ಜವಾಬದಾರಿಯ ಸಂಬಂಧ ದಿಂದ ಅವನು ಮಾಫಿಯನ್ನು ಪಡಕೊಂಡಿದ್ದಾನೋ ಅಂಥ ಯಾವದಾದರೂ ಸಾಲ ದೊಳಗಿಂದ ಅಥವಾ ಜವಾಬದಾರಿಯೊಳಗಿಂದ ಅಥವಾ

(ಡ) ಸನ್ ೧೮೯೮ನೇ ಇಸ್ವಿಯ ಫೌಜದಾರಿ ಕೆಲಸ ನಡಿಸುವ ರೀತಿಯ ವಿಷಯದ ಕಾಯಿದೆಯ ೪೮೮ನೇ ಕಲಮಿನ ಪ್ರಕಾರ ಕೊಟ್ಟ ಪೋಷಣೆಯ ವಿಷ ಯದ ಹುಕುಮಿನನ್ವಯ ಬಂದ ಯಾವದಾದರೂ ಜವಾಬದಾರಿಯೊಳಗಿಂದ

(೨) ಮೇಲ್ಕಂಡ ಪೋಟ ಕಲಮು (೧) ರಲ್ಲಿ ಇತರ ರೀತಿಯಿಂದ ಠರಾಯಿ ಸಿರುವದನ್ನು ಹೊರ್ತುಪಡಿಸಿ, ಬಿಟ್ಟುಕೊಡುವ ಹುಕುಮಿನ ಮೇಲಿಂದ ಈ ಆಕ್ಟಿನ ನ್ವಯ ಸಾಬೀತು ಮಾಡಲಿಕ್ಕೆ ಬರುವ ಎಲ್ಲಾ ಸಾಲಗಳೊಳಗಿಂದ ನಾದಾರನ ಮುಕ್ತತೆಯಾದೀತೆಂದು ತಿಳಿಯಬೇಕು. ( ಕಲಮು ೪೪ )

# ನಂಬರ ೧

## ನಾದಾರಿಯ ಸಂಬಂಧದ ಕೆಲವು ಅರ್ಜಿಗಳ ನಮೂನೆಗಳು

## ಋಣಿಯ ನಾದಾರಿತನದ ಅರ್ಜಿಯ ನಮೂನೆ

ಕಿ. ಅರ್ಜಿ. ನ. ೧೯೩೮

### ಗದಗ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನಲ್ಲಿ

ಅರ್ಜಿದಾರ:— ಬಸಪ್ಪಾ ಬೀಮಪ್ಪಾ ಮಟ್ಟಿ ವಯುಸು ೩೫ ಜಾತಿ ಲಿಂಗಾಯತ ಉದ್ಯೋಗ ವ್ಯಾಪಾರ ಸಾಕಿನ ಮುಳಗುಂದ ತಾಲೂಕ ಗದಗ; ಇವನು ಬರೆದು ಕೊಡುವ ಅರ್ಜಿಯೇನಂದರೆ—

(೧) ಅರ್ಜದಾರನು ತನ್ನ ಸಾಲಗಳನ್ನು ಕೊಡಲಿಕ್ಕೆ ಅಸಮರ್ಥನಾಗಿದ್ದಾನೆ.

(೨) ಅರ್ಜದಾರನು ಮುಳಗುಂದದಲ್ಲಿ ಈ ಕೋರ್ಟಿನ ಹುಕುಮತ್ತಿನ ಸ್ಥಳ ಸೀಮೆಯಲ್ಲಿ ವಾಡಿಕೆಯಾಗಿ ಇರುತ್ತಾನೆ.

[ಅಥವಾ (೨) ಅಥವಾ ಅರ್ಜಿದಾರದಿಗೆ ಕೈದು ಮಾಡಿ ಅವನ್ನು ಈ ಕೋರ್ಟಿನಲ್ಲಿ ಅಟಕಾಯಿಸಲ್ಪಟ್ಟಿರುತ್ತದೆ.]

(೩) ಈ ಕೋರ್ಟಿನ ಲಾ. ಅಸಲು ನಂ $\frac{೫೮}{೧೯೩೭}$ ನೇ ದಾವೆಯೊಳಗಿನ ಹುಕುಮನಾಮೆಯು ಅಮಲುಬಜಾವಣಿಯಲ್ಲಿಯಾವ ಈ ಕೋರ್ಟಿನ ಹುಕುಮಿನ ಮೇಲಿಂದ ಅರ್ಜದಾರನು ದಸ್ತಗೀರು ಮಾಡಲ್ಪಟ್ಟಿದ್ದನು.

(ಅಥವಾ ಈ ಕೋರ್ಟಿನ ಲಾ. ಅಸಲು ನಂಬರು $\frac{೫೮}{೧೯೩೭}$ ನೇ ದಾವೆಯೊಳಗಿನ ಹುಕುಮನಾಮೆಯು ಅಮಲು ಬಜಾವಣಿಯಲ್ಲಿ ಈ ಕೋರ್ಟಿನಿಂದ ಅರ್ಜಿದಾರನ ಮಾಲು ಜಪ್ತು ಮಾಡುವ ವಿಷಯದಲ್ಲಿ ಹುಕುಮು ಮಾಡಲ್ಪಟ್ಟಿರುತ್ತದೆ.)

(೪) ಅರ್ಜಿದಾರನ ವಿರುದ್ಧ ಇರುವ ಹಣದ ಸಂಬಂಧದ ಎಲ್ಲ ಬೇಡಿಕೆಗಳ ಮೊಬಲಗು ಮತ್ತು ತಪಶೀಲು, ಮತ್ತು ಅವನಿಗೆ ಗೊತ್ತಿರುವಷ್ಟರ ಮಟ್ಟಿಗೆ ಅಥವಾ ಯೋಗ್ಯ ಜಾಗ್ರತೆಯಿಂದ ಮತ್ತು ಮೆಹನತಿನಿಂದ ಅವನಿಗೆ ಗೊತ್ತಾಗುವ ಹಾಗೆ ಇರುವಷ್ಟರ ಮಟ್ಟಿಗೆ ಅವನ ಸಾವುಕಾರರ ಹೆಸರುಗಳು ಮತ್ತು ಅವರು ಇರುವ ಸ್ಥಳಗಳು ಈ ಅರ್ಜಿಗೆ ಜೋಡಿಸಿದ (ಅ) ಪರಿಶಿಷ್ಟಿನಲ್ಲಿ ವಿವರಿಸಿರುತ್ತದೆ.

(೫) ಅರ್ಜಿದಾರನ ಪೂರಾ ಸ್ವತ್ತು ಎಷ್ಟು ಎಂಬುದು ಮತ್ತು ಅದರ ತಪಶೀಲು ಮತ್ತು ಅದರ ಬೆಲೆಯ ತಪಶೀಲು ಮತ್ತು ಅವು ಯಾವ ಸ್ಥಳದಲ್ಲಿ ಯಾ ಸ್ಥಳಗಳಲ್ಲಿ ಸಿಗುವ ಹಾಗೆ ಇದೆ ಎಂಬುದನ್ನು ಸಹ ಈ ಅರ್ಜಿಗೆ ಜೋಡಿಸಿದ (ಬ) ಪರಿಶಿಷ್ಟನಲ್ಲಿ ವಿವರಿಸಿರುತ್ತದೆ.

(೬) ಹುಕುಮನಾಮೆಯ ಅಮಲುಬಜಾವಣಿಯಲ್ಲಿ ಜಪ್ತು ಮಾಡಲ್ಪಡಲಿಕ್ಕೆ ಮತ್ತು ಮಾರಲ್ಪಡುವದಕ್ಕೆ ಪಾತ್ರವಿಲ್ಲದಂಥ ಸ್ವತ್ತನ್ನು ಹೊರತುಪಡಿಸಿ, ತನ್ನ ಇಡೀ ಸ್ವತ್ತನ್ನು ಕೋರ್ಟಿನ ವ್ಯವಸ್ಥೆಯೊಳಗೆ ಕೊಡಲಿಕ್ಕೆ ಅರ್ಜಿದಾರನು ಕಬೂಲು ಇದ್ದಾನೆ.

(೭) ಅರ್ಜಿದಾರನು ತಾನು ನಾದಾರನೆಂದು ಠರಾಯಿಸಲ್ಪಡಬೇಕೆಂದು ಇದಕ್ಕಿಂತ ಮೊದಲು ಎಂದಾದರೂ ಅರ್ಜಿಯನ್ನು ಮಾಡಲಿಲ್ಲ.

[ ಅಥವಾ (೭) ಅರ್ಜದಾರನು ತಾನು ನಾದಾರನೆಂದು ಠರಾಯಿಸಲ್ಪಡಬೇಕೆಂದು ತಾರೀಖು ೧೫–೭–೧೯೩೬ನೇ ಇಸ್ವಿ ದಿವಸ ಹಾವೇರಿ ೨ನೇ ವರ್ಗ ಸಬಜಜ್ಜಕೋರ್ಟನಲ್ಲಿ ಅರ್ಜಿಯನ್ನು ಮಾಡಿದನು, ಆದರೆ ಆ ಕೋರ್ಟಿನವರು ಅರ್ಜದಾರನ ಸಾಲಗಳು ಪೂರ್ಣವಾಗಿ ತೀರಿಸಲ್ಪಟ್ಟವೆಂದು ಖಾತ್ರಿಮಾಡಿಕೊಂಡು ಅವರಲ್ಲಿಯ ನಾದಾರಿಯ ಠರಾವು ರದ್ದು ಮಾಡಿದರು. ]

(೮) ಅರ್ಜಿದಾರನು ಬೇಡುವದೇನೆಂದರೆ :—

ಅರ್ಜದಾರನಿಗೆ ನಾದಾರನೆಂದು ಠರಾಯಿಸಬೇಕು.

ತಾರೀಖು ೬–೬–೧೯೩೮.

ಸಹಿ. ಬಸಪ್ಪಾ ಭೀಮಪ್ಪಾ ಮಟ್ಟಿ

ಖುಣೆಯ ಸಹಿ.

ನಾನು, ಬಸಪ್ಪಾ ಭೀಮಪ್ಪಾ ಮಟ್ಟಿ ಇಕರಾರು ಮಾಡುವದೇನೆಂದರೆ–ಇದರಲ್ಲಿ ಮೇಲೆ ಬರೆದ ೧ರಿಂದ ೭ನೇ ಪ್ಯಾರಾಗ್ರಾಫುಗಳೊಳಗಿನ ಮಜಕೂರು ನನ್ನ ಒಳ್ಳೇ ತಿಳಿವಳಿಕೆಯಂತೆ ಮತ್ತು ನಂಬಿಕೆಯಂತೆ ನಿಜವಾಗಿದೆ. ಇವಕ್ಕೆ ನಾನು ನನ್ನ ವಕೀಲರಾದ ರಾ॥ ಗೋವಿಂದರಾವ ದೇಶಪಾಂಡೆ ಇವರ ಆಫೀಸಿನಲ್ಲಿ ತಾ॥ ೬–೬–೧೯೩೮ನೇ ಇಸ್ವಿ ದಿವಸ ನನ್ನ ಸಹಿ ಮಾಡಿರುತ್ತೇನೆ.

ಸಹಿ. ಬಸಪ್ಪಾ ಭೀಮಪ್ಪಾ ಮಟ್ಟಿ

ಖುಣೆಯ ಸಹಿ

(**ಸೂಚನೆ** :—ನಾದಾರತನದ ಪ್ರತಿಯೊಂದು ಅರ್ಜಿಯನ್ನು ಬರಹಮೂಲಕವಾಗಿ ಮಾಡಬೇಕು. ಅರ್ಜಿದಾರನು ಆ ಅರ್ಜಿಯ ಮೇಲೆ ಸಹಿ ಮಾಡಿ ಸತ್ಯತ್ವದ ಬಗ್ಗೆ ಇಕರಾರು ಬರೆಯಬೇಕು. )

# ಅ. ಪರಿಶಿಷ್ಟ

## ಸಾವುಕಾರರು

| ನಂಬರು. | ಸಾವುಕಾರರ ಹೆಸರುಗಳು ಮತ್ತು ಅವರು ಇರುವ ಸ್ಥಳಗಳು | ಬಧ್ಯತೆಯ ಯಾ ಬಾಧ್ಯತೆಯ ಯಾ (ಇದ್ದರೆ) ಸಿಕ್ಯೂರಿಟಿಯ ಪ್ರಕಾರವು ಮತ್ತು ಮೊಬದಲು; ಮತ್ತು ಬಧ್ಯತೆಯ ಸಂಬಂಧದಿಂದ ವಾದವಿದ್ದಲ್ಲಿ ಅದರ ಕಾರಣವು | ಎಂದು ಮಾಡಲ್ಪಟ್ಟಿತು | ಬಾಧ್ಯತೆಯ ಮೊಬಲಗು | ಸಲ್ಲಿಸೋಣಗಳು | ಅರ್ಜಿಯು ಸಾದರ ಮಾಡಿದ ದಿವಸ ಅಥವಾ ಪರಿಶಿಷ್ಟ ಸಾದರ ಮಾಡಿದ ದಿವಸ ಸಲ್ಲತಕ್ಕದ್ದಾಗುವ ಬಡ್ಡಿಯು ಮತ್ತು ದರಾ | ಸಲ್ಲತಕ್ಕದ್ದಾಗುವ ಬಾಕಿ | ಕಬೂಲು ಮಾಡಿದೆ ಯಾ ತಕರಾರು ಮಾಡಿದೆ |
|---|---|---|---|---|---|---|---|---|
| | | | | | | | | |
| | | | | | | | | |
| | | | | | | | | |

## ಬ. ಪರಿಶಿಷ್ಟ

### ಸಾಲಗಾರರು

| ನಂಬರು | ಸಾಲಗಾರರ ಹೆಸರು ಮತ್ತು ಇರುವ ಸ್ಥಳ | ಬದ್ಧತೆಯ ಮತ್ತು(ಇದ್ದರೆ) ಸಿಕ್ಯೂರಿಟಿಗಳ ಪ್ರಕಾರ ಮತ್ತು ಮೊಬದಲು | ಎಂದು ಮಾಡಲ್ಪಟ್ಟಿತ್ತು | ಮೊಬಲಗು | ಚಲೊ, ಕೆಟ್ಟ ಅಥವಾ ಸಂಶಯುಕ್ತ ವಾದದ್ದು | ಸಾಕ್ಷಿದಾರರು ಮತ್ತು ಅವರು ಇರುವ ಸ್ಥಳಗಳೆನ್ನು ಮತ್ತು ಬದ್ಧತೆಯು ಸಾಬೀತು ಮಾಡತಕ್ಕ ಬೇರೆ ಪುರಾವೆಯು |
|---|---|---|---|---|---|---|
| ೧ | | | | | | |
| ೨ | | | | | | |
| ೩ | | | | | | |

## ನಂಬರು ೨

## ಸಾವುಕಾರನ ನಾದಾರಿತನದ ಅರ್ಜಿಯ ನಮೂನೆ

### ಸರನಾಮೆ

(೧) ಬಸಪ್ಪಾ ಬೀಮಪ್ಪಾ ಮುಟ್ಟೆ ವಯಾ ೩೫ ಜಾತಿ ಲಿಂಗಾಯತ, ಉದ್ಯೋಗ ವ್ಯಾಪಾರ ಎಂಬುವನು ಮುಳಗುಂದದಲ್ಲಿ ಈ ಕೋರ್ಟಿನ ಹುಕುಮತ್ತಿನ ಸ್ಥಳ ಸೀಮೆಯಲ್ಲಿ ವಾಡಿಕೆಯಾಗಿ ಇರುತ್ತಾನೆ.

(೨) ಸದರೀ ಬಸಪ್ಪನು ತಾರೀಖು ೧೪-೫-೧೯೨೭ನೇ ಇಸ್ವಿದಿವಸ ಅರ್ಜಿದಾರನಿಗೆ ಬರೆದುಕೊಟ್ಟ ದಸ್ತೈವಜಿನ ಸಂಬಂಧದಿಂದ ಸದರಿ ಅವನ ಕಡಿಂದ ಅರ್ಜದಾರನಿಗೆ ೫೦೦ ರೂಪಾಯಿ ಸಲ್ಲತಕ್ಕದ್ದಾಗುತ್ತದೆ.

(೩) ಸದರಿ ಅವನ ಮುಳಗುಂದ ಗ್ರಾಮದಲ್ಲಿರುವ ಮನೆಯು ಈ ಕೋರ್ಟಿನ ಲಾ. ಅಸಲ ನಂ. ೫೨೪/೧೯೨೮ನೇ ದಾವೆಯೊಳಗಿನ ಹಣಾ ಕೊಡುವ ಹುಕುಮನಾಮೆಯ ಅಮಲು ಬಜಾವಣೆಯಲ್ಲಿ ತಾರೀಖು ೧೦-೪-೧೯೨೮ನೇ ಇಸ್ವಿದಿವಸ ಮಾರಲ್ಪಟ್ಟಿತು.

(೪) ಅರ್ಜದಾರನು ಬೇಡುವದೇನಂದರೆ—

ಸದರಿ ಬಸಪ್ಪಾ ಬೀಮಪ್ಪಾ ಮುಟ್ಟೆ ಇವನಿಗೆ ನಾದಾರನೆಂಬು ಠರಾಯಿಸಬೇಕು.

ತಾರೀಖು ೬-೬-೧೯೨೮ ಸಹಿ

ಸಾವುಕಾರನ ಸಹಿ

( **ಸೂಚನೆ**— ಇಕರಾರು ಬರೆಯು ಬೇಕು. )

## ನಂಬರು ೩

## ದಾವೆಯನ್ನು ಅಥವಾ ಬೇರೆ ಕಾಯಿದೆಯ ವ್ಯವಹಾರವನ್ನು ಪ್ರಾರಂಭಿಸಿದ್ದಕ್ಕೆ ಅಡ್ಡಿಯು ಯಾ ಹರಕತು ಮಾಡುವ ವಿಷಯದಲ್ಲಿ (ಕಲಮು ೨೮)

ಲಾ. ಅಸಲ ನಂ.——

ಚಿಕ್ಕೋಡಿ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನಲ್ಲಿ

೧. ಕಾಶೀನಾಥ ಗೋವಿಂದ ಕುಲಕರ್ಣಿ...............ವಾದಿ

## ವಿರುದ್ಧ

೧. ಕಲ್ಲಪ್ಪಾ ಭರಮಪ್ಪಾ ಹೂಂಬಿ..................ಪ್ರತಿವಾದಿ

ಇದರಲ್ಲಿ ಪ್ರತಿವಾದಿಯ ಅರ್ಜಿ ಏನಂದರೆ—

(೧) ಪ್ರತಿವಾದಿಯು ತಾನು ನಾದಾರನೆಂದು ಠರಾಯಿಸುವ ಬಗ್ಗೆ ಬೈಲಹೊಂಗಲ ಕೋರ್ಟಿನಲ್ಲಿ ತಾರೀಖು ೧೦-೯-೧೯೩೭ನೇ ಇಸ್ವಿ ದಿವಸ ಕಿ. ಅರ್ಜಿ ನಂ. ೧೯೩೭/೩೮ನೇ ಅರ್ಜಿಯನ್ನು ಮಾಡಿದನು, ಮತ್ತು ಅವನು ಆ ಕೋರ್ಟಿನಿಂದ ತಾರೀಖು ೧೨-೧೧-೧೯೩೭ನೇ ಇಸ್ವಿಯ ದಿವಸ ನಾದಾರನೆಂದು ಠರಾಯಿಸಲ್ಪಟ್ಟಿದನು.

(೨) ಸದರಿ ಅರ್ಜಿಯಲ್ಲಿ ವಾದಿಯ ಹೆಸರು ಸಾವುಕಾರರ ಹೆಸರಗಳ ಯಾದಿಯಲ್ಲಿ ತೋರಿಸಿರುತ್ತದೆ ಮತ್ತು ದಾವೆಯ ಸಾಲವನ್ನು ಆ ಅರ್ಜಿಯಲ್ಲಿ ನಮೂದ ಮಾಡಿರುತ್ತದೆ.

(೩) ಕೋರ್ಟಿನ ಪರವಾನಗಿಯ ಹೊರ್ತು ವಾದಿಯು ಅರ್ಜದಾರನ ವಿರುದ್ಧವಾಗಿ ತಾರೀಖು ೫-೧-೧೯೩೮ನೇ ಇಸ್ವಿದಿವಸ ಈ ದಾವೆಯನ್ನು ಪ್ರಾರಂಭಿಸಿದನು.

(೪) ಅರ್ಜಿದಾರನ ವಿನಂತಿ ಏನಂದರೆ—

ವಾದಿಗೆ ಈ ದಾವೆಯನ್ನು ನಡೆಯಿಸಲಿಕ್ಕೆ ಅಡ್ಡಿಯಾಗುತ್ತದೆಂದು ಹುಕುಮು ಮಾಡಬೇಕು.

**ಸೂಚನೆ:**— ನಾದಾರಿಯ ಠರಾವಿನ ಹುಕುಮನ್ನು ಕೊಟ್ಟಬಳಿಕ ಆ ಹುಕುಮಿನಿಂದ ನಾದಾರನೆಂದು ಠರಾಯಿಸಿದ ಮನುಷ್ಯನ ವಿರುದ್ಧವಾಗಿ ಯಾವದಾದರೂ ಹುಕುಮನಾಮೆಯ ಅಮಲು ಬಜಾವಣಿಯನ್ನು ಅಥವಾ ದಾವೆಯನ್ನು ಪ್ರಾರಂಭಿಸಲ್ಪಟ್ಟಲ್ಲಿ ಅವಕ್ಕೆ ಮೇಲಿನಂತೆ ಹರಕತು ಮಾಡಬಹುದು.

## ನಂಬರು ೪

## ನಡೆದ ಕಜ್ಜೆಯನ್ನು ತಹಕೂಬ ಇಡುವ ವಿಷಯದಲ್ಲಿ

(ಕಲಮು ೩೯)

## ಸರನಾಮೆ

(೧) ಅರ್ಜಿದಾರನು ತಾನು ನಾದಾರನೆಂದು ಠರಾಯಿಸುವ ವಿಷಯದಲ್ಲಿ ವಿಜಾಪೂರ ೧ನೇ ವರ್ಗ ಸಬ್ಬಜಡ್ಜಕೋರ್ಟಿನಲ್ಲಿ ಕಿ. ಅರ್ಜಿ ನಂ. ೧೯೩೮ನೇ

ನಾದಾರಿತನದ ಅರ್ಜಿಯನ್ನು ಮಾಡಿದನು. ಆ ಕೋರ್ಟು ತಾರೀಖು ೬-೪ ೧೯೩೭ ನೇ ಇಸ್ವಿ ದಿವಸ ಅರ್ಜದಾರ ವಿರುದ್ಧ ನಾದಾರಿಯ ಠರಾವಿನ ಹುಕುಮು ಕೊಟ್ಟಿತು.

(೨) ಅರ್ಜಿದಾರನು ಬೇಡುವದೇನಂದರೆ—

ಮೇಲ್ಕಂಡ ನಾದಾರಿತನದ ಅರ್ಜಿಯ ನಿಕಾಲೆ ಆಗುವ ವರೆಗೆ ಈ ಕಜ್ಜೆಯನ್ನು ತಹಕೂಬ ಇಡಬೇಕು.

**ಸೂಚನೆ:**— ಈ ಅರ್ಜಿಯ ಸಂಗಡ ನಾದಾರಿಯ ಠರಾವಿನ ಹುಕುಮಿನ ನಕಲು ಹಾಜರು ಮಾಡಬೇಕು.

## ನಂಬರ ೫

### ಬಚಾವಿನ ಹುಕುಮಿನ ವಿಷಯದಲ್ಲಿ (ಕಲಮು ೩೧)

### ಸರನಾಮೆ

೧. ಅರ್ಜಿದಾರನು ಈ ಕೋರ್ಟಿನಿಂದ ತಾರೀಖು ೧೦-೮-೧೯೩೮ನೇ ಇಸ್ವಿ ದಿವಸ ನಾದಾರನೆಂದು ಠರಾಯಿಸಲ್ಪಟ್ಟಿರುತ್ತಾನೆ.

೨. ಹಣಮಂತ ಸೀತಾರಾಮ ಗುತ್ತಲ ಎಂಬುವನು ಹುಬ್ಬಳ್ಳಿ ೨ನೇ ವರ್ಗ ಸಬಜಜ್ಜ ಕೋರ್ಟಿನ ಲಾ. ಅಸಲು ನಂಬರು ೫೨೮/೧೯೩೭ ನೇ ದಾವೆಯೊಳಗೆ ಅರ್ಜಿದಾರನ ವಿರುದ್ಧವಾಗಿ ಒಂದು ಋಣ ಕೊಡುವ ಹುಕುಮನಾಮೆಯನ್ನು ಪಡೆದಿರುತ್ತಾನೆ.

೩. ಸದರೀ ಅವನು ಹುಬ್ಬಳ್ಳಿ ೨ನೇವರ್ಗ ಸಬಜಜ್ಜ ಕೋರ್ಟಿನಲ್ಲಿ ಸದರೀ ಹುಕುಮನಾಮೆಯ ಅಮಲು ಬಜಾವಣಿಗಾಗಿ ಅರ್ಜಿಯನ್ನು ಮಾಡಿ, ಅದರ ಅಮಲು ಅರ್ಜಿದಾರನ ಶರೀರದ ಮೇಲೆ ನಡಿಸಿ, ಅರ್ಜಿದಾರನಿಗೆ ಕೈದು ಮಾಡಿ ದಿವಾಣಿ ತುರಂಗದಲ್ಲಿ ಅತಂಕಿಸಿಡುವ ಬಗ್ಗೆ ತಾರೀಖು ೨೧-೧೧-೧೯೩೮ನೇ ಇಸ್ವಿ ದಿವಸ ಆ ಕೋರ್ಟಿನಿಂದ ಹುಕುಮು ಪಡೆದನು, ಮತ್ತು ಸದರೀ ಹುಕುಮಿನ ಪ್ರಕಾರ ವಾರಂಟು ತೆಗೆಯಲ್ಪಟ್ಟಿರುತ್ತದೆ.

೪. ಅರ್ಜಿದಾರನು ಬೇಡುವದೇನೆಂದರೆ :—

ಸದರಿ ಹುಕುಮನಾಮೆಯ ಅಮಲುಬಜಾವಣೆಯಲ್ಲಿ ಅರ್ಜಿದಾರನಿಗೆ ಕೈದು ಮಾಡದಿರುವ ವಿಷಯದಲ್ಲಿ ಅಥವಾ ಅಟಕಾವಿನಲ್ಲಿಡದಿರುವ ವಿಷಯದಲ್ಲಿ ಹುಕುಮು ಮಾಡಬೇಕು.

## ನಂಬರು ೬

### ಬಿಟ್ಟು ಬಿಡುವ ವಿಷಯದಲ್ಲಿ ( ಕಲಮು ೪೧ )

೧. ಅರ್ಜಿದಾರನು ಈ ಕೋರ್ಟಿ ತಾರೀಖು ೧೦-೮-೧೯೨೮ನೇ ಇಸ್ವಿ ದಿವಸ ಮಾಡಿದ ಹುಕುಮಿನಿಂದ ನಾದಾರನೆಂದು ಠರಾಯಿಸಲ್ಪಟ್ಟಿದ್ದನು

೨. ಸದರೀ ಹುಕುಮಿನಲ್ಲಿ ಅರ್ಜಿದಾರನು ತನ್ನ ಬಿಡುಗಡೆಯ ಬಗ್ಗೆ ಆರು ತಿಂಗಳೊಳಗಾಗಿ ಅರ್ಜಿಯನ್ನು ಮಾಡಬೇಕೆಂದು ಫರ್ಮಾಯಿಸಲ್ಪಟ್ಟಿತು.

೩. ಅರ್ಜಿದಾರನ ವಿರುದ್ಧ ಇರುವ ಹಣದ ಸಂಬಂಧದ (ಬ) ಪರಿಶಿಷ್ಟನಲ್ಲಿ ನಮೂದಿಸಿರುವ ಬೇಡುವಿಕೆಗಳನ್ನು ರಿಸೀವರನು ರೂಪಾಯಿಗೆ ೧೨ ಆಣೆಯಷ್ಟರ ಮಟ್ಟಿಗೆ ತೀರಿಸಿರುತ್ತಾನೆ.

೪. ಅರ್ಜಿದಾರನು ಬೇಡುವದೇನೆಂದರೆ:—

ಅರ್ಜಿದಾರನಿಗೆ ಬಿಟ್ಟು ಬಿಡುವ ಹುಕುಮು ಮಾಡಬೇಕು.

ತಾ॥ ೯-೨-೧೯೨೯ ಸಹಿ ... ... ...

ಅರ್ಜಿದಾರನ ಸಹಿ

## ನಂಬರು ೭

### ನಾದಾರಿಯ ಠರಾವು ರದ್ದು ಮಾಡುವ ವಿಷಯದಲ್ಲಿ (ಕಲಮು ೪೩)

ಸರನಾಮೆ

೧. ಇದರಲ್ಲಿ ಎದುರಗಾರನು, ಈ ಕೋರ್ಟಿ ತಾರೀಖು ೧೦-೮-೧೯೨೮ನೇ ಇಸ್ವಿದಿವಸ ಮಾಡಿದ ಹುಕುಮಿನಿಂದ ನಾದಾರನೆಂದು ಠರಾಯಿಸಲ್ಪಟ್ಟಿದ್ದನು.

೨. ಸದರಿ ಹುಕುಮಿನಲ್ಲಿ ಎದುರಗಾರನು ತನ್ನ ಬಿಡುಗಡೆಯ ಬಗ್ಗೆ ಆರು ತಿಂಗಳೊಳಗಾಗಿ ಅರ್ಜಿಯನ್ನು ಮಾಡಬೇಕೆಂದು ಫರ್ಮಾಯಿಸಲ್ಪಟ್ಟಿತು.

೩. ಸದರೀ ಮುದ್ದತು ಈಗ ಮೀರಿ ಹೋಗಿರುತ್ತದೆ ಮತ್ತು ಎದುರಗಾರನು ಇನ್ನೂ ವರೆಗೆ ಬಿಡುಗಡೆಯ ಬಗ್ಗೆ ಅರ್ಜಿಯನ್ನು ಮಾಡಿಲ್ಲ.

೪. ಅರ್ಜಿದಾರನು ಬೇಡುವದೇನೆಂದರೆ:—

ತಾರೀಖು ೧೦-೮-೧೯೨೮ನೇ ಇಸವಿ ದಿವಸದ ನಾದಾರಿಯ ಠರಾವಿನ ಹುಕುಮು ರದ್ದು ಮಾಡಬೇಕು.

# ನಂಬರು ೮

## ಸಾವುಕಾರನು ತನ್ನ ಸಾಲವನ್ನು ಸಾಬೀತು ಮಾಡುವದಕ್ಕಾಗಿ ಕೊಡತಕ್ಕ ಪ್ರತಿಜ್ಞಾಲೇಖದ ನಮೂನೆ (ಕಲಮು ೪೯)

## ಸರನಾಮೆ

(೧) ಸದರಿ ಅರ್ಜಿಯನ್ನು ಸಾದರ ಮಾಡಿದ ದಿವಸ ಎಂದರೆ ತಾರೀಖು ಮತ್ತು ಇನ್ನಾದರೂ

ಕೆಳಗೆ ವಿವರಿಸಿದ ಲೆಕ್ಕದಂತೆ ( ಅಥವಾ, ಇದಕ್ಕೆ ಜೋಡಿಸಿದ ಲೆಕ್ಕದ ತಕ್ತೆಯಲ್ಲಿ ತೋರಿಸಿದಂತೆ ) ರೂಪಾಯಿಗಳ ಮೊಬಲಗು ನ್ಯಾಯವಾಗಿ ಮತ್ತು ನಿಜವಾಗಿ ನನಗೆ ಕೊಡತಕ್ಕದ್ದಾಗುತ್ತದೆ.

ಅದರ ತಪಶೀಲು ಏನಂದರೆ:—

... ... ... ...

... ... ... ...

(೨) ಸದರಿ ಮೊಬಲಗು ಅಥವಾ ಅದರ ಯಾವದಾದರೂ ಭಾಗವನ್ನು ನನಗೆ ಅಥವಾ ನನ್ನ ತಿಳಿವಳಿಕೆಯಂತೆ ಮತ್ತು ನಂಬಿಕೆಯಂತೆ ನನ್ನ ( ಅಥವಾ ನಮ್ಮ ) ಹೇಳಿಕೆಯ ಮೇಲಿಂದ ನನ್ನ (ಅಥವಾ ನಮ್ಮ) ಉಪಯೋಗಕ್ಕಾಗಿ ಯಾವದಾದರೂ ಬಗೆಯ ಭರಪಾಯಿಯನ್ನು ಅಥವಾ ( ಕೆಳಗೆ ವಿವರಿಸಿದ್ದನ್ನು ಹೊರ್ತುಪಡಿಸಿ ) ತಾರಣವನ್ನು ದೊರಿಯಲಿಲ್ಲ ಅಥವಾ ಪಡೆಯಲಿಲ್ಲ.

( ಇದ್ದರೆ ತಾರಣವನ್ನು ವಿವರಿಸಬೇಕು )

ಸಹಿ ..............

**ಸೂಚನೆ:**—ನಾದಾರಿತನದ ಪ್ರಕರಣದಲ್ಲಿ ಸಾವುಕಾರನು ತನ್ನ ಸಾಲವನ್ನು ಯಾವರೀತಿಯಿಂದ ಸಾಬೀತು ಮಾಡಬಹುದು ? ಸಾಲವನ್ನು, ಒಂದು ಅಫಿಡೆವಿಟನಲ್ಲಿ ಆ ಸಾಲದ ಬಗ್ಗೆ ಪ್ರತಿಜ್ಞಾಲೇಖವನ್ನು ಬರೆದು ಆ ಅಫಿಡೆವಿಟನ್ನು ಕೋರ್ಟಿಗೆ ಕೊಟ್ಟು ಅಥವಾ ರಜಿಸ್ಟರ್ಡ ಪತ್ರದ್ವಾರಾ ಟಪಾಲಿನಿಂದ ಕಳುಹಿಸಿ ಸಾಬೀತು ಮಾಡಬಹುದು.

ಸದರಿ ಅಫಿಡೆವಿಟನಲ್ಲಿ ಆ ಸಾಲದ ತಪಶೀಲನ್ನು ತೋರಿಸುವ ಲೆಕ್ಕಗಳ ತಕ್ತೆಯು ಅಥವಾ ಅದರ ಉಲ್ಲೇಖವು ಇರತಕ್ಕದ್ದು, ಮತ್ತು ಸಾಲವನ್ನು ಯಾವ ವೌಚರಗಳ ಮೂಲಕವಾಗಿ ಸಾಬೀತು ಮಾಡಬಹುದೋ ಆ ವೌಚರಗಳನ್ನು (ಯಾವವಾದರೂ ಇದ್ದರೆ) ಆ ಅಫಿಡೆವಿಟನಲ್ಲಿ ನಿರ್ದಿಷ್ಟಮಾಡತಕ್ಕದ್ದು. ಕೋರ್ಟು ಯಾವ ಕಾಲದಲ್ಲಿಯಾದರೂ ಸದರೀ ವೌಚರಗಳನ್ನು ಹಾಜರ ಮಾಡುವದಕ್ಕೆ ಫರ್ಮಾಯಿಸಬಹುದು.

———

# ೮ನೆಯ ಪ್ರಕರಣ

## ಉತ್ತರಾಧಿಕಾರದ ಸರ್ಟಿಫಿಕೇಟಿನ ವಿಷಯದಲ್ಲಿ

### ಉತ್ತರಾಧಿಕಾರದ ಸರ್ಟಿಫಿಕೇಟಿನ ಬಗ್ಗೆ ಅರ್ಜಿಯು

### (Succession Certificate)

ಕಿ. ಅ. ನ. $\frac{೧೨೩}{೧೯೨೭}$

ಹುಬ್ಬಳ್ಳಿ ೨ನೇ ವರ್ಗ ಸಬ್ಬಜಜ್ಜ ಕೋರ್ಟಿನಲ್ಲಿ—

ಅರ್ಜಿದಾರ—ಹಜರತಸಾಹೇಬ ವಲ್ಲದ ಮದಾರಸಾಹೇಬ ಕುಸೂಗಲ್ಲ ವಯಸು ೩೫ ಜಾತಿ ಮುಸಲಮಾನ ಉದ್ಯೋಗ ರೇಲವೆನೌಕರಿ ಸಾಕೀನ ಹುಬ್ಬಳ್ಳಿ; ಇವನು ಮಾಡುವ ಅರ್ಜಿ ಏನಂದರೆ—

(೧) ಮದಾರಸಾಹೇಬ ವಲ್ಲದ ಹಸನಸಾಹೇಬ ಕುಸೂಗಲ್ಲ ಎಂಬುವವನು ತಾರೀಖು ೧೫-೧೦-೧೯೨೭ನೇ ಇಸ್ವಿ ದಿವಸ ತೀರಿಕೊಂಡನು.

(೨) ಮರಣದ ಕಾಲದಲ್ಲಿ ಸದರಿ ಮಯತ ಮದಾರ ಸಾಹೇಬನು ಭಂಡಿವಾಡ ಗ್ರಾಮದಲ್ಲಿ ಈ ಕೋರ್ಟಿನ ಹುಕುಮತ್ತಿನ ಸ್ಥಳ ಸೀಮೆಯಲ್ಲಿ ವಾಡಿಕೆಯಾಗಿ ಇದ್ದನು.

[ಅಥವಾ (೨) ಮರಣದ ಕಾಲದಲ್ಲಿ ಸದರೀ ಮಯತ ಮದಾರಸಾಹೇಬ ಇವನು ಯಾವದೇ ನಿಶ್ಚಿತವಾದ ಸ್ಥಳದಲ್ಲಿ ಕಾಯಮವಾಗಿ ಇರುತ್ತಿದ್ದಿಲ್ಲ; ಆದರೆ ಸದರಿ ಅವನ ೨ ಹೊಲಗಳು ಭಂಡಿವಾಡ ಗ್ರಾಮದಲ್ಲಿ, ೧ ಅಂಗಡಿಯು ಮತ್ತು ೧ ಮನೆಯು ಹುಬ್ಬಳ್ಳಿಯಲ್ಲಿ ಈ ಕೋರ್ಟಿನ ಸ್ಥಳಸೀಮೆಯಲ್ಲಿ ಇದ್ದವು.]

(೩) ಕೆಳಗೆ ಬರೆದ ಜನರು ಸದರಿ ಮಯತನ ಕುಟುಂಬದವರು ಮತ್ತು ಅವನ ಸಮೀಪದ ಸಂಬಂಧಿಕರಾಗಿರುತ್ತಾರೆ—

| ನಂಬರು | ಕುಟುಂಬದವರ ಮತ್ತು ಸಂಬಂಧಿಕರ ಹೆಸರುಗಳು | | | ಅವರು ಇರುವ ಸ್ಥಳ |
|---|---|---|---|---|
| ೧ | ... | ... | ... | ... |
| ೨ | ... | ... | ... | ... |
| ೩ | ... | ... | ... | ... |
| ೪ | ... | ... | ... | ... |

(೪) ಅರ್ಜಿದಾರನು ಸದರೀ ಮಯುತನ ಮಗನಾಗಿರುತ್ತಾನೆ; ಮತ್ತು ಅವನು ಸದರಿ ಮಯುತನ ವಾರಸದಾರನಾಗಿರುತ್ತಾನೆ.

(೫) ಸರ್ಟಿಫಿಕೇಟು ಕೊಡುವದಕ್ಕೆ ೩೭೦ನೇ ಕಲಮಿನನ್ವಯ ಅಥವಾ ಈ ಆಕ್ಟಿನ ಬೇರೆ ಯಾವದಾದರೂ ಠರಾವಿನನ್ವಯ ಅಥವಾ ಬೇರೆ ಯಾವದಾದರೂ ಕಾಯದೆಯನ್ವಯು ಏನೂ ಹರಕತು ಇರುವದಿಲ್ಲ.

(೬) ಕೆಳಗೆ ವಿವರಿಸಿದ ಸಾಲಗಳ ಮತ್ತು ಸಿಕ್ಯುರಿಟಿಗಳ ಸಂಬಂಧದಿಂದ ಸರ್ಟಿಫಿಕೇಟಿನ ಬಗ್ಗೆ ಈ ಅರ್ಜಿಯು ಮಾಡಿರುತ್ತದೆ. ಅವುಗಳ ವಿವರ—

ಸಾಲಗಳನ್ನು

| ನಂಬರು | ಋಣಿಯ ಹೆಸರು | ಅರ್ಜಿಯ ತಾರೀಖಿನ ದಿವಸ ಸಲ್ಲತಕ್ಕದ್ದಾಗುವ ಮೊಬಲಗು | ಋಣದ ಆಧಾರವಾದ ದಸ್ತೈವಜಿ ತಾರೀಖು ಮತ್ತು ವರ್ಣನೆ |
|---|---|---|---|
| ೧ | | | |
| ೨ | | | |
| ೩ | | | |

## ಸಿಕ್ಯುರಿಟಿಗಳನ್ನು

| ನಂಬರು | ಋಣಿಯ ಹೆಸರು | ಅರ್ಜಿಯ ತಾರೀಖಿನ ದಿವಸ ಸಲ್ಲತಕ್ಕದ್ದಾಗುವ ವೊಬಲಗು | ಋಣದ ಆಧಾರವಾದ ದಸ್ತೈವಜಿನ ತಾರೀಖು ಮತ್ತು ವರ್ಣನೆ |
|---|---|---|---|
| ೧ | | | |
| ೨ | | | |
| ೩ | | | |

ಅರ್ಜಿದಾರನು ಬೇಡುವದೇನಂದರೆ:—

ಮೇಲೆ ೬ನೇ ಪ್ಯಾರಾಗ್ರಾಫಿನಲ್ಲಿ ನಮೂದಿಸಿದ ಸಾಲಗಳನ್ನು ಮತ್ತು ಸಿಕ್ಯುರಿಟಿಗಳನ್ನು ವಸೂಲು ಮಾಡುವದಕ್ಕೆ ಅರ್ಜಿದಾರನಿಗೆ ಸರ್ಟಿಫಿಕಿಟು ಕೊಡಬೇಕು. (ಮತ್ತು ಸದರಿ ಸಿಕ್ಯುರಿಟಿಗಳ ಮೇಲೆ ಬಡ್ಡಿಯನ್ನು ಅಥವಾ ಡಿವಿಡೆಂಟಗಳನ್ನು ತೆಗೆದುಕೊಳ್ಳುವದಕ್ಕೆ ಮತ್ತು ಸದರೀ ಸಿಕ್ಯುರಿಟಿಗಳನ್ನು ಚೇಜನ ಮಾಡುವದಕ್ಕೆ ಅಥವಾ ಬೇರೆಯುವರ ಹೆಸರಿನಲ್ಲಿ ಮಾಡುವದಕ್ಕೆ ಸದರಿ ಸರ್ಟಿಫಿಕೇಟಿನ ಮೂಲಕ ಅರ್ಜಿದಾರನಿಗೆ ಅಧಿಕಾರ ಕೊಡಬೇಕು. )

ತಾರೀಖು

ಸಹಿ. ಹಜರತಸಾಹೇಬ ಮದಾರಸಾಹೇಬ ಕೂಸುಗಲ್ಲ

ಅರ್ಜಿದಾರನ ಸಹಿ

ನಾನು, ಹಜರತಸಾಹೇಬ ವಲ್ಲದ ಮದಾರಸಾಹೇಬ ಕೂಸುಗಲ್ಲ ಇಕರಾರು ಮಾಡುವದೇನಂದರೆ ಇದರಲ್ಲಿ ಮೇಲೆ ೧ ರಿಂದ ೬ನೇ ಪ್ಯಾರಾಗ್ರಾಫು ಗಳೊಳಗಿನ ಮಜಕೂರು ನನ್ನ ಒಳ್ಳೇ ತಿಳಿವಳಿಕೆಯಂತೆ ನಂಬಿಕೆಯಂತೆ ನಿಜವಾಗಿದೆ. ಇದಕ್ಕೆ ನಾನು ನನ್ನ ಸಹಿ ನನ್ನ ತರ್ಫೆ ವಕೀಲರಾದ ರಾ. ರಾ. ವಿನಾಯಕರಾವ ವಾಗಳೆ ಇವರ ಆಫೀಸಿನಲ್ಲಿ ತಾರೀಖು ೧೧–೧೨–೧೯೩೭ನೇ ಇಶ್ವಿ ದಿವಸ ಮಾಡಿರುತ್ತೇನೆ.

ಸಹಿ. ಹಜರತಸಾಹೇಬ ಮದಾರಸಾಹೇಬ ಕೂಸುಗಲ್ಲ

ಅರ್ಜಿದಾರನ ಸಹಿ

## ನಂಬರು ೨

## ಉತ್ತರಾಧಿಕಾರದ ಸರ್ಟಿಫಿಕೇಟು ಲಾಗುಮಾಡುವ ವಿಷಯದಲ್ಲಿ ಸರನಾಮೆ

(೧) ಅರ್ಜಿದಾರನಿಗೆ ತಾರೀಖು ಇಶ್ವಿದಿವಸ ಕಿ. ಅ. ನಂ. $\frac{೧೯}{೩೩}$ನೇ ದ್ದರಲ್ಲಿ ಒಂದು ಉತ್ತರಾಧಿಕಾರದ ಸರ್ಟಿಫಿಕೇಟು ಈ ಕೋರ್ಟಿನಿಂದ ಕೊಡಲ್ಪಟ್ಟಿತು.

(೨) ಸದರಿ ಸರ್ಟಿಫಿಕೇಟನ್ನು ಕೆಳಗೆ ವಿವರಿಸಿದ ಸಾಲಗಳಿಗೆ ಮತ್ತು ಸಿಕ್ಯುರಿಟಿಗಳಿಗೆ ಲಾಗುಮಾಡಬೇಕೆಂದು ಅರ್ಜಿದಾರನು ಬೇಡುತ್ತಾನೆ. ಆ ಸಾಲಗಳ ಮತ್ತು ಸಿಕ್ಯುರಿಟಿಗಳ ವಿವರ:—

**ಸಾಲಗಳನ್ನು**

( ಹಿಂದೆ ಹೇಳಿದಂತೆ ತಪಶೀಲು ಬರೆಯಬೇಕು )

**ಸಿಕ್ಯುರಿಟಿಗಳನ್ನು**

( ಹಿಂದೆ ಹೇಳಿದಂತೆ ತಪಶೀಲು ಬರೆಯಬೇಕು )

ತಾರೀಖು

ಸಹಿ

( ಇಕರಾರು ಬರೆಯಬೇಕು )

## ನಂಬರು ೩

## ವಾರಸಾ ಯಾ ಕಾರಭಾರ ನಡಿಸುವ ಯಾ ಮೃತ್ಯು ಪತ್ರ ನಡಿಸುವ ಸರ್ಟಿಫಿಕೇಟು ದೊರೆಯುವ ವಿಷಯದಲ್ಲಿ

( ಸನ್ ೧೮೨೭ನೇ ಇಸ್ವಿಯ ೮ನೇ ಮುಂಬಯಿ ರೆಗ್ಯೂಲೇಶನ ಪ್ರಕಾರ )

ಕಿ. ಅರ್ಜಿ. ನ. ________
೧೯೨೮

**ಹುಬ್ಬಳ್ಳಿ ೨ನೇ ವರ್ಗ ಸಬಜಜ್ಜ ಕೋರ್ಟಿನಲ್ಲಿ—**

ಅರ್ಜಿದಾರ:—ಹಣಮಂತಪ್ಪಾ ತಂದಿ ಬಸಪ್ಪಾ ಕಾಲವಾಡ ವಯಸು ೩೫ ಜಾತಿ ಲಿಂಗಾಯತ ಉದ್ಯೋಗ ರೇಲ್ವೆನೌಕರಿ ಸಾಕೀನ ಹುಬ್ಬಳ್ಳಿ. ಇವನು ಕೊಡುವ ಅರ್ಜಿ ಏನಂದರೆ: —

(೧) ಹುಬ್ಬಳ್ಳಿಯಲ್ಲಿ ವಾಸಿಸುತ್ತಿದ್ದ ಭೀಮಪ್ಪಾ ತಂದಿ ಕಲ್ಲಪ್ಪಾ ಕಾಲವಾಡ ಎಂಬುವವನು ಹುಬ್ಬಳ್ಳಿಯಲ್ಲಿ ತಾರೀಖು ೧೨—೩—೧೯೨೮ನೇ ಇಸ್ವಿ ದಿವಸ ತೀರಿಕೊಂಡನು.

(೨) ಅರ್ಜಿದಾರನು ಸದರೀ ಮಯತನ ಅಣ್ಣನ ಮಗನಾಗಿರುತ್ತಾನೆ. [ಅಥವಾ (೨) ಅರ್ಜಿದಾರನು ಸದರೀ ಮಯತನ ಮೃತ್ಯುಪತ್ರದಲ್ಲಿ ನಮೂದಿಸಲ್ಪಟ್ಟಿರುವ ಮೃತ್ಯುಪತ್ರನಡಿಸುವವನಾಗಿರುತ್ತಾನೆ. ]

[ ಅಥವಾ (೨) ಅರ್ಜಿದಾರನು ಕಾಯಿದೇಶೀರ ಕಾರಭಾರ ನಡಿಸುವವನಾಗಿರುತ್ತಾನೆ. ]

(೩) ಅರ್ಜಿದಾರನು ತನ್ನ ವಾರಸಾ ಹಕ್ಕನ್ನು (ಯಾ ಮೃತ್ಯುಪತ್ರ ನಡಿಸುವ ಹಕ್ಕನ್ನು ಯಾ ಕಾರಭಾರ ನಡಿಸುವ ಹಕ್ಕನ್ನು) ಕೋರ್ಟಿನಿಂದ ಮಾನ್ಯವಾಗಬೇಕೆಂದು ಇಚ್ಛಿಸುತ್ತಾನೆ.

(೪) ಅರ್ಜಿದಾರನು ಬೇಡುವದೇನಂದರೆ:—

ಅರ್ಜಿದಾರನಿಗೆ ವಾರಸಾ (ಯಾ ಮೃತ್ಯುಪತ್ರನಡಿಸುವ ಯಾ ಕಾರಭಾರ ನಡಿಸುವ) ಸರ್ಟಿಫಿಕೇಟು ಕೊಡಬೇಕು.

**ಸೂಚನೆ:**— ಈ ಅರ್ಜಿಗೆ ಇಕರಾರು ಬರೆಯಬೇಕು.

## ನಂಬರು ೪

## **ಫೈಸಲು ಆಗುವ ಮುಂಚೆ ಕೈದುಮಾಡಲ್ಪಟ್ಟ ಪ್ರತಿವಾದಿಯು ಹಾಜರಾಗುವಬಗ್ಗೆ ಕೊಡತಕ್ಕ ಜಾಮೀನವು** (ಆ. ೩೮ ರೂ.೨.)

## ಸರನಾಮೆ

ಸದರೀ ದಾವೆಯೊಳಗಿನ ವಾದಿಯಾಗಿರುವ (ಹೆಸರು ಬರೆ............ ಇವನು ಅರ್ಜಿಮಾಡಿದ್ದರ ಮೇಲಿಂದ ಪ್ರತಿವಾದಿಯಾದ (ಹೆಸರು ಬರೆ ........) ಇವನನ್ನು ಕೈದುಮಾಡಿ ಕೋರ್ಟಿನಸಮುಂದೆ ತಂದಿರುವದರಿಂದ:—

ಮತ್ತು ಸದರೀ ಪ್ರತಿವಾದಿಯು ತಾನು ಹಾಜರಾಗುವ ಬಗ್ಗೆ ಜಾಮೀನವನ್ನು ಯಾಕೆ ಕೊಡಬಾರದೆಂಬ ಬಗ್ಗೆ ಕಾರಣವನ್ನು ತೋರಿಸಲಿಲ್ಲವಾದಕಾರಣ ಕೋರ್ಟು ಅವನಿಗೆ ಇಂಥ ಜಾಮೀನವನ್ನು ಕೊಡುವ ಬಗ್ಗೆ ಹುಕುಮು ಮಾಡಿರುವದರಿಂದ:—

ನಾನು ( ಹೆಸರು ಬರೆ........................ )ಸ್ವಸಂತೋಷದಿಂದ ಜಾಮೀನುದಾರನಾಗಿದ್ದೇನೆ, ಮತ್ತು ಸದರಿ ದಾವೆಯು ಚಾಲು ಇರುವವರೆಗೆ ಮತ್ತು ಸದರಿ ದಾವೆಯಲ್ಲಿ ಸದರಿ ಪ್ರತಿವಾದಿಯ ಮೇಲೆ ಆಗಬಹುದಾದ ಯಾವ ದಾದರೂ ಹುಕುಮನಾಮೆಯ ಭರಪಾಯಿಯಾಗುವವರೆಗೆ ಯಾವದಾದರೂ ವೇಳೆ ಯಲ್ಲಿ ಪ್ರತಿವಾದಿಗೆ ಹಾಜರಾಗಲಿಕ್ಕೆ ಹೇಳಿದಾಗ ಅವನು ಹಾಜರಾಗುವನೆಂಬ ಬಗ್ಗೆ ನಾನು ಸ್ವತಃ ನನ್ನನ್ನು ನನ್ನ ವಾರಸದಾರರನ್ನು ಮತ್ತು ಮೃತ್ಯುಪತ್ರನಡಿಸುವವ ರನ್ನು ಇದರ ಮೂಲಕವಾಗಿ ಸದರಿ ಕೋರ್ಟಿಗೆ ಬದ್ಧಮಾಡಿಕೊಡುತ್ತೇನೆ, ಮತ್ತು ಅವನು–ಆ ಪ್ರಕಾರ ಹಾಜರಾಗದಿದ್ದರೆ, ಕೋರ್ಟಿನ ಹುಕುಮಿನಂತೆ ಸದರೀ ಪ್ರತಿ ವಾದಿಯ ವಿರುದ್ಧವಾಗಿ ಸದರೀ ದಾವೆಯಲ್ಲಿ ನಿರ್ಣಯಿಸಲ್ಪಡಬಹುದಾದ ಯಾವ ದಾದರೂ ಹಣದ ರಕಮನ್ನು ಸದರೀ ಕೋರ್ಟಿಗೆ ಕೊಡಲಿಕ್ಕೆ ನಾನು ಸ್ವತಃ ನನನ್ನು ನನ್ನ ವಾರಸದಾರರನ್ನು ಮತ್ತು ಮೃತ್ಯುಪತ್ರ ನಡಿಸುವವರನ್ನೂ ಬದ್ಧಮಾಡಿ ಕೊಡುತ್ತೇನೆ.

ಇದಕ್ಕೆ ಪುರಾವೆಯಾಗಿ ನಾನು ಈ ಹೊತ್ತು ತಾರೀಖು ...........ಇಸ್ವಿ ದಿವಸ ನನ್ನ ಸಹಿ ಮಾಡಿದ್ದೇನೆ.

ಸಹಿ..........................

ಸಾಕ್ಷಿದಾರರು

೧. ..................................

೨. ..................................

## ನಂಬರು ೫

## ಮಾಲನ್ನು ಹಾಜರಮಾಡುವ ಬಗ್ಗೆ ತಾರಣವು

(ಆ. ೩೮. ರೂ. ೫)

## ಸರನಾಮೆ

ಸದರಿ ದಾವೆಯಲ್ಲಿ ವಾದಿಯಾಗಿರುವ..............................

ಇವನು ಅರ್ಜಿಮಾಡಿದ್ದರ ಮೇಲಿಂದ ಪ್ರತಿವಾದಿಯಾದ ..................

ಇವನಿಗೆ ಇದಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಗೊಳಿಸಿದ ಮಾಲನ್ನು ಹಾಜರಮಾಡಿ ಕೋರ್ಟಿನ ನಿರ್ಬಂಧದಲ್ಲಿಡುವ ಬಗ್ಗೆ..........ರೂಪಾಯಿಯ ತಾರಣಕೊಡುವ ವಿಷಯದಲ್ಲಿ ಕೋರ್ಟಿನಿಂದ ಹುಕುಮು ಮಾಡಲ್ಪಟ್ಟಿರುವದರಿಂದ; ನಾನು ಸ್ವಸಂತೋಷದಿಂದ ಜಾಮೀನುದಾರನಾಗಿದ್ದೇನೆ, ಮತ್ತು ಸದರಿ ಪರಿಶಿಷ್ಟದಲ್ಲಿ ನಿರ್ದಿಷ್ಟಗೊಳಿಸಿದ ಮಾಲನ್ನು ಅಥವಾ ಅವರ ಬೆಲೆಯನ್ನು ಅಥವಾ ಹುಕುಮುನಾಮೆಯು ಭರಪಾಯಿಯಾಗಲಿಕ್ಕೆ ಸಾಕಾಗುವಷ್ಟು ಅವರ ಭಾಗವನ್ನು ಸದರಿ ಪ್ರತಿವಾದಿಯು ಹುಕುಮು ಆದಾಗ ಹಾಜರು ಮಾಡಿ ಕೋರ್ಟಿನ ನಿರ್ಬಂಧದಲ್ಲಿಡುವನೆಂಬ ಬಗ್ಗೆ ನಾನು ಸ್ವತಃ ನನ್ನನ್ನು ನನ್ನ ವಾರಸದಾರರನ್ನು ಮತ್ತು ಮೃತ್ಯುಪತ್ರ ನಡಿಸುವವರನ್ನು ಈ ಲೇಖದ ಮೂಲಕವಾಗಿ ಕೋರ್ಟಿಗೆ ಬದ್ಧಮಾಡಿಕೊಡುತ್ತೇನೆ. ಮತ್ತು ಅವನು ಆ ಪ್ರಕಾರ ಮಾಡದಿದ್ದರೆ ಸದರಿ ಕೋರ್ಟಿನ ಹುಕುಮು ಆಗಲಾಗಿ ಸದರೀ.............. ರೂಪಾಯಿಯ ರಕಮನ್ನು ಅಥವಾ ಸದರಿ ರಕಮಿಗಿಂತ ಹೆಚ್ಚಿಲ್ಲದಷ್ಟು ಸದರೀ ಕೋರ್ಟಿನಿಂದ ವಿಧಿಸಲ್ಪಡಬಹುದಾದ ರಕಮನ್ನು ಸದರೀ ಕೋರ್ಟಿಗೆ ಕೊಡಲಿಕ್ಕೆ ನಾನು ಸ್ವತಃ ನನ್ನನ್ನು ನನ್ನ ವಾರಸದಾರರನ್ನು ಮತ್ತು ಮೃತ್ಯುಪತ್ರ ನಡಿಸುವವರನ್ನು ಬದ್ಧಮಾಡಿಕೊಡುತ್ತೇನೆ.

## ಪರಿಶಿಷ್ಟವು

... ... ... ...

... ... ... ...

ಇದಕ್ಕೆ ಪುರಾವೆಯಾಗಿ ನಾನು ಈ ಹೊತ್ತು ತಾರೀಖು............ಇಸ್ವಿ ದಿವಸ ನನ್ನ ಸಹಿ ಮಾಡಿದ್ದೇನೆ.

ಸಹಿ......

ಸಾಕ್ಷಿದಾರರು

೧... ... ...

೨... ... ...

# ನಂಬರು ೬

## ರಿಸೀವರನು ಕೊಡತಕ್ಕ ಮುಚ್ಚಳಿಕೆ

(ಆ. ೪೦. ರೂ. ೩)

## ಸರನಾಮೆ

ಈ ಲೇಖದಿಂದ ಯಾವತ್ತು ಜನರಿಗೆ ತಿಳಿಯಪಡಿಸುವದೇನಂದರೆ—

... ... ... ...ಮತ್ತು

... ... ... ...ಮತ್ತು

... ... ... ...ಎಂಬ ನಾವು.................ಕೋರ್ಟಿನ ...............ಇವರಿಗೆ ...............ರೂಪಾಯಿಗಳಿಗಾಗಿ ಒಟ್ಟಾಗಿಯೂ ಬೇರೆ ಬೇರೆಯಾಗಿಯೂ ಬದ್ಧರಾಗಿರುತ್ತೇವೆ. ಆ ಹಣವನ್ನು ಸದರೀ......... ಇವರಿಗೆ ಯಾ ಆವರ ತಾತ್ಕಾಲಿನ ಸ್ಥಾನಾಪನ್ನರಿಗೆ ನಾವು ಕೊಡತಕ್ಕವರು. ಸದರೀ ಹಣವನ್ನು ಕೊಡುವದಕ್ಕಾಗಿ ನಾವು ನಮ್ಮನ್ನು ನಮ್ಮಲ್ಲಿ ಪ್ರತಿಯೊಬ್ಬನನ್ನು ಪೂರ್ತಿಯಾಗಿ ಮತ್ತು ನಮ್ಮೆಲ್ಲರ ಮತ್ತು ಪ್ರತಿಯೊಬ್ಬ ವಾರಸದಾರರನ್ನು ಮೃತ್ಯುಪತ್ರನಡೆಯಿಸುವವರನ್ನು ವಹಿವಾಟದಾರರನ್ನು ಬೇರೆ ಬೇರೆಯಾಗಿಯೂ ಒಟ್ಟಾಗಿಯೂ ಈ ಲೇಖದಿಂದ ಬಂಧಿಸುತ್ತೇವೆ.

ತಾರೀಖು...............ಇಸ್ವಿ ದಿವಸ.

ಮತ್ತು... ... ... ... ... ... ...ಎಂಬುವವನು ... ... ... ... ... ಎಂಬುವವನ ಮೇಲೆ ( ದಾವೆಯ ಉದ್ದೇಶವನ್ನು ಬರೆಯಬೇಕು ) ಈ ಕೋರ್ಟಿನಲ್ಲಿ ಅಸಲ ಅರ್ಜಿ ದಾಖಲು ಮಾಡಿರುವ ಕಾರಣ—

ಮತ್ತು ಸದರಿ ಕೋರ್ಟಿನವರ ಹುಕುಮಿನಿಂದ ಎಂಬುವವನು ಸದರಿ ಅಸಲಅರ್ಜಿಯಲ್ಲಿ ನಮೂದಿಸಲ್ಪಟ್ಟ ಎಂಬುವವನ ಸ್ಥಾವರ ಮಾಲಿನ ಬಾಡಿಗೆಗಳನ್ನು ಲಾಭಗಳನ್ನು ತೆಗೆದುಕೊಳ್ಳಲಿಕ್ಕೂ, ಹೊರಗಿಂದ ಬರತಕ್ಕ ಜಂಗಮ ಮಾಲನ್ನು ಜಪ್ತೆ ಮಾಡಲಿಕ್ಕೂ, ನೇಮಿಸಲ್ಪಟ್ಟಿರುವ ಕಾರಣ—

ಈ ಬಂಧನದ ಶರತು ಏನೆಂದರೆ– ಇವನ್ನು ಬರೆಸುಕೊಟ್ಟ ಸದರಿ ಎಂಬುವವನು ಸದರಿ ಎಂಬುವವನ ಸ್ಥಾವರ ಮಾಲಿನ ಬಾಡಿಗೆ ಮತ್ತು ಲಾಭಗಳ ಸಂಬಂಧವಾಗಿಯೂ, ಜಂಗಮಮಾಲಿನ ಸಂಬಂಧವಾಗಿಯೂ, ತನ್ನ ಕೈಸೇರಿದ ಹಣದ ಯಾವತ್ತು ಮತ್ತು ಪ್ರತಿಯೊಂದು ಮೊಬಲಗಿನ ಮತ್ತು ಮೊಬಲಗುಗಳ ಲೆಕ್ಕವನ್ನು ಸದರಿ ಕೋರ್ಟಿನವರಿಂದ ನೇಮಿಸಲ್ಪಟ್ಟ ಮುದ್ದತುಗಳಲ್ಲಿ ಸರಿಯಾಗಿಕೊಟ್ಟರೆ, ಮತ್ತು ಅವನಿಂದ ಸಲ್ಲತಕ್ಕದೆಂದು ಆಗಾಗ್ಗೆ ದಾಖಲೆಯಿಂದ ಹೊರಡುವ ಶಿಲಕಿನ ಹಣವನ್ನು, ಕೋರ್ಟಿನವರು ಅಪ್ಪಣೆಮಾಡಿದಂತೆ ಯಾವುಂದೆ ಮಾಡುವಂತೆ ಸರಿಯಾಗಿ ಭರಣಾ ಮಾಡಿದರೆ, ಈ ಬಂಧನದ ದಸ್ತೈವಜು ರದ್ದಾಗತಕ್ಕದ್ದು; ಹಾಗಾಗದಿದ್ದರೆ ಇದು ಪೂರ್ಣವಾಗಿ ಅಮಲಿನಲ್ಲಿರುವದು.

ಈ ಸಾಕ್ಷಿದಾರರ ಸಮಕ್ಷಮ ಸದರಿ ಮುಚ್ಚಳಿಕೆಯನ್ನು ಬರೆದು ಕೊಡುವವರು ಸಹಿ ಮಾಡಿ ಕೊಟ್ಟರು.

( **ಸೂಚನೆ**— ಹಣವನ್ನು ಅಮಾನತು ಇಟ್ಟರೆ, ಅದರ ಟಿಪ್ಪಣೆಯು ಈ ಮುಚ್ಚಳಿಕೆಯ ಶರತುಗಳ ವಿವರಣೆಯ ಅನಂತರ ಬರತಕ್ಕದ್ದು )

## ನಂಬರು ೭

## ಹುಕುಮನಾಮೆಯ ಜಜಾವಣೆಯ ಕೆಲಸವನ್ನು ತಹಕೂಬ ಮಾಡುವ ವಿಷಯದಲ್ಲಿ ಹುಕುಮು ಅಗಲಾಗಿ ಕೊಡತಕ್ಕ ಜಾಮೀನು ಪತ್ರ (ಆ ೪೧ ಕ. ೫)

ಸರನಾಮೆ

... ... ... ... ... ... ಇವರಿಗೆ—

ಹುಕುಮನಾಮೆಯ ಜಜಾವಣೆಯ ಕೆಲಸವು ತಹಕೂಬ ಆಗಲಾಗಿ ಇವನು ಮಾಡಿಕೊಟ್ಟ ಈ ಜಾಮೀನು ಪತ್ರದ ಮೇಲಿಂದ ತಿಳಿಯಪಡಿಸುವದೇ ನಂದರೆ—

ಸನ್ನ ೧೯ ನೇ ಇಸ್ವಿಯ ನಂಬರಿನ ದಾವೆಯೊಳಗಿನ ವಾದಿಯಾದ ಇವನು ಪ್ರತಿವಾದಿಯಾದ ಇವನ ಮೇಲೆ ಈ ಕೋರ್ಟ

ನಲ್ಲಿ ಮಾಡಿದ ದಾವೆಯಲ್ಲಿ ವಾದಿಯ ತರ್ಫಿನಿಂದ ಸನ್ನ ೧೯   ನೇ ಇಶ್ವಿಯ ತಿಂಗಳ  ನೇ ತಾರೀಖಿನ ದಿನ ಹುಕುಮುನಾಮೆಯಾಯಿತು, ಮತ್ತು ಸದರೀ ಹುಕುಮುನಾಮೆಯ ಮೇಲೆ ಪ್ರತಿವಾದಿಯು          ಕೋರ್ಟಿನಲ್ಲಿ ಅಪೀಲು ಮಾಡಿದ್ದು ಆ ಅಪೀಲಿನ ಕೆಲಸವು ಈಗ್ಯೂ ನಡೆದಿದೆ.

ಈಗ ಹುಕುಮುನಾಮೆ ಪಡೆದ ವಾದಿಯು ಸದರಿ ಹುಕುಮುನಾಮೆಯ ಬಜಾವಣೆಯು ಮಾಡಲ್ಪಡಬೇಕೆಂದು ಅರ್ಜಿಮಾಡಿದ್ದು ಪ್ರತಿವಾದಿಯು ಬಜಾವಣೆಯ ಕೆಲಸವನ್ನು ತಹಕೂಬು ಮಾಡಬೇಕೆಂದು ವಿನಂತಿ ಅರ್ಜಿಯನ್ನು ಮಾಡಿದ್ದಾನೆ. ಮತ್ತು ಅವನಿಗೆ ಜಾಮೀನು ಕೊಡುವ ಬಗ್ಯೆ ಹುಕುಮು ಆಗಿದೆ. ಅದರಂತೆ ನಾನು ಸ್ವಸಂತೋಷದಿಂದ ಈ ಲೇಖಕ್ಕೆ ಜೋಡಿಸಿದ ಯಾದಿಯಲ್ಲಿ ನಿರ್ದಿಷ್ಟಗೊಳಸಿದ ಆಸ್ತಿಯನ್ನು ಒತ್ತೆಯಾಗಿಟ್ಟು          ರೂಪಾಯಿಯವರೆಗೆ ಜಾಮೀನದಾರನಾಗುತ್ತೇನೆ, ಮತ್ತು ನಾನು ಕರಾರು ಮಾಡುವದೇನಂದರೆ, ಮೂಲಕೋರ್ಟಿನ ಹುಕುಮುನಾಮೆಯು ಅಪೀಲು ಕೋರ್ಟಿನಿಂದ ಕಾಯಂಮಾಡಲ್ಪಟ್ಟರೆ ಅಥವಾ ತಿರುಗಿಸಲ್ಪಟ್ಟರೆ, ಸದರಿ ಪ್ರತಿವಾದಿಯು ಅಪೀಲು ಕೋರ್ಟಿನ ಹುಕುಮುನಾಮೆಯಂತೆ ಯೋಗ್ಯರೀತಿಯಿಂದ ವರ್ತಿಸುವನು ಮತ್ತು ಆದರನ್ವಯ ಅವನು ಏನಾದರು ಕೊಡತಕ್ಕದ್ದಾದರೆ ಅದನ್ನು ಅವನು ಕೊಡುವನು, ಮತ್ತು ಅವನು ಹಾಗೆ ಮಾಡಲಿಕ್ಕೆ ತಪ್ಪಿದರೆ, ಆ ಪ್ರಕಾರ ಕೊಡತಕ್ಕದ್ದಾದ ಯಾವದಾದರೂ ರಕಮನ್ನು ಈ ಲೇಖದಮೇಲಿಂದ ಒತ್ತೆಯಾಗಿಟ್ಟಆ ಸ್ತಿಯೊಳಗಿಂದ ವಸೂಲು ಮಾಡಬೇಕು. ಮತ್ತು ಸದರೀ ಆಸ್ತಿಯ ಮಾರಾಟದ ಉತ್ಪನ್ನವು ಕೊಡತಕ್ಕ ರಕಮಿನ ಭರಪಾಯಿಯಾಗಲಿಕ್ಕೆ ಸಾಕಾಗದಿದ್ದರೆ, ಬಾಕೀ ಉಳದ ರಕಮನ್ನು ಕೊಡಲಿಕ್ಕೆ ನಾನು ನನ್ನ ಕಾಯಮೇಶಿರ ಪ್ರತಿನಿಧಿಗಳು ಸ್ವತಃ ಜಬಾಬದಾರರಾಗುವೆವು. ಈ ಬಗ್ಗೆ ನಾನು ಈ ಜಾಮೀನು ಪತ್ರವನ್ನು ಈ ಹೊತ್ತು ತಾರೀಖು      ಮಾಹೆ      ಸನ್ನ ೧೯  ನೇ ಇಶ್ವಿಯ ದಿನ ಬರೆದು ಕೊಟ್ಟಿದ್ದೇನೆ.

ಯಾದಿ

( ಸಹಿ )

ಸಾಕ್ಷಿದಾರರು

೧

೨

# ನಂಬರು ೮

## ಅಪೀಲು ನಡೆಯುತ್ತಿರುವ ಮುದ್ದತಿನಲ್ಲಿ ಕೊಡತಕ್ಕ ಜಾಮೀನ ಪತ್ರವು. (ಆ. ೪೧ ಕ. ೬)

## ಸರನಾಮೆ

... ... ... ... ... ...ಇವರಿಗೆ—

ಹುಕುಮನಾಮೆಯ ಬಜಾವಣೆಯ ಕೆಲಸವು ತಹಕೂಬು ಆಗಲಾಗಿ ಇವನು ಮಾಡಿಕೊಟ್ಟ ಜಾಮೀನ ಪತ್ರದ ಮೇಲಿಂದ ತಿಳಿಯಪಡಿಸುವದೇನಂದರೆ—

ಸನ್ನ ೧೯ ನೇ ಇಶ್ವಿಯ ನಂಬರಿನ ದಾವೆಯೊಳಗಿನ ವಾದಿಯಾದ ಇವನು ಪ್ರತಿವಾದಿಯಾದ ಇವನಮೇಲೆ ಈ ಕೋರ್ಟಿನಲ್ಲಿ ಮಾಡಿದ ದಾವೆಯಲ್ಲಿ ವಾದಿಯ ತರ್ಫಿನಿಂದ ಸನ್ನ ೧೯ ನೇ ಇಶ್ವಿಯ ತಿಂಗಳಿನ ನೇ ತಾರೀಖಿನ ದಿನ ಹುಕುಮನಾಮೆಯಾಯಿತು. ಮತ್ತು ಸದರೀ ಹುಕುಮನಾಮೆಯ ಮೇಲೆ ಪ್ರತಿವಾದಿಯು ಕೋರ್ಟಿನಲ್ಲಿ ಅಪೀಲು ಮಾಡಿದ್ದು ಆ ಅಪೀಲಿನ ಕೆಲಸವು ಇಗ್ಯೂ ನಡಿದದೆ.

ಈಗ ಹುಕುಮನಾಮೆಯ ಪಡೆದ ವಾದಿಯು ಸದರಿ ಹುಕುಮನಾಮೆಯ ಬಜಾವಣೆಯ ಬಗ್ಗೆ ಅರ್ಜಿ ಮಾಡಿದನು. ಅವನಿಗೆ ಜಾಮೀನು ಕೊಡುವ ವಿಷಯದಲ್ಲಿ ಹುಕುಮು ಆಗಿದೆ. ಅದರಂತೆ ನಾನು ಸ್ವಸಂತೋಷದಿಂದ ಈ ಲೇಖಕ್ಕೆ ಜೋಡಿಸಿದ ಯಾದಿಯಲ್ಲಿ ನಿರ್ದಿಷ್ಟಗೊಳಸಿದ ಆಸ್ತಿಯನ್ನು ಒತ್ತೆಯಾಗಿಟ್ಟು ರೂಪಾಯಿಯವರೆಗೆ ಜಾಮೀನದಾರನಾಗುತ್ತೇನೆ. ಮತ್ತು ನಾನು ಕರಾರು ಮಾಡುವದೇನಂದರೆ ಮೂಲ ಕೋರ್ಟಿನ ಹುಕುಮನಾಮೆಯು ಅಪೀಲು ಕೋರ್ಟಿನಿಂದ ರದ್ದು ಮಾಡಲ್ಪಟ್ಟರೆ ಅಥವಾ ತಿರುಗಿಸಲ್ಪಟ್ಟರೆ, ಸದರಿ ಹುಕುಮನಾಮೆಯ ಬಜಾವಣೆಯಲ್ಲಿ ಹಿಡಿಯಲ್ಪಡಬಹುದಾದ ಅಥವಾ ತಿರಿಗಿಸಲ್ಪಟ್ಟರೆ ಸದರಿ ಹುಕುಮನಾಮೆಯ ಬಜಾವಣೆಯಲ್ಲಿ ಹಿಡಿಯಲ್ಪಡಬಹುದಾದ ಅಥವಾ ಹಿಡಿಯಲ್ಪಟ್ಟ ಯಾವದಾದರೂ ಆಸ್ತಿಯನ್ನು ಸದರಿ ವಾದಿಯು ತಿರುಗಿ ಕೊಡುವನು. ಮತ್ತು ಅವನು ಅಪೀಲು ಕೋರ್ಟಿನ ಹುಕುಮನಾಮೆಯಂತೆ ಯೋಗ್ಯರೀತಿಯಿಂದ ವರ್ತಿಸುವನು; ಮತ್ತು ಅದರನ್ವಯ ಅವನು ಏನಾದರೂ ಕೊಡತಕ್ಕದ್ದಿ

ದ್ದರೆ ಅದನ್ನು ಅವನು ಕೊಡುವನು. ಮತ್ತು ಅವನು ಹೀಗೆ ಮಾಡಲಿಕ್ಕೆ ತಪ್ಪಿದರೆ ಆ ಪ್ರಕಾರ ಕೊಡತಕ್ಕದ್ದಾದ ಯಾವದಾದರೂ ರಕಮನ್ನು ಈ ಲೆಖ್ಖದ ಮೇಲಿಂದ ಒತ್ತೆಯಾಗಿಟ್ಟ ಆಸ್ತಿಯೊಳಗಿಂದ ವಸೂಲು ಮಾಡಬೇಕು. ಮತ್ತು ಸದರಿ ಆಸ್ತಿಯ ಮಾರಾಟದ ಉತ್ಪನ್ನವು ಕೊಡತಕ್ಕ ರಕಮಿನ ಭರಪಾಯಿಯಾಗಲಿಕ್ಕೆ ಸಾಕಾಗದಿದ್ದರೆ ಬಾಕಿ ಉಳಿದ ರಕಮನ್ನು ಕೊಡಲಿಕ್ಕೆ ನಾನು ಮತ್ತು ನನ್ನ ಕಾಯಿದೇಶೀರ ಪ್ರತಿನಿಧಿಗಳು ಸ್ವತಃ ಜಬಾಬದಾರರಾಗುವೆವು. ಈ ಬಗ್ಗೆ ನಾನು ಈ ಜಾಮೀನಪತ್ರನನ್ನು ಈ ಹೊತ್ತು ತಾರೀಖು ಮಾಹೆ ಸನ್ನ ೧೯ ನೇ ಇಸ್ವಿ ದಿವಸ ಬರೆದುಕೊಟ್ಟಿದ್ದೇನೆ.

ಯಾದಿ

ಸಾಕ್ಷಿದಾರರು (ಸಹಿ)

೧ .. ... ...

೨... ... ...

## ನಂಬರು ೯

### ಅಪೀಲಿನ ವೆಚ್ಚದ ಬಗ್ಗೆ ಜಾಮೀನಪತ್ರ

( ಆ. ೪೧. ರೂ. ೧೦ )

### ಸರನಾಮೆ

... ... ... ... ...ಇವರಿಗೆ

ಅಪೀಲಿನ ವೆಚ್ಚದ ಬಗ್ಗೆ ಇವನು ಮಾಡಿಕೊಟ್ಟ ಈ ಜಾಮೀನು ಪತ್ರದ ಮೇಲಿಂದ ತಿಳಿಯಪಡಿಸುವದೇನಂದರೆ –

ಈ ಅಪಿಲೆಂಟನು ಸನ್ನ ೧೯ ನೇ ಇಸ್ವಿಯ ನಂಬರಿನ ದಾವೆಯೊಳಗಿನ ಹುಕುಮನಾಮೆಯ ಮೇಲೆ ರಿಸ್ಪಾಂಡೆಂಟನ ವಿರುದ್ಧವಾಗಿ ಅಪೀಲುಮಾಡಿದ್ದು, ಅವನಿಗೆ ಜಾಮೀನು ಕೊಡುವ ವಿಷಯದಲ್ಲಿ ಹುಕುಮು ಆಗಿವೆ. ಅದರಂತೇ ನಾನು ಸ್ವಸಂತೋಷದಿಂದ ಈ ಲೇಖಕ್ಕೆ ಜೋಡಿಸಿದ ಯಾದಿಯಲ್ಲಿ ನಿರ್ದಿಷ್ಟಗೊಳಿಸಿದ ಆಸ್ತಿಯನ್ನು ಅಥವಾ ಅದರ ಯಾವದಾದರೂ ಭಾಗವನ್ನು ತಬದಿಲು ಮಾಡಿಕೊಡಲಿಕ್ಕಿಲ್ಲಾ ಮತ್ತು ಅಪಿಲೆಂಟನಕೈಯಿಂದ ಯಾವದಾದರೂ ತಪ್ಪಿತನಾದ

ಅಪಿಲಿನ ವೆಚ್ಚವನ್ನು ಕೊಡುವ ಸಂಬಂಧದಿಂದ ನನ್ನ ವಿರುದ್ಧವಾಗಿ ಮಾಡಲ್ಪಡೆ ಬಹುದಾದ ಯಾವದಾದರೂ ಹುಕಮಿನಂತೆ ನಾನು ಯೋಗ್ಯರೀತಿಯಿಂದ ವರ್ತಿಸು ವೆನು. ಸದರಿಯಂತೆ ಕೊಡತಕ್ಕದ್ದಾದ ಯಾವದಾದರೂ ರಕಮನ್ನು ಈ ಲೇಖದ ಮೇಲಿಂದ ಒತ್ತಿಯಾಗಿಟ್ಟ ಆಸ್ತಿಯೊಳಗಿಂದ ವಸೂಲು ಮಾಡಬೇಕು ಮತ್ತು ಸದರಿ ಆಸ್ತಿಯ ಮಾರಾಟದ ಉತ್ಪನ್ನವು ಕೊಡತಕ್ಕ ರಕಮಿನ ಭರಪಾಯಿಯಾಗ ಲಿಕ್ಕೆ ಸಾಕಾಗದಿದ್ದರೆ ಬಾಕಿ ಉಳಿದ ರಕಮನ್ನು ಕೊಡಲಿಕ್ಕೆ ನಾನು ಮತ್ತು ನನ್ನ ಕಾಯಿದೆಶೀರ ಪ್ರತಿನಿಧಿಗಳು ಸ್ವತಃ ಜಬಾಬದಾರರಾಗುವರು. ಈ ಬಗ್ಗೆ ನಾನು ಈ ಜಾಮೀನಪತ್ರವನ್ನು ಈಹೊತ್ತು ತಾರೀಖು ಮಾಹೆ ಸನ್ನ ೧೯ ನೇ ಇಸ್ವಿಯ ದಿವಸ ಬರೆದುಕೊಟ್ಟದ್ದೇನೆ.

ಯಾದಿ

ಸಾಕ್ಷಿದಾರರು. (ಸಹಿ)

೧... ... ...

೨... ... ...

# ಸಬ್ ಜಡ್ಜ

**ನಂಬರ**

ನಾನು **ಅ, ಬ** ಹುಕುಮನಾಮೆ ಧಾರಣ ಮಾಡುವವನು ಈ ಮೂಲಕವಾಗಿ

| ಕ್ರಮ | ವಿವರ | |
|---|---|---|
| ೧ | ದಾವೆಯ ನಂಬರು | ಸನ್ ೧೯೩೭ನೇ ಇಸವಿಯ ೪೩೮ (ಅಥವಾ ಲಾ. ಅಸಲು ನಂಬರ $\frac{೪೩೮}{೧೯೩೭}$ |
| ೨ | ಪಕ್ಷಕಾರರ ಹೆಸರುಗಳು | **ಅ, ಬ** ವಾದಿ<br>**ಕ, ಡ** ಪ್ರತಿವಾದಿ |
| ೩ | ಹುಕುಮನಾಮೆಯ ತಾರೀಖು | ೧೦—೧೨—೧೯೩೭ |
| ೪ | ಹುಕುಮನಾಮೆಯ ಮೇಲೆ ಅಪೀಲು ಆಯಿತೋ ಹ್ಯಾಗೆ | ಇಲ್ಲ |
| ೫ | ಯಾವದಾದರೂ ಸಲ್ಲಿಸೋ ಣವು ಅಥವಾ ಭರಪಾಯಿ ಮಾಡಿದ್ದರೆ ಅದು | ಏನೂ ಇಲ್ಲ |
| ೬ | ಈ ಮೊದಲು ಅರ್ಜಿ ಮಾಡಿದ್ದರೆ ಅದು ಮತ್ತು ಅದರ ತಾರೀಖು ಮತ್ತು ಅದರ ನಿಕಾಲೆ | ಅರ್ಜಿ ತಾರೀಖು ೧೫—೨—೧೯೩೮ನೇ ಇದರ ಮೇಲಿಂದ ರೂ. ೭೨—೪—೦ ದಾಖಲು ಮಾಡಲ್ಪಟ್ಟವೆ. |

# ...ಕೋರ್ಟಿಗೆ

...ರ್ಜಿ ಮಾಡುವದೇನಂದರೆ, ಇದರಲ್ಲಿ ಕೆಳಗೆಬರೆದ ಹುಕುಮನಾಮೆ ಬಜಾವಣೆ ಆಗಬೇಕು.

| ...ಹುಕುಮನಾಮೆಯ ಮೇಲಿಂದ ಬರ ...ತಕ್ಕದ್ದಾಗಿರುವ ರಕಮು ಬಡ್ಡಿ ...ಸಂತ ಅಥವಾ ಹುಕುಮನಾಮೆಯಲ್ಲಿ ...ಬೇರೆ ಏನಾದರೂ ನ್ಯಾಯಾಶ್ರಯ ...ಡಸಿದ್ದರೆ ಅದು ಮತ್ತು ಯಾವದಾ ...ರೂ ಪರಸ್ಪರ ವಿರುದ್ಧ ಹುಕುಮ ...ನಾಮೆಯಾಗಿದ್ದರೆ ಅದರ ತಪಶೀಲು | ವೆಚ್ಚ ಕೊಡಿಸಿದ್ದರೆ ಅವರ ಮೊಬಲಗು | ಯಾರಮೇಲೆ ಬಜಾಯಿಸ ತಕ್ಕದೆಂಬದು | ಕೋರ್ಟು ಯಾವರೀತಿಯಿಂದ ಸಹಾಯ ಮಾಡಬೇಕೆಂಬುದು |
|---|---|---|---|
| ೭ | ೮ | ೯ | ೧೦ |
| ರೂ. ೩೧೪-೮-೨ ಮುದ್ದಲು [ಹುಕುಮನಾಮೆಯ ತಾರೀಖಿನಿಂದ ಹಣ ಕೊಡಲ್ಪಡುವ ವರೆಗೆ ವರ್ಷಕ್ಕೆ ಶೇಕಡಾ ೬ರಂತೆ ಬಡ್ಡಿ] | ಹುಕುಮನಾಮೆಯಲ್ಲಿ ಕೊಡಿಸಿದ ೪೭—೧೦—೪<br>ಆ ಮೇಲೆ ಆದದ್ದು ೮— ೨—೦<br>ಒಟ್ಟು ೫೫—೧೨—೪ | ಪ್ರತಿವಾದಿ ಕ, ಡ ಈತನ ಮೇಲೆ | ನಾನು ಪ್ರಾರ್ಥಿಸುವದೇನಂದರೆ:— ಒಟ್ಟು ರೂ. [ಹಣ ಕೊಡಲ್ಪಡುವ ತಾರೀಖಿನ ವರೆಗೆ ಮುದ್ದಲಿನ ಮೇಲಿನ ಬಡ್ಡಿಯು ಸಹಿತ] ಮತ್ತು ಈ ಬಜಾವಣೆ ಮಾಡುವ ವೆಚ್ಚ, **ಪ್ರತಿವಾದಿಗೆ ಕೈದು ಮಾಡಿ,** ದಿವಾಣಿ ತುರಂಗದಲ್ಲಿ ಆತಂಕಿ ಸಿಟ್ಟು, ನನಗೆ ಕೊಡಿಸಬೇಕು. (ಸಹಿ)<br>ನಾನು ಇಕರಾರು ಮಾಡುವದೇನಂದರೆ:— ಇದರಲ್ಲಿ ಬರೆದ ಮಜಕೂರು ನನ್ನ ಒಳ್ಳೆ ತಿಳಿವಳಿಕೆಯಂತೆ ಮತ್ತು ನಂಬಿಕೆಯಂತೆ ನಿಜವಾಗಿದೆ. ಸಹಿ.<br>ತಾರೀಖು ... ... ... |

# ಸಬ್ ಜಡ್ಜ

## ನಂಬ

ನಾನು ಅ, ಬ ಹುಕುಮನಾಮೆ ಧಾರಣ ಮಾಡುವವನು ಈ ಮೂಲಕವಾ

| | | |
|---|---|---|
| ೧ | ದಾವೆಯ ನಂಬರು | ಲಾ. ಅಸಲ ನಂಬರ ೪೨೭/೧೯೨೭ |
| ೨ | ಪಕ್ಷಕಾರರ ಹೆಸರುಗಳು | ಅ, ಬ ವಾದಿ<br>ಕ, ಡ ಪ್ರತಿವಾದಿ |
| ೩ | ಹುಕುಮನಾಮೆಯ ತಾರೀಖು | ೧೧—೧೨—೧೯೨೭ |
| ೪ | ಹುಕುಮನಾಮೆಯ ಮೇಲೆ ಅಪೀಲು ಆಯಿತೋ ಹ್ಯಾಗೆ | ಇಲ್ಲ |
| ೫ | ಯಾವದಾದರೂ ಸಲ್ಲಿಸೋಣವು ಅಥವಾ ಭರಪಾಯಿ ಮಾಡಿದ್ದರೆ ಅದು | ಏನೂ ಇಲ್ಲ |
| ೬ | ಈ ಮೊದಲು ಅರ್ಜಿ ಮಾಡಿದ್ದರೆ ಅದು ಮತ್ತು ಅದರ ತಾರೀಖು ಮತ್ತು ಅದರ ನಿಕಾಲೆ | ಅರ್ಜಿ ತಾರೀಖು ೧೫—೪—೧೯೨೮ನೇ ಇಸವಿ ದಿವಸದ ಮೇಲಿಂದ ರೂ. ೭೨—೪—೦ ದಾಖಲು ಮಾಡಲ್ಪಟ್ಟವೆ. |

## ...ಕೋರ್ಟಿಗೆ.

...ಅರ್ಜಿ ಮಾಡುವದೇನಂದರೆ, ಇದರಲ್ಲಿ ಕೆಳಗೆಬರೆದ ಹುಕುಮನಾಮೆ ಬಜಾವಣೆ ಆಗಬೇಕು.

| ಹುಕುಮನಾಮೆಯು ಮೇಲಿಂದ ಬರತಕ್ಕದ್ದಾಗಿರುವ ರಕಮು ಬಡ್ಡಿ ಸಹಿತ ಅಥವಾ ಹುಕುಮನಾಮೆಯಲ್ಲಿ ಬೇರೆ ಏನಾದರೂ ನ್ಯಾಯಾಶ್ರಯ ಕೊಡಸಿದ್ದರೆ ಅದು ಮತ್ತು ಯಾವದಾದರೂ ಪರಸ್ಪರ ವಿರುದ್ಧ ಹುಕುಮನಾಮೆ ಯಾಗಿದ್ದರೆ ಅದರ ತಪಶೀಲು | ವೆಚ್ಚ ಕೊಡಸಿದ್ದರೆ ಅವರ ಮೊಬಲಗು | ಯಾರಮೇಲೆ ಬಜಾಯಿಸ ತಕ್ಕದೆಂಬದು | ಕೋರ್ಟ ಯಾವ ರೀತಿಯಿಂದ ಸಹಾಯ ಮಾಡಬೇಕೆಂಬದು |
|---|---|---|---|
| ೭ | ೮ | ೯ | ೧೦ |

೭. ರೂ. ೩೧೪-೮-೨ ಮುದ್ದಲು [ಹುಕುಮನಾಮೆಯ ತಾರೀಖಿನಿಂದ ಹಣ ಕೊಡುವವರೆಗೆ ವರ್ಷಕ್ಕೆ ಶೇಕಡಾ ೬ ರಂತೆ ಬಡ್ಡಿ]

೮.

| | |
|---|---|
| ಹುಕುಮನಾಮೆಯಲ್ಲಿ ಕೊಡಸಿದ್ದು | ರೂ. ೪೭-೧೦-೪ |
| ಆಮೇಲೆ ಆದದ್ದು | ,, ೮- ೨-೦ |
| ಒಟ್ಟು | ,, ೫೫-೧೨-೪ |

೯. ಪ್ರತಿವಾದಿ—ಕ. ಡ. ಈತನ ಮೇಲೆ

೧೦. ನಾನು ಪ್ರಾರ್ಥಿಸುವದೇನಂದರೆ :—

ಒಟ್ಟು ರೂ.           [ಹಣ ಕೊಡಲ್ಪಡುವ ತಾರೀಖಿನ ವರೆಗೆ ಮುದ್ದಲಿನ ಮೇಲಿನ ಬಡ್ಡಿಯ ಸಹಿತ]ಮತ್ತು ಬಜಾವಣೆ ಮಾಡುವ ವೆಚ್ಚ, ಇದಕ್ಕೆ ಜೋಡಿಸಿದ ಯಾದಿಯಲ್ಲಿ ಬರೆದ ಪ್ರತಿವಾದಿಯ **ಜಂಗಮ ಮಿಳಕತ್ತು** ಜಪ್ತು ಮಾಡಿ ಮತ್ತು ಮಾರಿ ವಸೂಲಮಾಡಬೇಕು. ಮತ್ತು ನನಗೆ ಕೊಡಿಸಬೇಕು.

ನಾನು                    ; ಇಕರಾರು ಮಾಡುವದೇನಂದರೆ ಇದರಲ್ಲಿ ಬರೆದ ಮಜಕೂರು ನನ್ನ ಒಳ್ಳೇ ತಿಳಿವಳಿಕೆಯಂತೆ ಮತ್ತು ನಂಬಿಕೆಯಂತೆ ನಿಜವಾಗಿದೆ. ತಾರೀಖು

ಸಹಿ. **ಅ, ಬ**

**ಹುಕುಮನಾಮೆ ಪಡೆದವನು.**

# ಸಬ್ ಜಡ್ಜ

## ನಂಬ

ನಾನು **ಅ, ಬ** ಹುಕುಮನಾಮೆ ಧಾರಣ ಮಾಡುವವನು ಈ ಮೂಲಕವಾಗಿ ಅಜಿ

| ನಂ. | ವಿವರ | |
|---|---|---|
| ೧ | ದಾವೆಯ ನಂಬರು | ಲಾ. ಅಸಲು ನಂಬರ ೫/೧೯೨೭ |
| ೨ | ಪಕ್ಷಕಾರರ ಹೆಸರುಗಗಳು | **ಅ, ಬ** ವಾದಿ<br>**ಕ, ಡ** ಪ್ರತಿವಾದಿ |
| ೩ | ಹುಕುಮನಾಮೆಯು ತಾರೀಖು | ೧೫-೮-೧೯೨೭ |
| ೪ | ಹುಕುಮನಾಮೆಯು ಮೇಲೆ ಅಪೀಲು ಆಯಿತೋ ಹ್ಯಾಗೆ | ಇಲ್ಲ |
| ೫ | ಯಾವದಾದರೂ ಸಲ್ಲಿಸೋಣವು ಅಥವಾ ಭರಪಾಯಿ ಮಾಡಿದ್ದರೆ ಅದು | ಏನೂ ಇಲ್ಲ |
| ೬ | ಈ ಮೊದಲು ಅರ್ಜಿ ಮಾಡಿದ್ದರೆ ಅದು ಮತ್ತು ಅದರ ತಾರೀಖು ಮತ್ತು ಅದರ ನಿಕಾಲೆ | ಇಲ್ಲ |

# ಕೋರ್ಟಿಗೆ

೬.

ಮಾಡುವದೇನಂದರೆ, ಇವರಲ್ಲಿ ಕೆಳಗೆಬರೆದ ಹುಕುಮನಾಮೆ ಬಜಾವಣಿ ಆಗಬೇಕು.

| ಹುಕುಮನಾಮೆಯ ಮೇಲಿಂದ ಬರತಕ್ಕದ್ದಾಗಿರುವ ರಕಮು ಬಡ್ಡಿ ಸಹಿತ ಅಥವಾ ಹುಕುಮನಾಮೆಯಲ್ಲಿ ಬೇರೆ ಏನಾದರೂ ನ್ಯಾಯಾಶ್ರಯ ಕೊಡಿಸಿದ್ದರೆ ಅದು ಮತ್ತು ಯಾವದಾದರೂ ಪರಸ್ಪರ ವಿರುದ್ಧ ಹುಕುಮನಾಮೆಯಾಗಿದ್ದರೆ ಅವರ ತಪಶೀಲು | ವೆಚ್ಚ ಕೊಡಿಸಿದ್ದರೆ ಅವರ ಮೊಬಲಗು | ಯಾರಮೇಲೆ ಬಜಾಯಿಸತಕ್ಕದೆಂಬದು | ಕೋರ್ಟು ಯಾವ ರೀತಿಯಿಂದ ಸಹಾಯ ಮಾಡಬೇಕೆಂಬದು |
|---|---|---|---|
| ೭ | ೮ | ೯ | ೧೦ |
| ರೂ. ೫೮೯–೪–೩ ಮುದ್ದಲು, ಹುಕುಮನಾಮೆಯ ತಾರೀಖಿನಿಂದ ಹಣ ಕೊಡಲ್ಪಡುವವರೆಗೆ ವರ್ಷಕ್ಕೆ ೬ ರುಪಾಯಿಯಂತೆ ಬಡ್ಡಿ. | ಹುಕುಮನಾಮೆಯಲ್ಲಿ ಕೊಡಸಿದ್ದು ರೂ. ಆ. ಪೈ.<br>ಆ ಮೇಲೆ ಆದದ್ದು | ಪ್ರತಿವಾದಿ **ಕ, ಡ** ಈತನ ಮೇಲೆ | ನಾನು ಪ್ರಾರ್ಥಿಸುವದೇನಂದರೆ :—<br>ರೂ. [ಹಣವು ಕೊಡಲ್ಪಡುವ ತಾರೀಖಿನವರೆಗೆ ಅಸಲು ರಕಮಿನ ಮೇಲೆ ಬಡ್ಡಿ ಸಹಿತ] ಮತ್ತು ಬಜಾವಣೆ ಮಾಡುವ ವೆಚ್ಚ ಈ ಅರ್ಜಿಯ ಕೆಳಗೆ ನಿರ್ದಿಷ್ಟಗೊಳಿಸಿದ ಪ್ರತಿವಾದಿಯ **ಸ್ಥಾವರಾಸ್ತಿಯನ್ನು** ಜಪ್ತುಮಾಡಿ ಮತ್ತು ಮಾರಿ ವಸೂಲು ಮಾಡಬೇಕು; ಮತ್ತು ನನಗೆ ಕೊಡಿಸಬೇಕು.<br>ಸಹಿ. |

ನಾನು **ಅ, ಬ**......; ಇಕರಾರು ಮಾಡುವದೇನೆಂದರೆ:—ಇದರಲ್ಲಿ ಬರೆದ ಮಜಕೂರು ನನ್ನ ಒಳ್ಳೇ ತಿಳಿವಳಿಕೆಯುಂತೆ ಮತ್ತು ನಂಬಕೆಯುಂತೆ ನಿಜವಾಗಿದೆ. ತಾರೀಖು......; ಸಹಿ **ಅ, ಬ**

ಹುಕುಮನಾಮೆ ಪಡೆದವನು

## ಜಪ್ತುಮಾಡಿ ವಿಕ್ರಮಾಡತಕ್ಕ ಆಸ್ತಿಯು ವರ್ಣನೆ ಮತ್ತು ತಪಶೀಲು

................ಗ್ರಾಮದೊಳಗಿನ ಮನೆ, ಬೆಲೆ ರೂ. ೪೦೦, ಇದರೊಳಗಿನ ಫೈಸಲಿನ ಋಣಿಯು ಅವಿಭಕ್ತ ಒಂದು ಮೂರನೇ ಪಾಲು; ಸದರೀ ಮನೆಯು ಚತುಸ್ಸೀಮೆ ಈ ಕೆಳಗಿನಂತೆ:—

ಪೂರ್ವಕ್ಕೆ **ಗ** ಎಂಬುವವನ ಮನೆ;

ಪಶ್ಚಿಮಕ್ಕೆ **ಹ** ಎಂಬುವವನ ಮನೆ;

ದಕ್ಷಿಣಕ್ಕೆ ಸಾರ್ವಜನಿಕ ರಸ್ತೆ

ಉತ್ತರಕ್ಕೆ ಖಾಸಿಗಿಗಲ್ಲಿ ಮತ್ತು **ಓ** ಎಂಬುವವನ ಮನೆ.

ನಾನು **ಅ, ಬ** ಇಕರಾರು ಮಾಡುವದೇನಂದರೆ; ಸದರೀ ವರ್ಣನೆಯುಲ್ಲಿ ಬರೆದ ಮಜಕೂರು ನನ್ನ ಒಳ್ಳೇ ತಿಳಿವಳಿಕೆಯುಂತೆ ಮತ್ತು ನಂಬಿಕೆಯುಂತೆ ಮತ್ತು ಅದರಲ್ಲಿ ನಿರ್ದಿಷ್ಟಗೊಳಿಸಿದ ಆಸ್ತಿಯೊಳಗಿನ ಪ್ರತಿವಾದಿಯ ಹಿತಂಬಧವ ಶೋಧವನ್ನು ಮಾಡುವದಕ್ಕೆ ನನಗೆ ಕೂಡಿದಷ್ಟು ಮಟ್ಟಿಗೆ ನಿಜವಾಗಿದೆ.

ಸಹಿ **ಅ, ಬ**

ಹುಕುಮನಾಮೆ ಪಡೆದವನು.

# ೯ನೆಯ ಪ್ರಕರಣ

## ಮುದ್ದತಿ ಕಾನೂನಿನ ಸ್ವಲ್ಪ ಪರಿಚಯವು

ಯಾವದಾದರೂ ದಾವೆಯು ಯಾ ಅಪೀಲು ಯಾ ಅರ್ಜಿಯು ಮುದತ್ತಿನ ಕಾನೂನಿನ ಪ್ರಕಾರ ವಿಧಿಸಲ್ಪಟ್ಟ ಮುದ್ದತು ಮೀರಿದನಂತರ ದಾಖಲು ಮಾಡಿದ್ದಲ್ಲಿ ಯಾ ಹಾಜರು ಮಾಡಿದ್ದಲ್ಲಿ ಅದನ್ನು ಕೋರ್ಟಿನಿಂದ ತೆಗೆದು ಹಾಕಲ್ಪಡುವದು. ವಿರುದ್ಧ ಪಕ್ಷಕಾರನು ಸದರೀ ದಾವೆಯು ಯಾ ಅಪೀಲಿನ ಯಾ ಅರ್ಜಿಯ ಮುದ್ದತು ಮೀರುತ್ತದೆಂಬ ಬಗ್ಗೆ ಹರಕತು ತೋರಿಸದೆ ಇದ್ದಾಗ್ಯೂ ಸದರೀ ದಾವೆಯು ಯಾ ಅಪೀಲು ಯಾ ಅರ್ಜಿಯು ಮೇಲೆ ಹೇಳಿದಂತೆ ಕೋರ್ಟಿನಿಂದ ತೆಗೆದು ಹಾಕಲ್ಪಡುವದು.

**ಮುದ್ದತು ತೀರುವ ವೇಳೆಗೆ ಕೋರ್ಟು ಮುಚ್ಚಲ್ಪಟ್ಟದ್ದಲ್ಲಿ—** ಯಾವದಾದರೂ ದಾವೆಯ, ಅಪಿಲಿನ ಅಥವಾ ಅರ್ಜಿಯ ಬಗ್ಗೆ ಗೊತ್ತುಪಡಿಸಿದ ಮುದ್ದತು ಯಾವದಿವಸದ ಕೋರ್ಟು ಮುಚ್ಚಲ್ಪಟ್ಟಿರುವದೋ ಆ ದಿವಸ ಮುಗಿಯುತ್ತಿದ್ದರೆ, ಯಾವದಿವಸ ಕೋರ್ಟು ಪುನಃ ತೆರೆದೀತೋ ಆ ದಿವಸ ಆ ದಾವೆಯನ್ನು, ಅಪೀಲನ್ನು ಅಥವಾ ಅರ್ಜಿಯನ್ನು ಮಾಡಬಹುದು (ಕಲಮು ೪)

**ಏನಿಕೆ ಸಂಗತಿಗಳಲ್ಲಿ ಮುದ್ದತನ್ನು ಬೆಳೆಯಿಸೋಣ—** ಅಪೀಲು ಮಾಡುವದಕ್ಕೆ ಅಥವಾ ಫೈಸಲಿನ ಪುನಃ ತಪಾಸಣೆಯ ಬಗ್ಗೆ ಅಥವಾ ಅಪೀಲು ಮಾಡುವ ಪರವಾನಗಿಯ ಬಗ್ಗೆ ಅರ್ಜಿ ಮಾಡುವದಕ್ಕೆ ಅಥವಾ ಇತರ ಯಾವದೇ ಅರ್ಜಿ ಮಾಡುವದಕ್ಕೆ ಯಾವ ಮುದ್ದತು ಹೇಳಿದೆಯೋ ಆ ಮುದ್ದತ್ತಿನನಂತರದಲ್ಲಿ ಸಹ, ಸದರಿ ಮುದ್ದತ್ತಿನಲ್ಲಿ ಅಪೀಲು ಮಾಡದೆ ಇರುವದಕ್ಕೆ ಅಥವಾ ಅರ್ಜಿಯನ್ನು ಮಾಡದೆ ಇರುವದಕ್ಕೆ **ಯೋಗ್ಯಕಾರಣವು** ತನಗೆ ಇತ್ತೆಂದು ಅಪೀಲು ಮಾಡುವವನು ಅಥವಾ ಅರ್ಜಿದಾರನು ಕೋರ್ಟಿನ ಖಾತ್ರಿ ಮಾಡಿದರೆ, ಆ ಯಾವದಾದರೂ ಅಪೀಲು ಅಥವಾ ಅರ್ಜಿಯನ್ನು ಅಂಗೀಕರಿಸಿಕೊಳ್ಳಬಹುದು. ಸಾರಾಂಶಃ ಗೊತ್ತುಪಡಿಸಿದ ಮುದ್ದತು ಮೀರಿದನಂತರ ಅಪೀಲನ್ನು ಯಾ ಅರ್ಜಿಯನ್ನು ದಾಖಲು ಯಾ ಹಾಜರು ಮಾಡಿದ್ದರೆ ಮತ್ತು ಹಾಗೇ

ಮಾಡಲಿಕ್ಕೆ ಯೋಗ್ಯ ಕಾರಣವನ್ನು ತೋರಿಸಿದರೆ ಕೋರ್ಟಿನವರು ಅದನ್ನು ಸ್ವೀಕರಿಸಬಹುದು. ಸದರಿ ನಿಯಮವು ದಾವೆಯು ಹಾಜರು ಮಾಡುವದಕ್ಕೆ ಲಾಗೂ ಇಲ್ಲ. ಪ್ರತಿಯೊಂದು ದಾವೆಯು ವಿಧಿಸಲ್ಪಟ್ಟ ಮುದ್ದತಿನಲ್ಲಿ ದಾಖಲು ಮಾಡತಕ್ಕದ್ದು. ದಾವೆಯು ದಾಖಲು ಮಾಡುವ ಬಗ್ಗೆ ಕೋರ್ಟಿಗೆ ಮುದ್ದತು ಬೆಳೆಯಿಸಲಿಕ್ಕೆ ಬರುವದಿಲ್ಲ. ಯೋಗ್ಯವಾದ ಕಾರಣದಿಂದ ದಾವೆಯು ಗೊತ್ತುಪಡಿಸಿದ ಮುದ್ದತಿನಲ್ಲಿ ದಾಖಲು ಮಾಡಲಿಕ್ಕೆ ಆಗಲಿಲ್ಲವೆಂದು ಕೋರ್ಟಿನವರಿಗೆ ತೋರಿಸಿದರೂ ಮತ್ತು ಅದನ್ನು ಕೋರ್ಟಿನವರು ನಂಬಲ್ಪಟ್ಟರೂ ಕೋರ್ಟಿನವರಿಗೆ ಮುದ್ದತು ಮೀರಿದನಂತರ ದಾಖಲು ಮಾಡಿದ ಆ ದಾವೆಯು ಅಂಗೀಕರಿಸಕೊಳ್ಳಲಿಕ್ಕೆ ಬರುವದಿಲ್ಲ. ಅಂಥಾ ದಾವೆಯು ತೆಗೆದು ಹಾಕಲ್ಪಡುವದು.

**ಕಾಯಿದೇಶೀರ ನಾಲಾಯಖಿಯು**— ದಾವೆಯನ್ನು ಮಾಡುವ ಅಥವಾ ಹುಕುಮನಾಮೆಯ ಬಜಾವಣಿಯ ಬಗ್ಗೆ ಅರ್ಜಿಯನ್ನು ಮಾಡುವ ಹಕ್ಕು ಇರುವಂಥಾ ಮನುಷ್ಯನು ಯಾವ ವೇಳೆಯಿಂದ ಮುದ್ದತು ಎಣಿಸತಕ್ಕದ್ದೋ ಆ ವೇಳೆಯಲ್ಲಿ ಚಿಕ್ಕ ಪ್ರಾಯದವನು ಅಥವಾ ಹುಚ್ಚನು ಅಥವಾ ಭ್ರಮಿಷ್ಟನು ಆಗಿದ್ದರೆ ಆ ನಾಲಾಯಖಿಯು ಕಳೆದನಂತರ ಆ ದಾವೆಯ ಬಗ್ಗೆ ಯಾ ಹುಕುಮನಾಮೆಯ ಬಜಾವಣಿಯ ಬಗ್ಗೆ ಅರ್ಜಿಯ ಗೊತ್ತುಪಡಿಸಿದ ಮುದ್ದತಿನ ಅಷ್ಟೇ ಮುದ್ದತಿನಲ್ಲಿ ಆ ದಾವೆ ಅಥವಾ ಅರ್ಜಿಮಾಡುವ ಅಧಿಕಾರವು ಅವನಿಗೆ ಇರುವದು. ಅವನ ಕಾಯಿದೇಶೀರ ಪ್ರತಿನಿಧಿಯು ಸಹ ಈ ರೀತಿ ದಾವೆಯೂ ಅರ್ಜಿಯೂ ಮಾಡಬಹುದು.

**ಮುದ್ದತು ಎಣಿಸುವ ಕುರಿತು** —ಯಾವದಾದರೂ ದಾವೆ ಅಥವಾ ಅಪೀಲು ಅಥವಾ ಅರ್ಜಿ ಮಾಡುವದಕ್ಕಾಗಿ ಹೇಳಿದ ಮುದ್ದತು ಎಣಿಸುವಲ್ಲಿ ಯಾವ ದಿವಸದಿಂದ ಅದನ್ನು ಎಣಿಸತಕ್ಕದ್ದೋ ಆ ದಿವಸವನ್ನು ಬಿಡಬೇಕು. (ಕಲಮು ೧೨) ಅಪೀಲು ಮಾಡತಕ್ಕ, ಅಪೀಲು ಮಾಡುವ ಪರವಾನಗಿಯ ಬಗ್ಗೆ ಅರ್ಜಿಯನ್ನು ಮಾಡುವ ಮತ್ತು ಫೈಸಲಿನ ಪುನಃ ತಪಾಸಣಿಯ ಬಗ್ಗೆ ಅರ್ಜಿ ಮಾಡುವ ಬಗ್ಗೆ ಯಾವ ಮುದ್ದತು ಹೇಳಿದೆಯೋ ಆ ಮುದ್ದತು ಎಣಿಸುವಲ್ಲಿ, ಯಾವ ಫೈಸಲಿನ ವಿಷಯದಲ್ಲಿ ತಕರಾರು ಇದ್ದೀತೋ ಆ ಫೈಸಲು ಹೇಳಿದ ದಿವಸವನ್ನು ಯಾವ ಹುಕುಮನಾಮೆಯ ಮೇಲೆ ಅಥವಾ ಶಿಕ್ಷೆಯ ಠರಾವಿನ

ಮೇಲೆ ಅಥವಾ ಹುಕುಮಿನ ಮೇಲೆ ಅಪೀಲು ಇದ್ದೀತೋ ಅಥವಾ ಹುಕುಮನಾಮೆಯ ಅಥವಾ ಶಿಕ್ಷೆಯ ಠರಾವಿನ ಅಥವಾ ಹುಕುಮಿನ ಪುನಃ ತಪಾಸಣಿಯಾಗುವದಕ್ಕಾಗಿ ಬೇಡುವದಿದ್ದೀತೋ ಆ ಹುಕುಮನಾಮೆಯ ಅಥವಾ ಶಿಕ್ಷೆಯ ಠರಾವಿನ ಅಥವಾ ಹುಕುಮಿನ ನಕಲು ಸಿಗುವದಕ್ಕೆ ಬೇಕಾಗುವಷ್ಟು ವೇಳೆಯನ್ನು ಬಿಟ್ಟು ಬಿಡಬೇಕು.

ಹುಕುಮನಾಮೆಯು ಮೇಲೆ ಅಪೀಲು ಇದ್ದಾಗ್ಗೆ ಅಥವಾ ಹುಕುಮನಾಮೆಯು ಪುನಃ ತಪಾಸಣಿಯಾಗಬೇಕೆಂದು ಬೇಡುವಿಕೆ ಇದ್ದಾಗ್ಗೆ ಯಾವ ಫೈಸಲಿನ ಮೇಲಿಂದ ಆ ಹುಕುಮನಾಮೆ ಮಾಡಿದ್ದೀತೋ ಆ ಫೈಸಲಿನ ನಕಲು ಸಿಗುವದಕ್ಕೆ ಬೇಕಾಗುವಷ್ಟು ವೇಳೆಯನ್ನು ಸಹ ಬಿಡಬೇಕು.

ನಿವಾಡೆಯನ್ನು ರದ್ದುಮಾಡುವದಕ್ಕೋಸ್ಕರ ಅರ್ಜಿಯನ್ನು ಮಾಡುವದಕ್ಕಾಗಿ ಹೇಳಿದ ಮುದ್ದತನ್ನು ಎಣಿಸುವದರಲ್ಲಿ ಸದರಿ ನಿವಾಡೆಯ ನಕಲು ಸಿಗುವದಕ್ಕೆ ಬೇಕಾಗುವಷ್ಟು ವೇಳೆಯನ್ನು ಬಿಡಬೇಕು. (ಕಲಮು ೧೨) ನಕಲಿಗೆ ಅರ್ಜಿಯನ್ನು ಮಾಡಿದ ಹೊರತು ನಕಲು ಸಿಗುವದಕ್ಕೆ ಬೇಕಾಗುವ ವೇಳೆಯನ್ನು ಸುರು ಆಗುವದಿಲ್ಲ. "ನಕಲು ಸಿಗುವದಕ್ಕೆ ಬೇಕಾಗುವಷ್ಟು ವೇಳೆಯನ್ನು" ಎಂದರೆ ನಕಲು ಬೇಡುವದಕ್ಕೆ ಅರ್ಜಿಯನ್ನು ಮಾಡಿದ ತಾರೀಖಿನಿಂದ ನಕಲು ತಯಾರ ಆದ ತಾರೀಖಿನ ವರೆಗೆ ಆಗುವ ವೇಳೆಯನ್ನು, ಎಂದರೆ ನಕಲಿಗೆ ಅರ್ಜಿಯನ್ನು ಮಾಡಿದ ತಾರೀಖಿನಿಂದ ಅವನ್ನು ತಯಾರ ಆದ ತಾರೀಖಿನ ವರೆಗಿನ ದರಮ್ಯಾನ ವೇಳೆಯನ್ನು.

## ಬರಹಮೂಲಕವಾದ ಅಂಗೀಕರಿಸೋಣದ ಪರಿಣಾಮವು
## (ಕಲಮು ೧೯).

ಯಾವದಾದರೂ ಆಸ್ತಿಯ ವಿಷಯದಲ್ಲಿ ಅಥವಾ ಹಕ್ಕಿನ ವಿಷಯದಲ್ಲಿ ದಾವೆ ಅಥವಾ ಅರ್ಜಿ ಮಾಡುವ ಬಗ್ಗೆ ಹೇಳಿದ ಮುದ್ದತು ತೀರುವ ಮೊದಲು ಸದರಿ ಪ್ರಕಾರದ ಆಸ್ತಿಯ ವಿಷಯದ ಅಥವಾ ಹಕ್ಕಿನ ವಿಷಯದ ಪಾತ್ರತೆಯ ಅಂಗೀಕರಣವು ಬರಹಮೂಲಕವಾಗಿ ಆ ಆಸ್ತಿಯ ಬಾಬತು ಅಥವಾ ಹಕ್ಕಿನ ಬಾಬತು ಯಾವನ ಮೇಲೆ ದಾವೆ ಇದ್ದೀತೋ ಅವನು ಅಥವಾ ಯಾವನ ಸಂಬಂ

ಥದಿಂದ ಅವನಿಗೆ ಅಧಿಕಾರವು ಅಥವಾ ಪಾತ್ರತೆಯು ಪ್ರಾಪ್ತವಾಗಿದ್ದೀತೋ ಅವನು ಆ ಲೇಖದ ಮೇಲೆ ಸಹಿ ಮಾಡಿದ್ದನೆ, ಹೊಸ ಮುದ್ದತನ್ನು, ಅಂಗೀಕರಣದ ಲೇಖದ ಮೇಲೆ ಯಾವ ವೇಳೆಯಲ್ಲಿ ಸದರಿ ಪ್ರಕಾರ ಸಹಿ ಆಯಿತೋ ಆ ವೇಳೆಯಿಂದ ಎಣಿಸಬೇಕು.

ಅಂಗೀಕರಣದ ಲೇಖದ ಮೇಲೆ ತಾರೀಖು ಹಾಕಿರದಿದ್ದಲ್ಲಿ ಯಾವ ವೇಳೆಗೆ ಆ ಲೇಖದ ಮೇಲೆ ಸಹಿ ಆಯಿತೆಂಬುವದರ ವಿಷಯದಲ್ಲಿ ಬಾಯಿ ಮಾತಿನ ಪುರಾವೆಯನ್ನು ತೆಗೆದುಕೊಳ್ಳಬಹುದು.

ಇದರ ವಿವರಣೆಯನ್ನು ಮಾಡೋಣ:—

ಅಂಗೀಕರಣಕ್ಕೆ ಅವಶ್ಯವಾದ ಸಂಗತಿಗಳನ್ನು ಯಾವವೆಂದರೆ:—

(೧) ಪ್ರತಿಯೊಂದು ಅಂಗೀಕರಣವನ್ನು ಗೊತ್ತುಪಡಿಸಿದ ಮುದ್ದತು ತೀರುವ ಮೊದಲು ಮಾಡಿರಬೇಕು. ಸದರೀ ಮುದ್ದತು ತೀರಿದ ಅನಂತರ ಅದನ್ನು ಮಾಡಿದರೆ ನಡಿಯಲಾಗದು. ಸದರೀ ಮುದ್ದತು ತೀರುವ ದಿನಸ ಅಥವಾ ಅದಕ್ಕೂ ಮೊದಲು ದಿವಾಣಿಕೋರ್ಟು ಮುಚ್ಚಲ್ಪಟ್ಟಿತೋ ಮತ್ತು ಅದನ್ನು ಪುನಃ ತೆರೆಯುವ ಪೂರ್ವದಲ್ಲಿ ಅಂಗೀಕರಣವನ್ನು ಮಾಡಿದೆಂದು ವಾದ ಮಾಡಿದರೆ ನಡಿಯಲಾರದು. ದಿವಾಣಿಕೋರ್ಟು ಮುಚ್ಚಿರಲೀ ಯಾ ಮುಚ್ಚದೆ ಇರಲೀ ಅದಕ್ಕೂ ಮತ್ತು ಅಂಗೀಕರಣ ಮಾಡುವದಕ್ಕೂ ಏನೂ ಸಂಬಂಧವಿಲ್ಲ. ಪ್ರತಿಯೊಂದು ಅಂಗೀಕರಣವನ್ನು ತಪ್ಪದೇ ಗೊತ್ತುಪಡಿಸಿದ ಮುದ್ದತಿನಲ್ಲಿ ಮಾಡಬೇಕಾಗುವದು.

(೨) ಪ್ರತಿಯೊಂದು ಅಂಗೀಕರಣವನ್ನು ಯಾವದಾದರೂ ವಿವಕ್ಷಿತ ಆಸ್ತಿಯ ಅಥವಾ ಹಕ್ಕಿನ ಸಂಬಂಧದಿಂದ ಮಾಡಿರಬೇಕು. ಅಂಗೀಕರಣದ ಲೇಖದಲ್ಲಿ ಆ ಆಸ್ತಿಯ ಅಥವಾ ಹಕ್ಕಿನ ಪ್ರಕಾರವು ಸಮನಾಗಿ ಬರೆಯದೆ ಇದ್ದರೂ ಅಡ್ಡಿಯಿಲ್ಲ; ಹಾಗೂ ಹಣವನ್ನು ಕೊಡುವ ಅಥವಾ ಸ್ವಾಧೀನ ಮಾಡುವ ಅಥವಾ ಪೂರಾ ಮಾಡುವ ಅಥವಾ ಉಪಭೋಗ ಮಾಡುವ ವೇಳೆಯು ಇನ್ನೂ ಬಂದಿಲ್ಲವೆಂದು ಅದರಲ್ಲಿ ಬರೆದಿದ್ದರೂ ಅಥವಾ ಹಣವನ್ನು ಕೊಡುವ ವಿಷಯದಲ್ಲಿ ಅಥವಾ ಸ್ವಾಧೀನದಲ್ಲಿ ಕೊಡುವ ವಿಷಯದಲ್ಲಿ ಅಥವಾ ಪೂರಾ

ಮಾಡುವ ವಿಷಯದಲ್ಲಿ ಅಥವಾ ಉಪಭೋಗ ಮಾಡಗೊಡುವ ವಿಷಯದಲ್ಲಿ ಅನಂಗೀಕಾರವು ಅದರಲ್ಲಿ ಇದ್ದರೂ ಅಥವಾ ವಜಾವಟು ಮಾಡುವ ವಿಷಯದ ಹಕ್ಕು ಆದರಲ್ಲಿ ಸಾಮಿಲು ಮಾಡಿದ್ದರೂ ಅಥವಾ ಆಸ್ತಿಯ ಮೇಲೆ ಅಥವಾ ಹಕ್ಕಿನ ಮೇಲೆ ಅಧಿಕಾರವಿರುವ ಮನುಷ್ಯನ ಹೊರತು ಬೇರೆ ಯಾವನಾದರೂ ಮನುಷ್ಯನ ಹೆಸರಿನಲ್ಲಿ ಅದು ಇದ್ದರೂ ಅಡ್ಡಿಯಿಲ್ಲ. ಸದರಿಯಂತೆ ಆದ ಅಂಗೀಕರಣವು ಯೋಗ್ಯವೆಂದು ತಿಳಿಯಲ್ಪಡುವದು.

(೩) ಪ್ರತಿಯೊಂದು ಅಂಗೀಕರಣವನ್ನು ಸದರಿ ಆಸ್ತಿಯ ವಿಷಯದ ಅಥವಾ ಹಕ್ಕಿನ ವಿಷಯದ **ಪಾತ್ರತೆಯು** ಅಂಗಿಕರಣವಾಗಿರಬೇಕು. ಅಂಗೀಕರಣದಲ್ಲಿ ಪಾತ್ರತೆಯ ಸಂಬಂಧದಿಂದ ಸ್ಪಷ್ಟವಾದ ಖುಲಾಸೆಯಾಗಿರಬೇಕು. ಪಾತ್ರತೆಯು ಸ್ಪಷ್ಟವಾಗಿ ಬರೆದಿರಬೇಕು.

(೪) ಪ್ರತಿಯೊಂದು ಅಂಗೀಕರಣವನ್ನು ಬರಹಮೂಲಕವಾಗಿರಬೇಕು. ಅದು ಬಾಯಿಮಾನ ಕರಾರಿನಿಂದ ಆದರೆ ನಡೆಯಲಾಗದು. ಮತ್ತು ಅದರಿಂದ ಮುದ್ದತು ಬೆಳೆಯಲಾಗದು. ಕಾರಣ ಅಂಗೀಕರಣವನ್ನು ಬರಹದಿಂದಲೇ ಆಗಿರಬೇಕು.

(೫) ಪ್ರತಿಯೊಂದು ಅಂಗೀಕರಣದ ಮೇಲೆ ಸದರಿ ಆಸ್ತಿಯ ಬಾಬತು ಅಥವಾ ಹಕ್ಕಿನ ಬಾಬತು ಯಾವನ ಮೇಲೆ ದಾವೆ ಇದ್ದೀತೋ ಅವನು ಆ ಲೇಖದ ಮೇಲೆ ಸಹಿ ಮಾಡಿರಬೇಕು. ಬದ್ಧನಾದಂಥಾ ಅಥವಾ ಪಾತ್ರನಾದಂಥಾ ಮನುಷ್ಯನು ಸದರಿ ಲೇಖದ ಮೇಲೆ ಸಹಿ ಮಾಡಿರಬೇಕು. ಈ ರೀತಿ ಸ್ವತಃ ತಾನು ಸಹಿ ಮಾಡಬಹುದು. ಅಥವಾ ಈ ಬಗ್ಗೆ ಯೋಗ್ಯರೀತಿಯಿಂದ ಅಧಿಕಾರಕೊಟ್ಟ ಅವನ ಮುಖ್ತಿಯಾರನು ಈ ರೀತಿ ಸಹಿ ಮಾಡಬಹುದು. ಸದರಿ ಬದ್ಧನಾದಂಥಾ ಅಥವಾ ಪಾತ್ರನಾದಂಥಾ ಮನುಷ್ಯನು ಓದುಬರಹ ಅರಿಯುವವನಾಗ್ದಿರೆ ಅವನು ಸದರೀ ಲೇಖದ ಮೇಲೆ ತನ್ನ ನಿಶಾನಿಯನ್ನು ಯಾ ಗುರುತನ್ನು ಮಾಡಿದರೆ ಸಾಕಾಗುವದು. ಅಂಥವನು ಸದರೀ ಲೇಖದ ಮೇಲೆ ತಾನು ಗುರುತನ್ನು ಮಾಡಿ ಮತ್ತೊಬ್ಬ ಬೇಕಾದವನಿಗೆ ಆ ಗುರುತನ್ನು ತನ್ನದು ಇದೆಂದು ಬರೆಯಲಿಕ್ಕೆ ಹೇಳಿ ಅವನ್ನು ಹಾಗೆ ಅವನ ಕಡೆಯಿಂದ ಬರೆಯಿಸಿದರೆ ಸಾಕು. ಅಂಗೀಕರಣವನ್ನು ಯಾವದೇ ವಿವಕ್ಷಿತ ರೀತಿಯಿಂದ ಮಾಡಬೇಕು.

ಹೀಗೇನು ಇಲ್ಲ. ಅದು ಯಾವದೇ ರೀತಿಯಿಂದ ಬರೆದಿರಲಿ ಅದರಲ್ಲಿ ಪಾತ್ರತೆಯ ಅಂಗೀಕರಣವು ತೋರಿಸಲ್ಪಟ್ಟಿದ್ದರೆ ಮತ್ತು ಅದು ಬರಹ ಮೂಲಕಾಗಿದ್ದರೆ ಮತ್ತು ಅದರ ಮೇಲೆ ಪಾತ್ರನಾದಂಥವನ ಸಹಿಯಿದ್ದರೆ ಸಾಕಾಗುವದು. ಪತ್ರದ ಮುಖಾಂತರದಿಂದ ಯಾ ಅಸಲರ್ಜಿಯ ಮುಖಾಂತರದಿಂದ ಯಾ ಯಾವದೇ ಅರ್ಜಿಯ ಮುಖಾಂತರದಿಂದ ಯಾ ಎರಡನೆ ಯಾವದಾದರೂ ದಸ್ತೈವಜಿನಲ್ಲಿ ಈ ಬಗ್ಗೆ ಮಜಕೂರು ಬರೆಯುವದರಿಂದ ಯಾ ಇತರ ಎರಡನೆ ಯಾವದೇರೀತಿಯಿಂದ ಸಹಾ ಅಂಗೀಕರಣವನ್ನು ಮಾಡಬಹುದು.

## ಮೇಲೆ ಹೇಳಿದಂತೆ ಅಂಗೀಕರಣವನ್ನು ಮಾಡಿದ್ದರ ಪರಿಣಾಮೇನಾಗುವದು ?

ಅಂಗೀಕರಣವನ್ನು ಮಾಡಿದ ತಾರೀಖಿನಿಂದ ಅಥವಾ ದಿವಸದಿಂದ ಹೊಸ ಮುದ್ದತನ್ನು ದೊರಿಯುವದು. ಯಾವ ಹಕ್ಕಿನ ಅಥವಾ ಆಸ್ತಿಯ ಅಂಗೀಕರಣವನ್ನು ಮಾಡಿದ್ದಿರುವದೋ ಆ ಹಕ್ಕಿನ ಬಗ್ಗೆ ಅಥವಾ ಪಾತ್ರತೆಯ ಬಗ್ಗೆ ಯಾವ ಮುದ್ದತು ಗೊತ್ತು ಪಡಿಸಿರುತ್ತದೆಯೋ ಆ ಮುದ್ದತಿನಲ್ಲಿ ಅಂಗೀಕರಣ ಮಾಡಿದ ತಾರೀಖಿನಿಂದ ಅಥವಾ ದಿವಸದಿಂದ ದಾವೆಯು ಮಾಡಬಹುದು. ಎಂದರೆ ಅಂಗೀಕರಣಮಾಡುವವರಿಂದ ಮತ್ತೊಮ್ಮೆ ಗೊತ್ತು ಪಡಿಸಿದಷ್ಟೇ ಮುದ್ದತು ಸಿಗುವದು. ಅಂಗೀಕರಣವಾದ ತಾರೀಖಿನಿಂದ ಹೊಸ ಮುದ್ದತನ್ನು ಎಣಿಸಬೇಕು. ಬರೇ ಅಂಗೀಕರಣದ ಉಪಯೋಗವು ಇಷ್ಟರ ಹೊರ್ತು ಹೆಚ್ಚಿಗೇನು ಆಗಲಿಕ್ಕಿಲ್ಲ. ಅಂಗೀಕರಣವೆಂದರೆ ಪಾತ್ರತೆಯ ಅಂಗೀಕರಣವು ಸದರಿ ಪಾತ್ರತೆಯು ಸದರೀ ಅಂಗೀಕರಣದ ಮೊದಲು ಉದ್ಭವಿಸಲಿಕ್ಕೆ ಬೇಕು. ಅಂಗೀಕರಣಂದ ಪಾತ್ರತೆಯು ಉದ್ಭವಿಸುವದಿಲ್ಲ. ಮುದ್ದತು ಅಂದರೆ ಪಾತ್ರತೆಯ ಬಗ್ಗೆ ದಾವೆ ಮಾಡುವ ಮುದ್ದತು ಬೆಳೆಯುತ್ತದೆ. ಆದುದರಿಂದ ಪಾತ್ರತೆಯುಂಟಾಗುವದಿಲ್ಲ. ಆದ್ದರಿಂದ ಅಂಗೀಕರಣದ ಆಧಾರದ ಮೇಲೆ ದಾವೆಯು ಮಾಡ ಕೂಡದು. ಅಂಗೀಕರಣವು ದಾವೆಯ ಕಾರಣವಾಗುವದಿಲ್ಲ. ನಿಜವಾಗಿ ನೋಡಿದರೆ ದಾವೆಯ ಕಾರಣವು ಎಂದರೆ ಅಂಗೀಕರಿಸದಂಥಾ ಪಾತ್ರತೆಯು; ಆ ಪಾತ್ರತೆಯು ದಾವೆಯ ಕಾರಣವಾಗುವದು ಹೊರ್ತಾಗಿ ಅಂಗೀಕ

ರಣವು ದಾವೆಯು ಕಾರಣವಾಗಲಿಕ್ಕಿಲ್ಲ. ಕಾರಣ ಮೂಲ ಪಾತ್ರತೆಯ ಆಧಾರದ ಮೇಲೆ ದಾವೆ ಮಾಡಬೇಕು ಹೊರ್ತು ಅಂಗೀಕರಣದ ಆಧಾರದ ಮೇಲೆ ದಾವೆಯು ಮಾಡತಕ್ಕದ್ದಲ್ಲ.

ಆದರೆ ಯಾವ ಲೇಖದಿಂದ ಅಂಗೀಕರಣವನ್ನು ಮಾಡಿರುತ್ತದೆಯೋ ಆ ಲೇಖದಲ್ಲಿ ಬರೀ ಪಾತ್ರತೆಯ ಅಂಗೀಕರಣದ ಮಜಕೂರು ಕಾಣಿಸಿದೆ ಅದರಲ್ಲಿ ಮೂಲ ಪಾತ್ರತೆಯನ್ನು ಕಡೆಗಾಣಿಸುವ ಬಗ್ಗೆ ಅಥವಾ ಮೂಲ ಸಾಲವನ್ನು ಸಲ್ಲಿಸುವಬಗ್ಗೆ ಅಥವಾ ವಾಗ್ದಾನವನ್ನು ಕೊಡುವಬಗ್ಗೆ ಸಹ ಮಜಕೂರು ಕಂಡಲ್ಲಿ ಸದರೀ ಲೇಖದ ಆಧಾರ ಮೇಲೆ ದಾವೆ ಮಾಡಲಿಕ್ಕೆ ಬರುವದು. ಪಾತ್ರನಾದಂಥ ಪಕ್ಷಕಾರನು ಆ ಲೇಖದ ಮುಖಾಂತರವಾಗಿ ಮೂಲವಾಗ್ದಾನವನ್ನು ಅಥವಾ ಪಾತ್ರತೆಯನ್ನು ಅಥವಾ ಜವಾಬದಾರಿಯನ್ನು ತೀರಿಸುತ್ತೇನೆಂದು ಅಥವಾ ಕಡೆಗಾಣಿಸುತ್ತೇನೆಂದು ಒಪ್ಪಿಕೊಂಡಿದ್ದ ಪಕ್ಷಕ್ಕೆ ಅಥವಾ ವಚನ ಕೊಟ್ಟಿದ್ದರ ಪಕ್ಷಕ್ಕೆ ಮಾತ್ರ ಆ ಲೇಖದ ಆಧಾರ ಮೇಲೆ ದಾವೆ ಮಾಡಬಹುದು. ಆದರೆ ಯಾವಾಗಲೂ ಮೂಲ ಪಾತ್ರತೆಯ ಆಧಾರ ಮೇಲ ದಾವೆ ಮಾಡುವದು ಒಳ್ಳೆಯದು. ಸದರಿ ಪಾತ್ರತೆಯ ಅಂಗೀಕರಣವು ಅದರ ಮುದ್ದತು ಬೆಳೆಯಿಸುವದರ ದಸೆಯಿಂದ ಉಪಯೋಗಿಸಬೇಕು.

**ಸ್ಟಾಂಪು :—**

| | |
|---|---|
| ಪಾವತಿಯು, ಇಪ್ಪತ್ತು ರೂಪಾಯಿಗಳಕಿಂತ ಹೆಚ್ಚಿನ ರಕಮಿನ ಅಥವಾ ಕಿಮ್ಮತ್ತಿನ ಸಾಲದ್ದು, ಯಾವಾಗ್ಯೆ ಅದು ಸಾಲದ ಪುರಾವೆಯಗೋಸ್ಕರ ಯಾವದಾದರೂ ಬುಕ್ಕಿನಲ್ಲಿ ಅಥವಾ ಬೇರೆ ಕಾಗದದ ಮೇಲೆ ಸಾಲಗಾರನು ಅಥವಾ ಸಾಲಗಾರನ ತರ್ಫೆನಿಂದ ಬರೆದದ್ದು ಅಥವಾ ಸಹಿ ಮಾಡಿದ್ದು ಇದ್ದು ಆ ಬುಕ್ಕು ಅಥವಾ ಕಾಗದವು ಸಾವಕಾರನ ಕೈಕೊಳ್ಳುವಿಕೆಯಲ್ಲಿ ಇಟ್ಟದ್ದೀತು ಆಗ್ಯೆ | ಒಂದು ಆಣೆ. |

ಮೇಲ್ಕಂಡ ಪ್ರಸಕ್ತಿಯಲ್ಲಿ ಒಂದು ಆಣೆಯ ಸ್ಟಾಂಪು ಅಂದರೆ ತಿಕೀಟು ಹಚ್ಚಬೇಕಾಗುವದು. ಇಂಥ ಪಾವತಿಯು ಸಾಲದ ಪುರಾವೆಯಗೋಸ್ಕರ

ಮಾತ್ರ ಮಾಡಿದ್ದರೆ ಅದಕ್ಕೆ ಮೇಲೆ ಹೇಳಿದ ಸ್ಟ್ಯಾಂಪು ಹಚ್ಚುವದು ಅವಶ್ಯವಿದೆ. ಆದರೆ ಇಂಥ ಪಾವತಿಯಲ್ಲಿ ಸದರಿ ಸಾಲವನ್ನು ಸಲ್ಲಿಸುವ ಬಗ್ಗೆ ಯಾವದಾದರೂ ವಾಗ್ದಾನ ಅಥವಾ ಬಡ್ಡಿ ಕೊಡುವ ಬಗ್ಗೆ ಅಥವಾ ಯಾವದಾದರೂ ಮಾಲು ಅಥವಾ ಇತರ ಮಿಳಕತು ಸ್ವಾಧೀನ ಮಾಡುವ ಬಗ್ಗೆ ಯಾವದಾದರೂ ಮಜಕೂರು ಇರಬಾರದು.

## ಬಡ್ಡಿಯೆಂದು ಹಣ ಕೊಟ್ಟಿದ್ದರ ಅಥವಾ ಮುದ್ದಲಿನ ಭಾಗವನ್ನು ಕೊಟ್ಟಿದ್ದರ ಪರಿಣಾಮವು (ಕಲಮು ೨೦)

ಸಾಲದ ಅಥವಾ ಮೃತಲೇಖಾರ್ಪಿತ ದಾನದ ಬಡ್ಡಿಯನ್ನು ಗೊತ್ತುಪಡಿಸಿದ ಮುದ್ದತು ತೀರುವ ಮೊದಲು ಆ ಸಾಲವು ಅಥವಾ ಮೃತಲೇಖಾರ್ಪಿತ ದಾನವು ಕೊಡುವದಕ್ಕೆ ಪಾತ್ರನಾಗಿರುವ ಮನುಷ್ಯನು ಅಥವಾ ಈ ವಿಷಯದಲ್ಲಿ ಯೋಗ್ಯ ರೀತಿಯಿಂದ ಅಧಿಕಾರಕೊಟ್ಟ ಅವನ ಮುಖ್ತಿಯಾರನು ಬಡ್ಡಿಯೆಂದು ಕೊಟ್ಟಿದ್ದರೆ, ಹಣ ಕೊಟ್ಟ ವೇಳೆಯಿಂದ ಹೊಸ ಮುದ್ದತು ಎಣಿಸಬೇಕು.

ಸದರಿ ಹಣವನ್ನು ಗೊತ್ತುಪಡಿಸಿದ ಮುದ್ದತಿನಲ್ಲಿ ಸ್ಪಷ್ಟವಾಗಿ ಬಡ್ಡಿಯೆಂದು ಕೊಟ್ಟಿರಬೇಕು. ಸಾವುಕಾರನು ತಾನೇ ಕೊಟ್ಟ ಹಣವನ್ನು ಬಡ್ಡಿಯಲ್ಲಿ ಜಮಾಮಾಡಿಕೊಂಡರೆ ಸಾಕಾಗುವದಿಲ್ಲ, ಕೊಟ್ಟ ಹಣವನ್ನು ಬಡ್ಡಿಯೆಂದು ಕೊಟ್ಟಿರುತ್ತದೆಂದು ಸ್ಪಷ್ಟವಾಗಿ ಅಥವಾ ಗರ್ಭಿತ ರೀತಿಯಿಂದ ತೋರಬೇಕು. ಋಣಿಯು ಆ ಹಣವನ್ನು ಬಡ್ಡಿಯೆಂದು ಕೊಟ್ಟಿರುತ್ತಾನೆಂದು ಬರಹಮೂಲಕವಾಗಿ ಅಥವಾ ಇತರ ಎರಡನೆ ರೀತಿಯಿಂದ ಹೇಳಿದರೆ ಅದನ್ನು ಸ್ಪಷ್ಟವಾಗಿ ತೋರಿಸಿದಂತೆ ಆಗುವದು. ಉ: (೧) ಯಾವದಾದರೂ ವಸೂಲ ಕೊಟ್ಟ ಹಣವನ್ನು ಮೊದಲು ಬಡ್ಡಿಯಲ್ಲಿ ವಜಾ ಆಗತಕ್ಕದ್ದು ಎಂದು ಪಕ್ಷಕಾರರಲ್ಲಿ ಸ್ಪಷ್ಟವಾದ ಕರಾರು ಇದ್ದಲ್ಲಿ ಮತ್ತು ಈ ಪ್ರಸಕ್ತಿಯಲ್ಲಿ ಯಾವದಾದರೂ ಹಣವನ್ನು ವಸೂಲ ಕೊಟ್ಟಿದ್ದಲ್ಲಿ ಅದನ್ನು ಮೊದಲು ಬಡ್ಡಿಯೆಂದು ಕೊಟ್ಟಂತೆ ಆಗುತ್ತದೆ. (೨) ಹಣವನ್ನು ಕೊಟ್ಟ ದಿವಸ ಸಾಲದ ಬಡ್ಡಿ ಆಕಾರ ೭೮ ರೂಪಾಯಿಯಾಗುತ್ತದೆ. ಮತ್ತು ಋಣಿಯು ೭೮ ರೂಪಾಯಿಯಷ್ಟೇ ಕೊಡುತ್ತಾನೆ. ಗರ್ಭಿತ ರೀತಿಯಿಂದ ಸದರಿ ಹಣವನ್ನು ಬಡ್ಡಿಯೆಂದು ಕೊಟ್ಟಂತೆ ಆಗುತ್ತದೆ.

ಬಡ್ಡಿಯನ್ನು ಕೊಟ್ಟಿದ್ದ ಪ್ರಸಂಗದಲ್ಲಿ ಬಡ್ಡಿಯನ್ನು ಕೊಟ್ಟ ಸಂಗತಿಯು ಅವನ್ನು ಕೊಡಲಿಕ್ಕೆ ಪಾತ್ರನಾದಂಥ ಮನುಷ್ಯನ **ದಸ್ತೂರಿನಮೇಲಿಂದ ಕಂಡ ಬರಬೇಕು** ಅಥವಾ ಸದರಿ ಸಂಗತಿಯು ಬರೆಯಲ್ಪಟ್ಟ ಮಜಕೂರಿನ ಅಡಿಗೆ ಅವನ್ನು ಕೊಡಲಿಕ್ಕೆ **ಪಾತ್ರನಾದಂಥ ಮನುಷ್ಯನ ಸಹಿಯಿರಬೇಕು.**

ಸದರಿಯಂತೆ ಬಡ್ಡಿಯನ್ನು ಕೊಟ್ಟಿದ್ದರಿಂದ ಅವನ್ನು ಕೊಟ್ಟ ತಾರೀಖಿನಿಂದ ಅಥವಾ ದಿವಸದಿಂದ ಹೊಸ ಮುದ್ದತು ದೊರಿಯುವದು, ಎಂದರೆ ಆ ದಿವಸದಿಂದ ಗೊತ್ತು ಪಡಿಸಿದ ಮುದ್ದತಿನಲ್ಲಿ ದಾವೆಯನ್ನು ಮಾಡಲಿಕ್ಕೆ ಬರುವದು.

**ಮುದ್ದಲಿನ ಭಾಗವನ್ನು ಕೊಟ್ಟಿದ್ದರ ಪರಿಣಾಮವು**— ಸಾಲದಲ್ಲಿಯ ಮುದ್ದಲಿನ ಭಾಗವನ್ನು ಗೊತ್ತುಪಡಿಸಿದ ಮುದ್ದತು ತೀರುವ ಮೊದಲು ಋಣಿಯು ಅಥವಾ ಈ ವಿಷಯದಲ್ಲಿ ಯೋಗ್ಯ ರೀತಿಯಿಂದ ಅಧಿಕಾರ ಕೊಟ್ಟಂಥಾ ಅವನ ಮುಖ್ತಿಯಾರನು ಬಡ್ಡಿಯೆಂದು ಕೊಟ್ಟಿದ್ದರೆ ಹಣ ಕೊಟ್ಟ ವೇಳೆಯಿಂದ ಹೊಸ ಮುದ್ದತು ಎಣಿಸಬೇಕು ; ಪರಂತು ಗೊತ್ತುಪಡಿಸುವದೇನೆಂದರೆ, ಸಾಲದ ಪೈಕಿ ಮುದ್ದಲಿನ ಭಾಗವು ಕೊಟ್ಟಿದ್ದ ಪ್ರಸಂಗದಲ್ಲಿ ಹಣವನ್ನು ಕೊಟ್ಟ ಸಂಗತಿಯು **ಹಣ ಕೊಡುವ ಮನುಷ್ಯನ ಸ್ವದಸ್ತೂರಿನ** ಮೇಲಿಂದ ಕಂಡು ಬರಬೇಕು. ಅಂದ ಮೇಲೆ ಮುದ್ದಲಿನ ಭಾಗವು ಕೊಟ್ಟಿದ್ದ ಪಕ್ಷಕ್ಕೆ ಮತ್ತು ಆದುದರಿಂದ ಹೊಸ ಮುದ್ದತನ್ನು ದೊರಿಯಬೇಕಾದರೆ ಆ ಬಗ್ಗೆ ಹಣ ಕೊಡುವ ಮನುಷ್ಯನ ಸ್ವದಸ್ತೂರಿನ ಲೇಖವು ಮಾಡುವದು ಅವಶ್ಯವಾಗಿದೆ. ಇದರಲ್ಲಿ ಒಳ್ಳೇ ಧ್ಯಾಸದಲ್ಲಿ ಇಡತಕ್ಕಂಥಾ ಸಂಗತಿಯು ಯಾವದೆಂದರೆ ಸದರೀ ಲೇಖದ ಮೇಲಿನ ಬರಹವು, ಬರೇ ಸಹಿ ಅಲ್ಲ ಆದರೆ ಪೂರಾ ಬರಹವು, ಹಣಕೊಡುವ ಮನುಷ್ಯನ ದಸ್ತೂರಿನದು ಇರಬೇಕು. ಹಣವನ್ನು ಕೊಟ್ಟ ಸಂಗತಿಯು ಯಾರಾದರೂ ಎರಡನೆ ಮನುಷ್ಯನು ಬರೆದು ಅದರ ಅಡಿಗೆ ಹಣ ಕೊಡುವವನು ಸಹಿ ಮಾಡಿದ್ದರೆ ಸಾಕಾಗುವದಿಲ್ಲ. ಹಣವನ್ನು ಕೊಟ್ಟ ಮಜಕೂರು ಸಹ ಅವನ ಎಂದರೆ ಹಣ ಕೊಡುವವನ ದಸ್ತೂರಿನದು ಇರಬೇಕು. ಎಂದರೆ ಈ ಬಗ್ಗೆ ಯಾವತ್ತು ಮಜಕೂರು ಸಹಿ ಸಹಿತವಾಗಿ ಹಣ ಕೊಡುವ ಮನುಷ್ಯನ ದಸ್ತೂರಿನದು ಇರಬೇಕು ಎಂದರೆ ಅವನ ಕೈ ಬರಹದ್ದು ಇರಬೇಕು.

# ೧೦ನೆಯ ಪ್ರಕರಣ

## ನೋಂದಣಿ ಕಾನೂನಿನ ಸ್ವಲ್ಪ ಪರಿಚಯವು

### ಅವಶ್ಯವಾಗಿ ನೋಂದಿಸಬೇಕಾದ ದಸ್ತೈವಜುಗಳು

ಈ ಕೆಳಗೆ ಬರೆದ ದಸ್ತೈವಜುಗಳನ್ನು ಅವಶ್ಯವಾಗಿ ನೋಂದಿಸಬೇಕು. ಅವುಗಳನ್ನು:—

(ಅ) ಸ್ಥಾವರಾಸ್ತಿಯ ದಾನಪತ್ರಗಳು;

(ಬ) ಮರಣೋತ್ತರದ ವ್ಯವಸ್ಥೆ ಮಾಡುವ ವಿಷಯವಲ್ಲದಂಥ ಯಾವ ಇತರ ಲೇಖಗಳ ಉದ್ದೇಶದ ಅಥವಾ ಪರಿಣಾಮದ ಮೇಲಿಂದ ಯಾವದಾದರೂ ಸ್ಥಾವರಾಸ್ತಿಗೆ ಅಥವಾ ಸ್ಥಾವರಾಸ್ತಿಯಲ್ಲಿ ನೂರು ರೂಪಾಯಿಯ ಅಥವಾ ಅದಕ್ಕಿಂತ ಹೆಚ್ಚು ರೂಪಾಯಿ ಕಿಮ್ಮತಿನ ಯಾವದಾದರೂ ಹಕ್ಕು ಅಥವಾ ದಾವೆ ಅಥವಾ ಹಿತಸಂಬಂಧವು (ಅದು ನಿವಿಷ್ಟವಾಗಿರಲಿ ಆನುಷಂಗಿಕವಾಗಿರಲಿ) ಸಾಂಪ್ರತದಲ್ಲಿ ಉತ್ಪನ್ನವಾಗುತ್ತಿರುವದೋ ಅಥವಾ ಮುಂದೆ ಉತ್ಪನ್ನವಾಗತಕ್ಕದ್ದಾಗಿರುವದೋ, ಅಥವಾ ಸಾಂಪ್ರತದಲ್ಲಿ ಗೊತ್ತಾಗುತ್ತಿರುವದೋ ಅಥವಾ ಮುಂದೆ ಗೊತ್ತಾಗತಕ್ಕದ್ದಾಗಿರುವದೋ, ಅಥವಾ ಸಾಂಪ್ರತದಲ್ಲಿ ಬೇರೆ ಯಾರ ಕಡೆಗೆ ಒಪ್ಪಿಸಿಕೊಡಲ್ಪಡುತ್ತಿರುವದೋ ಅಥವಾ ಮುಂದೆ ಬೇರೆಯವರ ಕಡೆಗೆ ಒಪ್ಪಿಸಿಕೊಡಿಸಲ್ಪಡತಕ್ಕದ್ದಾಗಿರುವದೋ ಅಥವಾ ಅವರು ಮಟ್ಟು ಸಾಂಪ್ರತದಲ್ಲಿ ಗೊತ್ತು ಆಗುತ್ತಿರುವದೋ ಅಥವಾ ಮುಂದೆ ಗೊತ್ತಾಗತಕ್ಕದ್ದಾಗಿರುವದೋ, ಅಥವಾ ಅದು ಸಾಂಪ್ರತದಲ್ಲಿ ಇಲ್ಲದಂತಾಗುತ್ತಿರುವದೋ ಅಥವಾ ಮುಂದೆ ಇಲ್ಲದಂತಾಗತಕ್ಕದ್ದಾಗಿರುವದೋ ಅಂಥಾ ಲೇಖಗಳು;

(ಕ) ಅಂಥ ಯಾವದಾದರೂ ಹಕ್ಕು ಅಥವಾ ದಾವೆ ಅಥವಾ ಹಿತಸಂಬಂಧವು ಉತ್ಪನ್ನವಾದಬಗ್ಗೆ ಅಥವಾ ಗೊತ್ತಾದ ಬಗ್ಗೆ ಅಥವಾ ಬೇರೆಯವರಿಗೆ ಒಪ್ಪಿಸಿಕೊಟ್ಟ ಬಗ್ಗೆ ಅಥವಾ ಅದರ ಮಟ್ಟು ಗೊತ್ತಾದಬಗ್ಗೆ ಅಥವಾ ಅದು ಇಲ್ಲದಂತಾದ ಬಗ್ಗೆ ಹಣದ ಪಾವತಿಯನ್ನು ಅಥವಾ ಕೊಡೋಣವನ್ನು, ಮರಣೋತ್ತರ ವ್ಯವಸ್ಥೆಮಾಡುವ ಬಾಬತಿನವಲ್ಲದಂಥ ಯಾವ ಲೇಖಗಳಲ್ಲಿ ಕಬೂಲು ಮಾಡಲ್ಪಟ್ಟಿರುವದೋ ಆ ಲೇಖಗಳು; ಮತ್ತು

(ಡ) ಪ್ರತಿವರ್ಷ ನಡೆಯುವ ಅಥವಾ ಒಂದು ವರ್ಷಕ್ಕಿಂತ ಹೆಚ್ಚಿನ ಮುದ್ದತಿನ ಅಥವಾ ಪ್ರತಿವರ್ಷವೂ ಬಾಡಿಗೆಯನ್ನು ಗೊತ್ತು ಪಡಿಸಿ ಮಾಡಲ್ಪಡುವ ಸ್ಥಾವರಾಸ್ತಿಯ ಪಟ್ಟಿಗಳು.

(ಇ) ಮೃತ್ಯುಪತ್ರದ ಮೇಲಿಂದ ಅಧಿಕಾರವನ್ನು ಕೊಟ್ಟಿರದ, ಹುಡಗನನ್ನು ದತ್ತಕ ತೆಗೆದುಕೊಂಬುವ ಅಧಿಕಾರ ಪತ್ರಗಳನ್ನು

ಇವುಗಳನ್ನೆಲ್ಲ ಅವಶ್ಯವಾಗಿ ನೊಂದಿಸಬೇಕು.

**ಸಾರಾಂಶ:**—೧. ಸ್ಥಾವರಾಸ್ತಿಯ ದಾನ ಪತ್ರಗಳು ಅಂದರೆ ಬಕ್ಷೀಸ ಪತ್ರಗಳು

೨. ಮೃತ್ಯುಪತ್ರವನ್ನು ಹೊರ್ತುಪಡಿಸಿ ಒಂದು ನೂರು ರೂಪಾಯಿ ಇಲ್ಲವೆ ಅದಕ್ಕೂ ಹೆಚ್ಚಿನ ಬೆಲೆಯ ಸ್ಥಾವರಾಸ್ತಿಯ ಹಕ್ಕಿನ ವಿನಿಯೋಗವನ್ನು ಯಾವ ದಸ್ತೈವಜಿನ ಮುಖಾಂತರವಾಗಿ ಆಗಿರುತ್ತದೆಯೋ ಆ ದಸ್ತೈವಜು,

೩. (ಅ) ಪ್ರತಿವರ್ಷ ನಡೆಯುವ ಅಥವಾ

(ಬ) ಒಂದು ವರ್ಷದಕ್ಕಿಂತ ಹೆಚ್ಚಿನ ಮುದ್ದತಿನ ಅಥವಾ

(ಕ) ಪ್ರತಿವರ್ಷವೂ ಬಾಡಿಗೆಯನ್ನು ಗೊತ್ತು ಪಡಿಸಿ ಮಾಡಲ್ಪಡುವ, ಸ್ಥಾವರಾಸ್ತಿಯ ಪಟ್ಟಿಗಳು ಅಂದರೆ ಬಾಡಿಗೆಪತ್ರಗಳು ಅಥವಾ ಲಾವಣಿ ಪತ್ರಗಳು.

೪. ದತ್ತಕತೆಗೆದುಕೊಂಬುವ ಅಧಿಕಾರ ಪತ್ರಗಳನ್ನು (ಮೃತ್ಯುಪತ್ರದ ಮುಖಾಂತರವಾಗಿ ಕೊಡಲ್ಪಟ್ಟಿದ್ದರೆ)

ಇವುಗಳನ್ನೆಲ್ಲ ಅವಶ್ಯವಾಗಿ ನೋಂದಿಸಬೇಕು,

## ಯಾವ ದಸ್ತೈವಜುಗಳನ್ನು ನೋಂದಿಸುವದು ಐಚ್ಛಿಕವಾಗಿರುವದೋ ಆ ದಸ್ತೈವಜುಗಳು:—

ಈ ಕೆಳಗಿನ ದಸ್ತೈವಜುಗಳ ಪೈಕಿ ಯಾವದಾದರೂ ದಸ್ತೈವಜುಗಳನ್ನು ನೋಂದಿಸಬಹುದು, ಅವು ಯಾವವೆಂದರೆ:—

(ಅ) (ದಾನಪತ್ರ ಮತ್ತು ಮೃತ್ಯುಪತ್ರಗಳನ್ನ ಹೊರತು ಪಡಿಸಿ) ಯಾವ ಇತರ ಲೇಖಗಳ ಮೇಲಿಂದ ಯಾವದಾದರೂ ಸ್ಥಾವರಾಸ್ತಿಯ ಮೇಲೆ ಅಥವಾ ಸ್ಥಾವರಾಸ್ತಿಯಲ್ಲಿ ನೂರು ರೂಪಾಯಿಗಿಂತ ಕಡಿಮೆ ಕ್ರಯವುಳ್ಳ ಹಕ್ಕು ಅಥವಾ ದಾವೆ ಅಥವಾ ಹಿತಸಂಬಂಧವು (ಅದು ನಿವಿಷ್ಟವಾಗಿರಲಿ, ಆನುಷಂಗಿಕ ವಾಗಿರಲಿ) ಸಾಂಪ್ರತದಲ್ಲಿ ಉತ್ಪನ್ನ ಉತ್ಪನ್ನವಾಗಿರುವದೋ ಅಥವಾ ಮುಂದೆ ಉತ್ಪನ್ನವಾಗಿ ತಕ್ಕದ್ದಾಗಿರುವದೋ ಅಥವಾ ಸಾಂಪ್ರತದಲ್ಲಿ ಗೊತ್ತು ಆಗು ತ್ತಿರುವದೋ ಅಥವಾ ಮುಂದೆ ಗೊತ್ತಾಗತಕ್ಕದ್ದಾಗಿರುವದೋ ಅಥವಾ ಸಾಂಪ್ರತದಲ್ಲಿ ಬೇರೆಯವರ ಕಡೆಗೆ ಒಪ್ಪಿಸಿ ಕೊಡಲ್ಪಡುತ್ತಿರುವದೋ ಅಥವಾ ಮುಂದೆ ಬೇರೆಯವರ ಕಡೆಗೆ ಒಪ್ಪಿಸಿ ಕೊಡಲ್ಪಡತಕ್ಕದ್ದಾಗಿದೆಯೋ ಅಥವಾ ಸಾಂಪ್ರತದಲ್ಲಿ ಅದರ ಮಟ್ಟು ಗೊತ್ತು ಆಗುತ್ತಿರುವದೋ ಅಥವಾ ಅದು ಸಾಂಪ್ರ ತದಲ್ಲಿ ಇಲ್ಲದಂತಾಗುತ್ತಿರುವದೋ ಅಥವಾ ಮುಂದೆ ಇಲ್ಲದಂತಾಗತಕ್ಕದ್ದಾಗಿರು ವದೋ ಅಂಥ ಇತರ ಲೇಖಗಳು.

(ಬ) ಅಂಥ ಯಾವದಾದರೂ ಹಕ್ಕು ಅಥವಾ ದಾವೆ ಅಥವಾ ಹಿತಸಂ ಬಂಧವು ಉತ್ಪನ್ನವಾದ ಬಗ್ಗೆ ಅಥವಾ ಗೊತ್ತಾದಬಗ್ಗೆ ಅಥವಾ ಬೇರೆಯವರಿಗೆ ಒಪ್ಪಿಸಿಕೊಟ್ಟ ಬಗ್ಗೆ ಅಥವಾ ಅದರ ಮಟ್ಟು ಗೊತ್ತಾದ ಬಗ್ಗೆ ಅಥವಾ ಅದು ಇಲ್ಲದಂತಾದ ಬಗ್ಗೆ ಹಣ ಮುಟ್ಟಿತೆಂದು ಅಥವಾ ಕೊಡಲ್ಪಟ್ಟಿತೆಂದು ಕಬೂಲು ಮಾಡಿರುವ ಲೇಖಗಳು.

(ಕ) ಒಂದು ವರ್ಷದ ಮುದ್ದತಿಗೆ ಮೀರದಂಥ ಸ್ಥಾವರಾಸ್ತಿಯ ಪಟ್ಟೆಗಳು.

(ಡ) (ಮೃತ್ಯುಪತ್ರಗಳಲ್ಲದಂಥ) ಯಾವ ಲೇಖಗಳ ಉದ್ದೇಶದ ಅಥವಾ ಪರಿಣಾಮದ ಮೇಲಿಂದ ಯಾವದಾದರೂ ಜಂಗಮ ಮಾಲಿನ ಮೇಲೆ ಅಥವಾ ಜಂಗಮ ಮಾಲಿನಲ್ಲಿ ಯಾವದಾದರೂ ಹಕ್ಕು ಅಥವಾ ದಾವೆ ಅಥವಾ ಹಿತಸಂ ಬಂಧವು ಉತ್ಪನ್ನವಾಗುತ್ತಿರುವದೋ ಅಥವಾ ಗೊತ್ತಾಗುತ್ತಿರುವದೋ ಅಥವಾ ಬೇರೆಯವರ ಕಡೆಗೆ ಒಪ್ಪಿಸಿಕೊಡಲ್ಪಡುತ್ತಿರುವದೋ ಅಥವಾ ಅದರ ಮಟ್ಟು ಗೊತ್ತಾಗುತ್ತಾ ಇರುವದೋ ಅಥವಾ ಅದು ಇಲ್ಲದಂತೆ ಆಗುತ್ತಿರುವದೋ ಆ ಲೇಖಗಳು —

(ಇ) ಮೃತ್ಯುಪತ್ರಗಳು ಮತ್ತು

(ಫ) ಯಾವ ಇತರ ದಸ್ತೈವಜುಗಳನ್ನು ನೋಂದಿಸುವದು ಅವಶ್ಯವೆ ಲ್ಲವೋ ಆ ಎಲ್ಲ ದಸ್ತೈವಜುಗಳು

ಈ ದಸ್ತೈವಜುಗಳು ನೋಂದಿಸುವದು ಯಾ ಇಲ್ಲ ಎಂಬುದನ್ನು ಪಕ್ಷಕಾ ರರ ಮರ್ಜಿಯು ಮೇಲೆ ಅವಲಂಬಿಸಿರುತ್ತದೆ. ಆದರೆ ಮೊದಲು ಹೇಳಿದ ದಸ್ತೈ ವಜುಗಳನ್ನು ಅವಶ್ಯವಾಗಿ ನೋಂದಿಸಬೇಕು.

## ನೋಂದಿಸುವದು ಅವಶ್ಯವಾಗಿರು ದಸ್ತೈವಜು ಗಳನ್ನು ನೋಂದಿಸದೆ ಇದ್ದದರ ಪರಿಣಾಮವು

• ನೋಂದಿಸುವ ಅವಶ್ಯವಿರುವ ದಸ್ತೈವಜು ನೋಂದಿಸಲ್ಪಟ್ಟ ಹೊರ್ತಾಗಿ:—

(ಅ) ಆ ದಸ್ತೈವಜಿನೊಳಗಿನ ಯಾವದಾದರೂ ಸ್ಥಾವರಾಸ್ತಿ ಲಾಗೂ ಆಗಲಿಕ್ಕಿಲ್ಲ ಅಥವಾ

(ಬ) ದತ್ತಕ ತೆಗೆದುಕೊಳ್ಳುವ ಯಾವದಾದರೂ ಅಧಿಕಾರವು ಆ ದಸ್ತೈ ವಜಿನ ಮೇಲಿಂದ ಪ್ರಾಪ್ತವಾಗಲಿಕ್ಕಿಲ್ಲ ಅಥವಾ

(ಕ) ಸದರಿ ಪ್ರಕಾರದ ಆಸ್ತಿಯು ಸಂಬಂಧದ ಅಥವಾ ಸದರಿ ಪ್ರಕಾರ ಅಧಿಕಾರ ಕೊಡುವ ಸಂಬಂಧದ ಯಾವದಾದರೂ ವ್ಯವಹಾರದ ಪುರಾವೆಯಾಗಿ ತೆಗೆದುಕೊಳ್ಳಲ್ಪಡಲಿಕ್ಕಿಲ್ಲ.

**ದಸ್ತೈವಜುಗಳನ್ನು ಯಾವ ಮುದ್ದತಿನಲ್ಲಿ ನೋಂದಿಸುವದ ಕ್ಕಾಗಿ ಹಾಜರು ಮಾಡತಕ್ಕದ್ದು ?—** ಮೃತ್ಯುಪತ್ರದ ಹೊರತು ಇತರ ಯಾವ ಯಾವದಾದರೂ ದಸ್ತೈವಜನ್ನು, ಅದು ಆದ ತಾರೀಖಿನಿಂದ ನಾಲ್ಕು ತಿಂಗಳೊಳಗೆ ಯೋಗ್ಯ ಅಮಲದಾರನ ಕಡೆಗೆ ನೋಂದಿಸುವ ಬಗ್ಗೆ ಹಾಜರು ಮಾಡಬೇಕು. ಈ ಮುದ್ದತಿನಲ್ಲಿ ಅದನ್ನು ಹೀಗೆ ಹಾಜರು ಮಾಡದಿದ್ದಲ್ಲಿ ಅದನ್ನು ನೋಂದಾಯಿಸಲಿಕ್ಕೆ ತೆಗೆದುಕೊಳ್ಳಲಿಕ್ಕಿಲ್ಲ. ಮೃತ್ಯುಪತ್ರವನ್ನು ಬೇಕಾದ ವೇಳೆಯಲ್ಲಿ ನೋಂದಿಸುವಗೋಸ್ಕರ ಹಾಜರುಮಾಡಬಹುದು; ಅದಕ್ಕೆ ಮೇಲೆ ಹೇಳಿದ ಮುದ್ದತಿನ ಅಡ್ಡಿಯಾಗಲಿಕ್ಕಿಲ್ಲ.

**ಯಾವ ಸ್ಥಳದಲ್ಲಿ ದಸ್ತೈಜನ್ನು ನೋಂದಿಸಬೇಕು ?—** ಪ್ರತಿಯೊಂದು ದಸ್ತೈವಜನ್ನು ಅದು ಯಾವ ಆಸ್ತಿಯು ಸಂಬಂಧದ್ದಾಗಿರುವದೋ ಆ ಎಲ್ಲ ಆಸ್ತಿಯು ಅಥವಾ ಅದರ ಏನಕೆ ಭಾಗವು ಯಾವ ಸಬ್ಬರಜಿಸ್ಟ್ರಾರನ

ಅಧಿಕಾರದ ಹದ್ದಿಯಲ್ಲಿ ಇರುವದೋ ಆ ಸಬ್ಬರಜಿಸ್ಟ್ರಾರನ ಕಚೇರಿಯಲ್ಲಿ ನೋಂದಿಸುವಗೋಸ್ಕರ ಹಾಜರು ಮಾಡಬೇಕು. ಯಾವ ಸಬ್ಬರಜಿಸ್ಟ್ರಾರನ ಅಧಿಕಾರದ ಹದ್ದಿಯಲ್ಲಿ ನೋಂದಿಸುವ ದಸ್ತೈವಜಿನಲ್ಲಿ ಸಮಾವೇಶವಾದಂಥ ಪೂರಾ ಆಸ್ತಿಯು ಇರುವದೋ ಅಥವಾ ಅದರ ಭಾಗವನ್ನು ಇರುವದೋ ಆ ಸಬ್ಬರಜಿಸ್ಟ್ರಾರನ ಕಚೇರಿಯಲ್ಲಿ ಆ ದಸ್ತೈವಜನ್ನು ನೋಂದಿಸುವದಕ್ಕಾಗಿ ಹಾಜರು ಮಾಡಬೇಕು; ಸದರೀ ಆಸ್ತಿಯು ಪೈಕಿ ಸ್ವಲ್ಪ ಭಾಗವು ಒಂದು ಸಬ್ಬರಜಿಸ್ಟ್ರಾರನ ಅಧಿಕಾರದ ಹದ್ದಿಯಲ್ಲಿ ಇದ್ದು ಉಳಿದ ಭಾಗವು ಮತ್ತೊಂದು ಸಬ್ಬರಜಿಸ್ಟ್ರಾರನ ಹದ್ದಿಯಲ್ಲಿ ಇದ್ದರೆ ಸದರೀ ಎರಡು ಸಬ್ಬರಜಿಸ್ಟ್ರಾರರ ಪೈಕಿ ಯಾವದಾದರೊಬ್ಬರ ಕಚೇರಿಯಲ್ಲಿ ಸದರೀ ದಸ್ತೈವಜನ್ನು ನೋಂದಿಸಬಹುದು. ಸಾಧಾರಣತಃ ಕಚೇರಿಯಲ್ಲಿ ಪ್ರತಿಯೊಂದು ದಸ್ತೈವಜನ್ನು ನೋಂದಿಸುವದಕ್ಕೆ ಹಾಜರು ಮಾಡಬೇಕಾಗುವದು. ವಿಶೇಷ ಪ್ರಸಂಗದಲ್ಲಿ ಮತ್ತು ಯೋಗ್ಯ ಪ್ರಸಕ್ತಿಯಲ್ಲಿ ಖಾಸಗಿ ಮನೆಯಲ್ಲಿ ಸಹಾ ಸಬ್ಬರಜಿಸ್ಟ್ರಾರನಿಗೆ ಆ ಮನೆಗೆ ವೈದು ದಸ್ತೈವಜನ್ನು ನೋಂದಿಸಬಹುದು.

**ದಸ್ತೈವಜನ್ನು ನೋಂದಿಸುವಗೋಸ್ಕರ ಯಾರ ಹಾಜರು ಮಾಡಬಹುದು?**—ನೋಂದಿಸತಕ್ಕ ಪ್ರತಿಯೊಂದು ದಸ್ತೈವಜನ್ನು ನೋಂದಿಸುವ ಯೋಗ್ಯಕಚೇರಿಯಲ್ಲಿ ಕೆಳಗೆ ಬರೆವ ಜನರ ಪೈಕಿ ಯಾರಾದರೂ ಹಾಜರು ಮಾಡಬಹುದು. ಅವರು:—

(ಅ) ಆ ದಸ್ತೈವಜು ಮಾಡಿಕೊಡುವ ಯಾವನಾದರೂ ಮನುಷ್ಯನು ಅಥವಾ ದಸ್ತೈವಜಿನ ಮೇಲಿಂದ ದಾವೆ ಹೇಳುವ ಯಾವನಾದರೂ ಮನುಷ್ಯನು ಅಥವಾ ಹುಕುಮನಾಮೆಯು ಅಥವಾ ಹುಕುಮಿನ ನಕಲಿನ ಪ್ರಸಂಗದಲ್ಲಿ ಆ ಹುಕುಮನಾಮೆಯು ಅಥವಾ ಹುಕುಮಿನ ಮೇಲಿಂದ ದಾವೆ ಹೇಳುವ ಯಾವನಾದರೂ ಮನುಷ್ಯನು, ಅಥವಾ—

(ಬ) ಸದರಿ ಪ್ರಕಾರದ ಮನುಷ್ಯನ ಪ್ರತಿನಿಧಿಯು ಅಥವಾ ಅಸೈನಿಯು ಅಥವಾ—

(ಕ) ಸದರಿ ಪ್ರಕಾರದ ಮನುಷ್ಯನ ಅಥವಾ ಪ್ರತಿನಿಧಿಯು ಯಾವ ಮುಖ್ತಿಯಾರನಿಗೆ ಯೋಗ್ಯವಾದ ಮತ್ತು ಕಾಯದೇಶೀರ ಅಧಿಕಾರ ಕೊಟ್ಟಿದ್ದೀತೋ ಆ ಮುಖ್ತಿಯಾರನು

ಇವರ ಪೈಕಿ ಯಾರಾದರೂ ನೋಂದಿಸತಕ್ಕ ಪ್ರತಿಯೊಂದು ದಸ್ತೈಜನ್ನು ನೋಂದಿಸುವದಕ್ಕಾಗಿ ಹಾಜರು ಮಾಡಬಹುದು.

# ೧ನೆಯ ಪ್ರಕರಣ

## ಪ್ರಾಮಿಸರಿನೋಟು

ವಿವಕ್ಷಿತ ಮನುಷ್ಯನಿಗೆ ಮಾತ್ರ ಯಾ ಅಂಥವನ ಹುಕುಮಿನಿಂದ ಮತ್ತೊಬ್ಬ ವಿವಕ್ಷಿತ ಮನುಷ್ಯನಿಗೆ ಯಾ ಖತ್ತನ್ನು ಧಾರಣಮಾಡುವವನಿಗೆ, ವಿವಕ್ಷಿತ ಹಣ ವನ್ನು ಬಿನ್ನ ಶರ್ತಿನಿಂದ ಕೊಡುವದಕ್ಕೆ ಕಟ್ಟುಕೊಳ್ಳುವಂಥ ಹಾಗೂ ಖತ್ತನ್ನು ಮಾಡಿಕೊಟ್ಟವನ ಸಹಿಯುಳ್ಳಂಥ ಹಾಗೂ ಬರಹ ಮೂಲಕವಾದಂಥ ಖತ್ತಿಗೆ "**ಪ್ರಾಮಿಸರಿ ನೋಟು**" ಎಂದೆನ್ನುತ್ತಾರೆ. ಇದರಲ್ಲಿ ಬ್ಯಾಂಕನೋಟಿನ ಅಥವಾ ಕರನ್ಸಿನೋಟಿನ ಅಂದರೆ ಚಲನ ನೋಟಿನ ಸಮಾವೇಶವಾಗುವದಿಲ್ಲ.

ಇದರ ವಿವರಣೆಯನ್ನು ಕೆಳಗಿನಂತೆ ಮಾಡೋಣ– ಕಾಯದೇಶೀರ ರೀತಿ ಯಿಂದಲೂ ಯೋಗ್ಯವಾಗಿಯೂ ಪ್ರಾಮಿಸರಿ ನೋಟು ಮಾಡಬೇಕಾಗಿದ್ದಲ್ಲಿ ಅದ ರಲ್ಲಿ ಕೆಳಗೆ ಬರೆದ ಸಂಗತಿಗಳು ಅವಶ್ಯವಾಗಿರಬೇಕು.

೧ ವಿವಕ್ಷಿತ ಹಣವನ್ನು— ಕೊಡತಕ್ಕ ಹಣವನ್ನು ನಿಶ್ಚಿತಗೊಳಿಸಲಿಕ್ಕೆ ಬೇಕು. ಅದರಲ್ಲಿ ಇಂತಿಷ್ಟು ರಕಮು ಕೊಡತಕ್ಕದಿದೆಂದು ಸ್ಪಷ್ಟವಾಗಿ ಬರೆಯ ಬೇಕು. ಕೊಡತಕ್ಕ ರಕಮು ನಿಶ್ಚತವಾಗಿ ತೋರಿಸದಿದ್ದರೆ ಅದು ಪ್ರಾಮಿಸರಿ ನೋಟು ಆಗುವದಿಲ್ಲ. ಹಣವನ್ನು ಮಾತ್ರ ಕೊಡುವ ಕರಾರು ಮಾಡಿರಬೇಕು. ಇತರ ರೀತಿಯಿಂದ ಅಂದರೆ ಯಾವದೇ ವಸ್ತುಕೊಡುವ ಯಾ ನೌಕರಿಮಾಡಿ ತೀರಿ ಸುವ ಕರಾರು ಇದ್ದರೆ ನಡಿಯಲಾಗದು. ಕಾರಣಾ ಹಣವನ್ನು ಕೊಡಲಿಕ್ಕೆ ಒಪ್ಪಿ ಕೊಂಡಿರಬೇಕು.

೨. ಬಿನ್ನ ಶರ್ತಿನಿಂದ ಕೊಡುವದಕ್ಕೆ ಕಟ್ಟುಕೊಳ್ಳಂಥ— ಯಾವದಾ ದರೂ ಶರ್ತಿಗೆ ಒಳಪಟ್ಟು ಹಣಕೊಡುವದಕ್ಕೆ ಒಪ್ಪಿಕೊಂಡರೆ ಅದು ಪ್ರಾಮಿಸರಿ ನೋಟು ಆಗುವದಿಲ್ಲ; ಆದರೆ ಬಿನ್ನ ಶರ್ತಿನಿಂದ ಹಣ ಕೊಡುವದಕ್ಕೆ ಒಪ್ಪಿ ಕೊಂಡಿರಬೇಕು. ಯಾ ಕಟ್ಟಿಕೊಂಡಿರಬೇಕು. ಇಷ್ಟೇ ಅಲ್ಲ ಹಣಕೊಡುವದಕ್ಕೆ ಮಾತನ್ನು ಯಾ ವಾಗ್ದಾನವನ್ನು ಕೊಡಬೇಕಾಗಿರುವದು.

ಉ:—ಬರೇ ಇಂತಿಷ್ಟ ರೂಪಾಯಿಗಳನ್ನು ಕೊಡತಕ್ಕದ್ದದ್ದೆಂದು ಕಬೂಲ ಮಾಡಿದರೆ ಯಾ ಅಂಗೀಕಾರಮಾಡಿದರೆ ಸಾಕಾಗುವದಿಲ್ಲ. "ನನ್ನ ಮೇಲೆ ಇಂತಿಷ್ಟ ಬಾಕಿಹೊರಡುತ್ತವೆ" ಎಂದು ಹೇಳಿದರೆ ಅದು ಪ್ರಾಮಿಸರಿ ನೋಟು ಆಗುವದಿಲ್ಲ. ಸದರೀ ಮಜಕೂರಿನ ಕೂಡಾ "ಅದನ್ನು ನಾನು ಕೊಡಲಿಕ್ಕೆ ಒಪ್ಪಿಕೊಂಡಿರು ತ್ತೇನೆ" ಎಂದು ಮಾತು ಕೊಡತಕ್ಕಂಥ ಮಜಕೂರು ಕಾಣಿಸುವದು ಅವಶ್ಯ ವಿದೆ; ಮತ್ತು ಈ ಮಜಕೂರು ಕಾಣಿಸಿದರೆ ಮಾತ್ರ ಅದು ಪ್ರಾಮಿಸರಿ ನೋಟು ಆಗುವದು.

೩ ಮಾಡಿಕೊಟ್ಟವನ ಸಹಿವುಳ್ಳಂಥ— ಪ್ರಾಮಿಸರಿ ನೋಟು ಬರೆದು ಕೊಡುವವನು ಅದರ ಮೇಲೆ ಸಹಿ ಮಾಡಿರಬೇಕು. ನಿರಕ್ಷರ ಮನುಷ್ಯನು 'ಯಾ' ಓದಬರಹ ಅರಿಯದವನು ಅದರ ಮೇಲೆ ತನ್ನ ನಿಶಾನಿಯನ್ನು ಹಾಕಿರಬೇಕು. ಓದು ಬರಹ ಅರಿಯದವನು ಸಹಿ ಮಾಡುವದು ಶಕ್ಯವಿಲ್ಲ; ಕಾರಣಾ ಸದರೀ ಅವನು ತನ್ನ ನಿಶಾನಿಯನ್ನು ಪ್ರಾಮಿಸರಿ ನೋಟಿನ ಮೇಲೆ ಹಾಕಿದರೆ ಸಾಕಾಗುವದು.

೪ ಬರಹ ಮೂಲಕವಾದಂಥ—ಬರೇ ಬಾಯಿ ಮಾತಿನ ಕರಾರು ಇದ್ದರೆ ಸಾಕಾಗುವದಿಲ್ಲ. ಆ ಕರಾರು ಬರಹ ಮೂಲಕವಾಗಿರಬೇಕು, ಮತ್ತು ಖತ್ತಿನ ಮೇಲೆ ಅದನ್ನು ಸ್ಪಷ್ಟವಾಗಿ ಕಾಣಿಸಿರಬೇಕು.

೫ ವಿವಕ್ಷಿತ ಮನುಷ್ಯನಿಗೆ ವಗೈರೆ— ಯಾವ ಮನುಷ್ಯನಿಗೆ ಹಣ ಕೊಡಬೇಕೆಂದು ಮಾತನ್ನು ಕೊಟ್ಟಿರುತ್ತದೆಯೋ ಆ ಮನುಷ್ಯನು ನಿಶ್ಚಿತವಾಗಿರ ಬೇಕು. ಅಂಥವನಿಗೆ ಹಣ ಕೊಡತಕ್ಕದ್ದೆಂದು ಸ್ಪಷ್ಟವಾಗಿ ಹೇಳಬೇಕು.

## ಪ್ರಾಮಿಸರಿ ನೋಟಿನ ಕೆಲವು ನಮೂನೆಗಳು

(೧) "ನಾನು, ಗುರುನಾಥ ಡೀಕಪ್ಪಾ ಹುಬ್ಬಳ್ಳಿ ಇವನಿಗೆ ೫೦೦ ರೂಪಾ ಯಿಗಳನ್ನು ಕೊಡಲಿಕ್ಕೆ ಒಪ್ಪಿಕೊಂಡಿರುತ್ತೇನೆ.

ಸಹಿ. ವಿನಾಯಕ ರಂಗೋ ಕುಲಕರ್ಣಿ.

(೨) ನಾನು ಗುರುನಾಥ ಡೀಕಪ್ಪಾ ಹುಬ್ಬಳ್ಳಿ ಎಂಬುವವನಿಗೆ ಯಾ ಅವನ ಹುಕುಮಿನಿಂದ ಮತ್ತೊಬ್ಬ ವಿವಕ್ಷಿತ ಮನುಷ್ಯನಿಗೆ ಯಾ ಈ ಖತ್ತನ್ನು ಧಾರಣ ಮಾಡುವವನಿಗೆ ೫೦೦ ರೂಪಾಯಿಗಳನ್ನು ಕೊಡಲಿಕ್ಕೆ ಒಪ್ಪಿಕೊಂಡಿರು ತ್ತೇನೆ.

ಸಹಿ. ಕಲ್ಲಪ್ಪಾ ದ್ಯಾವಪ್ಪಾ ಪ್ಯಾಟಿ.

**ಸೂಚನೆ**—ಪ್ರಾಮಿಸರಿ ನೋಟಿಗೆ ಅವಶ್ಯವಾದ ಸಂಗತಿಗಳು ಮೇಲಿನ ಎರಡು ಉದಾಹರಣೆಯಲ್ಲಿ ಅವೆ ಯಾ ಇಲ್ಲ ಎಂಬದನ್ನು ನೋಡುವಾ—

೧ ವಿವಕ್ಷಿತ ಹಣವನ್ನು—೫೦೦ ರೂಪಾಯಿಗಳೆಂದು ಇವುಗಳಲ್ಲಿ ಸ್ಪಷ್ಟವಾಗಿದೆ.

೨ ಬಿನ್ನ ಶರ್ತಿನಿಂದ ಕೊಡುವದಕ್ಕೆ ಒಪ್ಪಿಕೊಂಡಂಥ ಯಾ ಕಟ್ಟಿಕೊಳ್ಳದಂಥ ಕೊಡಲಿಕ್ಕೆ ಒಪ್ಪಿಕೊಂಡಿರುತ್ತೇನೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುತದೆ. ಯಾವದೇ ಶರ್ತಿಗೆ ವಳಪಟ್ಟುಕೊಡುತ್ತೇನೆಂದು ಹೇಳಲ್ಪಟ್ಟಿರುವದಿಲ್ಲ. ಇವುಗಳಲ್ಲಿ ಯಾವದೇ ಶರ್ತು ಕಾಣಿಸಿರುವದಿಲ್ಲ.

೩ ಮಾಡಿಕೊಟ್ಟವನ ಸಹಿ ಉಳ್ಳಂಥ— ಇವುಗಳಲ್ಲಿ ಮಾಡಿಕೊಟ್ಟವರ ಅಂದರೆ ಬರೆದುಕೊಟ್ಟವರ ಸಹಿಗಳು ಇವೆ.

೪ ಬರಹಮೂಲಕವಾದಂಥ— ಇವುಗಳು ಬರಹಮೂಲಕವಾಗಿರುತ್ತವೆ.

೫ ವಿವಕ್ಷಿತ ಮನುಷ್ಯನಿಗೆ ವಗೈರೆ—ಇವುಗಳಲ್ಲಿ ಗುರುನಾಥ ಡೀಕಪ್ಪಾ ಹುಬ್ಬಳ್ಳಿ ಎಂಬುವವನ ಹೆಸರು ಕೊಟ್ಟಿರುತ್ತೇವೆ.

ಕಾರಣ ಇವುಗಳನ್ನು ಕಾಯದೆಶೀರ ಮತ್ತು ಯೋಗ್ಯವಾದ ಪ್ರಾಮಿಸರಿ ನೋಟುಗಳಾಗುತ್ತವೆ.

## ಪ್ರಾಮಿಸರಿ ನೋಟಿನ ಇನ್ನೂ ಕೆಲವು ನಮೂನೆಗಳು

(೩) ಶ್ರೀ

ರಾಜಶ್ರೀ ದತ್ತಾತ್ರಯ ವಿಷ್ಣುನಾಯಿಕ ತಬೀಬ ಸಾಕೀನ ಹುಬ್ಬಳ್ಳಿ ಇವರಿಗೆ—

**ಪ್ರಾಮಿಸರಿ ನೋಟು ಬೇಸ್ಮಿ**—ಶಿವನಗೌಡಾ ತಂದಿ ಫಕೀರಗೌಡಾ ಪಾಟೀಲ ಸಾಕೀನ ಎರಗುಪ್ಪಿ ತಾಲೂಕ ಹುಬ್ಬಳ್ಳಿ ನಾನು ಬರೆದುಕೊಡುವ ಪ್ರಾಮಿಸರಿ ನೋಟು ಏನಂದರೆ—ನಾನು ಇವತ್ತಿನ ದಿವಸ ನನ್ನಮನೆತನದ ಅಡಚಣಿಮೂಲಕ ನಿಮ್ಮ ಬಳಿಯಲ್ಲಿ ೨೫೦೦ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡಿರುತ್ತೇನೆ. ಸದರೀ ರೂಪಾಯಿಗಳಿಗೆ ದರಮಹಾ ದರಸೇಕಡಾ ಒಂದುರೂಪಾಯಿ ಎಂಟುಆಣೆ ಪ್ರಕಾರದಂತೆ ಬಡ್ಡಿಯನ್ನು ಕೊಡಲಿಕ್ಕೆ ಒಪ್ಪಿಕೊಂಡಿರುತ್ತೇನೆ. ಸದರೀ ರೂಪಾಯಿ

ಗಳನ್ನು ಬಡ್ಡಿ ಸಹಿತವಾಗಿ ನೀವು ಬೇಡಿದಾಗ್ಗೆ ಬಿನ್ನತಕರಾರು ಕೊಡುತ್ತೇನೆ. (ಅಥವಾ ಏನೂ ತಕರಾರು ಹೇಳದೆ ಕೊಡುತ್ತೇನೆ).

ತಾರೀಖು ೧೫-೮-೧೯೨೪.

ಸಹಿ. ಶಿವನಗೌಡಾ ಫಕೀರಗೌಡಾ ಪಾಟೀಲ. ದಸ್ತೂರಖುದ್ದ.

**ಸೂಚನೆ**—ಪ್ರಾಮಿಸರಿ ನೋಟಿಗೆ ಸಾಕ್ಷಿಹಾಕುವ ಕಾರಣವಿಲ್ಲ; ಕಾರಣ ಪ್ರಾಮಿಸರಿ ನೋಟಿಗೆ ಸಾಕ್ಷಿಯನ್ನು ಹಾಕಬಾರದು.

## ಪ್ರಾಮಿಸರಿ ನೋಟಿಗೆ ಎಷ್ಟು ಬೆಲೆಯ ಸ್ಟಾಂಪು ಹಚ್ಚಬೇಕು?

ಪ್ರಾಮಿಸರಿ ನೋಟು (ಅ) ಬೇಡಿದಕೂಡಲೆ ಹಣಕೊಡತಕ್ಕಂಥಾದ್ದು ಇದ್ದು

| (ಬ)... | |
|---|---|
| ೧ ಅದರ ರಕಮು ಯಾ ಬೆಲೆಯು ೨೫೦ ರೂಪಾಯಿಗಳಿಗಿಂತ ಹೆಚ್ಚಿರದಿದ್ದರೆ | ಒಂದು ಆಣೆ |
| ... ... ... ... ... | ........... |
| ೨ ಅದರ ರಕಮು ಯಾ ಬೆಲೆಯು ೨೫೦ ರೂಪಾಯಿಗಳಿಗಿಂತ ಹೆಚ್ಚಿಗಿದ್ದು ೧೦೦೦ ರೂಪಾಯಿಗಳಿಗಿಂತ ಹೆಚ್ಚಿಗಿಲ್ಲದಿದ್ದರೆ | ಎರಡು ಆಣೆ |
| ... ... ... ... ... | ........... |
| ೩ ಮತ್ತೊಂದು ಎರಡನೆ ಯಾವದೇ ಪ್ರಸಕ್ತಿಯಲ್ಲಿ | ನಾಲ್ಕು ಆಣೆ |
| ಪ್ರಾಮಿಸರ ನೋಟು ಬೇಡಿದ ಕೂಡಲೆ ಹಣ ಕೊಡತಕ್ಕಂಥಾದ್ದಿರದಿದ್ದರೆ | ಬಿಲ್ಲ ಆಫ ಎಕ್ಸಚೇಂಜಿಗೆ ಹಚ್ಚಬೇಕಾಗುವ ಸ್ಟಾಂಪು |

ಪ್ರಾಮಿಸರಿ ನೋಟಿನ ಮೊಬಲಗು ಯಾ ರಕಮು ೨೫೦ ರೂಪಾಯಿ ಯಾ ಅದಕ್ಕೂ ಕಡಮೆಯಾಗಿದ್ದ ಪಕ್ಷಕ್ಕೆ ಅದಕ್ಕೆ ಒಂದು ಆಣೆಯ ಸ್ಟಾಂಪು ಹಚ್ಚಿದರೆ ಸಾಕಾಗುವದು; ಮತ್ತು ೨೫೦ ರೂಪಾಯಗಿಂತ ಅದು ಸ್ವಲ್ಪಾದರೂ ಹೆಚ್ಚಾದರೆ ಅದಕ್ಕೆ ಒಂದು ಆಣೆಗಿಂತ ಹೆಚ್ಚಿನ ಸ್ಟಾಂಪು ( ಪ್ರಸಕ್ತಿಯಿದ್ದಂತೆ ) ಹಚ್ಚಬೇಕಾಗುವದು.

ಎರಡು ಯಾ ನಾಲ್ಕು ಆಣೆಯ ಸ್ಟಾಂಪುಗಳನ್ನು ಹಚ್ಚುವ ಪ್ರಸಕ್ತಿಗಳಲ್ಲಿ ಎರಡು ಆಣೆಯ ಒಂದೇ ಯಾ ನಾಲ್ಕುಆಣೆಯ ಒಂದೇ ಸ್ಟಾಂಪು ಹಚ್ಚದೆ ಒಂದೊಂದು ಆಣೆಯ ಎರಡು ಯಾ ಒಂದೊಂದು ಆಣೆಯ ನಾಲ್ಕು ಸ್ಟಾಂಪುಗಳನ್ನು, ಅಂದರೆ ತಿಕೀಟುಗಳನ್ನು ಹಚ್ಚಬೇಕು. ಆ ಸ್ಟಾಂಪುಗಳನ್ನು ಯಾ ತಿಕೀಟುಗಳನ್ನು ಮತ್ತೊಮ್ಮೆ ಎರಡನೆ ಯಾವದೇ ಕೆಲಸಕ್ಕೆ ಉಪಯೋಗಿಸಲಿಕ್ಕೆ ಬಾರದಂತೆ ಅವುಗಳ ಮೇಲೆ ಬರೆಯಬೇಕು; ಎಂದರೆ ಪುನಃ ಉಪಯೋಗಿಸಲಾಗದಂಥ ರೀತಿಯಿಂದ ಅವುಗಳನ್ನು ರದ್ದುಪಡಿಸಬೇಕು.

**ಯಾವ ಮುದ್ದತಿನಲ್ಲಿ ಪ್ರಾಮಿಸರಿ ನೋಟಿನ ಆಧಾರದ ಮೇಲೆ ದಾವೆಯನ್ನು ಮಾಡಬಹುದು?** ಆ ಪ್ರಾಮಿಸರಿ ನೋಟಿನ ಹಣ ಕೊಡುವ ದಾವ ದಿವಸದಿಂದ ಮೂರುವರ್ಷಗಳಲ್ಲಿ ದಾವೆಯನ್ನು ಮಾಡಬಹುದು. ಬೇಡಿದ ಕೂಡಲೆ ಹಣ ಕೊಡತಕ್ಕಂಥ ಕರಾರವುಳ್ಳ ಪ್ರಾಮಿಸರಿನೋಟಿನ ಮೇಲೆ ದಾವೆಯನ್ನು ಮಾಡಬೇಕಾಗಿದ್ದಲ್ಲಿ ಆ ಪ್ರಾಮಿಸರಿ ನೋಟಿನ ತಾರೀಖಿನಿಂದ ಮೂರು ವರ್ಷಗಳಲ್ಲಿ ಅದನ್ನು ಬೇಕಾದಾಗ ಮಾಡಬಹುದು.

**ಪ್ರಾಮಿಸರಿ ನೋಟಿನ ಮೇಲೆ ಭರಪಾಯಿ ಹಾಕುವ ರೀತಿಯು**—ಬರೆದುಕೊಟ್ಟ ಪ್ರಾಮಿಸರಿ ನೋಟಿನ ಅಡಿಗೆ ಯಾ ಅದರ ಹಿಂದಿನ ಬಾಜೂಕ್ಕೆ ಯಾ ಅದಕ್ಕೆ ಜೋಡಿಸಿದ ಕಾಗವದ ಮೇಲೆ ಈ ಕೆಳಗಿನ ಮಜಕೂರು ಬರೆಯಬೇಕು.

“ ನಾನು ಸದರೀ ಪ್ರಾಮಿಸರಿ ನೋಟಿನ ಮುದ್ದಲ ರಕಮಿನ ಬಗ್ಗೆ ೫೦೦ ರೂಪಾಯಿಗಳನ್ನು ಮತ್ತು ಬಡ್ಡಿಯ ಬಗ್ಗೆ ೧೫೦ ರೂಪಾಯಿಗಳನ್ನೂ ಅಂತು ೬೫೦ ರೂಪಾಯಿಗಳನ್ನೂ ಇವತ್ತಿನ ದಿವಸ ಕೊಟ್ಟಿದ್ದೇನೆ. ”

ತಾರೀಖು ೧೫—೧೨—೧೯೨೪. ಸಹಿ. ಶಿವನಗೌಡಾ ಫಕೀರಗೌಡಾ ಪಾಟೀಲ

ದ. ಖು.

**ಈ ರೀತಿ ಭರಪಾಯಿಹಾಕಿದ ಪರಿಣಾಮವು**—ಆ ಭರಪಾಯಿಯು ಹಾಕಿದ ತಾರೀಖಿನಿಂದ ಹೊಸ ಮುದ್ದತು ಸಿಗುವದು; ಅಂದರೆ ಆ ತಾರೀಖಿನಿಂದ ಮೂರು ವರ್ಷಗಳಲ್ಲಿ ದಾವೆಯನ್ನು ಮಾಡಬಹುದು. ಸಾಲದ ಬಡ್ಡಿಯನ್ನು ಗೊತ್ತುಪಡಿಸಿದ ಮುದ್ದತು ತೀರುವ ಮೊದಲು ಆ ಸಾಲವು ಕೊಡುವದಕ್ಕೆ

ಪಾತ್ರನಾಗಿರುವ ಮನುಷ್ಯನು ಅಥವಾ ಅವನ ಮುಖ್ತಿಯಾರನು ಬಡ್ಡಿಯೆಂದು ಕೊಟ್ಟಿದ್ದರೆ ಅಥವಾ ಸಾಲವಲ್ಲಿಯ ಮುದ್ದಲಿನ ಭಾಗವನ್ನು ಗೊತ್ತುಪಡಿಸಿದ ಮುದ್ದತು ತೀರುವ ಮೊದಲು ಋಣಿಯು ಅಥವಾ ಅವನ ಮುಖ್ತಿಯಾರನು ಕೊಟ್ಟಿದ್ದರೆ **ಹಣ ಕೊಟ್ಟ ವೇಳೆಯಿಂದ ಹೊಸ ಮುದ್ದತು ಎಣಿಸಬೇಕು.** ಸಾಲದ ಪೈಕಿ ಮುದ್ದಲಿನ ಭಾಗವು ಕೊಟ್ಟಿದ್ದ ಪ್ರಸಂಗದಲ್ಲಿ ಹಣವನ್ನು ಕೊಟ್ಟ ಸಂಗತಿಯು ಹಣಕೊಡುವ ಮನುಷ್ಯನ ಸ್ವದಸ್ತೂರಿನ ಮೇಲಿಂದ ಕಂಡುಬರಬೇಕು.

**ಪ್ರಾಮಿಸರಿ ನೋಟನ್ನು ಬೇಚನ ಮಾಡುವ ರೀತಿಯು—** ಪ್ರಾಮಿಸರಿ ನೋಟಿನ ಮೇಲೆ (ಅದರ ಅಡಿಗೆ ಯಾ ಅದರ ಹಿಂದಿನ ಬಾಜೂಕ್ಕೆ) ಅಥವಾ ಅದಕ್ಕೆ ಜೋಡಿಸಿದ ಕಾಗದ ಮೇಲೆ ಈ ಕೆಳಗಿನ ಮಜಕೂರನ್ನು ಬರೆಯಬೇಕು.

" ಸದರೀ ಪ್ರಾಮಿಸರಿ ನೋಟಿನ ಸಂಬಂಧದಿಂದ ಯಾವತ್ತು ಹಣವನ್ನು ರಾಜಶ್ರೀ ನಾರಾಯಣ ಘನಾಶ್ಯಾಮ ಪಂತ ಪಾಠಕ ಇವನಿಗೆ ಕೊಡಬೇಕು.

ತಾರೀಖು ೨೦–೪–೧೯೨೫

ಸಹಿ – ದತ್ತಾತ್ರಯ ವಿಷ್ಣುನಾಯಿಕ ತಬೀಬ "

ಇನ್ನೂ ಕೆಲವು ನಮೂನೆಗಳನ್ನು ಕೊಡುತ್ತೇವೆ.

೧. " ತ್ರಿವಿಕ್ರಮ ರಾಜಾರಾಮ ಕರಿ ಇವನಿಗೆ ಕೊಡು.

ಸಹಿ—ದತ್ತಾತ್ರಯ ವಿಷ್ಣುನಾಯಿಕ ತಬೀಬ

೨. " ತ್ರಿವಿಕ್ರಮ ರಾಜಾರಾಮ ಕರೀ, ಇವನಿಗೆ ಮಾತ್ರ ಕೊಡು.

ಸಹಿ – ದತ್ತಾತ್ರಯ ವಿಷ್ಣುನಾಯಿಕ ತಬೀಬ"

೩. " ನಾನು ತ್ರಿವಿಕ್ರಮ ರಾಜಾರಾಮ ಕರಿ ಇವನ ಕಡೆಯಿಂದ ರೋಖು ೩೨೦೦ ರೂಪಾಯಿಗಳನ್ನು ತೆಗೆದುಕೊಂಡು ಅವನಿಗೆ ಪ್ರಾಮಿಸರಿ ನೋಟನ್ನು ಬೇಚನ ಮಾಡಿ ಕೊಟ್ಟಿರುತ್ತೇನೆ. ಪ್ರಾಮಿಸರಿ ನೋಟನ್ನು ಬರೆದುಕೊಟ್ಟವನಾದ ಶಿವನಗೌಡಾ ಫಕೀರಗೌಡಾ ಪಾಟೀಲ ಇವನ ಕಡೆಯಿಂದ ನಾನು ಈ ಪ್ರಾಮಿಸರಿ ನೋಟಿನ ಸಂಬಂಧದಿಂದ ತಾರೀಖು ೧೫–೧೨–೧೯೨೪ ನೇ ಇಸ್ವಿ

ದಿವಸ ೬೫೦ ರೂಪಾಯಿಗಳನ್ನು ವಸೂಲ ಮಾಡಿದ್ದೇನೆ. ಇಷ್ಟರ ಹೊರ್ತು ಹೆಚ್ಚಿಗೇನು ವಸೂಲ ಮಾಡಿಲ್ಲಾ. ಸದರೀ ಪ್ರಾಮಿಸರಿ ನೋಟಿನ ಸಂಬಂಧ ದಿಂದ ಬಾಕಿ ಉಳಿದ ಯಾವತ್ತು ಹಣವನ್ನು ವಸೂಲ ಮಾಡುವ ಹಕ್ಕು ಮೇಲ್ಕಂಡ ತ್ರಿವಿಕ್ರಮ ರಾಜಾರಾಮ ಕರಿ ಇವನಿಗೆ ಈ ಲೇಖದಿಂದ ನಾನು ಕೊಟ್ಟಿದ್ದೇನೆ.

ತಾರೀಖು........

ಸಹಿ—ದತ್ತಾತ್ರಯ ವಿಷ್ಣು ನಾಯಿಕ ತಬೀಬ"

ಪ್ರಾಮಿಸರಿ ನೋಟು ಬರೆಯುವ ನಮೂನೆಯು ಈ ಮೊದಲು ಕೊಟ್ಟಿದ್ದೇವೆ. ಇನ್ನೂ ಕೆಲವು ನಮೂನೆಗಳನ್ನು ಕೆಳಗೆ ಕೊಡುತ್ತೇವೆ.

---

ಹುಬ್ಬಳ್ಳಿ ತಾ॥ ೧–೧೦–೧೯೨೫

ಕೂವರ್ಜಿ ಮಾಣಿಕಜಿ ದಾರುವಾಲಾ ಇವರಿಗೆ ನಾನು ಬೇಡಿದಾಗ್ಗೆ ೨೫೦೦ ರೂಪಾಯಿಗಳನ್ನು ಕೊಡುವದಕ್ಕೆ ಒಪ್ಪಿಕೊಂಡಿರುತ್ತೇನೆ.

ರೂ. ೨೫೦೦ ಸಹಿ—ಕಲ್ಲಪ್ಪಾ ತಂದಿ ಭೀಮಪ್ಪಾ ಸ್ವಾದಿ

---

ಹುಬ್ಬಳ್ಳಿ, ತಾರೀಖು ೧೫–೪–೧೯೨೭

ನಾನು ಹಸನ ಸಾಹೇಬ ವಲ್ಲದ ಇಬ್ರಾಹೀಮ ಸಾಹೇಬ ಕುಮ ಠಾಕರ ಸಾಕಿನ ಹುಬ್ಬಳ್ಳಿ ಇವನ ಬಳಿಯಲ್ಲಿ ೫೦೦ ರೂಪಾಯಿ ಗಳನ್ನು ಸಾಲವಾಗಿ ತೆಗೆಮಕೊಂಡಿದ್ದೇನೆ. ಮತ್ತು ಸದರೀ ಅವನು ಬೇಡಿದಾಗ್ಗೆ ದರಮುಹಾ ದರಸೇಕಡಾ ೧ ರೂಪಾಯಿಯಂತೆ ಬಡ್ಡಿಸಹಿತವಾಗಿ ಸದರೀ ರೂಪಾಯಿಗಳನ್ನು ಕೊಡಲಿಕ್ಕೆ ಒಪ್ಪಿ ಕೊಂಡಿರುತ್ತೇನೆ.

ರೂ. ೫೦೦ ಸಹಿ- ಅಕಬರಸಾಹೇಬ ವ॥ ಹುಸೇನಸಾಹೇಬ ಮುಲ್ಲಾ

---

# ೨ನೆಯ ಪ್ರಕರಣ

## ಕರ್ಜ ಖತ್ತು

**ಬಾಂಡ ಅಂದರೆ ಖತ್ತು**— ಇದರಲ್ಲಿ ಅಂದರೆ ಖತ್ತಿನಿಲ್ಲಿ (ಅ) ಯಾವ ಲೇಖದ ಮೇಲಿಂದ ಯಾವನಾದರೂ ಮನುಷ್ಯನು ಬೇರೆಯವನಿಗೆ ಹಣ ಕೊಡುವ ಜಬಾಬದಾರಿಯನ್ನು, ಫಲಾನಾ ಕೃತ್ಯವನ್ನು ಪ್ರಸಂಗದ ಪ್ರಕಾರ, ಮಾಡಿದರೆ ಅಥವಾ ಮಾಡದಿದ್ದರೆ ಆ ಜಬಾಬದಾರಿಯು ನಿಷ್ಫಲವಾಗುವದೆಂಬ ಶರ್ತಿನಮೇಲೆ ತನ್ನ ಮೇಲೆ ತೆಗೆದುಕೊಳ್ಳುತ್ತಾನೆಯೋ ಆ ಯಾವದಾದರೂ ಲೇಖದ;

(ಬ) ಸಾಕ್ಷಿ ಹಾಕಿದ ಮತ್ತು ಹುಕುಮಿನ ಪ್ರಕಾರ ಅಥವಾ ತರುವವನಿಗೆ ಐವಜು ಕೊಡತಕ್ಕದ್ದಿದ್ದಂಥ ಯಾವ ಲೇಖದ ಮೇಲಿಂದ ಯಾವನಾದರೂ ಮನುಷ್ಯನು ಬೇರೆಯವನಿಗೆ ಹಣ ಕೊಡುವ ಜವಾಬದಾರಿಯನ್ನು ತನ್ನ ಮೇಲೆ ತೆಗೆದುಕೊಳ್ಳುತ್ತಾನೋ ಆ ಯಾವದಾದರೂ ಲೇಖದ; ಮತ್ತು

(ಕ) ಸಾಕ್ಷಿ ಹಾಕಿದ ಯಾವ ಲೇಖದ ಮೇಲಿಂದ ಒಬ್ಬ ಮನುಷ್ಯನು ಎರಡನೇಯವನಿಗೆ ಧಾನ್ಯವನ್ನು ಅಥವಾ ಹೊಲದ ಬೇರೆ ಉತ್ಪನ್ನವನ್ನು ಕೊಡುವ ಜವಾಬದಾರಿಯನ್ನು ತನ್ನ ಮೇಲೆ ತೆಗೆದುಕೊಳ್ಳುತ್ತಾನೋ ಅಂಥಾ ಯಾವದಾದರೂ ಲೇಖದ

ಸಮಾವೇಶವಾಗುತ್ತದೆ.

## ಕರ್ಜಖತ್ತು

ರಾಜಶ್ರೀ ಅನಂತ ಶಂಕರ ನರಗುಂದ ಸಾಕೀನ ಹುಬ್ಬಳ್ಳಿ ಇವರಿಗೆ—

**ಕರ್ಜಖತ ಬೇಸ್ಮಿ**—ಹಿರಾಮಣಿ ರಾಮದಾಸ ತೇಲಿ ಸಾಕಿನ ಅದರ ಗುಂಜಿ ತಾಲೂಕ ಹುಬ್ಬಳ್ಳಿ ನಾನು ಬರೆದುಕೊಡುವ ಕರ್ಜಖತ ಏನಂದರೆ— ನಾನು ನನ್ನ ಗೃಹಕೃತ್ಯದ ಅಡಚಣಿ ಮೂಲಕಾ ಇವತ್ತಿನ ದಿವಸ ನಿಮ್ಮ ಬಳಿಯಲ್ಲಿ ೧೨೫೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡಿರುತ್ತೇನೆ. ಸದರೀ ರೂಪಾಯಿಗಳಿಗೆ ದರಸಾಲು ದರಸೇಕಡಾ ೧೨ ರೂಪಾಯಿಯ ದರದಂತೆ ಬಡ್ಡಿ ಕೊಡಲಿಕ್ಕೆ ಒಪ್ಪಿಕೊಂಡಿರುತ್ತೇನೆ. ಸದರೀ ರೂಪಾಯಿಗಳನ್ನು ಬಡ್ಡಿಸಹಿತ

ವಾಗಿ ಈ ಹೊತ್ತಿನಿಂದ ಆರು ತಿಂಗಳಗಳಲ್ಲಿ ಕೊಡುತ್ತೇನೆ. ನಾನು ಹೀಗೆ ಮಾಡಲಿಕ್ಕೆ ತಪ್ಪಿದರೆ ನೀವು ನಿಮ್ಮ ಮರ್ಜಿಪ್ರಕಾರ ನನ್ನ ಮೇಲೆ ಕಾಯಿದೆಶೀರ ಇಲಾಜ.ನಡಿಸಿ ಸದರೀ ರೂಪಾಯಿಗಳನ್ನೂ ಮತ್ತು ಅದರಮೇಲಿನ ಬಡ್ಡಿಯನ್ನು ವಸೂಲಮಾಡಿಕೊಳ್ಳಬಹುದು. ಅಂತಾ ಆತ್ಮಸಂತೋಷದಿಂದ ಮತ್ತು ಅಕ್ಕಲ ಹುಷಾರಿಯಿಂದ ಬರೆದುಕೊಟ್ಟ ಕರ್ಜಖತ ಸಹಿ ತಾರೀಖು ೧೫–೪–೯೧೫.

ದಸ್ತೂರ ಗುಂಡೋ ಹಣಮಂತ ಕಲಮದಾಣಿ.

ಸಹಿ. ಹಿರಾಮಣಿ ರಾಮದಾಸ ತೇಲಿ ದಸ್ತೂರ ಖುದ್ದ.

ಸಾಕ್ಷಿ.

೧ ಪದ್ಮನಾಭ ಗಂಗಾಧರ ಕುಲಕರ್ಣಿ. ೨ ಅನಂತ ವೆಂಕಟೇಶ ಕರಿ.

ಇದಕ್ಕೆ ಉಗಾಹಣಿಯು ಹಾಕಬೇಕಾದರೆ ಅದರ ರೀತಿಯು ಈ ಕೆಳಗೆ ಕೊಡುತ್ತೇವೆ.

## ಉಗಾವಣಿಯು

ನಾನು ರಾಮಕೃಷ್ಣ ತಿಮ್ಮಾಜಿ ಭಿಸೆ ಸಾಕಿನ ಕೇಶ್ವಾಪೂರ. ಬರೆದು ಕೊಡುವ ಉಗಾವಣಿ ಏನಂದರೆ—ಮೂಲ ಋಣಿಯಾದ ಹಿರಾಮಣಿ ರಾಮ ಚಂದ್ರ ತೇಲಿ ಇವನು ಮೇಲಿನ ಕರಾರಿನ ಪ್ರಕಾರ ಮುದ್ದತಶೀರ ಬಡ್ಡಿ ಸಹಿತ ವಾಗಿ ಯಾವತ್ತೂ ಹಣವನ್ನು ಕೊಡುವನು. ಅವನು ಹೀಗೆ ಮಾಡಲಿಕ್ಕೆ ತಪ್ಪಿ ದರೆ ನಾನು ಮೇಲ್ಕಂಡ ಕರ್ಜಖತ್ತಿನಲ್ಲಿ ಬರೆದ ಕರಾರಿನ ಪ್ರಕಾರ ನಿಮಗೆ ಕೊಡ ತಕ್ಕದ್ದಾಗುವ ಯಾವತ್ತೂ ಹಣವನ್ನು ಕೊಡುವದಕ್ಕೆ ಈ ಲೇಖದಿಂದ ಒಡಂಬ ಟ್ಟಿರುತ್ತೇನೆ ಅಂತಾ ಬರೆದುಕೊಟ್ಟ ಉಗಾವಣೆಯು ತಾರೀಖು ಸದರ.

ದಸ್ತೂರ ಸದರ

ಸಹಿ ರಾಮಕೃಷ್ಣ ತಿಮ್ಮಾಜಿ ಭಿಸೆ.

ಸಾಕ್ಷಿ

೧ ಪದ್ಮನಾಭ ಗಂಗಾಧರ ಕುಲಕರ್ಣಿ. ೨ ಅನಂತ ವೆಂಕಟೇಶ ಕರಿ.

# ೩ನೆಯ ಪ್ರಕರಣ

## ವಿಕ್ರಯವು

ಯಾವದೊಂದು ಬೆಲೆಗಾಗಿ ಸ್ವತ್ತನ್ನು ಬದಲು ಕೊಡುವದೇ "ವಿಕ್ರಯ" ವಾಗುತ್ತದೆ. ಆ ಬೆಲೆಯನ್ನು ವಿಕ್ರಯದ ವೇಳೆಗೆ ಪೂರ್ತಿಯಾಗಿ ಕೊಡಬಹುದು ಯಾ ಅದನ್ನು ಮುಂದೆ ಕೊಡುತ್ತೇನೆಂದು ವಚನ ಕೊಡಬಹುದು. ಯಾ ಅದರ ಕೆಲವು ಭಾಗವನ್ನು ಕೊಟ್ಟು ಮತ್ತು ಕೆಲವು ಭಾಗವನ್ನು ಕೊಡುತ್ತೇನೆಂದು ವಚನ ಕೊಡಬಹುದು.

**ಉದಾಹರಣಾರ್ಥ:—** ಅ ಎಂಬುವವನು ತನ್ನ ಸ್ವತ್ತನ್ನು ೧೦೦೦ ರೂಪಾಯಿಗೆ ಮಾರಬಹುದು. ಸದರೀ ರಕಮು ಪೂರ್ತಿಯಾಗಿ ವಿಕ್ರಯದ ವೇಳೆಗೆ ತೆಗೆದುಕೊಳ್ಳಬಹುದು. ಯಾ ವಿಕ್ರಯದ ವೇಳೆಗೆ ಅದರ ಭಾಗವನ್ನು ಅಂದರೆ ೫೦೦ ರೂಪಾಯಿಗಳನ್ನು ತೆಗೆದುಕೊಂಡು ಬಾಕಿ ಉಳಿದ ೫೦೦ ರೂಪಾಯಿಗಳನ್ನು ಮುಂದೆ ತೆಗೆದುಕೊಳ್ಳಬಹುದು.

ವಿಕ್ರಯದಲ್ಲಿ ಎರಡು ಭೇದ ಉಂಟು. ಅವು ಯಾವವೆಂದರೆ; ಒಂದು ಜಂಗಮ ಸ್ವತ್ತಿನ ವಿಕ್ರಯವು. ಮತ್ತೊಂದು ಸ್ಥಾವರ ಸ್ವತ್ತಿನ ವಿಕ್ರಯವು. ಕಾಯದೆಯ ದೃಷ್ಟಿಯಿಂದ ತತ್ವತಃ ಇದರಲ್ಲಿ ಮಹತ್ವದ ಭೇದವಿಲ್ಲ. ವಿಕ್ರಯವು ಯಾವ ರೀತಿಯಿಂದ ಪರಿಪೂರ್ಣವಾಗುವದೆಂಬ ಬಗ್ಗೆ ಜಂಗಮ ಸ್ವತ್ತಿನ ವಿಕ್ರಯದಲ್ಲಿ ಮತ್ತು ಸ್ಥಾವರ ಸ್ವತ್ತಿನ ವಿಕ್ರಯದಲ್ಲಿ ಭೇದ ಉಂಟು.

### ವಿಕ್ರಯಗೆ ಅವಶ್ಯವಾದ ಸಂಗತಿಗಳು

೧. ತಬದಿಲು ಮಾಡಿಕೊಡುವವನು;

೨. ತಬದಿಲು ಮಾಡಿಕೊಳ್ಳುವವನು;

೩. ನಿವೇದನೆಯನ್ನು ಯಾ ಮಾತು ಕೊಡುವದನ್ನು

೪. ಸ್ವೀಕರಿಸುವದನ್ನು ಯಾ ಕೊಟ್ಟ ಮಾತನ್ನು ಸ್ವೀಕರಿಸುವದನ್ನು

೫. ಸ್ವತ್ತನ್ನು (ಜಂಗಮ ಯಾ ಸ್ಥಾವರ)

೬. ಬೆಲೆಯು.

ಏನೂ ಪ್ರತಿಫಲವನ್ನು ತೆಗೆದುಕೊಳ್ಳದೆ ಯಾವದಾವರೂ ಜಂಗಮ ಯಾ ಸ್ಥಾವರ ಸ್ವತ್ತನ್ನು ತಬದಿಲು ಮಾಡಿಕೊಟ್ಟಲ್ಲಿ ಅದು "**ದಾನ**" ಯಾ "**ಬಕ್ಷೀಸ**" ವೆನಿಸುತ್ತದೆ. ವಿಕ್ರಯದ ಕರಾರನ್ನು ಪೂರ್ಣ ಮಾಡಬೇಕಾಗಿದ್ದಲ್ಲಿ ಅದರ ಸಂಬಂಧದಿಂದ ಯಾವತ್ತು ಶರ್ತುಗಳನ್ನು ಮತ್ತು ಅದರ ಬೆಲೆಯನ್ನು ನಿಶ್ಚಯಿಸ ತಕ್ಕದ್ದು.

## ವಿಕ್ರಯವು ಹ್ಯಾಗೆ ಮಾಡತಕ್ಕದ್ದು ?

(೧) ಒಂದು ನೂರು ರೂಪಾಯಿ ಅಥವಾ ಅವಕ್ಕೂ ಹೆಚ್ಚು ಬೆಲೆಯುಳ್ಳ ಸ್ಪೃಶ್ಯ ಸ್ಥಾವರಾಸ್ತಿಯನ್ನು ತಬದಿಲು ಮಾಡಿಕೊಡಬೇಕಾದರೆ ನೋಂದಿಸಿದ ಖತ್ತಿನ ಮೇಲೆ ಮಾತ್ರ ಮಾಡಿಕೊಡಲಿಕ್ಕೆ ಬಂದೀತು. ಯಾವದಾದರೊಂದು ಪ್ರತ್ಯಾಗಮ ಹಕ್ಕನ್ನು ಯಾ ಬೇರೆ ಅಸ್ಪೃಶ್ಯ ವಸ್ತುವನ್ನು ( ಅದರ ಬೆಲೆಯು ಯಾವದೇ ಇರಲಿ ) ತಬದಿಲು ಮಾಡಿಕೊಡಬೇಕಾದರೆ ಮೇಲೆ ಹೇಳಿದಂತೆ ನೋಂದಿಸಿದ ಖತ್ತಿನ ಮೇಲೆ ಮಾತ್ರ ಮಾಡಿಕೊಡಲಿಕ್ಕೆ ಬಂದೀತು.

(೨) ಒಂದು ನೂರು ರೂಪಾಯಿಗಿಂತ ಕಡಿಮೆ ಬೆಲೆಯುಳ್ಳ ಸ್ಪೃಶ್ಯ ಸ್ಥಾವರಾಸ್ತಿಯನ್ನು ತಬದಿಲು ಮಾಡಿಕೊಡಬೇಕಾದರೆ: —

(ಅ) ನೋಂದಿಸಿದ ಖತ್ತಿನ ಮೇಲೆ ಯಾ

(ಬ) ಅದನ್ನು ಕಬಜೆಕ್ಕೆ ಕೊಟ್ಟು

ಮಾಡಕೊಡಬಹುದು.

**ವಿಕ್ರಯವು ಸಂಪೂರ್ಣ ಹ್ಯಾಗೆ ಆಗುದದು?**— ಅದನ್ನು ನೋಂದಾಯಿಸಿದ್ದರಿಂದ ಮತ್ತು ಯಾವ ಪ್ರಸಕ್ತಿಯಲ್ಲಿ ಅದನ್ನು ನೋಂದಾಯಿಸುವ ಅವಶ್ಯವಿಲ್ಲ ಆ ಪ್ರಸಕ್ತಿಯಲ್ಲಿ ಆದನ್ನು ಕಬಜೆಕ್ಕೆ ಕೊಟ್ಟದ್ದರಿಂದ. ಅಂದ ಮೇಲೆ ಒಂದು ನೂರು ರೂಪಾಯಿ ಅಥವಾ ಅದಕ್ಕೂ ಹೆಚ್ಚು ಕಿಮ್ಮತ್ತಿನ ಸ್ಥಾವರ ಆಸ್ತಿಯ ವಿಕ್ರಯವು ಅವಶ್ಯವಾಗಿ ನೋಂದಾಯಿಸಬೇಕಾಗುವದು. ಕಾರಣ ಅದನ್ನು ನೋಂದಾಯಿಸಿದ ವಿನಹ ಆ ವಿಕ್ರಯವು ಸಂಪೂರ್ಣವಾಗಲಾಗದು. ಸದರೀ ವಿಕ್ರಯವನ್ನು ನೋಂದಾಯಿಸದೇ ಅದರ ಸಂಬಂಧವಾದ ಸ್ವತ್ತಿನ ಬರೇ ಕಬಜೆಯನ್ನು ಕೊಟ್ಟದ್ದರಿಂದ ಆ ವಿಕ್ರಯವು ಸಂಪೂರ್ಣವಾ

ಗುವದಿಲ್ಲ. ಈ ಪ್ರಸಕ್ತಿಯಲ್ಲಿ ವಿಕ್ರಯವು ನೋಂದಾಯಿಸಿದ ಕೂಡಲೇ ಮಾರಿದ ಒಡವೆಯ ಸ್ವತ್ವವು ಮಾರುವವನಿಂದ ಕೊಳ್ಳುವವನಿಗೆ ಹೋಗುವದು, ಅಲ್ಲಿ ವರೆಗೆ ಇಲ್ಲ. ಒಂದು ನೂರು ರೂಪಾಯಿಗಿಂತ ಕಡಿಮೆ ಕಿಮ್ಮತ್ತಿನ ಸ್ಥಾವರಾಸ್ತಿಯ ಅಥವಾ ಯಾವದೇ ಜಂಗಮ ಆಸ್ತಿಯ (ಅದರ ಬೆಲೆಯು ಏನೂ ಇರಲಿ) ವಿಕ್ರಯವು (೧) ನೋಂದಾಯಿಸಿದ್ದರಿಂದ ಯಾ (೨) ಅದರ ಕಬಜೆಯನ್ನು ಕೊಟ್ಟದ್ದರಿಂದ ಸಂಪೂರ್ಣವಾಗುವದು. ವಿಕ್ರಯವು ಸಂಪೂರ್ಣವಾಗುವದು ಬೆಲೆಯನ್ನು ಕೊಡುವದರ ಯಾ ಕೊಡದಿರುವದರ ಮೇಲೆ ಅವಲಂಬಿಸಿರುವದಿಲ್ಲ. ಆದರೆ ಅದನ್ನು ಮೇಲೆ ಹೇಳಿದಂತೆ ನೋಂದಾಯಿಸಿರುವದರ ಯಾ ಯೋಗ್ಯ ಪ್ರಸಕ್ತಿಯಲ್ಲಿ ಕಬಜೆಯನ್ನು ಕೊಡುವದರ ಮೇಲೆ ಅವಲಂಬಿಸಿರುವದು.

**ಸ್ಥಾವರಾಸ್ತಿಯ ವಿಕ್ರಯದ ಬಗ್ಗೆ ಕರಾರು**— ವಿಕ್ರಯದಲ್ಲಿ ಮತ್ತು ವಿಕ್ರಯದ ಕರಾರಿನಲ್ಲಿ ಭೇದ ಉಂಟು. ಯಾವದೊಂದು ಬೆಲೆಗೆ ಸ್ವತ್ತನ್ನು ಬದಲು ಕೊಡುವದೇ "ವಿಕ್ರಯ" ವಾಗುತ್ತದೆ. ಈ ಮೇರಿಗೆ ಮಾರಿದ ಒಡವೆಯ ಸ್ವತ್ವವು ಮಾರುವವನಿಂದ ಕೊಳ್ಳುವವನಿಗೆ ಹೋಗುತ್ತದೆ. ವಿಕ್ರಯದ ವ್ಯವಹಾರದಿಂದ ಸ್ವತ್ತಿನ ಮಾಲಕಿಯನ್ನು ಅದಲಾಬದಲು ಆಗುತ್ತದೆ. ಅಂದರೆ ಮಾರಿದ ಸ್ವತ್ತಿನ ಮಾಲಕಿಯನ್ನು ಮಾರುವವನಿಂದ ಕೊಂಡುಕೊಳ್ಳುವವನು ಪಡೆಯುತ್ತಾನೆ.

ಸ್ಥಾವರಾಸ್ತಿಯ ವಿಕ್ರಯದ ಬಗ್ಗೆ ಕರಾರಿನ ಅಂದರೆ ಪಕ್ಷಗಾರರ ನಡುವೆ ಗೊತ್ತಾದ ಶರ್ತುಗಳ ಮೇರೆಗೆ ಆಸ್ತಿಯ ವಿಕ್ರಯವು ಆಗತಕ್ಕದ್ದೆಂದು ಮಾಡಿದ ಕರಾರಿನ ಪರಿಣಾಮವು ಏನಾಗುವದು ? ಕೇವಲ ಇಂಥ ಕರಾರಿನ ಮೇಲಿಂದಲೇ ಇಂಥ ಆಸ್ತಿಯಲ್ಲಿ ಹಿತಸಂಬಂಧವು ಅಥವಾ ಅದರ ಮೇಲೆ ಯಾವದಾವರೂ ಋಣಭಾರವು ಉಂಟಾಗುವದಿಲ್ಲ. ಅಂದರೆ ಇಂಥ ಕರಾರಿನಿಂದ ಸ್ವತ್ತಿನ ಅಥವಾ ಮಾಲಕಿಯ ಅದಲಾಬದಲು ಆಗುವದಿಲ್ಲ. ವಾಗ್ದಾನಧಾರಕನು ಈ ಪ್ರಸಕ್ತಿಯಲ್ಲಿ ವಾಗ್ದಾನಕರ್ತನ ವಿರುದ್ಧ ವಿಶಿಷ್ಟ ರೀತಿಯಿಂದ ಈ ಕರಾರು ಕಡೆಗಾಣಿಸುವ ಹಕ್ಕನ್ನು ಪಡೆಯುವನು ಅಂದರೆ ಮಾರಿ ತೆಗೆದುಕೊಳ್ಳುವವನು ಈ ಕರಾರು ಕಡೆಗಾಣಿಸುವ ಬಗ್ಗೆ ಮಾರಿ ಕೊಡುವವನ ಮೇಲೆ ದಾವೆಯು ಮಾಡಬಹುದು ಯಾ ಮಾರಿ ಕೊಡುವವನು ಈ ಕರಾರು ಕಡೆಗಾಣಿಸುವ ಬಗ್ಗೆ ಮಾರಿ

ತೆಗೆದುಕೊಳ್ಳುವವನ ಮೇಲೆ ದಾವೆಯು ಮಾಡಬಹುದು. ಸಾರಾಂಶಃ—ವಿಕ್ರಯದ ಕರಾರಿನಿಂದ ಆ ಆಸ್ತಿಯಲ್ಲಿ ಏನೂ ಹಿತ ಸಂಬಂಧವು ಪ್ರಾಪ್ತವಾಗುವದಿಲ್ಲ ; ಬರೇ ಪಕ್ಷಕಾರನ ವಿರುದ್ಧವಾಗಿ ಸದರೀ ಕರಾರು ವಿಶಿಷ್ಟರೀತಿಯಿಂದ ಕಡೆಗಾಣಿಸುವ ಬಗ್ಗೆ ಹಕ್ಕು ಪ್ರಾಪ್ತವಾಗುತ್ತದೆ. ಸದರೀ ಕರಾರು ನೋಂದಾಯಿಸುವ ಕಾರಣವಿಲ್ಲ.

## ಖರೀದಿ ಕರಾರ ಪತ್ರವು

ರಾಜಶ್ರೀ ಹಣಮಂತ ಸೀತಾರಾಮ ಗುತ್ತಲ ಸಾಕೀನ ಹುಬ್ಬಳ್ಳಿ ಇವರಿಗೆ—

**ಖರೀದಿ ಕರಾರ ಪತ್ರ ಬೇಸ್ಮಿ**—ಫಕೀರಪ್ಪಾ ತಂದಿ ಕಲ್ಲಪ್ಪಾ ಉಪ್ಪಾರ ಸಾ॥ ಬ್ಯಾಹಟ್ಟಿ ತಾಲೂಕ ಹುಬ್ಬಳ್ಳಿ ನಾನು ಬರೆದುಕೊಡುವ ಖರೀದಿ ಕರಾರ ಪತ್ರ ಏನಂದರೆ, ನಾನು ಈ ಕೆಳಗೆ ವಿವರಿಸಿದ ಆಸ್ತಿಗಳ ಮಾಲಕನಾಗಿರುತ್ತೇನೆ. ಸದರಿ ಆಸ್ತಿಗಳ ವಿವರ:—

ಧಾರವಾಡ ಜಿಲ್ಹಾ ಹುಬ್ಬಳ್ಳಿ ತಾಲೂಕ ಸಬ್‌ರಜಿಸ್ಟರ ಹದ್ದಿ ಪೈಕಿ ಮೌಜೆ ಭಂಡಿವಾಡ ಗ್ರಾಮದಲ್ಲಿರುವ ಸರಕಾರಿ ಜಮೀನುಗಳು. ಅದರ ವಿವರ—

| ರಿ. ಸ. ನ. | ಕ್ಷೇತ್ರಫಳ | ತೆರಿಗೆ |
|---|---|---|
| ೭೮ | ೧೬-೩೫ | ೨೮-೦-೬ |
| ೧೦೭ | ೧೪-೮ | ೨೫-೪-೦ |
| ೧೨೦ | ೪-೧೦ | ೫-೮-೦ |

ಮತ್ತು ಸದರಿ ಗ್ರಾಮದಲ್ಲಿರುವ ಒಂದು ಮನೆಯು ಹಿತ್ತಲು ಮತ್ತು ಮುಂದಿನ ಪಡಜಾಗೆ ಸಹಿತ ಇದರ ಚತುಸ್ಸೀಮೆ ಈ ಕೆಳಗೆ ಬರೆದಂತೆ ಅದೆ.

ಪೂರ್ವಕ್ಕೆ:—ಸಿದ್ಧರಾಮಪ್ಪಾ ನೀಲಪ್ಪಾ ಮಂಟೂರ ಇವರ ಮನೆಯು.

ಪಶ್ಚಿಮಕ್ಕೆ:—ಕಲ್ಲನಗೌಡಾ ಹಣಮಂತಗೌಡಾ ಪಾಟೀಲ ಇವನ ಹಿತ್ತಲ ಮತ್ತು ಆ ಹಿತ್ತಲಾ ದಾಟಿ ಅವನ ಮನೆಯು.

ಉತ್ತರಕ್ಕೆ:—ರಸ್ತೆ.

ದಕ್ಷಿಣಕ್ಕೆ:—ಭೀಮನಗೌಡಾ ತಂದಿ ಹಾಲಪ್ಪಗೌಡಾ ಸಣ್ಣಮನಿ ಇವನ ಖುಲ್ಲಾ ಜಾಗೆ.

ಈ ಪ್ರಕಾರ ನನ್ನ ಆಸ್ತಿಗಳನ್ನು ನಿಮಗೆ ೮೦೦೦ ರೂಪಾಯಿಗಳಿಗೆ ಖರೀದಿ ಕೊಡಲಿಕ್ಕೆ ನಾನು ಈ ಲೇಖದಿಂದ ಒಡಂಬಟ್ಟಿರುತ್ತೇನೆ. ಈ ಖರೀದಿಯ ಸಂಬಂಧದಿಂದ ಸಂಚಕಾರವೆಂದು ನೀವು ಈ ಹೊತ್ತು ೫೦೦ ರೂಪಾಯಿಗಳನ್ನು ನನಗೆ ಕೊಟ್ಟದ್ದು ಮುಟ್ಟಿದ್ಧವು. ನಾನು ಸದರಿ ಆಸ್ತಿಗಳ ಬಗ್ಗೆ ತಾರೀಖು ೧೫-೪-೧೯೨೮ ನೇ ಇಸ್ವಿ ದಿವಸ ಅಥವಾ ಅದಕ್ಕೂ ಮೊದಲು ಬೇಕಾದಾಗ ಖರೀದಿ ಪತ್ರವನ್ನು ಬರೆದುಕೊಟ್ಟು ನೋಂದಾಯಿಸಿಕೊಡುತ್ತೇನೆ ನೋಂದಣಿ ಕಾಲಕ್ಕೆ ನೀವು ಸಬ್‌ರಜಿಸ್ಟ್ರಾರನ ಸಮಕ್ಷಮ ಸದರಿ ಖರೀದಿಯ ಸಂಬಂಧಿ ಬಾಕಿ ಉಳಿದ ರೂಪಾಯಿಗಳನ್ನು ನನಗೆ ಕೊಡಬೇಕು. ಸದರಿ ತಾರೀಖಿನ ಅನಂತರ ಈ ಕರಾರವು ರದ್ದು ಎಂದು ತಿಳಿಯತಕ್ಕದ್ದು ಮತ್ತು ಸದರಿ ಅವಧಿಯಲ್ಲಿ ನೀವು ಸದರಿ ಆಸ್ತಿಗಳನ್ನು ಖರೀದಿ ತೆಗೆದುಕೊಳ್ಳದಿದ್ದರೆ ನೀವು ಸಂಚಕಾರವೆಂದು ನನಗೆ ಕೊಟ್ಟ ರೂಪಾಯಿಗಳನ್ನು ಬೇಡಲಿಕ್ಕೆ ನಿಮಗೆ ಹಕ್ಕು ಉಳಿಯಲಿಕ್ಕಿಲ್ಲ; ಮತ್ತು ಸದರಿ ಆಸ್ತಿಗಳನ್ನು ಬೇಕಾದವರಿಗೆ ಮಾರಲಿಕ್ಕೆ ಅಥವಾ ನನ್ನ ಆಲೋಚನೆಯಂತೆ ಅದರ ವಿನಿಯೋಗ ಮಾಡಲಿಕ್ಕೆ ನನಗೆ ಹಕ್ಕು ಪ್ರಾಪ್ತವಾಗುವದು. ಅದರಂತೆ ಸದರಿ ಅವಧಿಯಲ್ಲಿ ಸದರಿ ಆಸ್ತಿಗಳನ್ನು ಯೋಗ್ಯರೀತಿಯಿಂದ ಖರೀದಿ ಮಾಡಕೊಡಲಿಕ್ಕೆ ನಾನು ತಪ್ಪಿದರೆ ನಾನು ನಿಮ್ಮ ಕಡೆಯಿಂದ ಸಂಚಕಾರವೆಂದು ತೆಗೆದುಕೊಂಡ ೫೦೦ ರೂಪಾಯಿಗಳನ್ನು ದರಮಹಾ ದರಸೇಕಡಾ ೨ ರೂಪಾಯಿಯ ದರದಂತೆ ತಿರುಗಿ ಕೊಡಲಿಕ್ಕೆ ಮತ್ತು ಲುಕ್ಸಾನ ತರೀಕ ೫೦೦ ರೂಪಾಯಿಗಳನ್ನು ನಿಮಗೆ ಕೊಡಲಿಕ್ಕೆ ನಾನು ಒಪ್ಪಿಕೊಂಡಿರುತ್ತೇನೆ. ನೀವು ನಿಮ್ಮ ಮರ್ಜಿಪ್ರಕಾರ ಸದರಿ ರೂಪಾಯಿಗಳನ್ನು ನನ್ನ ಕಡೆಯಿಂದ ವಸೂಲ ಮಾಡಬಹುದು ಅಥವಾ ಮೇಲ್ಕಂಡ ಖರೀದಿ ಕರಾರವನ್ನು ಕಡೆಗಾಣಿಸಬಹುದು. ಅಂತಾ ಆತ್ಮಸಂತೋಷದಿಂದ ಮತ್ತು ಬುದ್ಧಿ ಜಾಗ್ರತೆಯಿಂದ ಬರೆದುಕೊಟ್ಟ ಖರೀದಿ ಕರಾರಪತ್ರ ತಾರೀಖು

ಸಹಿ. ಫಕೀರಪ್ಪಾ ತಂದಿ ಕಲ್ಲಪ್ಪಾ ಉಪ್ಪಾರ

ಸಾಕ್ಷಿಗಳು

೧ ದ್ಯಾವಪ್ಪಾ ಬಸಪ್ಪಾ ಕದಡಿ ೨ ಬಸಪ್ಪಾ ಪರಮಪ್ಪಾ ಬ್ಯಾಹಟ್ಟಿ

# ಖರೀದಿ ಪತ್ರವು

ಶ್ರೀಯುತ ನರಹರ ನಾಗೇಶ ಲೇಲೇ ಸಾಕೀನ ಬೆಳಗಾಂವಿ **ಇವರಿಗೆ—**

**ಖರೀದಿ ಪತ್ರ ಬೇಸ್ಮಿ** :— ಮಲ್ಲಪ್ಪಾ ತಂದಿ ಅಡಿವೆಪ್ಪಾ ಅಗಸರ ಸಾಕೀನ ಬೈಲಹೊಂಗಲ ನಾನು ಬರೆದುಕೊಡುವ ಖರೀದಿ ಪತ್ರ ಏನಂದರೆ— ನಾನು ಕೆಳಗೆ ವಿವರಿಸಿವ ಆಸ್ತಿಗಳ ಮಾಲಕನಾಗಿರುತ್ತೇನೆ. ಸದರಿ ಆಸ್ತಿಗಳ ವಿವರ—

... ... ... ... ... ...

( ಆಸ್ತಿಗಳ ವರ್ಣನವನ್ನು ಸ್ಪಷ್ಟವಾಗಿಯೂ ವಿಶದವಾಗಿಯೂ ಬರೆಯ ಬೇಕು. ) ನಾನು ಮೇಲೆ ವರ್ಣಿಸಿದ ಯಾವತ್ತು ಆಸ್ತಿಗಳನ್ನು ಇವತ್ತಿನ ದಿವಸ ನಿಮಗೆ ೫೦೫೦ ರೂಪಾಯಿಗಳಿಗೆ ಖರೀದಿಕೊಟ್ಟಿರುತ್ತೇನೆ. ನನ್ನ ಗೃಹಕೃತ್ಯದ ಅಡಚಣಿನಶೆಯಿಂದಲೂ ನನ್ನ ಹಿಂದಿನ ಸಾಲವನ್ನು ತೀರಿಸಬೇಕೆಂತಲೂ ಸಾಗು ವಳಿಯ ಕೋಸದ ದಶೆಯಿಂದಲೂ ನಾನು ಮೇಲ್ಕಂಡ ಆಸ್ತಿಗಳನ್ನು ನಿಮಗೆ ಖರೀದಿ ಕೊಟ್ಟಿರುತ್ತೇನೆ. ಸದರಿ ಖರೀದಿಯ ಸಂಬಂಧಿ ೫೦ ರೂಪಾಯಿಗಳನ್ನು ತಾರೀಖು ೧೫–೪–೧೯೩೮ನೇ ಇಶ್ವಿದಿವಸ ನನಗೆ ಮುಟ್ಟಿರುತ್ತವೆ. ಮತ್ತು ಬಾಕಿ ಉಳಿವ ೫೦೦೦ ರೂಪಾಯಿಗಳನ್ನು ಸದರಿ ಆಸ್ತಿಗಳ ಸಂಬಂಧದಿಂದ ಖರೀದಿ ಪತ್ರವನ್ನು ನೋಂದಿಸುವ ಕಾಲಕ್ಕೆ ಸಬ್ಬರಜಿಸ್ಟ್ರರನ ಸಮಕ್ಷಮಾ ಕೊಡಬೇಕೆಂದು ನಮ್ಮ ಉಭಯತರಲ್ಲಿ ಕರಾರು ಆಗಿದೆ; ಆ ಪ್ರಕಾರ ನೀವು ಆ ವೇಳೆಗೆ ಈ ರೂಪಾಯಿಗಳನ್ನು ಕೊಡಬೇಕು. ಸದರಿ ಆಸ್ತಿಗಳ ಮೇಲೆ ಯಾವದೇ ಋಣಭಾರವು ಅಥವಾ ಸಾಲದ ಬೋಜೆ ಇರುವದಿಲ್ಲ. ಸದರಿ ಆಸ್ತಿಗಳ ಮೇಲಿನ ನನ್ನ ಮಾಲಕಿಯ ಸಂಬಂಧದಿಂದ ಏನೂ ತಕರಾರು ಇರುವದಿಲ್ಲ. ಇವತ್ತಿನಿಂದ ಸದರಿ ಆಸ್ತಿಗಳಿಗೆ ನೀವೇ ಸಂಪೂರ್ಣ ಮಾಲಕರು ಇರುತ್ತೀರಿ; ಮತ್ತು ಅವುಗಳ ಮೇಲೆ ನನ್ನದು, ನನ್ನ ವಾರಸದಾರರ ಅಥವಾ ನನ್ನ ಮೃತ್ಯು ಲೇಖ ನಡೆಯಿಸುವವರ ಅಥವಾ ನನ್ನಪತಿಯಿಂದ ಯಾವದೇ ರೀತಿಯಿಂದ ಹಕ್ಕು ಹೇಳುವವರ ಏನೂ ಯಾವ ತರಹದ್ದು ಹಕ್ಕ ಸಂಬಂಧ ಇರುವದಿಲ್ಲ. ಇವತ್ತಿನಿಂದ ಸದರಿ ಆಸ್ತಿಗಳ ವಹಿವಾಟವು ಮತ್ತು ಉಪಭೋಗವು ನೀವು ನಿಮ್ಮ ಮನಸಿಗೆ ಬಂದಂತೆ ಮಾಡ ಬೇಕು. ಇದಕ್ಕೆ ಯಾರೂ ಅಡ್ಡಿ ಮಾಡಲಿಕ್ಕಿಲ್ಲ. ಯಾರಾದರೂ ಹೀಗೆ ಅಡ್ಡಿ

ಮಾಡಿದರೆ ಅದನ್ನು ನಾನು ನನ್ನ ವೆಚ್ಚದಿಂದಲೇ ಇಲ್ಲದಂತೆ ಮಾಡಿಕೊಟ್ಟೇನಿ ಮತ್ತು ಆ ಅಡ್ಡಿಯಿಂದ ನಿಮಗೆ ಏನಾದರೂ ಲುಕ್ಸಾನ ಆದರೆ ಅದನ್ನು ನಾನು ಭರಾಯಿಸಿಕೊಟ್ಟೇನಿ. ಅಂತಾ ರಾಜಿ ಖುಷಿಯಿಂದ ಮತ್ತು ಬುದ್ಧಿ ಜಾಗ್ರತೆ ಯಿಂದ ಬರೆದುಕೊಟ್ಟ ಖರೀದಿಪತ್ರ ತಾರೀಖು ೨೫-೪-೧೯೨೮ನೇ ಇಸ್ವಿ

ದಸ್ತೂರ ತುಳಜಪ್ಪಾ ವೈತ್ರಾಣಿ

O ಈ ಎಡಗೈ ಹೆಬ್ಬಟ್ಟಿನ ಗುರ್ತು ಮಲ್ಲಪ್ಪಾ ತಂದಿ ಅಡಿವೆಪ್ಪಾ ಅಗಸರ ಈತನದಿದೆ. ದಸ್ತೂರ ಸದರ.

ಸಾಕ್ಷಿಗಳು

೧ ರಾಯಪ್ಪಾ ಹಣಮಂತಪ್ಪಾ ತಡಸ ೨ ಗದಿಗೆಪ್ಪಾ ನೀಲಪ್ಪಾ ಬೆಲ್ಲದವರ

———

# ೪ನೆಯ ಪ್ರಕರಣ

## ಒತ್ತೆಯು

ಯಾವನಾದರೊಬ್ಬ ಮನುಷ್ಯನಿಗೆ ತನ್ನ ಹಿತಕ್ಕಾಗಿ ಮತ್ತೊಬ್ಬ ಮನುಷ್ಯನನ್ನು ಯಾವದಾದರೂ ಕಾರ್ಯವನ್ನು ಯಾ ಕರ್ಮವನ್ನು ಮಾಡಿಸುವ ಹಕ್ಕು ಇದ್ದರೆ ಆ ಮೊದಲಿನ ಮನುಷ್ಯನಿಗೆ ಆ ಎರಡನೆ ಮನುಷ್ಯನ ವಿರುದ್ಧವಾಗಿ **ಭಾಧ್ಯತೆ**ಯಿದ್ದಂತೆ ಆಗುತ್ತದೆ.

**ಉ:**— (೧) ಗಂಡನ ಕಡೆಯಿಂದ ಪೋಷಣೆಯಾಗುವ ಹಕ್ಕು ಹೆಂಡತಿಗೆ ಇದೆ.

(೨) ಋಣಿಯಿಂದ ತನ್ನ ಸಾಲವನ್ನು ಭರಪಾಯಿಮಾಡಿಸುವ ಹಕ್ಕು ಸಾವುಕಾರನಿಗೆ ಇದೆ.

(೩) ಗುಮಾಸ್ತನ ಕಡೆಯಿಂದ ಲೆಕ್ಕವನ್ನು ಪಡೆಯುವ ಹಕ್ಕು ಮಾಲಕನಿಗೆ ಇದೆ.

ಇವುಗಳಲ್ಲಿ ಗಂಡನ ವಿರುದ್ಧ ಹೆಂಡತಿಗೆ ಬಾಧ್ಯತೆಯುಂಟು, ಋಣಿಯ ವಿರುದ್ಧ ಸಾವುಕಾರನಿಗೆ ಬಾದ್ಯತೆಯುಂಟು ಮತ್ತು ಗುಮಾಸ್ತನ ವಿರುದ್ಧ ಮಾಲಕನಿಗೆ ಬಾದ್ಯತೆಯುಂಟು.

ಭಾದ್ಯತೆಯು ತಾರಣವುಳ್ಳಂಥ ಇರುವದು ಯಾ ತಾರಣವಿಲ್ಲದಂಥ ಇರುವದು.

**ತಾರಣವುಳ್ಳಂಥ ಬಾಧ್ಯತೆಯು**— ಯಾವದಾದರೂ ಬಾಧ್ಯತೆಯು ತೀರಿಸುವದಕ್ಕಾಗಿ ಇಲ್ಲವೆ ಕಡೆಗಾಣಿಸುವದಕ್ಕಾಗಿ ಅಡವಾಗಿ ಸರಕಗಳು ಯಾ ಆಸ್ತಿಗಳು ಕೊಡಲ್ಪಟ್ಟರೆ ಅದು ತಾರಣವುಳ್ಳ ಬಾಧ್ಯತೆಯಾಗುತ್ತದೆ. ಆ ಆಸ್ತಿಯು ಜಂಗಮ ಆಸ್ತಿಯಿರುವದು ಯಾ ಸ್ಥಾವರ ಆಸ್ತಿಯಿರುವದು. ಉದಾಹರಣಾರ್ಥ— **ಅ** ಎಂಬುವವನು **ಬ** ಎಂಬುವವನ ಬಳಿಯಲ್ಲಿ ೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡನು; ಈ ಸಾಲವನ್ನು ತೀರಿಸುವದಕ್ಕಾಗಿ **ಅ** ಇವನು ತನ್ನ

ಒಂದು ನತ್ತು (ಜಂಗಮ ಆಸ್ತಿಯು) **ಬ** ಇವನ ಕಡಿಗೆ ಅಡವಾಗಿ ಇಟ್ಟನು; ಅಥವಾ ಈ ಸಾಲವನ್ನು ತೀರಿಸುವದಕ್ಕಾಗಿ **ಅ** ಇವನು ತನ್ನ ಒಂದು ಮನೆಯನ್ನು (ಸ್ಥಾವರ ಆಸ್ತಿಯು) **ಬ** ಇವನ ಕಡಿಗೆ ಅಡವಾಗಿ ಇಟ್ಟನು. **ಅ** ಇವನು ಸದರೀ ಸಾಲವನ್ನು ತೀರಿಸದಿದ್ದರೆ ಅದನ್ನು ಮೇಲ್ಕಂಡ ನತ್ತು ಅಥವಾ ಮನೆಯನ್ನು ಮಾರಿಸಿ ತೀರಿಸಲ್ಪಡಬಹುದು. ಇದರಲ್ಲಿ **ಅ** ಇವನ ಸಾಲಿಗೆ ಅವನ ನತ್ತು ಅಥವಾ ಮನೆಯು ತಾರಣವಿದೆ. ಸದರೀ ತಾರಣಕ್ಕೆ ಒತ್ತೆಯೆನ್ನುತ್ತಾರೆ. ಸಾರಾಂಶ:—

ಯಾವದೊಂದು ಸಾಲವನ್ನು ತೀರಿಸುವ ಬಗ್ಗೆ ಇಲ್ಲವೆ ವಾಗ್ದಾನವನ್ನು ಕಡೆಗಾಣಿಸುವ ಬಗ್ಗೆ **ಅಡವಾಗಿ** ಸರಕುಗಳು ಯಾ ಆಸ್ತಿಗಳು ಕೊಡಲ್ಪಟ್ಟರೆ ಅದು "**ಒತ್ತೆ**"ಯೆಂದು ಹೇಳಲ್ಪಡುತ್ತದೆ.

**ಜಂಗಮ ಆಸ್ತಿಯ ಒತ್ತೆಯ ಸಂಬಂಧದಿಂದ ವಿವೇಚನ ಮಾಡುವಾ**— ಒತ್ತೆ ಇಟ್ಟ ಸರಕುಗಳನ್ನು ಒತ್ತೆಗೆ ಕಾರಣವಾದ ಸಾಲವನ್ನು ತೀರಿಸಿಕೊಳ್ಳುವದರ ಸಲುವಾಗಿ ಇಲ್ಲವೆ ಅಂಥ ವಾಗ್ದಾನವನ್ನು ಕಡೆಗಾಣಿಸಿ ಕೊಳ್ಳುವದರ ಸಲುವಾಗಿ ಒತ್ತೆಯುವನು ಹಿಡದಿಡಬಹುದೆಂಬುವವಷ್ಟೇ ಅಲ್ಲ, ಆ ಸಾಲದ ಬಡ್ಡಿ ಸಲುವಾಗಿಯೂ, ಆ ಒತ್ತೆ ಸರಕುಗಳು ಅವನ ವಶದಲ್ಲಿ ಇದ್ದಿದ್ದರ ವಿಷಯವಾಗಿ ಇಲ್ಲವೆ ಅವುಗಳ ಸಂರಕ್ಷಣೆಗೋಸ್ಕರವಾಗಿ ಅವನಿಂದ ಮಾಡಲ್ಪಟ್ಟ ಯಾವತ್ತು ವೆಚ್ಚದ ಸಲುವಾಗಿಯೂ ಹಿಡಿದಿಡಬಹುದು. ಒತ್ತೆಗೆ ಕಾರಣವಾದ ಸಾಲವೂ ವಾಗ್ದಾನವೂ ಅಲ್ಲವೆ, ಬೇರೆ ಯಾವದಾದರೂ ಸಾಲದ ಸಲುವಾಗಿ ಇಲ್ಲವೆ ವಾಗ್ದಾನದ ಸಲುವಾಗಿ ಒತ್ತೆಯ ಸರಕುಗಳನ್ನು ಹಿಡಿದಿಡುವ ಕರಾರು ಇದ್ದ ಹೊರತು, ಒತ್ತೆಯುವನು ಅವುಗಳನ್ನು ಹಾಗೆ ಹಿಡದಿಡಕೂಡದು. ಅಂದರೆ ಮೇಲ್ಕಂಡ ಉದಾಹರಣೆಯಲ್ಲಿ ಒತ್ತೆಯ ಕಾರಣವಾದ ೫೦೦ ರೂಪಾಯಿಯ ಸಾಲವನ್ನು ತೀರಿಸಿಕೊಳ್ಳುವದರ ಸಲುವಾಗಿ ಒತ್ತೆಯುವನಾದ **ಅ** ಇವನು ಒತ್ತೆ ಇಟ್ಟ ಸರಕು ಅಂದರೆ ನತ್ತು ಹಿಡದಿಡಬಹುದು. **ಅ** ಇವನು ಆ ನತ್ತು, ಆ ಸಾಲವನ್ನು ತೀರಿಸಿಕೊಳ್ಳುವದರ ಸಲುವಾಗಿ **ಬ** ಇವನ ಕಡೆಗೆ ಇಡಬಹುದು ಮತ್ತು **ಬ** ಇವನು ಅದನ್ನು ಆ ಸಾಲವನ್ನು ತೀರಿಸಿಕೊಳ್ಳುವದರ ಸಲುವಾಗಿ ಅಡವಾಗಿ ಇಟ್ಟಕೊಳ್ಳಬಹುದು ಮತ್ತು ಅವನ್ನು ಹಿಡದಿಡಬಹುದು. ಒತ್ತೆಗೆ ಕಾರಣವಾದ ಮೇಲ್ಕಂಡ ೫೦೦ ರೂಪಾಯಿಯ ಸಾಲದ ಸಲುವಾಗಿ ಅಷ್ಟೇ

ಒತ್ತೆಯ ಸರಕುಗಳನ್ನಾದ ನತ್ತು ಬ ಇವನು ಹಿಡದಿಡಬಹುದು. **ಅ** ಇವನ ಬೇರೆ ಸಾಲಗಳ ಸಲುವಾಗಿ **ಬ** ಇವನು ಆ ನತ್ತು ಹಿಡದಿಡಕೂಡದು. ಆದರೆ ಈ ಬಗ್ಗೆ ಅಂದರೆ ಹಿಡದಿಡುವ ಬಗ್ಗೆ ಬೇರೆ ಕರಾರು ಮಾಡಕೊಂಡಿದ್ದರೆ ಈ ತರಹದ ಅಡ್ಡಿಯಾಗಲಾಗದು. ಒತ್ತೆಯ ಸರಕುಗಳ ಸಂರಕ್ಷಣೆಗಾಗಿ ಒತ್ತೆಯವನು ತನ್ನಿಂದ ಮಾಡಲ್ಪಟ್ಟ ಆಗಂತುಕವಾದ ವೆಚ್ಚಗಳನ್ನು ಒತ್ತೆಗಾರನಿಂದ ಪಡೆಯು ಲಿಕ್ಕೆ ಬಾಧ್ಯನಿರುತ್ತಾನೆ.

**ಒತ್ತೆಗಾರನಿಂದ ಕರಾರು ಮುರಿಯಲ್ಪಟ್ಟಲ್ಲಿ ಯಾವ ಕ್ರಮ ವನ್ನು ಅನುಸರಿಸಬಹುದು ?** — ಒತ್ತೆಗಾರನು ಒತ್ತೆಗೆ ಕಾರಣವಾದ ಸಾಲವನ್ನು ಕರಾರಿನ ಮುದ್ದತಿನಲ್ಲಿ ತೀರಿಸದಿದ್ದರೆ, ಅಥವಾ ಅಂಥಾ ವಾಗ್ದಾನ ವನ್ನು ಅಂಥಾ ಮುದ್ದತಿನಲ್ಲಿ ಕಡೆಗಾಣಿಸದಿದ್ದರೆ ಒತ್ತೆಯವನು ಆ ಸಾಲದ ಸಲುವಾಗಿ ಇಲ್ಲವೆ ಆ ವಾಗ್ದಾನದ ಸಾಲುವಾಗಿ,

(೧) ದಾವೆ ಮಾಡಬಹುದು, ಅಥವಾ

(೨) ಒತ್ತೆಯ ಸರಕುಗಳನ್ನು ಅಡವಾಗಿ ಇಟ್ಟುಕೊಳ್ಳಬಹುದು, ಅಥವಾ

(೩) ಆ ಒತ್ತೆಯ ಸರಕುಗಳನ್ನು ಮಾರುತ್ತೇನೆಂದು ಒತ್ತೆಗಾರನಿಗೆ ಯೋಗ್ಯವಾಗಿ ತಿಳಿಯಪಡಿಸಿ ಅವನು ಅವುಗಳನ್ನು ಮಾರಬಹುದು.

**ಉ**:– **ಅ** ಎಂಬುವವನು **ಬ** ಎಂಬುವವನ ಬಳಿಯಲ್ಲಿ ತಾ. ೧೫-೪-೧೯೧ಲನೇ ಇಸ್ವಿ ದಿವಸ ೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡನು. ಈ ಸಾಲವನ್ನು ತೀರಿಸಿಕೊಳ್ಳುವದರ ಸಲುವಾಗಿ **ಅ** ಇವನು ತನ್ನ ಒಂದು ನತ್ತು **ಬ** ಇವನ ಕಡಿಗೆ ಒತ್ತೆ ಇಟ್ಟನು; ಮತ್ತು ಸದರೀ ಸಾಲವನ್ನು ಒಂದು ತಿಂಗಳ ದಲ್ಲಿ ತೀರಿಸುವದಕ್ಕೆ **ಅ** ಇವನು ಕರಾರು ಮಾಡಿಕೊಂಡನು. ಇದರಲ್ಲಿ **ಅ** ಇವನು '**ಒತ್ತೆಗಾರನು**' ಬ ಇವನು '**ಒತ್ತೆಯವನು**' ಮತ್ತು ನತ್ತು '**ಒತ್ತೆ** ಎಂದು ತಿಳಿಯತಕ್ಕದ್ದು. ಒತ್ತೆಗಾರನಾದ **ಅ** ಇವನು ಒಂದು ತಿಂಗಳದಲ್ಲಿ ಅಂದರೆ ತಾರೀಖು ೧೫-೫-೧೯೧ಲನೇ ಇಸ್ವಿ ದಿವಸದಲ್ಲಿ ಸದರೀ ಸಾಲವನ್ನು ಕರಾರಿನ ಪ್ರಕಾರ ತೀರಿಸತಕ್ಕದ್ದು. ಈ ಪ್ರಕಾರ ಅ ಇವನು ಈ ಸಾಲವನ್ನು ತೀರಿಸುವದಿಲ್ಲ. ಈ ಪ್ರಸಕ್ತಿಯಲ್ಲಿ **ಬ** ಇವನು ಆ ಸಾಲದ ಸಲುವಾಗಿ

(೧) ಅ ಇವನ ಮೇಲೆ ದಾವೆ ಮಾಡಬಹುದು ಅಥವಾ

(೨) ಆ ಒತ್ತೆಯ ಸರಕನ್ನಾದ ನತ್ತು ಅಡವಾಗಿ ಇಟ್ಟುಕೊಳ್ಳಬಹುದು, ಅಥವಾ

(೩) ಆ ಒತ್ತೆಯ ಸರಕನ್ನಾದ ನತ್ತು ಮಾರುತ್ತೇನೆಂದು ಒತ್ತೆಗಾರನಾದ ಅ ಇವನಿಗೆ ಯೋಗ್ಯವಾಗಿ ತಿಳಿಯಪಡಿಸಿ ಅವನು ( ಬ ಇವನು ) ಅದನ್ನು ಮಾರಬಹುದು.

ಹಾಗೆ ಮಾರಿದ್ದರಿಂದ ಬಂದ ಬೆಲೆಯು ಆ ಸಾಲದ ಇಲ್ಲವೆ ವಾಗ್ದಾನದ ಸಂಬಂಧವಾಗಿ ಸಲ್ಲತಕ್ಕ ರಕಮಿಗಿಂತ ಕಡಿಮೆ ಇದ್ದರೆ; ಒತ್ತೆಗಾರನು ಬಾಕಿಯನ್ನು ಕೊಡಲಿಕ್ಕೆ ಮತ್ತೂ ಬದ್ಧನಿರುತ್ತಾನೆ. ಆ ವಿಕ್ರಯದಿಂದ ಬಂದ ಬೆಲೆಯು ಹಾಗೆ ಸಲ್ಲತಕ್ಕ ರಕಮಿಗಿಂತ ಹೆಚ್ಚಿದ್ದರೆ; ಆ ಹೆಚ್ಚಿನ ಹಣವನ್ನು ಒತ್ತೆಯವನು ಒತ್ತೆಗಾರನಿಗೆ ಕೊಡತಕ್ಕದ್ದು. ಉದಾಹರಣಾರ್ಥ:– ಮೇಲ್ಕಂಡ ಉದಾಹರಣೆಯಲ್ಲಿ ಬ ಇವನಿಗೆ ಅ ಇವನ ಕಡೆಯಿಂದ ೫೦೦ ರೂಪಾಯಿಗಳನ್ನು ಸಲ್ಲತಕ್ಕದ್ದಾಗುತ್ತವೆ. ಈ ಸಾಲದ ಬಗ್ಗೆ ಬ ಇವನು ಮೇಲೆ ಹೇಳಿದಂತೆ ನತ್ತು ಮಾರುತ್ತಾನೆ. ಆದುದರಿಂದ ಅದರ ಬೆಲೆಯಾದ ೩೦೦ ರೂಪಾಯಿಗಳನ್ನು ಬರುತ್ತವೆ. ಈ ರಕಮು ವಜಾ ಕಳದರೆ ೨೦೦ ರೂಪಾಯಿಗಳನ್ನು ಬಾಕಿ ಉಳಿಯುತ್ತದೆ. ಸದರೀ ಬಾಕಿಯನ್ನು ಅಂದರೆ ೨೦೦ ರೂಪಾಯಿಗಳನ್ನು ಬ ಇವನಿಗೆ ಕೊಡುವದಕ್ಕೆ ಅ ಇವನು ಪಾತ್ರನಿರುತ್ತಾನೆ. ಈ ರಕಮಿನ ಬಗ್ಗೆ ಬ ಇವನು ಅ ಇವನ ಮೇಲೆ ದಾವೆ ಮಾಡಬಹುದು. ಆದರೆ ಮೇಲ್ಕಂಡ ವಿಕ್ರಯದಿಂದ ೭೦೦ ರೂಪಾಯಿಗಳನ್ನು ಬಂದರೆ. ಆದುದರಿಂದ ಬ ಇವನಿಗೆ ಸಲ್ಲತಕ್ಕ ಹಣಕ್ಕಿಂತ ೨೦೦ ರೂಪಾಯಿಗಳನ್ನು ಹೆಚ್ಚಿಗೆ ಬಂದಂತೆ ಆಗುತ್ತದೆ. ಆ ರಕಮನ್ನು, ಅಂದರೆ ೨೦೦ ರೂಪಾಯಿಗಳನ್ನು ಬ ಇವನು ಅ ಇವನಿಗೆ ಕೊಡತಕ್ಕದ್ದು.

ಮೇಲ್ಕಂಡ ಸಾಲದ ಸಲುವಾಗಿ, ಅಂದರೆ ೫೦೦ ರೂಪಾಯಿಗಳ ಸಲುವಾಗಿ ಅಥವಾ ಮೇಲ್ಕಂಡಂತೆ ಬಾಕಿ ಉಳಿದ ೨೦೦ ರೂಪಾಯಿಗಳ ಸಲುವಾಗಿ ಬ ಇವನಿಗೆ ಅ ಇವನ ಮೇಲೆ ದಾವೆಯನ್ನು ಮಾಡುವದಾದರೆ ಅವರ ಕರಾರಿನ ಪ್ರಕಾರ ಆ ಹಣವನ್ನು ಕೊಡಬೇಕಾಗುವ ತಾರೀಖಿನಿಂದ ಮೂರು ವರ್ಷದ ಅವಧಿಯಲ್ಲಿ ದಾವೆಯನ್ನು ಮಾಡಬೇಕಾಗುವದು. ಮೇಲ್ಕಂಡ ಕರಾರಿನ ಪ್ರಕಾರ

ತಾರೀಖು ೧೫–೫–೧೯೧೮ನೇ ಇಸ್ವಿ ದಿವಸದಲ್ಲಿ **ಅ** ಇವನು **ಬ** ಇವನಿಗೆ ಆ ಹಣವನ್ನು ಕೊಡಬೇಕಾಗುವದು. ಹೀಗೆ ಮಾಡಲಿಕ್ಕೆ ಅವನು ತಪ್ಪಿದ್ದಲ್ಲಿ **ಬ** ಇವನು ಆ ತಾರೀಖಿನಿಂದ ಮೂರು ವರ್ಷದ ಅವಧಿಯಲ್ಲಿ ಅಂದರೆ ತಾರೀಖು ೧೫–೫–೧೯೨೧ನೇ ಇಸ್ವಿ ದಿವಸದ ಅವಧಿಯಲ್ಲಿ ಈ ಹಣದ ಬಗ್ಗೆ **ಅ** ಇವನ ಮೇಲೆ ದಾವೆಯನ್ನು ಮಾಡಬೇಕು; ಅನಂತರದಲ್ಲಿ ಸದರೀ ಹಣದ ಬಗ್ಗೆ ದಾವೆಯನ್ನು ಮಾಡಲ್ಪಟ್ಟಲ್ಲಿ ಅದಕ್ಕೆ ಮುದ್ದತಿಯ ಆತಂಕ ಉಂಟಾಗುವದು. ಆದರೆ ಸದರೀ ಅವಧಿಯ ಅನಂತರದಲ್ಲಿ ಸಹ ಮೊದಲಿನಂತೆ ಸದರೀ ಸರಕನ್ನು ಅಂದರೆ ನತ್ತನ್ನು ಬ ಇವನು ಅಡವಾಗಿ ಹಿಡದಿಡಬಹುದು; ಅದಕ್ಕೆ ಯಾವ ತರಹದ್ದು ಅಡ್ಡಿಯಾಗಲಾಗದು.

**ಒತ್ತೆಗಾರನು ಒತ್ತೆಯನ್ನು ಯಾವಾಗ ಬಿಡಿಸಿಕೊಳ್ಳಬಹುದು?**—ಒತ್ತೆಗೆ ಕಾರಣವಾದ ಸಾಲವನ್ನು ಇಂಥಾ ಮುದ್ದತಿನಲ್ಲಿ ತೀರಿಸಬೇಕೆಂದು ಕರಾರು ಇದ್ದಲ್ಲಿ ಆ ಗೊತ್ತುಪಡಿಸಿದ ದಿವಸ ಒತ್ತೆಗಾರನು ಒತ್ತೆಯನ್ನು ಬಿಡಿಸಿಕೊಳ್ಳಬಹುದು. ಸದರೀ ಅವಧಿಯ ಅನಂತರದಲ್ಲಿ ಸಹ ಒತ್ತೆಯನ್ನು ಬಿಡಿಸಿಕೊಳ್ಳುವದಕ್ಕೆ ಬರುವದು ಏನು? ಹೌದು, ಬರುವದು. ಒತ್ತೆಯ ಸರಕನ್ನು ಪ್ರತ್ಯಕ್ಷವಾಗಿ ಮಾರಲ್ಪಡುವ ಪೂರ್ವದಲ್ಲಿ ಬೇಕಾದಾಗ ಒತ್ತೆಗಾರನು ಅದನ್ನು ಬಿಡಿಸಿಕೊಳ್ಳಬಹುದು. ಒತ್ತೆಯುವನು ಅದನ್ನು ಬಿಡಿಸಿಕೊಡದಿದ್ದರೆ, ಒತ್ತೆಗಾರನು ಆ ಒತ್ತೆಯನ್ನು ಇಡುವ ತಾರೀಖಿನಿಂದ ಮೂವತ್ತು ವರ್ಷಗಳ ಅವಧಿಯಲ್ಲಿ ಆ ಒತ್ತೆಯನ್ನು ಬಿಡಿಸಿಕೊಳ್ಳುವ ಬಗ್ಗೆ ಒತ್ತೆಯುವನ ಮೇಲೆ ದಾವೆಯನ್ನು ಮಾಡಬಹುದು.

ಮೇಲ್ಕಂಡ ಉದಾಹರಣೆಯಲ್ಲಿ ಹೇಳಿದಂತೆ **ಅ** ಎಂಬುವವನು ತನ್ನ ಸಾಲವನ್ನು ಕರಾರಿನ ಪ್ರಕಾರ ಒಂದು ತಿಂಗಳದಲ್ಲಿ ಅಂದರೆ ತಾರೀಖು ೧೫-೫-೧೯೨೮ನೇ ಇಸ್ವಿ ದಿವಸದಲ್ಲಿ ತೀರಿಸತಕ್ಕದ್ದು. ಈ ದಿವಸ ಸದರೀ ಸಾಲವನ್ನು ತೀರಿಸಿ **ಬ** ಇವನ ಕಡೆಯಿಂದ **ಅ** ಇವನು ತನ್ನ ನತ್ತನ್ನು ಬಿಡಿಸಿಕೊಳ್ಳಬಹುದು. ಹಿಂದುಗಡೆಯಲ್ಲಿ ಸಹ ಅಂದರೆ ಸದರೀ ಅವಧಿಯ ನಂತರ ಸಹ **ಅ** ಇವನು ತನ್ನ ಒತ್ತೆ ಇಟ್ಟ ನತ್ತನ್ನು ಬೇಕಾದಾಗ ಬಿಡಿಸಿಕೊಳ್ಳಬಹುದು. ಆದರೆ ಕರಾರಿನಲ್ಲಿ ಹೇಳಿದ ಅವಧಿಯ ನಂತರ ಆ ನತ್ತು ಮಾರುತ್ತೇನೆಂದು **ಬ** ಇವನು **ಅ** ಇವನಿಗೆ

ಯೋಗ್ಯವಾಗಿ ತಿಳಿಯಪಡಿಸಿ ಅವನು ಅದನ್ನು ಮಾರಬಹುದು; ಕಾರಣಾ ಈ ಮಾರಾಟವನ್ನು ಆಗುವ ಪೂರ್ವದಲ್ಲಿ ಬೇಕಾದಾಗ **ಅ** ಇವನು ತನ್ನ ನತ್ತನ್ನು ಬಿಡಿಸಿಕೊಳ್ಳಬಹುದು. ಅದಕ್ಕೆ **ಬ** ಇವನು ಹರಕತು ಮಾಡಿದ್ದಲ್ಲಿ **ಅ** ಇವನು ಆ ನತ್ತನ್ನು ಅಡವಾಗಿ ಇಟ್ಟ ತಾರೀಖಿನಿಂದ ಮೂವತ್ತು ವರ್ಷಗಳ ಅವಧಿಯಲ್ಲಿ **ಬ** ಇವನ ಮೇಲೆ ಆ ನತ್ತನ್ನು ಬಿಡಿಸಿಕೊಳ್ಳುವ ಬಗ್ಗೆ ದಾವೆಯನ್ನು ಮಾಡಬಹುದು. ಸಂಕ್ಷೇಪವಾಗಿ ಹೇಳುವದೇನಂದರೆ; ಒತ್ತೆಗೆ ಕಾರಣವಾದ ಸಾಲವನ್ನು ಇಂಥಾ ಮುದ್ದತಿನಲ್ಲಿ ತೀರಿಸಬೇಕೆಂದು, ಇಲ್ಲವೆ ಇಂಥಾ ವಾಗ್ದಾನವನ್ನು ಇಂಥಾ ಮುದ್ದತಿನಲ್ಲಿ ಕಡೆಗಾಣಿಸಬೇಕೆಂದು ಕರಾರು ಇದ್ದು ಒತ್ತೆಗಾರನು ಆ ಮುದ್ದತಿನಲ್ಲಿ ಆ ಸಾಲವನ್ನು ತೀರಿಸದಿದ್ದರೆ ಇಲ್ಲವೆ ಆ ವಾಗ್ದಾನವನ್ನು ಕಡೆಗಾಣಿಸದಿದ್ದರೆ, ಅವನು ಹಿಂದುಗಡೆಯಲ್ಲಿ ಒತ್ತೆಯ ಸರಕುಗಳು ಪ್ರತ್ಯಕ್ಷವಾಗಿ ಮಾರಲ್ಪಡುವ ಪೂರ್ವದಲ್ಲಿ ಬೇಕಾದಾಗ ಅವುಗಳನ್ನು ಬಿಡಿಸಿಕೊಳ್ಳಬಹುದು; ಆದರೆ ಆ ಪ್ರಸಕ್ತಿಯಲ್ಲಿ ಅವನಿಂದ ಕರಾರು ಮುರಿಯಲ್ಪಟ್ಟದ್ದರಿಂದ ಉದ್ಭವಿಸಿದ ವೆಚ್ಚವನ್ನು ಸಹ ಅವನು ಕೊಡಲಿಕ್ಕೆ ಬೇಕು.

**ಸ್ಥಾವರ ಆಸ್ತಿಯ ಒತ್ತೆಯ ಸಂಬಂಧದಿಂದ ವಿವೇಚನ ಮಾಡುವಾ**—ಸಾಲವಾಗಿ ಮುಂಗಡ ಕೊಟ್ಟ ಯಾ ಮುಂಗಡ ಕೊಡತಕ್ಕ ಹಣವನ್ನು, ಈಗಿರುವ ಯಾ ಮುಂದೆ ಆಗುವ ಸಾಲವನ್ನು, ಅಥವಾ ಯಾವ ಕರಾರಿನಿಂದ ಹಣದ ಸಂಬಂಧಿ ಜವಾಬದಾರಿಯುಂಟಾಗುವದೋ ಆ ಕರಾರಿನ ಪ್ರಕಾರ ಮಾಡುವದನ್ನು ಭದ್ರಪಡಿಸುವದಕ್ಕಾಗಿ ವಿಶೇಷ ಸ್ಥಾವರಾಸ್ತಿಯೊಳಗಿನ ಹಿತಸಂಬಂಧವನ್ನು ತಬದಿಲು ಮಾಡಿಕೊಡುವ ವ್ಯವಹಾರಕ್ಕೆ ಒತ್ತೆಯೆಂದೆನ್ನುತ್ತಾರೆ. ಅಂದರೆ ಒತ್ತೆಯ ವ್ಯವಹಾರದಿಂದ ಆಸ್ತಿಯೊಳಗಿನ **ಹಿತಸಂಬಂಧವನ್ನು ತಬದಿಲು** ಮಾಡಿಕೊಟ್ಟಂತೆ ಆಗುತ್ತದೆ ಹೊರತು ಆ **ಆಸ್ತಿಯನ್ನು ತಬದಿಲು** ಮಾಡಿಕೊಟ್ಟಂತೆ ಆಗುವದಿಲ್ಲ. ವಿಕ್ರಯದ ವ್ಯವಹಾರದಲ್ಲಿ ವಿಕ್ರಯ ಮಾಡಿದ ಆಸ್ತಿಯನ್ನು ತಬದಿಲು ಮಾಡಿಕೊಟ್ಟಂತೆ ಆಗುತ್ತದೆ. ಒತ್ತೆಯ ವ್ಯವಹಾರದಲ್ಲಿ ಮೇಲೆ ಹೇಳಿದಂತೆ ಬರೇ ಒತ್ತೆ ಇಟ್ಟ ಆಸ್ತಿಯೊಳಗಿನ ಹಿತಸಂಬಂಧವನ್ನು ತಬದಿಲು ಮಾಡಿಕೊಟ್ಟಂತೆ ಆಗುತ್ತದೆ. ಅಂದರೆ ಒತ್ತೆಯ ವ್ಯವಹಾರದಿಂದ ವಿಕ್ರಯದ ವ್ಯವಹಾರದಂತೆ ಆಸ್ತಿಯೊಳಗಿನ ಮಾಲ್ಕಿ ಹಕ್ಕನ್ನು ಬದಲು ಆಗುವದಿಲ್ಲ;

ಆದರೆ ಆಸ್ತಿಯೊಳಗಿನ ಮಾಲ್ಕಿ ಹಕ್ಕನ್ನು ಹಾಗೆ ಕಾಯಮು ಉಳಿಯುತ್ತದೆ. ಒತ್ತೆಯು ವ್ಯವಹಾರದಲ್ಲಿ ಸಾಲಕ್ಕೆ ವಗೈರೆ ತಾರಣವಾಗಿ ಆಸ್ತಿಯೊಳಗಿನ ಹಿತ ಸಂಬಂಧವನ್ನು ತಬದಿಲು ಮಾಡಿಕೊಟ್ಟಿರುತ್ತದೆ. ತಬದಿಲು ಮಾಡಿಕೊಡುವವನಿಗೆ "**ಒತ್ತೆಯಿಡುವವನೆಂದೆನ್ನುತ್ತಾರೆ;**" ತಬದಿಲು ಮಾಡಿಕೊಟ್ಟದ್ದನ್ನು ತೆಗೆದುಕೊಳ್ಳುವವನಿಗೆ "**ಒತ್ತೆಯಿಟ್ಟುಕೊಳ್ಳುವವನೆಂದೆನ್ನುತ್ತಾರೆ;**" ಯಾವ ಮುದ್ದಲ ರಕಮು ಮತ್ತು ಅದರ ಬಡ್ಡಿಯನ್ನು ಕೊಡುವ ಬಗ್ಗೆ ಆ ಕಾಲದಲ್ಲಿ ಭದ್ರಪಡಿಸಿದೆಯೋ ಅಂಥ ಮುದ್ದಲ ರಕಮು ಮತ್ತು ಅದರ ಬಡ್ಡಿಗೆ "**ಒತ್ತೆಯು ಹಣವೆಂದೆನ್ನುತ್ತಾರೆ.**" ಅಂದರೆ ಒತ್ತೆಯು ಹಣದಲ್ಲಿ ಮುದ್ದಲ ರಕಮಿನ ಮತ್ತು ಅದರ ಬಡ್ಡಿಯ ಸಮಾವೇಶವಾಗುವದು. ಯಾವ ಖತ್ತಿನಿಂದ (ಯಾವದಾದರೂ ಇದ್ದಲ್ಲಿ) ತಬದಿಲು ಮಾಡಿಕೊಟ್ಟದೆಯೋ ಆ ಖತ್ತಿಗೆ **ಒತ್ತೆ ಪತ್ರವೆಂದೆನ್ನುತ್ತಾರೆ.**" ಮೇಲೆ ಹೇಳಿದ ವಿವೇಚನದ ಪ್ರಕಾರ ಒತ್ತೆಯು ವ್ಯವಹಾರದಿಂದ ಒತ್ತೆಯಿಡುವವನಿಂದ ಒತ್ತೆ ಇಟ್ಟ ಆಸ್ತಿಯೊಳಗಿನ ಮಾಲ್ಕಿ ಹಕ್ಕನ್ನು ಒತ್ತೆ ಇಟ್ಟುಕೊಳ್ಳುವವನ ಕಡೆಗೆ ಹೋಗುವದಿಲ್ಲ. ಆದರೆ ಅದನ್ನು ಒತ್ತೆಯಿಡುವವನ ಕಡೆಗೆ ಹಾಗೆ ಉಳಿದಿರುತ್ತದೆ. ಅಂದಮೇಲೆ ಒತ್ತೆಯಿಡುವವನು ಆಸ್ತಿಯನ್ನು ಪುನಃ ಒತ್ತೆ ಇಡಬಹುದು, ಮಾರಬಹುದು, ಬಕ್ಷೀಸ ಕೊಡಬಹುದು, ಯಾ ಈತರ ಯಾವದೇ ರೀತಿಯಿಂದ ಅದನ್ನು ತಬದಿಲು ಮಾಡಬಹುದು. ಆದರೆ ಈ ಹಿಂದುಗಡೆಯಲ್ಲಿ ಆದ ಯಾವದೇ ವ್ಯವಹಾರದಿಂದ ಮೊದಲಿನ ಒತ್ತೆಯ ಹಕ್ಕಿಗೆ ಯಾವ ತರಹದ್ದು ಬಾಧೆಯುಂಟಾಗುವದಿಲ್ಲ. ಮೊದಲಿನ ಒತ್ತೆಯ ಹಕ್ಕಿಗೆ ವಳಪಟ್ಟು ಮಾತ್ರ ಹಿಂದುಗಡೆಯಲ್ಲಿಯ ವ್ಯವಹಾರಗಳು ಆಗುವವು.

ಒತ್ತೆಯಲ್ಲಿ ಹಲವು ಭೇದಗಳು ಉಂಟು. ಅದರಲ್ಲಿ ಸಾಧಾರಣತಃ ಪ್ರಚಾರದಲ್ಲಿದ್ದ ಕೆಲವು ಒತ್ತೆಗಳ ವಿಚಾರ ಮಾಡುವಾ: —

(೧) **ಸಾಧಾ ಒತ್ತೆ ಅಂದರೆ ತೋರ ಒತ್ತೆ** — ಒತ್ತೆಯಿಟ್ಟ ಆಸ್ತಿಯನ್ನು ಕೈವಶಕ್ಕೆ ಕೊಡದೆ, ಒತ್ತೆ ಹಣವನ್ನು ಕೊಡುವೆನೆಂದು ಯಾವಾಗ್ಗೆ ಒತ್ತೆಯಿಡುವವನು ಸ್ವತಃ ಕಟ್ಟಿಕೊಳ್ಳುತ್ತಾನೆ ಮತ್ತು ಕರಾರಿನ ಪ್ರಕಾರ ಕೊಡುವದಕ್ಕೆ ತಪ್ಪಿದ ಸಂಗತಿಯಲ್ಲಿ ಒತ್ತೆಯಿಟ್ಟ ಆಸ್ತಿಯನ್ನು ಮಾರಿ ಅದರಿಂದ ಬಂದ ಉತ್ಪನ್ನವನ್ನು ಒತ್ತೆಯ ಹಣವನ್ನು ಕೊಡುವದರ ದಸೆಯಿಂದ ಅವಶ್ಯವಿದ್ದಷ್ಟರ

ಮಟ್ಟಿಗೆ ಹಚ್ಚಲಿಕ್ಕೆ ಒತ್ತೆ ಇಟ್ಟುಕೊಳ್ಳುವವನಿಗೆ ಹಕ್ಕು ಅದೆಂದು ಸ್ಪಷ್ಟವಾಗಿ ಯಾ ಗರ್ಭಿತವಾಗಿ ಒಪ್ಪಿಕೊಳ್ಳುತ್ತಾನೆ ಆಗ್ಗೆ ಆ ವ್ಯವಹಾರಕ್ಕೆ **ಸಾದಾ ಒತ್ತೆಯಂದೆನ್ನುತ್ತಾರೆ.** ಇದರ ವಿವರಣೆಯನ್ನು ಕೆಳಗಿನಂತೆ ಮಾಡೋಣ:—

**ಸಾಧಾ ಒತ್ತೆಯಲ್ಲಿ: —**

೧. ಒತ್ತೆ ಇಟ್ಟ ಆಸ್ತಿಯನ್ನು ಒತ್ತೆಯಿಡುವವನ ವಶಕ್ಕೇ ಇರುವದು; ಅದನ್ನು ಒತ್ತೆಯಿಟ್ಟುಕೊಳ್ಳುವವನ ವಶಕ್ಕೆ ಹೋಗುವದಿಲ್ಲ; ಮತ್ತು

೨. ಒತ್ತೆ ಹಣವನ್ನು ಕೊಡುವೆನೆಂದು ಒತ್ತೆಯಿಡುವವನು ಸ್ವತಃ ಕಟ್ಟಿಕೊಳ್ಳುತ್ತಾನೆ; ಅಂದರೆ ಒತ್ತೆ ಹಣವನ್ನು ಜಾತಿನಿಶಿ ತಾನು ಕೊಟ್ಟೇನಿ ಅಂತಾ ಒತ್ತೆಯಿಡುವವನು ಒಪ್ಪಿಕೊಳ್ಳುತ್ತಾನೆ; ಮತ್ತು

೩. ಒತ್ತೆಯಿಟ್ಟ ಆಸ್ತಿಯನ್ನು ಮಾರಿಸುವದಕ್ಕೆ ಸಹ ಒತ್ತೆಯಿಡುವವನು ಒಪ್ಪಿಕೊಳ್ಳುತ್ತಾನೆ. ಕರಾರಿನ ಪ್ರಕಾರ ಸಾಲವನ್ನು ಕೊಡುವದಕ್ಕೆ ತಪ್ಪಿದ ಸಂಗತಿಯಲ್ಲಿ ಒತ್ತೆಯಿಟ್ಟುಕೊಳ್ಳುವವನು ಒತ್ತೆಯಿಟ್ಟ ಆಸ್ತಿಯನ್ನು ಕೋರ್ಟಿನ ಮುಖಾಂತರವಾಗಿ ಮಾರಿಸಬಹುದು ಮತ್ತು ಈ ರೀತಿಯಿಂದ ತನ್ನ ಸಾಲವನ್ನು ತೀರಿಸಿಕೊಳ್ಳಬಹುದು. ಸದರೀ ಆಸ್ತಿಯನ್ನು ಖಾಸಗಿ ರೀತಿಯಿಂದ ಮಾರಲಿಕ್ಕೆ ಒತ್ತೆಯಿಟ್ಟುಕೊಳ್ಳುವವನಿಗೆ ಅಧಿಕಾರವಿಲ್ಲ. ಒತ್ತೆಯಿಟ್ಟ ಆಸ್ತಿಯ ಮಾರಾಟವನ್ನು ಕೋರ್ಟಿನ ಮುಖಾಂತರವಾಗಿಯೇ ಆಗತಕ್ಕದ್ದು.

೪. ಒತ್ತೆಯಿಟ್ಟುಕೊಳ್ಳುವವನಿಗೆ ಆ ಒತ್ತೆಯನ್ನು ಬಿಡಿಸಿಕೊಳ್ಳುವ ಹಕ್ಕು ಮುಣಗಿಸುವ ಬಾಧ್ಯತೆಯು ಪ್ರಾಪ್ತವಾಗಲಾಗದು. ಅವನು ಮೇಲೆ ಹೇಳಿದಂತೆ (೧) ಒತ್ತೆಯಿಟ್ಟ ಆಸ್ತಿಯನ್ನು ಮಾರಿಸಬಹುದು ಯಾ (೨) ಒತ್ತೆಯಿಡುವವನ ವಿರುದ್ಧವಾಗಿ ಹುಕುಮನಾಮೆಯನ್ನು ಪಡಕೊಳ್ಳಬಹುದು; ಅಂದರೆ ಒತ್ತೆಯಿಡುವವನ ಶರೀರದ ವಿರುದ್ಧ ಯಾ ಅವನ ಇತರ ಆಸ್ತಿಯ ವಿರುದ್ಧ ಹುಕುಮನಾಮೆಯು ಪಡಕೊಳ್ಳಬಹುದು. ಆದರೆ ಒತ್ತೆಯಿಡುವವನಿಗೆ ಒತ್ತೆಯ ಆಸ್ತಿಯನ್ನು ಬಿಡಿಸಿಕೊಳ್ಳುವ ಬಗ್ಗೆ ಇದ್ದ ಹಕ್ಕು ಒತ್ತೆಯಿಟ್ಟುಕೊಳ್ಳುವವನಿಗೆ ಮುಣಗಿಸುವದಕ್ಕೆ ಬರಲಾರದು ಮತ್ತು ಆ ಬಗ್ಗೆ ಅವನಿಗೆ ದಾವೆಯನ್ನು ಮಾಡುವದಕ್ಕೆ ಆಸ್ಪದವನ್ನು ಇರಲಾಗದು.

(೫) ಪ್ರತಿಯೊಂದು ಸಾಧಾ ಒತ್ತೆಯನ್ನು ನೋಂದಿಸಿದ ಖತ್ತಿನ ಮೇಲೆ ಮಾಡಲಿಕ್ಕೆ ಬೇಕು. ಒತ್ತೆ ಹಣವನ್ನು ಎಷ್ಟೇ ಇರಲಿ, ೧ ರೂಪಾಯಿ ಇರಲೀ ಅಥವಾ ೧೦೦೦ ರೂಪಾಯಿ ಇರಲಿ, ಪ್ರತಿಯೊಂದು ಸಾಧಾ ಒತ್ತೆಯನ್ನು ನೋಂದಿಸಿದ ಖತ್ತಿನ ಮೇಲೆ ಮಾಡಲಿಕ್ಕೆ ಬೇಕು. ಇದಲ್ಲದೆ ಒತ್ತೆಯಿಡುವವನ ಸಹಿಯು ಸದರೀ ಖತ್ತಿನ ಮೇಲೆ ಇರಬೇಕು ಹಾಗೂ ಕಡಿಮೆಯಲ್ಲಿ ಕಡಿಮೆ ಅಂದರೆ ಇಬ್ಬರು ಸಾಕ್ಷಿದಾರರು ಸಾಕ್ಷಿ ಹಾಕಲಿಕ್ಕೆ ಬೇಕು.

(೬) ಒತ್ತೆ ಹಣವನ್ನು ಕೊಡುವದಾಗಲಾಗಿ ೧೨ ವರ್ಷಗಳ ಅವಧಿಯಲ್ಲಿ ಅದಕ್ಕಾಗಿ ದಾವೆಯನ್ನು ಮಾಡಬಹುದು.

(೭) ಒತ್ತೆಯಿಡುವವನು ಮುದ್ದಲು ರಕಮು ಕೊಡತಕ್ಕದ್ದಾದ ನಂತರ ಒತ್ತೆಯನ್ನು ಬಿಡಿಸಿಕೊಳ್ಳಬಹುದು.

### (೨) ವಿಕ್ರಯ ಶರ್ತು ಇದ್ದ ಒತ್ತೆಯು

ಯಾವಾಗ್ಯೆ ಒತ್ತೆಯಿಡುವವನು,—

(೧) ಇಂಥ ಒಂದು ತಾರೀಖಿಗೆ ಒತ್ತೆ ಹಣವನ್ನು ಕೊಡಲಿಕ್ಕೆ ತಪ್ಪಿದರೆ ವಿಕ್ರಯವು ಪೂರ್ಣವಾದಿತೆಂಬ ಶರ್ತಿನ ಮೇಲಿಂದ, ಅಥವಾ

(೨) ಇಂಥ ಹಣವನ್ನು ಕೊಟ್ಟರೆ ವಿಕ್ರಯವು ರದ್ದು ಆದೀತೆಂಬ ಶರ್ತಿನ ಮೇಲಿಂದ, ಅಥವಾ

(೩) ಇಂಥ ಹಣವನ್ನು ಕೊಟ್ಟರೆ ಮಾರಿ ತೆಗಿದುಕೊಳ್ಳುವವನು ಆಸ್ತಿಯನ್ನು ಮಾರಿ ಕೊಡುವವನಿಗೆ ತಬದಿಲು ಮಾಡಿಕೊಡಬೇಕೆಂಬ ಶರ್ತಿನ ಮೇಲಿಂದ,

ಒತ್ತೆಯಿಟ್ಟ ಆಸ್ತಿಯನ್ನು ಉಘಡವಾಗಿ ಮಾರುತ್ತಾನೋ ಆಗ್ಯೆ, ಆ ವ್ಯವಹಾರಕ್ಕೆ "**ವಿಕ್ರಯದ ಶರ್ತು ಇದ್ದ ಒತ್ತೆಯೆಂದೆನ್ನುತ್ತಾರೆ**"

ಇದರ ವಿವರಣೆಯನ್ನು ಕೆಳಗಿನಂತೆ ಮಾಡೋಣ :—

(೧) ಒತ್ತೆಯಿಡುವವನು ಒತ್ತೆಯಿಟ್ಟುಕೊಳ್ಳುವವನಿಗೆ ಒತ್ತೆಯ ಆಸ್ತಿಯನ್ನು ತೋರಿಕೆಗೆ ಮಾರುತ್ತಾನೆ.

(೨) ಸದರೀ ಮಾರಾಟದ ಶರ್ತು ಏನಂದರೆ :—

(ಅ) ಕರಾರಿನಿಂದ ಠರಾಯಿಸಿದ ಅವಧಿಯಲ್ಲಿ ಒತ್ತೆ ಹಣವನ್ನು ಒತ್ತೆಯಿಡುವವನು ಕೊಡಲಿಕ್ಕೆ ತಪ್ಪಿದರೆ ಸದರಿ ವಿಕ್ರಯವು ಪೂರ್ಣವಾಗುವದು ಅಥವಾ ಕಾಯುಮವಾಗುವದು. ಆದರೆ ಆ ಅವಧಿಯಲ್ಲಿ ಒತ್ತೆಯಿಡುವವನು ಹಣವನ್ನು ಕೊಟ್ಟರೆ ಈ ವಿಕ್ರಯವು ರದ್ದು ಆಗುವದು ಮತ್ತು ವಿಕ್ರಯವಾದ ಆಸ್ತಿಯನ್ನು ಹಿಂದಕ್ಕೆ ತಬದಿಲು ಮಾಡಿಸಲ್ಪಡುವದು.

(೩) ಒತ್ತೆಯಿಡುವವನಿಗೆ ಒತ್ತೆಯನ್ನು ಬಿಡಿಸಿಕೊಳ್ಳುವ ಬಗ್ಗೆ ಇದ್ದ ಹಕ್ಕು ಒತ್ತೆಯಿಟ್ಟುಕೊಳ್ಳುವವನು ಮುಣಗಿಸಬಹುದು ಮತ್ತು ಆ ಬಗ್ಗೆ ಅವನು ದಾವೆಯನ್ನು ಸಹ ಮಾಡಬಹುದು.

(೪) ಒತ್ತೆಯಿಡುವವನು ಒತ್ತೆಯನ್ನು ಬಿಡಿಸಿಕೊಳ್ಳಬಹುದು.

(೫) ಭದ್ರಪಡಿಸಿದ ಮುದ್ದಲ ರಕಮು ಒಂದುನೂರು ರೂಪಾಯಿ ಅಥವಾ ಅದಕ್ಕೂ ಹೆಚ್ಚು ಇದ್ದೀತು ಆಗ್ಯೆ ಒತ್ತೆಯಿಡಬೇಕಾದರೆ ನೋಂದಿಸಿದ ಖತ್ತಿನ ಮೇಲೇ ಮಾಡಲಿಕ್ಕೆ ಬೇಕು, ಮತ್ತು ಒತ್ತೆಯಿಡುವವನ ಸಹಿಯು ಅವರ ನೇಲೆ ಇರಬೇಕು ಹಾಗೂ ಕಡಿಮೆಯಲ್ಲಿ ಕಡಿಮೆ ಅಂದರೆ ಇಬ್ಬರು ಸಾಕ್ಷಿದಾರರು ಸಾಕ್ಷಿ ಹಾಕಿರಲಿಕ್ಕೆ ಬೇಕು.

ಮುದ್ದಲ ರಕಮು ೧೦೦ ರೂಪಾಯಿ ಇದ್ದರೆ ಅಥವಾ ಆದಕ್ಕೂ ಹೆಚ್ಚು ಇದ್ದರೆ ಮತ್ತು ಆ ಪ್ರಸಕ್ತಿಯಲ್ಲಿ ಒತ್ತೆಯಡಬೇಕಾದರೆ ಆದು ನೋಂದಿಸಿದ ಖತ್ತಿನ ಮೇಲೆ ಮಾಡತಕ್ಕದ್ದು ವಗೈರೆ. ಒಂದುನೂರು ರೂಪಾಯಿಯ ಮುದ್ದಲ ರಕಮು ಇದ್ದರೆ ಸಾಕಾಗುವದು ಅವರಲ್ಲಿ ಬಡ್ಡಿಯ ಸಮಾವೇಶವಾಗುತ್ತದೆಂದು ಎಣಿಸಲಾಗದು. ಬರೇ ಒಂದುನೂರು ರೂಪಾಯಿಯ ಯಾ ಹೆಚ್ಚಿನ ಮುದ್ದಲ ವಿದ್ದರೆ, ಮೇಲಿನ ನಿಯಮವು ಲಾಗೂ ಆಗುವದು.

(೬) ಭದ್ರಪಡಿಸಿದ ಮುದ್ದಲ ರಕಮು ಒಂದುನೂರು ರುಪಾಯಿಕಿಂತ ಕಡಿಮೆ ಇದ್ದಾಗ್ಯೆ ಒತ್ತಿ ಇಡಬೇಕಾದರೆ

(ಅ) ಮೇಲೆ ಹೇಳಿದಂತೆ ಸಹಿ ಮಾಡಿ ಸಾಕ್ಷಿ ಹಾಕಿದ ಖತ್ತಿನಿಂದ, ಅಥವಾ

(ಬ) ಆಸ್ತಿಯನ್ನು ಕೈವಶಕ್ಕೆ ಕೊಟ್ಟು ಒತ್ತೆಯಿಡಬಹುದು.

**ವಿಕ್ರಯದಲ್ಲಿ ಮತ್ತು ವಿಕ್ರಯದ ಶರ್ತಿ ಇದ್ದ ಒತ್ತೆಯಲ್ಲಿ ನ ಉಂಟು**—ವಿಕ್ರಯದಿಂದ ಒಬ್ಬನಿಂದ ಮತ್ತೊಬ್ಬನಿಗೆ ವಿಕ್ರಯಮಾಡಿದ ತ್ರಿಯ ಮಾಲಿಕಿ ಹಕ್ಕನ್ನು ಹೋಗುವದು ; ಅಂದರೆ ವಿಕ್ರಯದಿಂದ ಮಾಲಿಕಿ ನ ಅದಲಾ ಬದಲು ಆಗುವದು. ಒತ್ತೆಯಿಂದ ಒತ್ತೆಯಿಟ್ಟ ಆಸ್ತಿಯೊಳ ಹಿತ ಸಂಬಂಧವನ್ನು ತಬದಿಲು ಮಾಡಲ್ಪಡುವದು ; ಆದರೆ ಆ ಆಸ್ತಿಯ ಲಿಕಿ ಹಕ್ಕನ್ನು ಒತ್ತೆಯಿಡುವವನಲ್ಲಿಯೇ ಇರುವದು.

### (೩) ಕಬಜಾ ಒತ್ತೆಯು

ಒತ್ತೆಯಿಡುವವನು ಒತ್ತೆಯಿಟ್ಟುಕೊಳ್ಳುವವನ ಕೈವಶಕ್ಕೆ ಒತ್ತೆಯಿಟ್ಟ ತ್ರಿಯನ್ನು ಕೊಟ್ಟು ಒತ್ತೆ ಹಣ ಮುಟ್ಟುವವರೆಗೆ ಆ ಆಸ್ತಿಯನ್ನಿಟ್ಟುಕೊಳ್ಳ ಕ್ಕೆ, ಮತ್ತು ಆ ಆಸ್ತಿಯಿಂದ ಬರುವ ಬಾಡಿಗೆ ಹಾಗೂ ಉತ್ಪನ್ನವನ್ನು ಸಕೊಂಡು ಆ ಉತ್ಪನ್ನವನ್ನು ಬಡ್ಡಿಯ ಬದಲಾಗಿ ಉಪಯೋಗ ಮಾಡಿಕೊ ಕ್ಕೆ, ಅಥವಾ ಒತ್ತೆ ಹಣವನ್ನು ಕೊಡುವದರ–ದಶೆಯಿಂದ ಅಥವಾ ಅದರ ಪ್ರ ಭಾಗವನ್ನು ಬಡ್ಡಿಯ ಬದಲಾಗಿ ಮತ್ತು ಕೆಲವು ಭಾಗವನ್ನು ಒತ್ತೆಯ ವ ಬದಲಾಗಿ, ಉಪಯೋಗ ಮಾಡಿಕೊಳ್ಳಲಿಕ್ಕೆ ಅವನಿಗೆ ಅಧಿಕಾರ ಕೊಡು ನೆ, ಆಗ್ಗೆ ಆ ವ್ಯವಹಾರಕ್ಕೆ **ಕಬಜಾ ಒತ್ತೆಯನ್ನುತ್ತಾರೆ.**

ಇದರ ವಿವೇಚನವನ್ನು ಕೆಳಗಿನಂತೆ ಮಾಡೋಣ :—

(೧) ಒತ್ತೆಯಿಡುವವನು ಒತ್ತೆಯಿಟ್ಟ ಆಸ್ತಿಯನ್ನು ಒತ್ತೆಯಿಟ್ಟುಕೊ ವವನ ಕೈವಶಕ್ಕೆ ಕೊಡಲಿಕ್ಕೆ ಬೇಕು.

(೨) ಒತ್ತೆಯಿಟ್ಟುಕೊಳ್ಳುವವನು ಅದನ್ನು ಒತ್ತೆ ಹಣದ ಬಗ್ಗೆ ಉಪ ೀಗಿಸತಕ್ಕದ್ದು. ಸದರೀ ಆಸ್ತಿಯ ಉಪಭೋಗ ಮಾಡಿ ಅವನು ತನ್ನ ವನ್ನು ತೀರಿಸತಕ್ಕದ್ದು. ಸದರೀ ಆಸ್ತಿಯ ಬಾಡಿಗೆಯಿಂದಾಗಲೀ ಇತರ ತ್ಪನ್ನದಿಂದಾಗಲೀ ಒತ್ತೆಯಿಟ್ಟುಕೊಳ್ಳುವವನು ಒತ್ತೆ ಹಣವನ್ನು ಮುಟ್ಟಿಸಿ ಳ್ಳಬೇಕು. ಸದರೀ ಹಣವನ್ನು ಮುಟ್ಟುವವರೆಗೆ ಅವನು ಆ ಆಸ್ತಿಯ ಪಭೋಗ ಮಾಡಬೇಕು. ಸದರೀ ಹಣವನ್ನು ಮುಟ್ಟಿದ ಕೂಡಲೆ ಅವನು ತ್ತಿಯನ್ನು ತಿರಿಗಿ ಒತ್ತೆಯಿಡುವವನ ವಶಕ್ಕೆ ಕೊಡಬೇಕು.

(೩) ಒತ್ತೆಯಿಡುವವನು ಒತ್ತೆಯನ್ನು ಬಿಡಿಸಿಕೊಳ್ಳಬಹುದು.

(೪) ಒತ್ತೆಯಿಟ್ಟುಕೊಳ್ಳುವವನು ಒತ್ತೆ ಹಣದ ಬಗ್ಗೆ ಒತ್ತೆಯಿಡುವವನ ವಿರುದ್ಧವಾಗಿ ಇಲಾಜು ನಡೆಯಿಸ ಕೂಡದು ಹಾಗೂ ಒತ್ತೆಯನ್ನು ಬಿಡಿಸಿಕೊಳ್ಳುವ ಹಕ್ಕು ಮುಣಗಿಸ ಕೂಡದು. ಒತ್ತೆಯಿಟ್ಟುಕೊಳ್ಳುವವನು ಒತ್ತೆಯಿಟ್ಟ ಆಸ್ತಿಯ ಉಪಭೋಗದಿಂದ ಮಾತ್ರ ಒತ್ತೆ ಹಣವನ್ನು ತೀರಿಸಿಕೊಳ್ಳತಕ್ಕದ್ದು.

(೫) ಭದ್ರಪಡಿಸಿದ ಮುದ್ದಲ ರಕಮು ಒಂದುನೂರು ರುಪಾಯಿ ಅಥವಾ ಅದಕ್ಕೂ ಹೆಚ್ಚು ಇದ್ದೀತು ಆಗ್ಗೆ ಒತ್ತೆಯಿಡಬೇಕಾದರೆ ನೋಂದಿಸಿದ ಖತ್ತಿನ ಮೇಲೆ ಅದು ಮಾಡಲಿಕ್ಕೆ ಬೇಕು ಮತ್ತು ಒತ್ತೆಯಿಡುವವನ ಸಹಿಯು ಅದರ ಮೇಲೆ ಇರಬೇಕು ಹಾಗೂ ಕಡಿಮೆಯಲ್ಲಿ ಕಡಿಮೆ ಅಂದರೆ ಇಬ್ಬರು ಸಾಕ್ಷಿದಾರರು ಸಾಕ್ಷಿ ಹಾಕಿರಲಿಕ್ಕೆ ಬೇಕು.

ಭದ್ರಪಡಿಸಿದ ಮುದ್ದಲ ರಕಮು ಒಂದುನೂರು ರೂಪಾಯಿಕಿಂತ ಕಡಿಮೆ ಇದ್ದಾಗ್ಗೆ ಒತ್ತೆಯಿಡಬೇಕಾದರೆ ಮೇಲೆ ಹೇಳಿದಂತೆ ಸಹಿ ಮಾಡಿ ಸಾಕ್ಷಿ ಹಾಕಿದ ಖತ್ತಿನಿಂದ ಅಥವಾ ಆಸ್ತಿಯನ್ನು ಕೈವಶಕ್ಕೆ ಕೊಟ್ಟು ಒತ್ತೆಯಿಡಬಹುದು.

## ಸಾದಾ ಹಾಗೂ ಕಬಜಾ ಒತ್ತೆಯು

ಕಬಜಾ ಒತ್ತೆಯಿಡುವವನು ಒತ್ತೆ ಹಣವನ್ನು ಕೊಡುವನೆಂದು ಯಾವಾಗ್ಗೆ ತಾನು ಸ್ವತಃ ಕಟ್ಟಿಕೊಳ್ಳುತ್ತಾನೆ ಆಗ್ಗೆ ಆ ವ್ಯವಹಾರಕ್ಕೆ ಸಾದಾ ಹಾಗೂ ಕಬಜಾ ಒತ್ತೆಯನ್ನುತ್ತಾರೆ. ಈ ಪ್ರಸಕ್ತಿಯಲ್ಲಿ ಒತ್ತೆಯಿಟ್ಟುಕೊಳ್ಳುವವನು ಒತ್ತೆಯಿಡುವವನಿಗೆ ಒತ್ತೆ ಹಣದ ಬಗ್ಗೆ ಜಬಾಬದಾರ ಹಿಡಿಯಬಹುದು. ಯಾಕಂದರೆ ಈ ವ್ಯವಹಾರದಲ್ಲಿ ಒತ್ತೆಯಿಡುವವನು ತನ್ನ ಒತ್ತೆಯಿಟ್ಟ ಆಸ್ತಿಯನ್ನು ಒತ್ತೆಯಿಟ್ಟುಕೊಳ್ಳುವವನ ಕೈವಶಕ್ಕೆ ಅವನ ಉಪಯೋಗಕ್ಕಾಗಿ ಕೊಡುವನು ಹಾಗೂ ಒತ್ತೆ ಹಣವನ್ನು ಕೊಡುವವಕ್ಕೆ ತಾನು ಸ್ವತಃ ಕಟ್ಟಿಕೊಳ್ಳುವನು.

ಇವುಗಳಲ್ಲದೆ ಇನ್ನೂ ಕೆಲವು ಒತ್ತೆಯ ಪ್ರಕಾರಗಳು ಇರುತ್ತವೆ ಆದರೆ ಅವುಗಳನ್ನು ಈ ನಾಡಿನೊಳಗೆ ಪ್ರಚಾರವಲ್ಲಿಲ್ಲದ್ದರಿಂದ ಅವುಗಳ ಸಂಬಂಧಿ ವಿವೇಚನವನ್ನು ಮಾಡುವದಿಲ್ಲ.

## ಒತ್ತೆಯಿಡುವವನ ಒತ್ತೆ ಬಿಡಿಸಿಕೊಳ್ಳುವ ಹಕ್ಕು

ಮುದ್ದಲ ರಕಮು ಕೊಡತಕ್ಕದ್ದಾದ ನಂತರ ಯಾವದಾದರೂ ವ್ಯಾಳ್ಯ ದಲ್ಲಿ, ಒತ್ತೆಯಿಡುವವನು ಒತ್ತೆ ಹಣವನ್ನು ಯೋಗ್ಯ ಕಾಲದಲ್ಲಿ ಮತ್ತು ಸ್ಥಳ ದಲ್ಲಿ ಕೊಟ್ಟ ನಂತರ ಅಥವಾ ಕೊಡಲಿಕ್ಕೆ ತೆಗೆದ ನಂತರ, ಒತ್ತೆಯಿಟ್ಟುಕೊಂಡ ವನಿಗೆ (ಅ) ಒತ್ತಿಪತ್ರವಿದ್ದರೆ ಅದನ್ನು ಒತ್ತೆಯಿಡುವವನ ಕೈವಶಕ್ಕೆ ಕೊಡೆಂದು ಕೇಳುವ (ಬ) ಒತ್ತಿಯಿಟ್ಟ ಆಸ್ತಿಯು ಒತ್ತಿಯಿಟ್ಟುಕೊಂಡವನ ತಾಬೇದಲ್ಲಿದ್ದೀ ತಾಗ್ಗೆ ಅದನ್ನು ಒತ್ತಿಯಿಡುವವನ ಕೈವಶಕ್ಕೆ ಕೊಡೆಂದು ಕೇಳುವ, ಮತ್ತು (ಕ) ಒತ್ತೆಯಿಡುವವನ ಖರ್ಚಿನಿಂದ ಒತ್ತಿಯಿಟ್ಟ ಆಸ್ತಿಯನ್ನು ಒತ್ತೆಯಿಡುವವ ನಿಗೆ ಅಥವಾ ಅವನು ಹೇಳಿದ ಎರಡನೆ ಮನುಷ್ಯನಿಗೆ ತಿರುಗಿ ತಬದಿಲು ಮಾಡಿ ಕೊಡೆಂದು ಕೇಳುವ, ಅಥವಾ ಒತ್ತೆಯಿಟ್ಟುಕೊಂಡವನಿಗೆ ತಬದಿಲು ಮಾಡಿ ಕೊಟ್ಟ ಹಿತಸಂಬಂಧಕ್ಕೆ ಹಾನಿಯುಂಟಾಗುವಂಥ ಹಕ್ಕು ಇಲ್ಲದ ಹಾಗಾಯಿ ತೆಂದು ರಸೀದಿಯನ್ನು ನೋಂದಿಸಿ ( ನೋಂದಿಸಿದ ಖತ್ತಿನಿಂದ ಒತ್ತಿಯಿಟ್ಟು ಸಂಗ ತಿಯಲ್ಲಿ) ಕೊಡಬೇಕೆಂದು ಅಥವಾ ರಸೀದಿ ಮಾಡಿಕೊಡಬೇಕೆಂದು ಕೇಳುವ ಹಕ್ಕು ಒತ್ತಿಯಿಡುವವನಿಗೆ ಅದೆ.

ಈ ಹಕ್ಕಿಗೆ ಒತ್ತೆ ಬಿಡಿಸಿಕೊಂಬುವ ಹಕ್ಕು ಎಂದೆನ್ನುತ್ತಾರೆ, ಮತ್ತು ಅದನ್ನು ಅಮಲಿನಲ್ಲಿ ತರುವ ದಾವೇಕ್ಕೆ ಒತ್ತೆ ಬಿಡಿಸುವ ವಾವೆಯೆಂದೆನ್ನುತ್ತಾರೆ.

**ಒತ್ತೆಯನ್ನು ಬಿಡಿಸಿಕೊಂಬುವ ಸಲುವಾಗಿ ಯಾರು ದಾವೆ ತರಬಹುದು**—ಒತ್ತೆಯಿಡುವವನಲ್ಲದೆ ಕೆಳಗೆ ಬರೆದ ಪೈಕಿ ಯಾವ ಮನುಷ್ಯ ನಾದರೂ ಒತ್ತೆಯಿಟ್ಟ ಆಸ್ತಿಯನ್ನು ಬಿಡಿಸಿಕೊಳ್ಳಬಹುದು ಯಾ ಬಿಡಿಸಿಕೊಳ್ಳು ವದರ ದೆಸೆಯಿಂದ ದಾವೆ ತರಬಹುದು——

(ಅ) (ಯಾವ ಹಿತಸಂಬಂಧವನ್ನು ಬಿಡಿಸಿಕೊಳ್ಳುವದದೆಯೋ ಆ ಹಿತಸಂ ಧವನ್ನು ಒತ್ತಿಯಿಟ್ಟುಕೊಳ್ಳುವವರ ಹೊರ್ತುಪಡಿಸಿ) ಸದರಿ ಆಸ್ತಿಯಲ್ಲಿ ಹಿತಸಂ ಬಂಧ ಯಾ ಅದರಮೇಲೆ ಋಣಭಾರವಿರುವ ಯಾವದಾದರೂ ಮನುಷ್ಯನು;

(ಬ) ಆಸ್ತಿಯನ್ನು ಬಿಡಿಸಿಕೊಳ್ಳುವ ಹಕ್ಕಿನಲ್ಲಿ ಹಿತಬಂಧ ಅಥವಾ ಅದರ ಮೇಲೆ ಋಣಭಾರವಿರುವ ಯಾ ಯಾವನಾದರೂ ಮನಷ್ಯನು;

(ಕ) ಒತ್ತಿಸಾಲವನ್ನು ಯಾ ಅದರ ಯಾವದಾದರೂ ಭಾಗವನ್ನು ಕೊಡುವ ದೆಸೆಯಿಂದ ಜಾಮೀನಾದ ಯಾವನಾದರೂ ಮನುಷ್ಯನು.

(ಡ) ಅಲ್ಪವಯಸ್ಸುಳ್ಳ ಒತ್ತಿಯಿಡುವವನ ಆಸ್ತಿಯ ರಕ್ಷಣಮಾಡುವವನು ಇಂಥ ಅಲ್ಪವಯಸ್ಕಿನವನ ತರ್ಫಿನಿಂದ;

(ಇ) ಹುಚ್ಚ ಯಾ ಭ್ರಮಿಷ್ಟನಿದ್ದ ಒತ್ತಿಯಿಡುವವನ ಮೇಲಿರುವ ಮಂಡಳಿಯು ಯಾ ಬೇರೆ ಕಾಯದೆಶೀರ ಕ್ಯುರೆಟರರು, ಇಂಥ ಹುಚ್ಚ ಯಾ ಭ್ರಮಿಷ್ಟ ಮನು ಷ್ಯನ ತರ್ಫಿನಿಂದ;

(ಫ) ಆಸ್ತಿಯಲ್ಲಿರುವ ಒತ್ತಿಯಿಡುವವನ ಹಿತಸಂಬಂಧವನ್ನು ಜಪ್ತಿಮಾಡಿ ಒತ್ತಿಯಿಡುವವನ ಸಾಲಗಾರನು ಅಮಲಬಜಾವಣೆಯನ್ನು ದೊರಕಿಸಿದ್ದರೆ ಅವನು;

(ಗ) ಒತ್ತಿಯಿಡುಡುವವನ ಆಸ್ತಿಯ ಕಾರಭಾರ ನಡಿಸುವ ವಿಷಯದ ದಾವೆಯಲ್ಲಿ ಒತ್ತಿಯಿಟ್ಟ ಆಸ್ತಿಯ ಮಾರಾಟದ ಬಗ್ಗೆ ಹುಕುಮನಾಮೆ ಪಡದಂಥ ಒತ್ತಿಯಿಡುವವನ ಸಾಲಗಾರನು.

**ಋಣಭಾರವು (Charge)**— ಪಕ್ಷಕಾರರ ಕೃತಿಯಿಂದ ಯಾ ಕಾಯಿದೆಯ ಅಮಲಿನಿಂದ ಒಬ್ಬ ಮನುಷ್ಯನ ಸ್ಥಾವರಾಸ್ತಿಯು ಮತ್ತೊಬ್ಬ ಮನುಷ್ಯನ ಹಣಕೊಡುವ ಬಗ್ಗೆ ಅಡವಾಗಿದ್ದೀತು ಮತ್ತು ಸದರಿ ವ್ಯವಹಾರವು ಒತ್ತಿವ್ಯವಹಾರವಾಗದಿದ್ದರೆ, ಸದರೀ ಎರಡನೇ ಮನುಷ್ಯನ **ಋಣಭಾರವು** ಆ ಆಸ್ತಿಯ ಮೇಲೆ ಅದೆಂದು ಅನ್ನುತ್ತಾರೆ. ಒತ್ತೆ ಇಡುವವನ ಬಗ್ಗೆ ಈ ಮೊದಲು ಹೇಳಿದ ಎಲ್ಲ ನಿಯಮಗಳು ಅದಷ್ಟರ ಮಟ್ಟಿಗೆ ಸದರೀ ಆಸ್ತಿಯ ಮಾಲಕನಿಗೆ ಲಾಗೂ ಆದಾವು; ಮತ್ತು ಒತ್ತಿಯಿಟ್ಟ ಆಸ್ತಿಯ ವಿಕ್ರಯದ ಬಗ್ಗೆ ದಾವೆ ತಂದಂಥ ಒತ್ತಿಯಿಟ್ಟುಕೊಳ್ಳುವವನಿಗೆ ಲಾಗು ಇದ್ದ ಈ ಮೊದಲು ಹೇಳಿದ ಎಲ್ಲ ನಿಯಮಗಳು ಆದಷ್ಟರ ಮಟ್ಟಿಗೆ ಸದರಿ ಋಣಭಾರವಿದ್ದ ಮನುಷ್ಯನಿಗೆ ಲಾಗೂ ಆದಾವು. ಋಣಭಾರದ ವ್ಯವಹಾರದಿಂದ ಸ್ಥಾವರಾಸ್ತಿಯು ಹಣಕೊಡುವ ಬಗ್ಗೆ ಅಡವಾಗಿರುತ್ತದೆ; ಅಂದರೆ ಸದರೀ ಹಣವನ್ನು ತೀರಿಸುವ ಭಾರವು ಯಾ ಬೋಜೆ ಸದರೀ ಸ್ಥಾವರಾಸ್ತಿಯ ಮೇಲೆ ಇರುತ್ತದೆ. ಸದರೀ ಆಸ್ತಿಯನ್ನು ಮಾರಿಸಿ ಋಣಭಾರವಿದ್ದ ಮನುಷ್ಯನು ತನ್ನ ಸಾಲವನ್ನು ತೀರಿಸತಕ್ಕದ್ದು.

ಋಣಭಾರವನ್ನು (೧) ಪಕ್ಷಕಾರರ ಕೃತಿಯಿಂದ ಯಾ (೨) ಕಾಯದೆಯ ಅನುಮಾನದಿಂದ ಉದ್ಭವಿಸುವದು. ಉದಾಹರಣಾರ್ಥ—ತಮ್ಮ ತಮ್ಮೊಳಗೆ ಕರಾರು ಮಾಡಿಕೊಂಡು ಪಕ್ಷಕಾರರು ಯಾವದೇ ಸ್ಥಾವರಾಸ್ತಿಯ ಮೇಲೆ ಋಣ ಭಾರವನ್ನು ಇಡಬಹುದು. **ಅ** ಎಂಬುವವನು **ಬ** ಎಂಬುವವನಿಗೆ ೫೦೦೦ ರೂಪಾಯಿಗಳನ್ನು ಕೊಡಬೇಕಾಗಿದೆ. **ಅ** ಎಂಬುವವನ ಒಂದು ಮನೆಯಿದೆ. ಸದರೀ ಹಣದ ಭಾರವು ಯಾ ಬೋಜೆ **ಅ** ಇವನು **ಬ** ಇವನ ಕೂಡ ಕರಾರು ಮಾಡಿಕೊಂಡು ಸದರೀ ಮನೆಯ ಮೇಲೆ ಇಡಬಹುದು. ಇದು ಪಕ್ಷಕಾರರ ಕೃತಿಯಿಂದ ಉಂಟಾದ ಋಣಭಾರವು.

ಹಿಂದು ವಿಧವೆಯ ಪೋಷಣೆಯ ಭಾರವು ಆಕೆಯ ಮಯತ ಗಂಡನ ಸ್ಥಾವರಾಸ್ತಿಯ ಮೇಲೆ ಇರುವದು; ಇದು ಕಾಯದೆಯ ಅನುಮಾನದಿಂದ ಉಂಟಾದ ಋಣಭಾರವು.

**ಒತ್ತಿಯಲ್ಲಿ ಮತ್ತು ಋಣಭಾರದಲ್ಲಿ ಭೇಧವುಂಟು**—ಒತ್ತಿವ್ಯವಹಾರದಿಂದ ಒತ್ತಿಯಿಟ್ಟ ಸ್ಥಾವರಾಸ್ತಿಯೊಳಗಿನ ಯಾವದೆ ಹಿತಸಂಬಂಧವನ್ನು ತಬದಿಲು ಮಾಡಲ್ಪಟ್ಟಿರುತ್ತದೆ. ಋಣಭಾರದ ವ್ಯವಹಾರದಿಂದ ಭಾರವಿಟ್ಟ ಸ್ಥಾವರಾಸ್ತಿಯೊಳಗಿನ ಯಾವದೆ ಹಿತಸಂಬಧವನ್ನು ತಬದಿಲು ಮಾಡಲ್ಪಟ್ಟಿರುವದಿಲ್ಲ; ಆದರೆ ಹಣಕೊಡುವ ಬಗ್ಗೆ ಆ ಸ್ಥಾವರಾಸ್ತಿಯು ಅಡವಾಗಿಟ್ಟಿರುತ್ತದೆ.

ಋಣಭಾರವನ್ನು ಬಾಯಿಮಾತಿನ ಕರಾರಿನಿಂದ ಉದ್ಭವಿಸಲಿಕ್ಕೆ ಬರುವದು; ಅಥವಾ ಬರಹದಿಂದ ಸಹ ಉದ್ಭವಿಸಲಿಕ್ಕೆ ಬರುವದು. ಅದನ್ನು ಬರಹ ಮೂಲಕವಾಗಿ ಮಾಡಲ್ಪಟ್ಟದರೆ ಅಥವಾ ಅದನ್ನು ಋತ್ತಿನಮೇಲೆ ಬರೆದರೆ ಅದನ್ನು ನೋಂದಣಿ ಕಾಸೂನಿನ ಪ್ರಕಾರ ನೋಂದಿಸುವದು ಅವಶ್ಯವಿದೆ.

## ತೋರಬತ್ತಿ ಪತ್ರವು

ಶ್ರೀಯುತ ಲಕ್ಷ್ಮಣ ಗೋವಿಂದ ಕರಿ. ಸಾಕೀನ ಗದಗ ಇವರಿಗೆ—

**ತೋರಬತ್ತಿ ಪತ್ರ ಬೇಸ್ಕಿ**—ಪದ್ಮಪ್ಪಾ ತಂದಿ ದ್ಯಾವಪ್ಪಾ ಮಾಲಗಿ ಸಾಕೀನ ಮುಳಗುಂದ ನಾನು ಬರೆದುಕೊಡುವ ತೋರಬತ್ತಿ ಪತ್ರ ಏನಂದರೆ—ನಾನು ಈ ಕೆಳಗೆ ವಿವರಿಸಿದ ಆಸ್ತಿಗಳ ಮಾಲಕನಾಗಿರುತ್ತೇನೆ. ಸದರಿ ಆಸ್ತಿಗಳ ವಿವರ—

... ... ... ...

... ... ... ...

(ಆಸ್ತಿಗಳ ವರ್ಣನವನ್ನು ಸ್ಪಷ್ಟವಾಗಿಯೂ ವಿಶದವಾಗಿಯೂ ಮಾಡಬೇಕು). ನಾನು ನನ್ನ ಗೃಹಕೃತ್ಯದ ಅಡಚಣಿ ದೆಸೆಯಿಂದಲೂ, ಸಾಗುವಳಿಯ ಕೆಲಸದ ದೆಸೆಯಿಂದಲೂ ನಿಮ್ಮ ಬಳಿಯಲ್ಲಿ ರೋಖ ೧೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡಿರುತ್ತೇನೆ. ಸದರೀ ರೂಪಾಯಿಗಳಿಗೆ ಸದರಿ ಸಾಲವನ್ನು ತೀರಿವ ವರೆಗೆ ದರಮಹಾ ದರಸೇಕಡಾ ೨ ರೂಪಾಯಿಯ ದರದಂತೆ ಬಡ್ಡಿ ಕೊಡಲಿಕ್ಕೆ ಮತ್ತು ಬಡ್ಡಿ ಸಹಿತವಾಗಿ ಸದರಿ ರೂಪಾಯಿಗಳನ್ನು ಇವತ್ತಿನಿಂದ ಒಂದು ವರ್ಷದಲ್ಲಿ ತರುಗಿ ಕೊಡಲಿಕ್ಕೆ ನಾನು ಒಡಂಬಟ್ಟಿರುತ್ತೇನೆ. ಸದರಿ ಸಾಲದ ಖಾತ್ರಿ ಬಗ್ಗೆ ನಾನು ಮೇಲ್ಕಂಡ ಆಸ್ತಿಗಳನ್ನು ನಿಮ್ಮ ಕಡೆಗೆ ತೋರಬತ್ತಿಯಾಗಿ ಇಟ್ಟಿರುತ್ತೇನೆ. ಮೇಲ್ಕಂಡ ಅವಧಿಯಲ್ಲಿ ನಾನು ಸದರಿ ಸಾಲವನ್ನು ತೀರಿಸದಿದ್ದರೆ ನೀವು ನಿಮ್ಮ ಮರ್ಜಿಪ್ರಕಾರ ಸದರಿ ಆಸ್ತಿಗಳನ್ನು ಮಾರಿಸಿ ಅಥವಾ ನನ್ನ ಮೇಲೆ ಇಲಾಜು ನಡೆಯಿಸಿ ಸದರಿ ಸಾಲವನ್ನು ತೀರಿಸಿಕೊಳ್ಳಬಹುದು. ಇದಕ್ಕೆ ನಾನು ಆತಂಕಮಾಡಲಿಕ್ಕಿಲ್ಲ. ಅಂತಾ ರಾಜಿ ಖುಷಿಯಿಂದ ಆತ್ಮಸಂತೋಷದಿಂದ ಬರೆದುಕೊಟ್ಟ ತೋರಬತ್ತಿ ಪತ್ರ ತಾರೀಖು ೨೪–೮–೧೯೨೬ನೇ ಇಸ್ವಿ.

ದಸ್ತೂರ ಚನಬಸಯ್ಯಾ ಮಂತ್ರೋಡಿ

⬭ ಈ ಎಡಗೈ ಹೆಬ್ಬಟ್ಟಿನ ಗುರ್ತು ಪದ್ಮಪ್ಪಾ ತಂದಿ ದ್ಯಾವಪ್ಪಾ

ಮಾಡಲಗಿ ಈತನದಿದೆ. ದಸ್ತೂರ ಸದರ

ಸಾಕ್ಷಿಗಳು

೧ ಬಸಪ್ಪಾ ಸಂಗನಬಸಪ್ಪಾ ಬ್ಯಾಳಿ. ೨ ಶೀನಪ್ಪಾ ಲಕ್ಷ್ಮಪ್ಪಾ ಮಾಳವದ.

## ಕಬಜಾ ಬತ್ತಿಯು

ರಾಜಶ್ರೀ ಬಸಪ್ಪಾ ಸಂಗನಬಸಪ್ಪಾ ಮಿಣಚಿಗಿ ಸಾ॥ ಧಾರವಾಡ ಇವರಿಗೆ

**ಕಬಜಾಬತ್ತಿ ಬೇಸ್ಕಿ**—ಹಜರತಸಾಹೇಬ ವಲ್ಲದ ಹುಸೇನಸಾಹೇಬ ಜಮಾದಾರ ಸಾಕೀನ ಧಾರವಾಡ ನಾನು ಬರೆದುಕೊಡುವ ಕಬಜಾಬತ್ತಿ ಪತ್ರ ಎನಂದರೆ—ನಾನು ಕೆಳಗೆ ವಿವರಿಸಿದ ಆಸ್ತಿಗಳ ಮಾಲಕನಾಗಿರುತ್ತೇನೆ; ಸದರಿ ಆಸ್ತಿಗಳ ವಿವರ—

... ... ... ...

... ... ... ...

( ಆಸ್ತಿಗಳ ವರ್ಣನೆ ಸ್ಪಷ್ಟವಾಗಿಯೂ ವಿಶದವಾಗಿಯೂ ಮಾಡಬೇಕು. )
ನಾನು ನನ್ನ ಮನೆತನದ ಅಡಚಣಿ ದೆಸೆಯಿಂದಲೂ, ನನ್ನ ತಂದೆಯ ಸಾಲ ತೀರಿಸ
ಬೇಕೆಂತಲೂ, ಸಾಗುವಳಿಯ ದೆಸೆಯಿಂದಲೂ ನಿಮ್ಮ ಬಳಿಯಲ್ಲಿ ಇವತ್ತಿನ ದಿವಸ
ರೋಖ ೨೫೦೦ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡಿರುತ್ತೇನೆ.

ಸದರಿ ರೂಪಾಯಿಗಳಿಗೆ ಸದರಿ ಸಾಲವನ್ನು ತೀರುವವರೆಗೆ ದರಸಾಲು ವರ
ಸೇಕಡಾ ೧೮ ರೂಪಾಯಿಯ ದರದಂತೆ ಬಡ್ಡಿ ಕೊಡಲಿಕ್ಕೆ ಮತ್ತು ಇವತ್ತಿನಿಂದ
ಮೂರು ವರ್ಷಗಳಲ್ಲಿ ಬಡ್ಡಿ ಸಹಿತವಾಗಿ ಸದರಿ ರೂಪಾಯಿಗಳನ್ನು ತಿರುಗಿ
ಕೊಡುವದಕ್ಕೆ ನಾನು ಒಡಂಬಟ್ಟಿರುತ್ತೇನೆ, ಸದರಿ ಸಾಲದ ಖಾತ್ರಿ ಬಗ್ಗೆ ನಾನು
ಮೇಲೆ ಕಾಣಿಸಿದ ಆಸ್ತಿಗಳನ್ನು ನಿಮ್ಮ ಕಡೆಗೆ ಕಬಜಾ ಒತ್ತಿಯಾಗಿ ಇಟ್ಟಿರು
ತ್ತೇನೆ, ಮತ್ತು ಅವುಗಳನ್ನು ಇವತ್ತಿನ ದಿವಸ ನಿಮ್ಮ ಸ್ವಾಧೀನಕ್ಕೆ ಕೊಟ್ಟಿರು
ತ್ತೇನೆ. ಸದರಿ ಆಸ್ತಿಗಳ ಉಪಭೋಗವನ್ನು ನೀವು ಅವುಗಳನ್ನು ಕೇಡು ಮಾಡ
ದಂತೆ ಮಾಡಬೇಕು ಮತ್ತು ಅವುಗಳ ಉತ್ಪನ್ನವನ್ನು ತೆಗೆದುಕೊಳ್ಳಬೇಕು.
ಸದರೀ ಉತ್ಪನ್ನದಿಂದ ವಸೂಲ ಬಂದ ಪಣವನ್ನು ಮೊದಲು ಮೇಲ್ಕಂಡ ಮೊಬ
ಲಗಿನ ಬಡ್ಡಿಯಲ್ಲಿ ವಜಾ ತೆಗೆಯಬೇಕು ಮತ್ತು ಏನಾದರೂ ಹೆಚ್ಚಿಗೆ ಉಳಿದರೆ
ಅದನ್ನು ಮುದ್ದಲಿನಲ್ಲಿ ವಜಾ ತೆಗೆಯಬೇಕು. ಮೇಲೆ ಹೇಳಿದ ಅವಧಿಯಲ್ಲಿ ನಾನು
ಮೇಲಿನ ಕರಾರಿನ ಪ್ರಕಾರ ನಿಮಗೆ ಕೊಡತಕ್ಕದ್ದಾಗುವ ಮೊಬಲಗನ್ನು ಕೊಟ್ಟು
ನನ್ನ ಸಾಲವನ್ನು ತೀರಿಸುವೆನು, ಕೂಡಲೆ ನೀವು ಸದರಿ ಆಸ್ತಿಗಳನ್ನು ಒತ್ತೆಯ
ಭಾರದಿಂದ ಮುಕ್ತವಾಗಿದೆಂದು ಅವುಗಳನ್ನು ನನ್ನ ಸ್ವಾಧೀನಕ್ಕೆ ಕೊಡಬೇಕು,
ಮತ್ತು ಈ ದಸ್ತೈವಜನ್ನು ನನಗೆ ತಿರುಗಿ ಕೊಡಬೇಕು. ನಾನು ಸದರಿ ಆಸ್ತಿ
ಗಳನ್ನು ಈ ರೀತಿ ಒತ್ತಿಯಿಂದ ಬಿಡಿಸಿಕೊಳ್ಳುವವರೆಗೆ ನೀವು ಮೇಲೆ ಹೇಳಿದ
ಕರಾರಿನಂತೆ ಅವುಗಳ ಉಪಭೋಗವನ್ನು ಮಾಡಬೇಕು. ಇದಕ್ಕೆ ಯಾರೂ
ಆತಂಕ ಮಾಡಲಿಕ್ಕಿಲ್ಲ. ಯಾರಾದರೂ ಸದರಿ ಆಸ್ತಿಗಳ ವಹಿವಾಟಿಗೆ ಮತ್ತು
ಉಪಭೋಗಕ್ಕೆ ಯಾವ ರೀತಿಯಿಂದಲು ಹರಕತು ಅಥವಾ ಅಡ್ಡಿ ಮಾಡಿದರೆ
ಅದನ್ನು ನಾನು ನನ್ನ ವೆಚ್ಚದಿಂದ ಇಲ್ಲದಂತೆ ಮಾಡಿಕೊಟ್ಟೇನಿ ಮತ್ತು ಸದರಿ
ಹರಕತಿಯಿಂದ ಅಥವಾ ಅಡ್ಡಿಯಿಂದ ನಿಮಗೆ ಏನಾದರೂ ಲುಕ್ಸಾನ ಆದರೆ
ಅದನ್ನು ನಾನು ಭರಾಯಿಸಿ ಕೊಟ್ಟೇನಿ ಅಂತಾ ರಾಜಿ ಖುಷಿಯಿಂದ

ಮತ್ತು ಬುದ್ಧಿ ಜಾಗೃತೆಯಿಂದ ಬರದುಕೊಟ್ಟ ಕಬಜ ಒತ್ತಿ ಪತ್ರ ತಾರೀಖು ೨೩–೮–೧೯೨೬ ನೇ ಇಶ್ವಿ

ದಸ್ತೂರ—ಗೋವಿಂದ ಕುಲಕರ್ಣಿ

ಸಹಿ—ಹಜರತಸಾಹೇಬ ವಲ್ಲದ ಹುಸೇನಸಾಹೇಬ ಜಮಾದಾರ

ಸಾಕ್ಷಿಗಳು

೧ ಹಣಮಂತಪ್ಪಾ ತಂದಿ ಸಣ್ಣ ಮೇಲಗಿರಿಯಪ್ಪಾ ಕಲಾಲ

೨ ದುರ್ಗಪ್ಪಾ ತಂದಿ ಮಲಕಪ್ಪಾ ಕಲಾಲ

———

# ೫ ನೆಯ ಪ್ರಕರಣ

## ಸ್ಥಾವರಾಸ್ತಿಯ ಪಟ್ಟೆಗಳು

ಸ್ಥಾವರಾಸ್ತಿಯ ಉಪಭೋಗ ಮಾಡುವ ಹಕ್ಕನ್ನು, ಸ್ಪಷ್ಟವಾಗಿ ಯಾ ಗರ್ಭಿತಾರ್ಥದಿಂದ, ಕೆಲವು ಕಾಲದ ವರೆಗೆ ಯಾ ಕಡೆತನಕ, ಕೊಟ್ಟ ಯಾ ಕೊಡತೇನೆಂತ ಹೇಳಿದ ಕಿಮ್ಮತ್ತಿನ ಬದಲು, ಅಥವಾ ಮದತ ಮುದತಿಗೆ ಯಾ ನಿರ್ದಿಷ್ಟ ಮಾಡಿದ ಕಾಲಕ್ಕೆ ತಬದಿಲು ಮಾಡಿಕೊಟ್ಟದ್ದನ್ನು ತೆಗೆದುಕೊಳ್ಳುವವನು ತಬದಿಲು ಮಾಡಿ ಕೊಡುವವನಿಗೆ ಕೊಡತಕ್ಕ ಹಣ ಬೆಲೆಯಲ್ಲಿ ಪಾಲು, ನೋಕರಿ ಯಾ ಬೆಲಯುಳ್ಳ ವಸ್ತು, ಇವುಗಳ ಬದಲು, ತಬದಿಲು ಮಾಡಿ ಕೊಟ್ಟದ್ದೀತು ಮತ್ತು ಸದರೀ ಕರಾರುಗಳಿಗೆ ತಬದಿಲು ಮಾಡಿಕೊಟ್ಟದ್ದನ್ನು ತೆಗೆದುಕೊಂಬುವವನು ಒಪ್ಪಿಕೊಂಡರೆ ಆ ವ್ಯವಹಾರಕ್ಕೆ **ಸ್ಥಾವರಾಸ್ತೆಯ ಪಟ್ಟೆಯೆಂದೆನ್ನುತ್ತಾರೆ.**

ತಬದಿಲು ಮಾಡಿಕೊಡುವವನಿಗೆ ಪಟ್ಟೆಯಿಂದ ಕೊಡುವವನು, ತಬದಿಲು ಮಾಡಿಕೊಟ್ಟದ್ದನ್ನು ತೆಗೆದುಕೊಂಬುವವನಿಗೆ ಪಟ್ಟೆಯಿಂದ ತೆಗೆದುಕೊಂಬುವವನು, ಕಿಮ್ಮತ್ತಿಗೆ ಪ್ರಿಮಿಯುಮು, ಹಣ, ಪಾಲು, ಮಾಡತಕ್ಕ ನೋಕರಿ ಯಾ ಎರಡನೇ ವಸ್ತು ಇವುಗಳಿಗೆ ಬಾಡಿಗೆ ಎಂದನ್ನುತ್ತಾರೆ.

ಇದರ ವಿವೇಚನವನ್ನು ಮಾಡೋಣ:—

(೧) ಸ್ಥಾವರಾಸ್ತಿಯಿರತಕ್ಕದ್ದು.

(೨) ಉಪಭೋಗ ಮಾಡುವ ಹಕ್ಕನ್ನು ತಬದಿಲು ಮಾಡಿರಬೇಕು.

(೩) ಉಪಭೋಗ ಮಾಡುವ ಹಕ್ಕನ್ನು ಕೆಲವು ಕಾಲದ ವರೆಗೆ ಅಥವಾ ಕಡೆತನಕ ತಬದಿಲು ಮಾಡಿರಬೇಕು.

(೪) ಯಾವದಾದರೂ ಮೊಬದಲಿಗಾಗಿ ಸದರೀ ಹಕ್ಕನ್ನು ತಬದಿಲು ಮಾಡಿರಬೇಕು. ಸದರೀ ಮೊಬದಲು ಹಣವಿರಲೀ, ನೌಕರಿಯಿರಲೀ, ಬಳೆಯಲ್ಲಿ ಪಾಲು ಇರಲೀ ಯಾ ಬೆಲೆಯುಳ್ಳ ವಸ್ತು ಇರಲೀ; ಇವುಗಳ ಬದಲು ತಬದಿಲು ಮಾಡಿಕೊಟ್ಟರೆ ಸಾಕು.

ಪಟ್ಟೆಯ ಅವಧಿಯು ಪಕ್ಷಕಾರರೊಳಗಿನ ಕರಾರಿನ ಮೇಲೆ ಅವಲಂಬಿಸಿರುವದು; ಅಂಥಾ ಕರಾರು ಇಲ್ಲದಿದ್ದರೆ ಅದು ಸ್ಥಾನಿಕ ಕಾಯದೆ ಯಾ ರೀವಾಜಿನ ಮೇಲೆ ಅವಲಂಬಿಸಿರುವದು. ಈ ರೀತಿ ಯಾವದೆ ಕರಾರು ವಗೈರೆ ಇಲ್ಲದ ಪಕ್ಷಕ್ಕೆ ಸಾಗುವಳಿಯ ಕೆಲಸದ ದಸೆಯಿಂದ ಯಾ ಕಾರಖಾನೆಯ ಕೆಲಸದ ದಶೆಯಿಂದ ಕೊಟ್ಟ ಸ್ಥಾವರಾಸ್ತಿಯ ಪಟ್ಟೆಯು ಒಂದು ವರ್ಷದಿಂದ ಮತ್ತೊಂದು ವರ್ಷದ ವರೆಗೆ ನಡೆಯುವ ಪಟ್ಟೆಯೆಂದು ತಿಳಿಯತಕ್ಕದ್ದು; ಮತ್ತು ಇವುಗಳ ಹೊರ್ತು ಎರಡನೆ ಯಾವದಾದರೂ ಕಾರಣದದಶೆಯಿಂದ ಕೊಟ್ಟ ಸ್ಥಾವರಾಸ್ತಿಯ ಪಟ್ಟೆಯು ತಿಂಗತಿಂಗಳ ಮುದ್ದತಿನದೆಂದು ತಿಳಿಯತಕ್ಕದ್ದು.

ಒಂದು ವರ್ಷದಿಂದ ಮತ್ತೊಂದು ವರ್ಷದ ವರೆಗೆ ನಡೆಯುವ ಪಟ್ಟೆಯನ್ನು ಮುಗಿಯಿಸ ಬೇಕಾದರೆ ಭೋಗವಟೆಯ ವರ್ಷದ ಕೊನೆಗೆ ಮುಗಿಯುವಂತೆ ಆರು ತಿಂಗಳದ ನೋಟೀಸು ಕೊಟ್ಟು ಮುಗಿಸಲಿಕ್ಕೆ ಬರುವದು. ಪಟ್ಟೆಯಿಂದ ಕೊಡುವವನು ಯಾ ತೆಗೆದುಕೊಂಬುವವನು ಈ ರೀತಿ ನೋಟಿಸು ಕೊಟ್ಟು ಪಟ್ಟೆಯನ್ನು ಮುಗಿಯಿಸತಕ್ಕದ್ದು. ಒಂದು ವರ್ಷದಿಂದ ಮತ್ತೊಂದು ವರ್ಷದ ವರೆಗೆ ನಡೆಯುವ ಪಟ್ಟೆಯು ಅಂದರೆ **ವಾರ್ಷಿಕ ಪಟ್ಟೆಯು** ಭೋಗವಟೆಯ ವರ್ಷದ ಕೊನೆಗೆ ತನ್ನಿಂದ ತಾನೇ ಮುಗಿಯುವದಿಲ್ಲ. ಆದರೆ ಅದನ್ನು ಮುಗಿಯಿಸಬೇಕಾದರೆ ಮೇಲಿನಂತೆ ಯೋಗ್ಯವಾದ ನೋಟೀಸು ಕೊಟ್ಟು ಮುಗಿಯಿಸುವದು ಅವಶ್ಯವಿದೆ. ಅಂದರೆ ಆರು ತಿಂಗಳದ ನೋಟೀಸನ್ನು ಕೊಟ್ಟು ಅದನ್ನು ಮುಗಿಯಿಸತಕ್ಕದ್ದು. ಒಂದು ವರ್ಷದ ವರೆಗೆ ಮಾತ್ರ ಉಪಭೋಗ ಮಾಡಬೇಕೆಂದು ಪಕ್ಷಕಾರರಲ್ಲಿ ಕರಾರು ಆಗಿದ್ದರೆ ಕರಾರಿನ ಪ್ರಕಾರ ಆ ಪಟ್ಟೆಯು ಆ ವರ್ಷ ಮೀರಿದ ಕೂಡಲೆ ಮುಗಿಯುವದು. ಅದನ್ನು ವರ್ಷ ಮೀರಿದ ಕೂಡಲೆ ತಾನಾಗಿ ಮುಗಿಯುವಂಥಾದ್ದು ಇರುವದರಿಂದ ಇವರಲ್ಲಿ ಮೇಲಿನಂತೆ ನೋಟೀಸು ಮಾಡುವದೇನು ಕಾರಣವಿಲ್ಲ. ನೋಟೀಸು ಕೊಟ್ಟರೂ ಕೊಡದಿದ್ದರೂ ಅದನ್ನು ಕರಾರಿನ ಅವಧಿಯು ಮೀರಿದ ಕೂಡಲೆ ಮುಗಿಯುವದು. ಅದರಂತೆ ಒಂದಕ್ಕಿಂತ ಹೆಚ್ಚು ವರ್ಷದ ವರೆಗೆ ಉಪಭೋಗ ಮಾಡಬೇಕೆಂದು ಪಕ್ಷಕಾರರಲ್ಲಿ ಕರಾರು ಆಗಿದ್ದರೆ ಆ ಕರಾರಿನಲ್ಲಿ ಹೇಳಿದ ಮುದ್ದತು ಮೀರಿದ ಕೂಡಲೆ ಆ ಪಟ್ಟೆಯು ಮುಗಿಯುವದು. ಈ ಪ್ರಸಕ್ತಿಯಲ್ಲಿ ಪಟ್ಟೆಯು ಮುಗಿ-

ಯಿಸುವ ಬಗ್ಗೆ ಮೇಲಿನಂತೆ ಆರು ತಿಂಗಳದ ನೋಟೀಸು ಕೊಡುವದೇನು ಪ್ರಯೋಜನವಿಲ್ಲ. ಮೇಲೆ ಹೇಳಿದಂತೆ ಕರಾರಿನ ಮುದ್ದತು ಮೀರಿದ ಕೂಡಲೆ ಪಟ್ಟೆಯು ತಾನಾಗಿ ಮುಗಿಯುವದು.

ತಿಂಗತಿಂಗಳದ ಮುದ್ದತಿನ ಪಟ್ಟೆಯನ್ನು ಅಂದರೆ ಮಾಸಿಕ ಪಟ್ಟೆಯನ್ನು ಮುಗಿಯಿಸಬೇಕಾದರೆ ಭೋಗವಟೆಯ ತಿಂಗಳದ ಕೊನೆಗೆ ಮುಗಿಯುವಂತೆ ೧೫ ದಿವಸಗಳ ನೋಟೀಸು ಕೊಟ್ಟು ಮುಗಿಯಿಸಲಿಕ್ಕೆ ಬರುವದು. ಪಟ್ಟೆಯಿಂದ ಕೊಡುವವನು ಯಾ ತೆಗೆದುಕೊಂಬುವವನು ಈ ರೀತಿ ನೋಟೀಸು ಕೊಟ್ಟು ಪಟ್ಟೆಯನ್ನು ಮುಗಿಯಿಸತಕ್ಕದ್ದು. ತಿಂಗಳವನ್ನು ಮುಗಿದ ಕೂಡಲೇ ಈ ಪಟ್ಟೆಯು ಮುದ್ದತು ತೀರುವದೆಂದು ತಿಳಿಯಲಾಗದು. ಕೆಲವು ಅವಧಿ ವರೆಗೆ ಮಾತ್ರ ಉಪಭೋಗ ಮಾಡಬೇಕೆಂದು ಪಕ್ಷಕಾರರ ನಡುವೆ ಕರಾರು ಆಗಿದ್ದಲ್ಲಿ ಆ ಅವಧಿಯನ್ನು ಮೀರಿದಕೂಡಲೇ ಆ ಪಟ್ಟೆಯು ಮುಗಿಯುವದು. ಈ ಪ್ರಸಕ್ತಿಯಲ್ಲಿ ಮೇಲೆ ಹೇಳಿದಂತೆ ೧೫ ದಿವಸದ ನೋಟೀಸು ಕೊಡುವದೇನು ಕಾರಣವಿಲ್ಲ. ಕರಾರಿನಲ್ಲಿ ಹೇಳಿದ ಮುದ್ದತು ಮೀರಿದಕೂಡಲೆ ಈ ಪಟ್ಟೆಯು ತಾನಾಗಿ ಮುಗಿಯುವದು.

**ನೋಟೀಸು** — ಈ ಪ್ರಕಾರ ಮಾಡುವ ನೋಟೀಸು ಹ್ಯಾಗೆ ಇರ ಇರತಕ್ಕದ್ದು?

(೧) ಅದು ಬರಹಮೂಲಕವಾಗಿ ಮಾಡಿರಬೇಕು; ಅಂದರೆ ಅದು ಲೇಖಿಯಿಂದ ಆಗಿರಬೇಕು.

(೨) ಅದನ್ನು ಕೊಡುವವನ ಯಾ ಅವನ ತರ್ಫೆನಿಂದ ಮತ್ಯಾವನಾದರೂ ಮನುಷ್ಯನ ಸಹಿಯು ಅದರ ಮೇಲಿರತಕ್ಕದ್ದು.

(೧) ಅದನ್ನು ಸ್ಪಷ್ಟವಾಗಿಯೂ ಅಸಂದಿಗ್ಧವಾಗಿಯೂ ಇರತಕ್ಕದ್ದು.

(೪) ಅದರಲ್ಲಿ ಏನಾದರೂ ಶರ್ತು ವಗೈರೆ ಕಾಣಿಸತಕ್ಕದ್ದಲ್ಲ.

(೫) ಅದು ಕಡಿಮೆಯಲ್ಲಿ ಕಡಿಮೆ ಪೂರಾ ಆರು ತಿಂಗಳದ ಯಾ ೧೫ ದಿವಸದ ಪೂರ್ವದಲ್ಲಿ ಕೊಟ್ಟಿರಬೇಕು.

ಮತ್ತು ಅವು ಭೋಗವಟಿಯ ವರ್ಷದ ಕೊನೆಗೆ ಮುಗಿಯುವಂತೆ ಯಾ ಭೋಗವಟಿಯ ತಿಂಗಳದ ಕೊನೆಗೆ ಮುಗಿಯುವಂತೆ ( ಹ್ಯಾಗಿರುವದೋ ಹಾಗೆ ) ಮಾಡಿರಬೇಕು. ಭೋಗವಟಿಯ ವರ್ಷದ ಕೊನೆಯ ದಿವಸದ ಆರು ತಿಂಗಳ ಮೊದಲು ಯಾ ಭೋಗವಟಿಯ ತಿಂಗಳದ ಕೊನೆಯ ದಿವಸದ ೧೫ ದಿವಸ ಮೊದಲು ಅವನ್ನು ವಿರುದ್ಧ ಪಕ್ಷಕಾರನ ಮೇಲೆ ಬಜಾಯಿಸತಕ್ಕದ್ದು. ಸದರೀ ತಿಂಗಳದ ಯಾ ದಿವಸದ ಪೂರ್ವದಲ್ಲಿ ಸಹ ಬಜಾಯಿಸಿದರೂ ಅಡ್ಡಿಯಿಲ್ಲ. ಆದರೆ ಕನಿಷ್ಟ ಆರುತಿಂಗಳದ ಯಾ ೧೫ ದಿವಸದ ಅವಕಾಶ ಸಿಗುವಂತೆ ನೋಟೀಸಮಾಡುವದು ಅಗತ್ಯವಿದೆ.

(೬) ನೋಟೀಸಿನಿಂದ ಯಾವನು ಬದ್ಧನಾಗಬೇಕೆಂಬ ಹೇತುವಿರುವದೋ ಅವನಿಗೆ ಸ್ವತಃ ಅವನ ಕುಟುಂಬದ ಪೈಕಿ ಯಾವನಾದರೂ ಒಬ್ಬನಿಗೆ ಯಾ ಅವನ ಮನೆಯಲ್ಲಿಯ ಚಾಕರನಿಗೆ ಅದನ್ನು ಒಪ್ಪಿಸಬೇಕು ಯಾ ಕೊಡಬೇಕು. ಅಥವಾ (ಈ ಪ್ರಕಾರ ಒಪ್ಪಿಸುವದು ಯಾ ಕೊಡುವದು ಶಕ್ಯವಿಲ್ಲದಿದ್ದರೆ ) ಆಸ್ತಿಯು ಕಾಣಬರುವಂಥ ಸ್ಥಳದ ಮೇಲೆ ಅವನ್ನು ಹಚ್ಚಿಬಿಡಬೇಕು.

**ಸಾರಾಂಶ**–ನೋಟೀಸು ಸ್ವತಃ ವಿರುದ್ಧ ಪಕ್ಷಕಾರನ ಮೇಲೆ ಅಥವಾ ಅವನ ಕುಟುಂಬದ ಪೈಕಿ ಯಾವನಾದರೊಬ್ಬನ ಮೇಲೆ, ಅಥವಾ ಅವನ ಏಜಂಟನ ಮೇಲೆ ಅಥವಾ ಅವನ ನೌಕರನ ಮೇಲೆ ಬಜಾಯಿಸಬಹುದು. ಹೀಗೆ ಮಾಡುವದು ಶಕ್ಯವಿಲ್ಲದಿದ್ದರೆ ಅವನ ಮನೆಯು ಕಾಣಬರುವಂಥ ಯಾವದೊಂದು ಬಹಿರಂಗವಾದ ಭಾಗದಮೇಲೆ ಅವನ್ನು ಹಚ್ಚಿಸಿ ಬಜಾಯಿಸಬಹುದು.

(೭) ತಿಂಗಳ ಮತ್ತು ತಾರೀಖು ಬ್ರಿಟಿಶ ಕ್ಯಾಲೆಂಡರದ ಪ್ರಕಾರ ಎಣಿಸತಕ್ಕದ್ದು.

## ಪಟ್ಟೆಗಳನ್ನು ಹ್ಯಾಗೆ ಮಾಡತಕ್ಕದ್ದು ?

(೧) ವರ್ಷ ವರ್ಷದ ಮುದ್ದತಿನ ಯಾ,

(೨) ಒಂದು ವರ್ಷಕ್ಕಿಂತ ಹೆಚ್ಚು ಮುದ್ದತಿನ ಅಥವಾ,

(೩) ವರ್ಷದ ಬಾಡಿಗೆಯನ್ನು ಕಾದಿಟ್ಟು ಸ್ಥಾವರಾಸ್ತಿಯ ಪಟ್ಟೆಯನ್ನು ಮಾಡಬೇಕಾದರೆ ನೋಂದಿಸಿದ ಖತ್ತಿದಿಂದಲೇ ಮಾತ್ರ ಮಾಡಲಿಕ್ಕೆ ಬಂದೀತು.

ಸ್ಥಾವರಾಸ್ತಿಯ ಜೇರೆತರದ ಎಲ್ಲ ಪಟ್ಟಿಗಳು ಖತ್ತಿನಿಂದ ಅಥವಾ ಬಾಯಿಮಾ-ತಿನ ಕರಾರಿನಿಂದ ಮಾಡಬಹುದು.

**ಸ್ಥಾವರಾಸ್ಥಿಯ ಪಟ್ಟಿಯ ಮುದ್ದತು ಕೆಳಗೆ ಬರೆದ ಪ್ರಕಾರ ಮುಗಿದು ಹೋಗುತ್ತದೆ--**

(ಅ) ಅದರಲ್ಲಿ ಮಟ್ಟುಪಡಿಸುವ ಮುದ್ದತು ತೀರಿಹೋದ್ದರಿಂದ; ಈ ಪ್ರಸಕ್ತಿಯಲ್ಲಿ ಹಿಂದೆ ಹೇಳಿದಂತೆ ನೋಟೀಸು ಕೊಡುವ ಕಾರಣವಿಲ್ಲ.

(ಬ) ಯಾವದಾದರೂ ಸಂಗತಿಯು ಸಂಭವಿಸಿ ಬರುವ ಕರಾರಿನ ಮೇಲೆ ಸ್ವವರ್ಧಿ ಮುದ್ದತು ಮಟ್ಟುಪಡಿಸಿದರೆ—ಸದರಿ ಸಂಗತಿಯು ಸಂಭವಿಸಿದ್ದರಿಂದ;

ಉ— ಪಟ್ಟಿಯನ್ನು ತೆಗೆದುಕೊಂಬುವವನು ತನ್ನ ಹಯಾತಿನ ವರೆಗೆ ಆಸ್ತಿಯನ್ನು ಉಪಭೋಗಮಾಡಬೇಕೆಂದು ಗೊತ್ತಾಗಿದ್ದರೆ, ಅವನು ಮೃತಪಟ್ಟ ಕೂಡಲೆ ಸದರೀ ಪಟ್ಟಿಯು ಮುಗಿಯುವದು.

(ಕ) ಪಟ್ಟಿಯಿಂದ ಕೊಟ್ಟ ಆಸ್ತಿಯೊಳಗಿನ ಪಟ್ಟಿಯಿಂದ ಕೊಡುವವನ ಹಿತಸಂಬಂಧವು ಯಾವ ಸಂಗತಿಯು ಸಂಭವಿಸುವದರಿಂದ ಮುಗಿಯುವದೋ ಅಥವಾ ಯಾವ ಸಂಗತಿಯು ಸಂಭವಿಸುವ ವರೆಗೆ ಅವರ ವ್ಯವಸ್ಥೆಮಾಡುವ ಅಧಿಕಾರವು ಅವನಿಗೆ ಇರುವದೋ ಆ ಸಂಗತಿಯು ಸಂಭವಿಸಿದ್ದರಿಂದ;

ಉ— ಹಿಂದು ವಿಧವೆಯುಳು ಕೊಟ್ಟ ಪಟ್ಟಿಯು; ಹಿಂದು ವಿಧವೆಗೆ ಆಕೆಯ ಗಂಡನ ಆಸ್ತಿಯಲ್ಲಿ ಮರ್ಯಾದಿತ ಹಿತಸಂಬಂಧವುಂಟು. ಆಕೆಯು ಮೃತಪಟ್ಟ ಕೂಡಲೆ ಆಕೆಯ ಸದರೀ ಹಿತಸಂಬಂಧವನ್ನು ಇಲ್ಲಿದಂತೆಯಾಗುವದು ಯಾ ನಷ್ಟಾಗುವದು. ಕಾರಣ ಹಿಂದು ವಿಧವೆಯುಳು ಪಟ್ಟಿಯಿಂದ ಸ್ಥಾವರಾಸ್ತಿಯನ್ನು ಕೊಟ್ಟಪಕ್ಷಕ್ಕೆ ಆಕಿಯು ಮೃತಪಟ್ಟ ಕೂಡಲೆ ಸದರೀ ಪಟ್ಟಿಯು ಮುಗಿಯುವದು.

(ಡ) ಪಟ್ಟಿಯಿಂದ ತೆಗೆದುಕೊಳ್ಳುವವನು ಮತ್ತು ಕೊಡುವವನು ಇವರ ಆ ಎಲ್ಲ ಆಸ್ತಿಯೊಳಗಿನ ಹಿತಸಂಬಂಧವು ಒಬ್ಬನೇ ಮನುಷ್ಯನಲ್ಲಿ ಒಂದೇ ಹಕ್ಕಿನಿಂದ ಒಂದೇ ಕಾಲದಲ್ಲಿ ನಿವಿಷ್ಟವಾದರೆ,

ಉ—ಪಟ್ಟೆಯನ್ನು ತೆಗೆದುಕೊಂಬುವವನು ಪಟ್ಟೆಯಿಂದ ಕೊಟ್ಟ ಸ್ಥಾವ ರಾಸ್ತಿಯನ್ನು ಖರೀದಿ ಮಾಡಿಕೊಂಡರೆ ಅಥವಾ ಅವನು ಇತರ ಯಾವದೇ ರೀತಿ ಯಂದ ಆ ಆಸ್ತಿಯ ಮಾಲಕನಾದರೆ ಪಟ್ಟೆಯು ಮುಗಿಯುವದು.

(ಇ) ಸ್ಪಷ್ಟವಾಗಿ ಬಿಟ್ಟುಬಿಡುವವರಿಂದ; ಅಂದರೆ ಪಟ್ಟೆಯ ಮೂಲಕ ವಾಗಿ ಇರುವ ತನ್ನ ಹಿತಸಂಬಂಧವನ್ನು ಪಟ್ಟೆಯಿಂದ ತೆಗೆದುಕೊಳ್ಳುವವನು ಪಟ್ಟೆಯಿಂದ ಕೊಡುವವನಿಗೆ ಕೊಟ್ಟಾಗ್ಗೆ ಅವರವರ ನಡುವೆ ಆದ ಕರಾರಿನಿಂದ ಪಟ್ಟೆಯಿಂದ ಕೊಡುವವನ ಸಮ್ಮತಿಯಿಂದ ಅಥವಾ ಅವನ ಅನುಕೂಲಿಯಿಂದ ಮಾತ್ರ ಪಟ್ಟೆಯಿಂದ ತೆಗೆದುಕೊಳ್ಳುವವನು ಪಟ್ಟೆಯನ್ನು ಬಿಟ್ಟುಬಿಡಬಹುದು. ಪಟ್ಟೆಯಿಂದ ಕೊಡುವವನು ಹಾಗೆ ಮಾಡಲಿಕ್ಕೆ ಸಮ್ಮತಿಯನ್ನು ಕೊಡದಿದ್ದರೆ ಪಟ್ಟೆಯಿಂದ ತೆಗೆದುಕೊಳ್ಳುವವನಿಗೆ ಆ ಪಟ್ಟೆಯನ್ನು ಬಿಟ್ಟುಬಿಡಲಿಕ್ಕೆ ಬರಲಾ ಗದು; ಅಂದರೆ ಈ ಪ್ರಸಕ್ತಿಯಲ್ಲಿ ಆ ಪಟ್ಟೆಯು ಮುಗಿಯಲಾಗದು. ಪಟ್ಟೆ ಯಿಂದ ಕೊಡುವವನ ಸಮ್ಮತಿಯಿಂದ ಮಾತ್ರ ಪಟ್ಟೆಯನ್ನು ತೆಗೆದುಕೊಳ್ಳುವ ವನಿಗೆ ಬಿಟ್ಟುಬಿಡಲಿಕ್ಕೆ ಬರುವದು.

ಪಟ್ಟೆಯನ್ನು ಬಾಯಿಮಾತಿನ ಕರಾರಿನಿಂದ ಬಿಟ್ಟುಬಿಡಲಿಕ್ಕೆ ಬರುವದು. ಬರಹದ ಮೂಲಕವಾಗಿ ಅದನ್ನು ಬಿಡಲಿಕ್ಕೆ ಬೇಕು ಹೀಗೇನೂ ಇಲ್ಲ. ಉಭಯ ಪಕ್ಷಕಾರರ ನಡುವೆ ಪಟ್ಟೆಯನ್ನು ಬಿಟ್ಟುಬಿಡುವ ಬಗ್ಗೆ ಬಾಯಿಮಾತಿನ ಕರಾರು ಆದರೆ ಸಾಕಾಗುವದು. ಈ ಬಗ್ಗೆ ಲೇಖಿ ಕಾಗದ ಪತ್ರವನ್ನು ಮಾಡುವ ಕಾರ ಣವಿಲ್ಲ.

(ಫ) ಗರ್ಭಿತವಾಗಿ ಬಿಟ್ಟುಕೊಡುವದರಿಂದ ಮೇಲೆ (ಇ) ಕಲಮಿನಲ್ಲಿ ಹೇಳಿದ ನಿಯಮಗಳು ಇಲ್ಲಿ ಸಹ ಲಾಗೂ ಇರುತ್ತವೆ.

ಉ—ಒಬ್ಬ ಪಟ್ಟೆಯಿಂದ ತೆಗೆದುಕೊಳ್ಳುವವನು ಪಟ್ಟೆಯಿಂದ ಕೊಡುವ ವನ ಕಡೆಯಿಂದ ಪಟ್ಟೆಯಿಂದ ಕೊಟ್ಟ ಆಸ್ತಿಯ ಹೊಸ ಪಟ್ಟೆಯನ್ನು ಇರುವ ಪಟ್ಟೆಯು ಜಾರಿ ಇರುವಾಗಲೇ ಸುರವಾಗುವದರ ದೆಸೆಯಿಂದ ಸ್ವೀಕರಿಸುತ್ತಾನೆ. ಹೀಗೆ ಮಾಡುವದರಿಂದ ಮೊದಲಿನ ಪಟ್ಟೆ ಗರ್ಭಿತವಾಗಿ ಬಿಟ್ಟುಕೊಟ್ಟಂತೆ ಆಗು ತ್ತದೆ. ಮತ್ತು ಸದರಿ ಪಟ್ಟೆಯು ಆ ಕಾರಣ ಮುಗಿದುಹೋಗುತ್ತದೆ.

(ಗ) ಮುಣಗಿ ಹೋಗಿದ್ದರಿಂದ ಅಂದರೆ—

(೧) ಯಾವ ಸ್ಪಷ್ಟವಾದ ಶರ್ತನ್ನು ಮುರಿದರೆ ಪಟ್ಟೆಯಿಂದ ಕೊಡುವವನು ಅದನ್ನು ತಿರುಗಿ ವಾಪಸ ತೆಗೆದುಕೊಳ್ಳಬಹುದು ಯಾ ಆ ಪಟ್ಟೆಯು ರದ್ದು ಆದೀತು ಎಂದು ಗೊತ್ತುಪಡಿಸಿದ ಸ್ಪಷ್ಟವಾಗಿರುವ ಕರಾರವನ್ನು ಪಟ್ಟೆಯಿಂದ ತೆಗೆದುಕೊಳ್ಳುವವನು ಮುರಿದರೆ; ಅಥವಾ

(೨) ಪಟ್ಟೆಯಿಂದ ತೆಗೆದುಕೊಳ್ಳುವವನು ಮೂರನೆಯವನ ಹಕ್ಕು ಅದರ ಬಗ್ಗೆ ಸ್ಥಾಪಿಸಿ ಅಥವಾ ತನ್ನ ಹಕ್ಕನ್ನೇ ಹೇಳಿ ಪಟ್ಟೆಯಿಂದ ತೆಗೆದುಕೊಂಡ ನಾತೆಯನ್ನು ಬಿಟ್ಟುಬಿಟ್ಟರೆ; ಮತ್ತು ಯಾವ ಸಂಗತಿಯಲ್ಲಾದರೂ ಪಟ್ಟೆಯಿಂದ ಕೊಡುವವನು ಅಥವಾ ಯಾರಿಗೆ ಅವನು ತಬದಿಲು ಮಾಡಿಕೊಟ್ಟಿರುವನೋ ಅವನು ಆ ಪಟ್ಟೆಯನ್ನು ಮುಗಿಸಬೇಕೆಂತಿರುವ ತನ್ನ ಅಭಿಪ್ರಾಯವನ್ನು ತೋರಿಸುವಂಥ ಕೃತ್ಯವನ್ನು ಮಾಡುತ್ತಾನೆ.

(ಹ) ಪಟ್ಟೆಯಿಂದ ಕೊಟ್ಟ ಆಸ್ತಿಯನ್ನು ಬಿಡುವ ವಿಷಯದಲ್ಲಿ ಯಾ ಬಿಟ್ಟು ಬಿಡುವ ಆಲೋಚನೆಯಿದ್ದ ವಿಷಯದಲ್ಲಿ ಒಂದು ಪಕ್ಷಕಾರರು ಮತ್ತೊಬ್ಬ ಪಕ್ಷದವರಿಗೆ ಯೋಗ್ಯವಾಗಿ ಕೊಟ್ಟ ನೋಟೀಸಿನ ಮುದ್ದತು ತೀರಿಹೋದದ್ದರಿಂದ;

## ಬಾಡಿಗೆ ಪತ್ರವು

ಶ್ರೀಯುತ ಮಾಧವ ನಾರಾಯಣ ಸಾತವಳೆಕರ ಸಾ॥ ವಿಜಾಪೂರ ಇವರಿಗೆ

**ಬಾಡಿಗೆಪತ್ರ ಬೇಸ್ಮಿ**—ನಾನು ಮುದಕಪ್ಪಾ ತಂದಿ ವೀರಭದ್ರಪ್ಪಾ ಕುರುಬಟ್ಟಿ ಸಾಕೀನ ಬಾಗಲಕೋಟೆ ಬರೆದುಕೊಡುವ ಬಾಡಿಗೆಪತ್ರ ಏನಂದರೆ—

ನೀವು ಈ ಕೆಳಗೆ ಬರೆದ ಆಸ್ತಿಗಳ ಮಾಲಕರಾಗಿರುತ್ತೀರಿ ಮತ್ತು ಅವುಗಳಿನ್ನು ನಿಮ್ಮ ಸ್ವಾಧೀನದಲ್ಲಿ ಮತ್ತು ವಹಿವಾಟಿಯಲ್ಲಿ ಇವೆ. ಸದರಿ ಆಸ್ತಿಗಳ ಯಾವವೆಂದರೆ—

... ... ... ...

... ... ... ...

( ಆಸ್ತಿಗಳ ವರ್ಣನೆಯು ಸ್ಪಷ್ಟವಾಗಿಯೂ ವಿಶದವಾಗಿಯೂ ಮಾಡಬೇಕು ). ಪ್ರತಿವರ್ಷಕ್ಕೆ ೩೫೦ ರೂಪಾಯಿಗಳ ಬಾಡಿಗೆ ಕೊಡುವ ಕರಾರಿನಿಂದ

ಹಾಗೂ ೫ವರ್ಷದ ವರಿಗೆ ಬಾಡಿಗೆದಾರನಾತೆಯಿಂದ ಸದರಿ ಆಸ್ತಿಗಳ ಉಪಭೋಗ
ಮಾಡುವ ಕರಾರಿನಿಂದನಾನು ಇವತ್ತಿನ ದಿವಸ ನಿಮ್ಮ ಕಡೆಯಿಂದ ಅವುಗಳ ಕಬಜಾ
ಪಡಕೊಂಡಿರುತ್ತೇನೆ. ಸದರಿ ಆಸ್ತಿಗಳ ಉಪಭೋಗವನ್ನು ನಾನು ಒಳ್ಳೇ ಕಾಳಜಿ
ಯಿಂದ ಮಾಡೇನು. ಮೇಲ್ಕಂಡ ಬಾಡಿಗೆಯ ಸಂಬಂಧಿ ಮೊಬಲಗನ್ನು ಪ್ರತಿ
ವರ್ಷದ ಜೂನ ತಿಂಗಳದ ೧೫ನೇ ತಾರೀಖಿನ ವಳಗಾಗಿ ನಾನು ಕೊಟ್ಟೇನಿ.
ಹೀಗೆ ಮಾಡಲಿಕ್ಕೆ ತಪ್ಪಿದರೆ ಆ ತಾರೀಖಿನಿಂದ ಸದರಿ ಮೊಬಲಗಿನ ಮೇಲೆ ದರ
ಸಾಲು ದರಸೇಕಡಾ ೧೨ ರೂಪಾಯಿಯ ದರದಂತೆ ಬಡ್ಡಿ ಕೊಟ್ಟೇನಿ. ಸದರಿ
ತಾರೀಖಿನಲ್ಲಿ ನಾನು ಕರಾರಿನಂತೆ ಬಾಡಿಗೆಯ ರೂಪಾಯಿಗಳನ್ನು ಕೊಡದಿದ್ದರೆ
ನೀವು ನನ್ನ ಮೇಲೆ ಕಾಯದೇಶೀರ ಇಲಾಜು ನಡೆಯಿಸಿ ಸದರಿ ರೂಪಾಯಿಗಳನ್ನು
ಬಡ್ಡಿ ಸಹಿತವಾಗಿ ವಸೂಲ ಮಾಡಿಕೊಳ್ಳಬಹುದು. ಯಾವನಾದರೂ ಎರಡು
ವರ್ಷಗಳ ಬಾಡಿಗೆಯನ್ನು ಕರಾರಿನ ಪ್ರಕಾರ ನಾನು ಮುದ್ದತಶೀರ ಕೊಡವಿದ್ದರೆ
ನೀವು ನಿಮ್ಮ ಮರ್ಜಿ ಪ್ರಕಾರ ಈ ಬಾಡಿಗೆ ಕರಾರನ್ನು ರದ್ದು ಪಡಿಸಬಹುದು
ಮತ್ತು ನನ್ನ ಕಡೆಯಿಂದ ಸದರಿ ಆಸ್ತಿಗಳ ಕಬಜಾ ಪಡಕೊಳ್ಳಬಹುದು. ಈ
ಪ್ರಸಕ್ತಿಯಲ್ಲಿ ಐದು ವರ್ಷಗಳು ಮೀರುವ ಹಾದಿಯನ್ನು ನೀವು ನೋಡಲಿಕ್ಕೆ
ಅಗತ್ಯವಿಲ್ಲ. ಸದರಿ ಆಸ್ತಿಗಳ ಸಂಬಂಧಿ ಮುನಸಿಪಾಲಟಿಯ ಯಾವತ್ತು ಕರ
ಗಳನ್ನು ನಾನೇ ಮುದ್ದತಶೀರ ಕೊಡುತ್ತೇನೆ. ಮತ್ತು ಸದರಿ ಆಸ್ತಿಗಳ ಚಿಲ್ಲರ
ದುರಸ್ತಿಯನ್ನು ನಾನೇ ನನ್ನ ಖರ್ಚಿನಿಂದ ಮಾಡುತ್ತೇನೆ; ವಿಶೇಷ ಮಹತ್ವದ
ದುರುಸ್ತಿಯನ್ನು ನೀವೇ ಮಾಡತಕ್ಕದ್ದು. ಮೇಲೆ ಕಾಣಿಸಿದ ಅವಧಿಯ
ಅನಂತರ ನಾನು ಬಿನ್‌ತಕರಾರ ಸದರಿ ಆಸ್ತಿಗಳನ್ನು ನಿಮ್ಮ ಸ್ವಾಧೀನಕ್ಕೆ ಕೊಡು
ತ್ತೇನೆ; ಇದಕ್ಕೆ ತಪ್ಪಲಿಕ್ಕಿಲ್ಲ. ಅಂತಾ ಆತ್ಮ ಸಂತೋಷದಿಂದ ಮತ್ತು ಬುದ್ಧಿ
ಜಾಗೃತೆಯಿಂದ ಬರೆದುಕೊಟ್ಟ ಬಾಡಿಗೆ ಪತ್ರ ತಾರೀಖು ೧೩-೫-೧೯೨೫.

ದಸ್ತೂರ—ದಾಮೋದರಸಾ ಹಬೀಬ

ಸಹಿ—ಮುದಕಪ್ಪಾ ತಂದಿ ವೀರಭದ್ರಪ್ಪಾ ಕುರಬಟ್ಟಿ

ಸಾಕ್ಷಿಗಳು

೧. ಗದಗೆವ್ವಾ ಕೋಂ ಬಸಪ್ಪಾ ಚನಪ್ಯಾಟಿ

೨. ಬಸಪ್ಪಾ ಲಕ್ಷ್ಮಪ್ಪಾ ಅಕ್ಕಿ

## ಲಾವಣೀ ಕಬೂಲಾಯತ

ರಾಜಶ್ರೀ ಚನಬಸಪ್ಪಾ ತಂದಿ ಗುರುಬಸಪ್ಪಾ ಕೋಟಿ ಸಾಕೀನ ಹಾವೇರಿ ಇವರಿಗೆ—

ಲಾವಣಿ ಕಬೂಲಾಯತ ಬೇಸ್ಮಿ ಬಸನಗೌಡಾ ಬಿನ್ ರಾಚನಗೌಡಾ ಪಾಟೀಲ ಸಾಕೀನ ಹಾವೇರಿ ನಾನು ಬರೆದು ಕೊಡುವ ಲಾವಣಿ ಕಬೂಲಾಯತ ಏನಂಬರೆ—ನೀವು ಕೆಳಗೆ ವಿವರಿಸಿದ ಜಮೀನುಗಳ ಮಾಲಕರಾಗಿರುತ್ತೀರಿ ಮತ್ತು ಅವುಗಳನ್ನು ನಿಮ್ಮ ಸ್ವಾಧೀನದಲ್ಲಿ ಮತ್ತು ವಹಿವಾಟಿಯಲ್ಲಿ ಇವೆ. ಅವು ಯಾವ ವೆಂದರೆ—

... ... ... ...

.... ... ... ..

(ಆಸ್ತಿಗಳ ವರ್ಣನೆಯು ಸ್ಪಷ್ಟವಾಗಿಯೂ ವಿಶದವಾಗಿಯೂ ಮಾಡಬೇಕು.) ಪ್ರತಿವರ್ಷಕ್ಕೆ ೨೫೦ ರೂಪಾಯಿಗಳ ಲಾವಣಿ ಕೊಡುವ ಕರಾರಿನಿಂದ ಹಾಗೂ ೧೦ ವರ್ಷಗಳ ವರೆಗೆ ಲಾವಣಿದಾರ ನಾತೆಯಿಂದ ಸದರೆ ಜಮೀನಗಳ ಉಪಭೋಗ ಮಾಡುವ ಕರಾರಿನಿಂದ ನಾನು ಇವತ್ತಿನ ದಿವಸ ನಿಮ್ಮ ಕಡೆಯಿಂದ ಅವುಗಳ ಕಬಜಾ ಪಡಕೊಂಡಿರುತ್ತೇನೆ. ಸದರೀ ಜಮೀನಗಳ ಉಪಭೋಗವನ್ನೂ ನಾನು ಒಳ್ಳೇ ಕಾಳಜಿಯಿಂದ ಮಾಡೇನು. ಮೇಲ್ಕಂಡ ಲಾವಣಿಯ ಮೊಬಲಗನ್ನು ಪ್ರತಿವರ್ಷದ ಮಾರ್ಚ ತಿಂಗಳದ. ೧೫ ನೇ ತಾರೀಖಿನಲ್ಲಿ ನಾನು ಕೊಟ್ಟೇನಿ. ಹೀಗೆ ಮಾಡಲಿಕ್ಕೆ ತಪ್ಪಿದರೆ ಸದರಿ ಮೊಬಲಗಿನ ಮೇಲೆ ದರಸಾಲು ದರಸೇಕಡಾ ೧೨ ರೂಪಾಯಿಯು ದರದಂತೆ ಬಡ್ಡಿ ಕೊಟ್ಟೇನಿ. ಕರಾರಿನ ಪ್ರಕಾರ ಸದರಿ ತಾರೀಖಿನಲ್ಲಿ ನಾನು ಲಾವಣಿ ರೂಪಾಯಿಗಳನ್ನು ಕೊಡದಿದ್ದರೆ ನೀವು ನನ್ನ ಮೇಲೆ ಕಾಯದೇಶೀರ ಇಲಾಜು ನಡೆಯಿಸಿ ಸದರ ರೂಪಾಯಿಗಳನ್ನು ಬಡ್ಡಿ ಸಹಿತವಾಗಿ ವಸೂಲ ಮಾಡಿಕೊಳ್ಳಬಹುದು. ಯಾವದಾದರೂ ಎರಡು ವರ್ಷಗಳ ಲಾವಣಿ ರೂಪಾಯಿಗಳನ್ನು ನಾನು ಮುದ್ದತಶೀರ ಕೊಡದಿದ್ದರೆ ನೀವು ನಿಮ್ಮ ಮರ್ಜಿ ಪ್ರಕಾರ ಈ ಲಾವಣಿ ಕರಾರನ್ನು ರದ್ದುಪಡಿಸಬಹುದು ಮತ್ತು ನನ್ನ ಕಡೆಯಿಂದ ಸದರಿ ಜಮೀನಗಳ ಕಬಜೆ ಪಡಕೊಳ್ಳಬಹುದು. ಈ ಪ್ರಸಕ್ತಿಯಲ್ಲಿ ಹತ್ತು ವರ್ಷಗಳು ಮೀರುವ ಹಾದಿಯು ನೋಡುವ ಕಾರಣವಿಲ್ಲ. ಸದರಿ

ಯಾವತ್ತು ಜಮೀನುಗಳನ್ನು ಈಗ ಬಿನ್ ಕರಕಿ ಇವೆ. ಪ್ರತಿವರ್ಷ ಸದರೀ ಜಮೀನುಗಳಿಗೆ ಗೊಬ್ಬರ ವಗೈರೆ ಹಾಕಿ ಅವುಗಳನ್ನು ದುರಸ್ತ ಮಾಡುತ್ತೇನೆ ಮತ್ತು ಈಗ್ಗೆ ಇದ್ದ ಸ್ಥಿತಿಯುಗಿಂತ ಮತ್ತಿಷ್ಟು ಚಲೋ ಸ್ಥಿತಿಯಲ್ಲಿ ಸದರಿ ಜಮೀನುಗಳನ್ನು ಇಟ್ಟು ಮೇಲ್ಕಂಡ ಅವಧಿಯ ಅಖೈರಿಗೆ ಬಿನ್ ತಕರಾರ ನಿಮ್ಮ ಸ್ವಾಧೀನಕ್ಕೆ ಕೊಡುತ್ತೇನೆ. ಸರಕಾರಿ ರೂಳಿನ ಪ್ರಕಾರ ಸದರಿ ಜಮೀನದೊಳಗಿನ ಬಾಂದು ಕಲ್ಲು ನಾನು ನನ್ನ ಖರ್ಚಿನಿಂದ ದುರಸ್ತು ಇಡುತ್ತೇನೆ ಮತ್ತು ಸದರೀ ಜಮೀನುಗಳ ಸಂಬಂಧಿ ಸರಕಾರಿ ತೆರವೆ ನಾನೇ ಮುದ್ದತಶೀರ ಕೊಡುತ್ತೇನೆ. ಅಂತಾ ರಾಜಿಖುಷಿಯಿಂದ ಮತ್ತು ಬುದ್ಧಿಜಾಗೃತೆಯಿಂದ ಬರೆದು ಕೊಟ್ಟ ಲಾವಣೀ ಕಬೂಲಾಯತ ತಾರೀಖು ೪–೩–೧೯೨೬ನೇ ಇಸ್ವಿ.

ದಸ್ತೂರ—

ಸಹಿ—ಬಸನಗೌಡಾ ರಾಚನಗೌಡಾ ಪಾಟೀಲ

ಸಾಕ್ಷಿಗಳು

೧. ದ್ಯಾವಪ್ಪಾ ಬಸಪ್ಪಾ ಚಟ್ಣಿ

೨. ಹುಚ್ಚಪ್ಪಾ ನಿಲಪ್ಪಾ ಕೋತಂಬರಿ

## ಜಮೀನು ಬಿಡುವ ಬಗ್ಗೆ ನೋಟೀಸು

ರಾಜಶ್ರೀ ಗೋಪಾಳ ಲಕ್ಷ್ಮಣ ದೇಶಪಾಂಡೆ ಸಾಕಿನ ಸಿಗ್ಗಾಂವ ಇವರಿಗೆ—

**ನೋಟಿಸ ಬೇಸ್ಮಿ** — ನಾನು ಬಸನಗೌಡಾ ತಂದಿ ಭೀಮನಗೌಡಾ ಪಾಟೀಲ ಸಾಕಿನ ತಡಸ, ನಿಮ್ಮ ಕಡೆಯಿಂದ ತಾರೀಖು ೧೩–೪–೧೯೨೨ನೇ ಇಸ್ವಿ ದಿವಸ ಒಂದು ವರ್ಷದಿಂದ ಮತ್ತೊಂದು ವರ್ಷದ ವರೆಗೆ ನಡೆಯುವಂಥ ಪಟ್ಟೆಯಿಂದ ನಿಮ್ಮ ಮಾಲಕಿ ಉಳ್ಳ ಈ ಕೆಳಗೆ ವಿವರಿಸಿದ ಜಮೀನುಗಳನ್ನು ನನ್ನ ಸ್ವಾಧೀನಕ್ಕೆ ತೆಗೆದುಕೊಂಡಿದ್ದೆ ಮತ್ತು ಆ ಪ್ರಕಾರ ಇವತ್ತಿನ ವರೆಗೆ ಅವುಗಳ ಉಪಭೋಗವನ್ನು ಮಾಡುತ್ತ ಬಂದೆ. ಸದರಿ ಜಮೀನುಗಳ ವಿವರ—

... ... ... ...

... ... ... ...

ಈ ನೋಟೀಸದ ಮುಖಾಂತರವಾಗಿ ನಿಮಗೆ ತಿಳಿಸುವದೇನಂದರೆ, ಸದರಿ ಜಮೀನುಗಳನ್ನು ತಾರೀಖು ೧೪–೪–೧೯೩೮ನೇ ಇಶ್ವಿ ದಿವಸ ನಾನು ಬಿಟ್ಟು ಬಿಡುತ್ತೇನೆ ಮತ್ತು ಅವುಗಳನ್ನು ಆ ದಿವಸ ನಿಮ್ಮ ಸ್ವಾಧೀನಕ್ಕೆ ಕೊಡುತ್ತೇನೆ ಅಂತಾ ಬರೆದುಕೊಟ್ಟ ನೋಟೀಸು ತಾರೀಖು ೧೨–೧೦–೧೯೩೭ನೇ ಇಶ್ವಿ.

ಸಹಿ – ಬಸನಗೌಡಾ ಭೀಮನಗೌಡಾ ಪಾಟೀಲ

## ಜಮೀನು ಬಿಡಿಸುವ ಬಗ್ಗೆ ನೋಟೀಸು

ರಾಜಶ್ರೀ ರಾಮಪ್ಪಾ ಹಣಮಪ್ಪಾ ಸುಂಕದ ಸಾಕಿನ ಹುಬ್ಬಳ್ಳಿ ಇವರಿಗೆ–

ನೋಟೀಸ ಬೇಸ್ಮ ಕೆಳಗೆ ಸಹಿ ಮಾಡಿದವನಾದ ಭೀಮಪ್ಪಾ ಗಂಗಾಧರಪ್ಪಾ ದಿವಟೆ ಸಾಕೀನ ಹುಬ್ಬಳ್ಳಿ ಇವನ ಕಡೆಯಿಂದ ಒಂದು ವರ್ಷದಿಂದ ಮತ್ತೊಂದು ವರ್ಷದ ವರೆಗೆ ನಡೆಯುವಂಥಾ ಪಟ್ಟೆಯಿಂದ ಈ ಕೆಳಗೆ ವಿವರಿಸಿವ ಜಮೀನುಗಳನ್ನು ತಾರೀಖು ೧೫–೪–೧೯೩೪ನೇ ಇಶ್ವಿ ದಿವಸ ನಿನ್ನ ಸ್ವಾಧೀನಕ್ಕೆ ತೆಗೆದುಕೊಂಡಿರುತ್ತೀದಿ. ಸದರಿ ಜಮೀನುಗಳ ವಿವರ—

... ... ... ...

... ... ... ...

ಈ ನೋಟೀಸ ದ್ವಾರದಿಂದ ನಿನಗೆ ತಿಳಿಸುವದೇನಂದರೆ— ಸದರೀ ಜಮೀನುಗಳನ್ನು ತಾರೀಖು ೧೬–೪–೧೯೩೮ನೇ ಇಶ್ವಿ ದಿವಸ ಬಿಟ್ಟು ನನ್ನ ಸ್ವಾಧೀನ ಮಾಡಬೇಕು. ಅಂತಾ ಬರೆದುಕೊಟ್ಟ ನೋಟೀಸು ತಾರೀಖು ೧೪–೪–೧೯೩೭ನೇ ಇಶ್ವಿ.

ಸಹಿ. ಭೀಮಪ್ಪಾ ಗಂಗಾಧರಪ್ಪಾ ದಿವಟೆ.

# ೬ನೆಯ ಪ್ರಕರಣವು

## ದಾನವು ಯಾ ಬಕ್ಷೀಸವು

ಒಬ್ಬ ಮನುಷ್ಯನು ತಾನಾಗಿ ಏನೂ ಪ್ರತಿಫಲವನ್ನು ತೆಗೆದುಕೊಳ್ಳದೆ ಒಂದು ವಿದ್ಯಮಾನವಾಗಿರುವ ಜಂಗಮ ಯಾ ಸ್ಥಾವರಾಸ್ತಿಯನ್ನು ಮತ್ತೊಬ್ಬ ಮನುಷ್ಯನಿಗೆ ತಬದಿಲು ಮಾಡಿಕೊಟ್ಟರೆ ಮತ್ತು ಆ ಮತ್ತೊಬ್ಬ ಮನುಷ್ಯನು ಅದನ್ನು ಅಂಗೀಕಾರ ಮಾಡಿದರೆ ಆ ವ್ಯವಹಾರಕ್ಕೆ "**ದಾನವು ಯಾ ಬಕ್ಷೀಸವು**" ಎಂದೆನ್ನುತ್ತಾರೆ. ತಬದಿಲು ಮಾಡಿಕೊಡುವವನಿಗೆ ದಾನ ಕೊಡುವವನೆಂದು, ತಬದಿಲು ಮಾಡಿದ್ದು ಸ್ವೀಕರಿಸುವವನಿಗೆ ದಾನ ತೆಗೆದುಕೊಳ್ಳುವವನೆಂತಲೂ ಎನ್ನುತ್ತಾರೆ. ದಾನವು ದಾನ ತೆಗೆದುಕೊಳ್ಳುವವನು ಯಾ ಅವನ ತರ್ಫಿನಿಂದ ಮತ್ತ್ಯಾರಾದರೂ ಸ್ವೀಕರಿಸಬಹುದು ಯಾ ಅಂಗಿಕಾರ ಮಾಡಬಹುದು. ದಾನ ಯಾ ಬಕ್ಷೀಸ ಮಾಡುವ ಆಸ್ತಿಯು ವಿದ್ಯಮಾನವಾಗಿರಬೇಕು; ಅಂದರೆ ಮುಂದೆ ಉತ್ಪನ್ನವಾಗುವಂಥ ಆಸ್ತಿಯ ದಾನವನ್ನು ಮಾಡಿದರೆ ಆ ದಾನವು ನಿರರ್ಥಕವಾಗುವದು. ಆದರೆ ಈಗ್ಯೆ ವಿದ್ಯಮಾನವಾಗಿರುವಂಥ ಹಾಗೂ ಮುಂದೆ ಉತ್ಪನ್ನವಾಗುವಂಥ ಆಸ್ತಿಯ ದಾನವನ್ನು ಮಾಡಿದರೆ ಆ ದಾನವು ಮುಂದೆ ಉತ್ಪನ್ನವಾಗುವ ಆಸ್ತಿಯ ವಿಷಯದಲ್ಲಿ ನಿರರ್ಥಕವಾಗುವದು.

ಮೇಲೆ ಹೇಳಿದಂತೆ ದಾನ ತೆಗೆದುಕೊಳ್ಳುವವನು ಯಾ ಅವನ ತರ್ಫಿನಿಂದ ಮತ್ತ್ಯಾರಾದರೂ ದಾನವನ್ನು ಅಂಗೀಕಾರಮಾಡುವದು ಅತ್ಯಾವಶ್ಯವಿದೆ. ಸದರೀ ಅಂಗೀಕಾರವನ್ನು ದಾನಕೊಡುವವನು ಬದುಕಿರುವಾಗ್ಗೆಯೇ ಹಾಗೂ ಕೊಡುವದಕ್ಕೆ ಅವನು ಸಮರ್ಥನಿರುವಾಗ್ಗೆಯೇ ಮಾಡಬೇಕು. ಅಂಗೀಕಾರಮಾಡುವ ಪೂರ್ವದಲ್ಲಿ ದಾನತೆಗೆದುಕೊಳ್ಳುವವನು ಮೃತಪಟ್ಟರೆ ದಾನವು ನಿರರ್ಥಕವಾದದ್ದೆಂದು ತಿಳಿಯತಕ್ಕದ್ದು.

**ಸ್ಥಾವರಾಸ್ತಿಯ ದಾನವನ್ನು** ಮಾಡಬೇಕಾದರೆ ದಾನಕೊಡುವವನು ಯಾ ಅವನ ತರ್ಫಿನಿಂದ ಮತ್ತ್ಯಾರಾದರೂ ಸಹಿಮಾಡಿದಂಥ, ಹಾಗೂ ಕಡಿಮೆಯೊಳಗೆ ಕಡಿಮೆ ಅಂದರೆ ಇಬ್ಬರು ಸಾಕ್ಷಿದಾರರು ಅದರಮೇಲೆ ಸಾಕ್ಷಿ ಹಾಕಿದಂಥ,

ನೋಂದಿಸಿದ ಖತ್ತಿನಿಂದಲೇ ತಬದಿಲು ಮಾಡಲಿಕ್ಕೆ ಬೇಕು. ಸ್ಥಾವರಾಸ್ತಿಯ ದಾನವನ್ನು ಯಾ ಬಕ್ಷೀಸವನ್ನು ಮಾಡಬೇಕಾದರೆ(ಆ ಆಸ್ತಿಯ ಬೆಲೆಯು ಯಾವದೇ ಇರಲಿ) ಅದು ಮೇಲೆ ಹೇಳಿದ ರೀತಿಯಿಂದಲೇ ಮಾಡತಕ್ಕದ್ದು. ಜಂಗಮಾಸ್ತಿಯ ದಾನವನ್ನು ಮಾಡಬೇಕಾದರೆ.

೧. ಮೇಲೆ ಹೇಳಿದಂಥ ನೋಂದಿಸಿದ ಖತ್ತಿನಿಂದ ಯಾ

೨. ಆಸ್ತಿಯನ್ನು ಸ್ವಾಧೀನಕ್ಕೆ ಕೊಟ್ಟು,

ತಬದಿಲು ಮಾಡಬಹುದು. ಜಂಗಮ ಆಸ್ತಿಯ ದಾನವನ್ನು ಈ ಎರಡು ರೀತಿಗಳ ಪೈಕಿ ಯಾವದಾದರೊಂದು ರೀತಿಯಿಂದ ಮಾಡಬಹುದು.

ಸಾರಾಂಶಃ ದಾನಕ್ಕೆ ಯಾ ಬಕ್ಷೀಸಕ್ಕೆ ಅವಶ್ಯವಾದ ಸಂಗತಿಗಳು ಕೆಳಗೆ ಹೇಳಿದಂತೆ ಇವೆ. ಅವುಗಳನ್ನೂ:—

೧. ಉಭಯ ಪಕ್ಷಕಾರರೂ—ದಾನಕೊಡುವವನು ಮತ್ತು ದಾನ ತೆಗೆದುಕೊಳ್ಳುವವನು.

೨. ವಿದ್ಯಮಾನವಾಗಿರುವಂಥ ಆಸ್ತಿಯು—ಅದು ಜಂಗಮಾಸ್ತಿರಲೀ ಯಾ ಸ್ಥಾವರಾಸ್ತಿಯಿರಲೀ.

೩. ಪ್ರತಿಫಲದ ಯಾ ಮೊಬಲದ ಅಭಾವವು.

೪. ಕೊಡುವದನ್ನು (ದಾನಕೊಡುವವನಿಂದ)

೫. ಅಂಗಿಕಾರ ಮಾಡುವದನ್ನು (ದಾನ ತೆಗೆದುಕೊಳ್ಳುವವನಿಂದ)

೬. ಯೋಗ್ಯರೀತಿಯಿಂದ ತಬದಿಲು ಮಾಡುವದನ್ನು(ಸ್ಥಾವರಾಸ್ತಿಯಿದ್ದರೆ ನೋಂದಿಸಿದ ಖತ್ತಿನಿಂದ ಮತ್ತು ಜಂಗಮಾಸ್ತಿಯಿದ್ದರೆ ನೋಂದಿಸಿದ ಖತ್ತಿನಿಂದ ಯಾ ಆಸ್ತಿಯನ್ನು ಸ್ವಾಧೀನಕ್ಕೆ ಕೊಟ್ಟು)

**ಮಹ್ಮದಿ ಧರ್ಮದ ಪ್ರಕಾರ ದಾನವು ಯಾ ಬಕ್ಷೀಸವು** — ಪಕ್ಷಕಾರರೂ ಮಹ್ಮದಿ ಧರ್ಮದ ಅನುಯಾಯಿಗಳಾಗಿದ್ದು ಅವರಿಗೆ ಕಾಯದೆಶೀರ ಮತ್ತು ಯೋಗ್ಯವಾದ ದಾನವನ್ನು ಯಾ ಬಕ್ಷೀಸವನ್ನು ಮಾಡಬೇಕಾದರೆ ಅವರು ಅದನ್ನು ಕೆಳಗೆ ಹೇಳಿದಂತೆ ಮಾಡಬೇಕು.

ಹ್ಯಾಗೆಂದರೆ:—

೧. ದಾನಕೊಡುವವನು ದಾನ ಕೊಡುತ್ತೇನೆಂದು ಸ್ಪಷ್ಟವಾಗಿ ಮತ್ತು ಉಘಡವಾಗಿ ಹೇಳಬೇಕು.

೨. ದಾನ ತೆಗೆದುಕೊಳ್ಳುವವನು ಆ ದಾನವನ್ನು ಅಂಗೀಕರಿಸಬೇಕು ಯಾ ಸ್ವೀಕರಿಸಬೇಕು.

೩. ದಾನಕೊಡತಕ್ಕ ಆಸ್ತಿಯನ್ನು ಸ್ವಾಧೀನಕ್ಕೆ ಕೊಡತಕ್ಕದ್ದು. ದಾನವನ್ನು ದಾನ ತೆಗೆದುಕೊಳ್ಳುವವನ ಸ್ವಾಧೀನಕ್ಕೆ ಕೊಡುವದು ಅತ್ಯಾವಶ್ಯವಿದೆ. ದಾನವನ್ನು ಹಾಗೆ ಸ್ವಾಧೀನಕ್ಕೆ ಕೊಟ್ಟದ್ದರಿಂದ ಪೂರ್ಣವಾಗುವದು. ಈ ರೀತಿ ಸ್ವಾಧೀನಕ್ಕೆ ಕೊಡದಿದ್ದರೆ ಆ ದಾನವು ನಿರರ್ಥಕವಾಗುವದು. ಬರೇ ನೋಂದಿಸಿದ್ದರಿಂದ ಈ ದೋಷವು ಇಲ್ಲದಂತೆ ಆಗುವದಿಲ್ಲ. ಮಹ್ಮದಿ ಧರ್ಮಶಾಸ್ತ್ರದ ಪ್ರಕಾರ ದಾನವು ಯಾ ಬಕ್ಷೀಸವು ನೋಂದಿಸುವದು ಜರೂರವಿಲ್ಲ ಯಾ ಅವಶ್ಯವಿಲ್ಲ; ಆದರೆ ಅದನ್ನು ಮೇಲೆ ಹೇಳಿದಂತೆ ಸ್ವಾಧೀನಕ್ಕೆ ಕೊಡುವ ಅವಶ್ಯವಿದೆ. ಮಹ್ಮದಿ ಧರ್ಮಶಾಸ್ತ್ರದ ಪ್ರಕಾರ ದಾನವು ಬಾಯಿಮಾತಿನ ಕರಾರಿನಿಂದಾಗಲೀ ಯಾ ಬರಹಮೂಲಕವಾಗಿ ಮಾಡಿದ ಕರಾರಿನಿಂದಾಗಲೀ ಮಾಡಬಹುದು. ದಾನಕೊಟ್ಟ ಆಸ್ತಿಯು ಸ್ಥಾವರಾಸ್ತಿಯಿರಲೀ ಯಾ ಜಂಗಮಾಸ್ತಿಯಿರಲೀ ಅದರ ದಾನವು ಮೇಲೆ ಹೇಳಿದಂತೆ ಬಾಯಿಮಾತಿನ ಕರಾರಿನಿಂದ ಯಾ ಬರಹ ಮೂಲಕವಾಗಿ ಮಾಡಿದ ಕರಾರಿನಿಂದ ಮಾಡಬಹುದು. ಅಂದ ಮೇಲೆ ಸ್ಥಾವರಾಸ್ತಿಯು ಯಾ ಜಂಗಮಾಸ್ತಿಯ ದಾನವು ಯಾ ಬಕ್ಷೀಸವು ಬಾಯಿಮಾತಿನ ಕರಾರಿನಿಂದ ಆಗಿದ್ದರೆ ಅದಕ್ಕೆ ಮಹ್ಮದಿ ಧರ್ಮ ಶಾಸ್ತ್ರಪ್ರಕಾರ ಯಾವದೇ ಅಡ್ಡಿಯಾಗಲಿಕ್ಕಿಲ್ಲ. ಆದರೆ ಅದು ಆ ಶಾಸ್ತ್ರದ ಪ್ರಕಾರ ಪೂರ್ಣ ಕಾಯದೇಶೀರವಾದದ್ದು ಮತ್ತು ಯೋಗ್ಯವಾದದ್ದು ಇರುವದು. ಸ್ಥಾವರಾಸ್ತಿಯು ದಾನವು ಮೇಲಿನಂತೆ ಬಾಯಿಮಾತಿನ ಕರಾರಿನಿಂದ ಮಾಡಿದೆ ಅದು ಬರಹಮೂಲಕವಾದ ಕರಾರಿನಿಂದ ಅಂದರೆ ಲೇಖಿ ಖತ್ತಿನಿಂದ ಮಾಡಿದ ಪಕ್ಷಕ್ಕೆ ಆ ಬರಹವನ್ನು ಯಾ ಖತ್ತನ್ನು ನೋಂದಣಿ ಕಾನೂನಿನ ಪ್ರಕಾರ ನೋಂದಿಸುವದು ಅವಶ್ಯವಿದೆ; ಅದನ್ನು ನೋಂದಯಿಸದೆ ನಡಿಯಲಾಗದು. ಸಾರಾಂಶಃ ಸ್ಥಾವರಾಸ್ತಿಯ ದಾನವು ಬರಹಮೂಲಕವಾಗಿ ಮಾಡಿದ ಪಕ್ಷಕ್ಕೆ ಆ ಬರಹವನ್ನು ನೋಂದಿಸುವದು ಅವಶ್ಯವಿದೆ.

## ಬಕ್ಷೀಸಪತ್ರವು

ಚಿರಂಜೀವ ರಾಜಶ್ರೀ ಬಾಳಕೃಷ್ಣ ಶ್ರೀನಿವಾಸ ನಾಗನೂರ ಸಾಕಿನೆ ಧಾರವಾಡ ಇವನಿಗೆ—

**ಬಕ್ಷೀಸಪತ್ರ ಬೇಸ್ಮಿ**— ಪ್ರಲ್ಹಾದ ತಿಮ್ಮಾಜಿ ನಾಗನೂರ ಸಾಕಿನ ಧಾರವಾಡ, ನಾನು ಬರೆದುಕೊಡುವ ಬಕ್ಷೀಸಪತ್ರ ಏನಂದರೆ—ನಾನು ಈ ಕೆಳಗೆ ವಿವರಿಸಿದ ಆಸ್ತಿಗಳ ಮಾಲಕನಾಗಿರುತ್ತೇನೆ. ಅವು ಯಾವವೆಂದರೆ—

... ... ... ... ... ...

ಸದರಿ ಆಸ್ತಿಗಳನ್ನು ನಾನು ಈ ಲೇಖದಿಂದ ನಿನಗೆ ಬಕ್ಷೀಸಮಾಡಿ ಕೊಟ್ಟಿರುತ್ತೇನೆ ಮತ್ತು ಅವುಗಳನ್ನು ಇವತ್ತಿನದಿವಸ ನಿನ್ನ ಸ್ವಾಧೀನಕ್ಕೆ ಸಹ ಕೊಟ್ಟಿರುತ್ತೇನೆ. ಸದರಿ ಆಸ್ತಿಗಳ ಉಪಭೋಗವನ್ನು ನೀನು ನಿನ್ನ ಮನಸ್ಸಿಗೆ ಬಂದಂತೆ ವಂಶಪರಂಪರೆ ಮಾಡಬೇಕು ಅಂತಾ ಆತ್ಮಸಂತೋಷದಿಂದ ಮತ್ತು ಬುದ್ಧಿ ಜಾಗ್ರತೆಯಿಂದ ಬರೆದುಕೊಟ್ಟ ಬಕ್ಷೀಸಪತ್ರ ತಾರೀಖು ೪-೫-೧೯೨೬ನೇ ಇಸ್ವಿ.

ಸಹಿ. ಪ್ರಲ್ಹಾದ ತಿಮ್ಮಾಜಿ ನಾಗನೂರ ಸಾಕ್ಷಿಗಳು

೧ ಗಂಗಾಧರ ಶ್ರೀಪಾದ ೨ ಕೃಷ್ಣಾಜಿ ಅಣ್ಣಾಜಿ ಶಿಂದೆ ಬಂಕಾಪೂರ

———

# ೭ನೆಯ ಪ್ರಕರಣ



## ದಾವೆಮಾಡಲಿಕ್ಕೆ ಬರುವಂಥ ಬಾಧ್ಯತೆಯು

ಸ್ಥಾವರಾಸ್ತಿಯನ್ನು ಅಡವಾಗಿ ಇಟ್ಟಿರದಂಥಾ ಸಾಲದಬಗ್ಗೆ ಅಥವಾ ಸ್ವಾಧೀನದಲ್ಲಿರದಂಥಾ ಜಂಗಮ ಆಸ್ತಿಯೊಳಗಿನ ಫಾಯದೆಶೀರ ಹಿತ ಸಂಬಂಧದ ಬಗ್ಗೆ ಬಾಧ್ಯತೆಯು ದಿವಾಣೀ ಕೋರ್ಟಿನಿಂದ ನ್ಯಾಯಾಶ್ರಯವನ್ನು ಕೊಡುವದಕ್ಕೆ ಆಧಾರಭೂತವೆಂದು ಎಣಿಸಲ್ಪಡುವಂಥಾದಿದ್ದರೆ ಆ ಬಾಧ್ಯತೆಗೆ **ದಾವೆ ಮಾಡಲಿಕ್ಕೆ ಬರುವಂಥಾ ಬಾಧ್ಯತೆಯೆಂದೆನ್ನುತ್ತಾರೆ. ಉ**–ಸಾಲವು ದಾವೆಮಾಡಲಿಕ್ಕೆ ಬರುವಂಥ ಬಾಧ್ಯತೆಯಿರುತ್ತದೆ. ಸಲ್ಲತಕ್ಕಂಥ ಸಂಬಳವು ದಾವೆ ಮಾಡಲಿಕ್ಕೆ ಬರುವಂಥ ಬಾಧ್ಯತೆಯಿರುತ್ತದೆ. ಸಲ್ಲತಕ್ಕದ್ದಾಗಿರದಂಥ ಸಂಬಳವು ದಾವೆಮಾಡಲಿಕ್ಕೆ ಬರುವಂಥ ಬಾಧ್ಯತೆಯಾಗುವದಿಲ್ಲ. ಮಾರಿ ಒಪ್ಪಿಸಿದ ಮಾಲಿನ ಬೆಲೆಯು ಸಲ್ಲತಕ್ಕದ್ದಿದ್ದರೆ ಅದು ದಾವೆ ಮಾಡಲಿಕ್ಕೆ ಬರುವಂಥ ಬಾಧ್ಯತೆ ಯಾಗುವದು. ಸಂಕ್ಷೇಪಮಾಡಿ ಹೇಳುವದೇನಂದರೆ–

(೧) ಸಾಲವು (ಅದಕ್ಕೆ ಸ್ಥಾವರಾಸ್ತಿಯು ಅಡವಾಗಿ ಇಟ್ಟಿರಬಾರದು.)

(೨) ಸ್ವಾಧೀನವಲ್ಲಿರದಂಥ ಜಂಗಮಾಸ್ತಿಯಲ್ಲಿಯ ಯಾವದಾದರೂ ಫಾಯದೇಶೀರ ಹಿತ ಸಂಬಂಧವು.

ದಾವೆ ಮಾಡಲಿಕ್ಕೆ ಬರುವಂಥ ಬಾಧ್ಯತೆಯಾಗುವದು.

**ಇಂಥ ಬಾಧ್ಯತೆಯು ತಬದಿಲು ಮಾಡುವ ಕ್ರಮವು** – ದಾವೆ ಮಾಡಲಿಕ್ಕೆ ಬರುವಂಥ ಬಾಧ್ಯತೆಯು ತಬದಿಲು ಮಾಡಬೇಕಾದರೆ ಅದನ್ನು ಬರಹ ಮೂಲಕವಾದ ಖತ್ತಿನಮೇಲೆ ಮಾಡಿರಬೇಕು. ಮತ್ತು ಅವರ ಮೇಲೆ ತಬದಿಲು ಮಾಡಿಕೊಡುವವನ ಅಥವಾ ಅವನ ಮುಖ್ತಿಯಾರನ ಸಹಿಯಿರಬೇಕು. ಅದನ್ನು ನೋಂದಿಸುವದು ಅಥವಾ ಅದರ ಮೇಲೆ ಸಾಕ್ಷಿ ಹಾಕಿಸುವದು ಅಗತ್ಯವಿಲ್ಲ.

ದಾವೆ ಮಾಡಲಿಕ್ಕೆ ಬರುವಂಥ ಬಾಧ್ಯತೆಯು ತಬದಿಲು ಮಾಡಿದ ಬಗ್ಗೆ ಮೂಲ ಋಣಿಗೆ ನೋಟೀಸು ಕೊಡುವದು ಕಾಯದೆಯಿಂದ ಅಗತ್ಯವಿಲ್ಲ. ಆದರೆ ಈ ಬಗ್ಗೆ ನೋಟೀಸು ಕೊಡುವದು ಸುರಕ್ಷಿತತನದ ಮಾತಾಗಿರುವದು.

ಉ–ಅ ಎಂಬುವವನು ಬ ಎಂಬುವವನಿಗೆ ಹಣಕೊಡತಕ್ಕದ್ದಿದೆ. ಬ ಇವನು ಆ ಸಾಲವನ್ನು ಕ ಇವನಿಗೆ ತಬದಿಲು ಮಾಡಿಕೊಡುತ್ತಾನೆ. ನಂತರ ಬ ಇವನು ಅ ಇವನಿಗೆ ಆ ಸಾಲದ ಬಗ್ಗೆ ಕೇಳುತ್ತಾನೆ; ಮತ್ತು ಅ ಇವನಿಗೆ ಸದರಿ ತಬದಿಲು ಮಾಡಿಕೊಟ್ಟ ವ್ಯವಹಾರದ ಬಗ್ಗೆ ನೋಟೀಸು ಇರದೆ ಇರುವದರಿಂದ ಆ ಸಾಲವನ್ನು ಬ ಇವನಿಗೆ ಕೊಡುತ್ತಾನೆ. ಸದರಿ ಕೊಡುವಿಕೆಯು ಕಾಯಿದೇಕ್ಕೆ ಸರಿಯಾಗಿ ಇರುತ್ತದೆ; ಮತ್ತು ಕ ಇವನು ಅ ಇವನ ಮೇಲೆ ಆ ಸಾಲದ ಬಗ್ಗೆ ದಾವೆ ತರಲಾರನು. ಆದರೆ ಕ ಇವನು ಸದರಿ ಸಾಲವನ್ನು ತನಗೆ ತಬದೀಲು ಮಾಡಲ್ಪಟ್ಟದ್ದೆಂದು ಅ ಇವನಿಗೆ ನೋಟೀಸು ಕೊಟ್ಟಲ್ಲಿ ಸಹ ಸದರಿ ನೋಟೀಸ ಮುಟ್ಟಿದ ಅನಂತರ ಅ ಇವನು ಆ ಸಾಲದ ರಕಮು ಬ ಇವನಿಗೆ ಕೊಟ್ಟರೆ ಆ ಕೊಡುವಿಕೆಯನ್ನು ಕಾಯದೆಶೀರ ಆಗಲಾಗದು. ಅ ಇವನಿಗೆ ಆ ಸಾಲದ ರಕಮು ಪುನಃ ಕ ಇವನಿಗೆ ಕೊಡಬೇಕಾಗುವದು. ಕಾರಣ ಸಾಲವನ್ನು ತಬದೀಲು ಮಾಡಲ್ಪಟ್ಟದ್ದರ ಬಗ್ಗೆ ಮೂಲ ಋಣಿಗೆ ನೋಟೀಸು ಕೊಡುವದು ಸುರಕ್ಷಿತವು.

# ೮ನೆಯ ಪ್ರಕರಣ

## ಮೃತ್ಯುಪತ್ರ ಅಥವಾ ಮೃತ್ಯುದಾನ ಅಥವಾ ಮೃತ್ಯುಶಾಸನ

ಯಾವನಾದರೊಬ್ಬನು ತನ್ನ ಮರಣದ ನಂತರ ತನ್ನ ಆಸ್ತಿಯ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬ ಬಗ್ಗೆ ಕಾಯದೆಗೆ ಅನುಸರಿಸಿ ತಾನು ಪ್ರಕಟಮಾಡಿದ ಇಚ್ಛೆಯು ಮೃತ್ಯುಪತ್ರವೆಂದೆನ್ನುತ್ತಾರೆ. "ಮೃತ್ಯುಪತ್ರ" ಅಂದರೆ ಮೃತ್ಯುಪತ್ರ ಬರೆದಿಡತಕ್ಕವನು ತನ್ನ ಆಸ್ತಿಯ ಸಂಬಂಧವಾಗಿ ತನ್ನ ಯಾವ ಅಪೇಕ್ಷೆಗಳು ತಾನು ಸತ್ತ ಬಳಿಕ ವ್ಯವಹಾರದಲ್ಲಿ ಬರಬೇಕೆಂದು ಅಪೇಕ್ಷಿಸುತ್ತಾನೋ ಆ ಅಪೇಕ್ಷೆಗಳನ್ನು ಕಾಯದೆಯ ಪ್ರಕಾರ ತಿಳಿಸೋಣವೆಂದು ಅರ್ಥವಾಗುತ್ತದೆ. ಮೃತ್ಯುಪತ್ರಕರ್ತನು ಇವೇ ಮುಂತಾದ ತನ್ನ ಅಪೇಕ್ಷೆಗಳನ್ನು ಬಾಯಿಮಾತಿನಿಂದ ಅಥವಾ ಬರಹ ಮೂಲಕವಾದ ಲೇಖದಿಂದ ಪ್ರಕಟಿಸಬಹುದು. ಎಂದರೆ ಮೃತ್ಯುಪತ್ರವನ್ನು ಅಥವಾ ಮೃತ್ಯುದಾನವನ್ನು ಲೇಖದಿಂದಾಗಲೀ ಬಾಯಿಮಾತಿನಿಂದಾಗಲೀ ಮಾಡಬಹುದು. ಯಾವದೊಂದು ವಿವಕ್ಷಿತ ರೀತಿಯಿಂದ ಮೃತ್ಯುಪತ್ರವನ್ನು ಬರೆಯಲ್ಪಡಬೇಕು ಹೀಗೇನು ಇಲ್ಲ. ಮತ್ತು ಪ್ರತಿಯೊಂದು ಮೃತ್ಯುಪತ್ರದ ಮೇಲೆ ಮೃತ್ಯುಪತ್ರಕರ್ತನ ಸಹಿಯಿರಬೇಕು ಹಾಗೂ ಅದರ ಮೇಲೆ ಸಾಕ್ಷಿಗಳು ಹಾಕಿರಬೇಕು ಹೀಗೇನು ಇಲ್ಲ. ಮೃತ್ಯುಪತ್ರದಲ್ಲಿ ಮೃತ್ಯುಪತ್ರಕರ್ತನ ಮರಣದ ನಂತರ ಅಮಲಿನಲ್ಲಿ ಬರುವ ಅಪೇಕ್ಷೆಗಳನ್ನು ತೋರಿಸಲ್ಪಟ್ಟಿದ್ದರೆ ಸಾಕು. **ಹಿಂದೂ ಧರ್ಮಶಾಸ್ತ್ರದ** ಪ್ರಕಾರ ಪ್ರತಿಯೊಬ್ಬ ಪ್ರಬುದ್ಧನಾದ ಮತ್ತು ಪೂರ್ಣ ವಯಸ್ಸುಳ್ಳವನಾದ ಮನುಷ್ಯನು ತನ್ನ ಆಸ್ತಿಯನ್ನು ಮೃತ್ಯುಪತ್ರದ ಮುಖಾಂತರವಾಗಿ ವಿನಿಯೋಗಿಸಬಹುದು. ಯಾವ ಆಸ್ತಿಯನ್ನು ಅವನು ಹೀಗೆ ವಿನಿಯೋಗಿಸಬಹುದು ? ಯಾವ ಆಸ್ತಿಯನ್ನು ಮಾರಲಿಕ್ಕೆ ಅಥವಾ ಒತ್ತಿ ಹಾಕಲಿಕ್ಕೆ ಅವನಿಗೆ ಅಧಿಕಾರವಿರುವದೋ ಆ ಆಸ್ತಿಯನ್ನು ಮಾತ್ರ ಅವನು ಮೃತ್ಯುಪತ್ರದಿಂದ ವಿನಿಯೋಗಿಸಬಹುದು. ಸದರೀ ಪ್ರಕಾರದ ಆಸ್ತಿಯ ಹೊರತು ಇತರ ಆಸ್ತಿಯನ್ನು ಮೃತ್ಯುಪತ್ರದಿಂದ ಅವನು ವಿನಿಯೋಗಿಸಲಾಗದು. ಉ:—ಸ್ವಸಂಪಾದಿತ ಆಸ್ತಿಯನ್ನು ಮೃತ್ಯುಪತ್ರದ ಮುಖಾಂತರವಾಗಿ ವಿನಿಯೋಗಿಸಲಿಕ್ಕೆ ಬರುವದು.

**ಮುಹಮ್ಮದಿ ಧರ್ಮಶಾಸ್ತ್ರದ** ಪ್ರಕಾರ ಪ್ರತಿಯೊಬ್ಬ ಪ್ರಬುದ್ಧನಾದ ಮತ್ತು ಪ್ರೌಢನಾದ ಮನುಷ್ಯನು ತನ್ನ ಆಸ್ತಿಯ ಸಂಬಂಧದಿಂದ ಮೃತ್ಯುಪತ್ರವನ್ನು ಮಾಡಬಹುದು; ಮತ್ತು ಅದನ್ನು ಹಾಗೆ ವಿನಿಯೋಗಿಸಬಹುದು. ಮೃತ್ಯುಪತ್ರವನ್ನು ಬರಹದಿಂದಾಗಲೀ ಬಾಯಿಮಾತಿನಿಂದಾಗಲೀ ಮಾಡಬಹುದು. ಅದನ್ನು ಯಾವದೊಂದು ವಿವಕ್ಷಿತ ರೀತಿಯಿಂದ ಮಾಡಬೇಕು ಹೀಗೇನು ಇಲ್ಲ. ಯಾವದೊಂದು ಮೃತ್ಯುಪತ್ರದಿಂದ ಯಾವನೊಬ್ಬ ಹಿಶೇದಾರನಿಗೆ ಆಸ್ತಿಯನ್ನು ಕೊಟ್ಟಿದ್ದಪಕ್ಷಕ್ಕೆ ಸದರೀ ಮೃತ್ಯುಪತ್ರಕರ್ತನ ಮರಣದ ಅನಂತರ ಇತರ ಹಿಶೇದಾರರು ಅದಕ್ಕೆ ಅನುಮತಿಯನ್ನು ಕೊಟ್ಟ ವಿನಹ ಅದನ್ನು ಗ್ರಾಹ್ಯ ಅಥವಾ ಸಶಾಸ್ತ್ರವಾಗಲಾಗದು ಮತ್ತು ಅವರು ಅನುಮತಿಯನ್ನು ಕೊಟ್ಟಿದ್ದ ಪಕ್ಷಕ್ಕೆ ಅದು ರದ್ದಾಗುವದು. ಮುಸಲಮಾನನಿಗೆ ಅವನ ಅಂತ್ಯಕಾಲದ ವೆಚ್ಚವನ್ನೂ ಅವನ ಸಾಲವನ್ನೂ ವಜಾ ಹೋಗಲಾಗಿ ಬಾಕಿ ಉಳದ ಅವನ ಆಸ್ತಿಯ ಪೈಕಿ ⅓ ಭಾಗದಕಿಂತ ಹೆಚ್ಚಿನ ಭಾಗವನ್ನು ಮೃತ್ಯುಪತ್ರದ ಮುಖಾಂತರವಾಗಿ ವಿನಿಯೋಗಿಸಲಿಕ್ಕೆ ಬರಲಾರದು; ಮತ್ತು ಅವನು ಈ ಭಾಗದಕಿಂತ ಹೆಚ್ಚಿನ ಭಾಗವನ್ನು ವಿನಿಯೋಗಿಸಿದ್ದರೆ ಅದಕ್ಕೆ ಇತರ ಹಿಸೇದಾರರು ಅನುಮತಿಯನ್ನು ಕೊಟ್ಟ ವಿನಃ ಆ ಹೆಚ್ಚಿನ ಭಾಗದ ವಿನಿಯೋಗವನ್ನು ನಡೆಯಲಾಗದು; ಎಂದರೆ ⅓ ಭಾಗದವರೆಗಿನ ವಿನಿಯೋಗವನ್ನು ಮಾತ್ರ ಈ ಪ್ರಸಕ್ತಿಯಲ್ಲಿ ಗ್ರಾಹ್ಯ ಅಥವಾ ಸಶಾಸ್ತ್ರವಾಗುವದು. ಮತ್ತು ಹೆಚ್ಚಿನ ಭಾಗದ ವಿನಿಯೋಗವನ್ನು ರದ್ದಾಗುವದು.

## ಮೃತ್ಯುಪತ್ರವು

ಚಿರಂಜೀವ ರಾಜಶ್ರೀ ನೀಲಕಂಠ ರಾಮಾಜಿ ದೇಸಾಯಿ ಸಾಕೀನ ಬಂಕಾಪುರ ಇವನಿಗೆ:—

**ಮೃತ್ಯುಪತ್ರ ಬೇಸ್ಮಿ** ವಿಶ್ವನಾಥ ಶಂಕರ ದೇಸಾಯಿ ಸಾಕೀನ ಬಂಕಾಪೂರ ನಾನು ಬರೆದುಕೊಡುವ ಮೃತ್ಯುಪತ್ರ ಏನಂದರೆ:—ನನಗೆ ಸಂತಾನವಿಲ್ಲ, ನಾನು ಈಗ ಮುಪ್ಪಿನವನಾಗಿರುತ್ತೇನೆ. ಆದುದರಿಂದ ನನಗೆ ಈಗ ನನ್ನ ದೇಹದ ಭರವಸೆ ಇಲ್ಲ. ನೀನು ನನಗೆ ಒಳ್ಳೇ ಪ್ರೀತಿಯಿಂದ ಮತ್ತು ಮಮತ್ವ ಬುದ್ಧಿಯಿಂದ ನೋಡುತ್ತಾ ಇದ್ದೀ. ಆದ್ದರಿಂದ ನಿನ್ನ ಮೇಲೆ ನನ್ನ ಪ್ರೇಮವಿರುವದು.

ನೀನು ನನ್ನ ಅಣ್ಣನ ಮಗನಿರುತ್ತೀದಿ. ನಾನು ಈ ಕೆಳಗೆ ಬರೆವ ಆಸ್ತಿಗಳ ಮಾಲಕನಾಗಿರುತ್ತೇನೆ. ಸದರೀ ಆಸ್ತಿಗಳ ವಿವರ: —

... ... ... ...

... ... ... ...

ಸದರೀ ಯಾವತ್ತು ಆಸ್ತಿಗಳನ್ನು ನನ್ನ ಮರಣದ ಅನಂತರ ನೀನೆ ತೆಗೆದುಕೊಳ್ಳಬೇಕೆಂದು ಈ ಮೃತ್ಯುಪತ್ರದ ಮುಖಾಂತರವಾಗಿ ನನ್ನ ಅಪೇಕ್ಷೆಯನ್ನು ನಾನು ವ್ಯಕ್ತಪಡಿಸುತ್ತೇನೆ. ನನ್ನ ಪಾಶ್ಚಾತ್ಯ ನೀನೇ ಸದರೀ ಆಸ್ತಿಗಳ ಮಾಲಕನಿರುತ್ತೀದಿ. ಅದನ್ನು ನೀನು ವಂಶಪರಂಪರಾ ಉಪಭೋಗ ಮಾಡಬೇಕು. ನನ್ನ ಉತ್ತರ ಕಾರ್ಯವನ್ನು ನೀನೇ ಮಾಡಬೇಕು. ಅಂತಾ ಬುದ್ಧಿಜಾಗ್ರತೆಯಿಂದ ಮತ್ತು ಸ್ವಸಂತೋಷದಿಂದ ಬರೆದುಕೊಟ್ಟ ಮೃತ್ಯುಪತ್ರ ತಾರೀಖು ೧೫-೩-೨೪ ನೇ ಇಸ್ವಿ.

ಸಹಿ. ವಿಶ್ವನಾಥ ಶಂಕರ ದೇಸಾಯಿ.

ಸಾಕ್ಷಿಗಳು

೧ ನೀಲಕಂಠ ಶ್ರೀಪಾದ ಬಂಕಾಪುರ ೨ ನಾರಾಯಣ ಕೃಷ್ಣಾಜಿ ನರಗುಂದ

## ಮೃತ್ಯುಪತ್ರವು

ನಾನು ರಾಚಪ್ಪಾ ಸಿದ್ಧರಾಮಪ್ಪಾ ಪಾಟೀಲ ಸಾಕೀನ ವಿಜಾಪುರ, ಈ ಲೇಖದಿಂದ ನನ್ನ ಕೊನೆಯ ಮೃತ್ಯುಪತ್ರವನ್ನು ಮಾಡುತ್ತೇನೆ; ಮತ್ತು ಆದುದರಿಂದ ನನ್ನ ಯಾವತ್ತೂ ಸ್ಥಾವರ ಜಂಗಮ ಆಸ್ತಿಗಳ ವಿನಿಯೋಗವನ್ನು ಕೆಳಗೆ ಬರೆದ ಪ್ರಕಾರ ಮಾಡುತ್ತೇನೆ ಅದು ಹೇಗಂದರೆ—

೧ ನಾನು ನನ್ನ ಮಗನಾದ ನೀಲಪ್ಪನಿಗೆ ಈ ಮೃತ್ಯುಪತ್ರ ನಡೆಯಿಸುವವನಾಗಿ ನೇಮಿಸುತ್ತೇನೆ. ಈ ಮೃತ್ಯುಪತ್ರದಲ್ಲಿ ಹೇಳಿದ ಯಾವತ್ತೂ ಕೆಸಲವನ್ನು ಅವನು ಮಾಡಬೇಕು.

೨ ನನ್ನ ಎರಡನೆ ಹೆಂಡತಿಯಾದ ಸೌ॥ ಗಂಗವ್ವಗೆ ಈ ಕೆಳಗೆ ವಿವರಿಸಿದ ಆಭರಣಗಳನ್ನು ಕೊಟ್ಟಿರುತ್ತೇನೆ. ಸದರಿ ಆಭರಣಗಳಿಗೆ ಆಕಿಯು ಸಂಪೂರ್ಣ ಮಾಲಕಳಾಗುವಳು; ಸದರಿ ಆಭರಣಗಳ ವಿವರ್ಣನೆ—

... ... ... ..

ವಿಜಾಪುರ ಶಹರದಲ್ಲಿರುವ ಮು. ನ. ೧೫೫೨ನೇ ನಂಬರಿನ ಮನೆಯಲ್ಲಿ ಸದರಿ ಅವಳು ಇರತಕ್ಕದ್ದು. ಆಕಿಯ ಪೋಷಣೆಯ ಬಗ್ಗೆ ಆಕಿಗೆ ತಿಂಗತಿಂಗಳಾ ೧೫೦ ರೂಪಾಯಿಗಳನ್ನು ಕೊಡಬೇಕು.

೩ ನನ್ನ ಮಗಳಾದ ಇರಬಸವ್ವಗೆ ಕೆಳಗೆ ಬರೆದ ಆಸ್ತಿಯನ್ನು ಕೊಟ್ಟಿರುತ್ತೇನೆ; ಸದರಿ ಆಸ್ತಿಗಳ ವಿವರ—

೪ ನನ್ನ ಹೆಸರಲೆ ಇರುವ ಯಾವತ್ತೂ, ಗವ್ಹರ್ಮೆಂಟ ಪ್ರಾಮಿಸರಿ ನೋಟುಗಳು ಲಿಂಗಾಯತ ಶಿಕ್ಷಣಸಂಘ, ವಿಜಾಪುರ, ಈ ಸಂಸ್ಥೆಗೆ ಕೊಟ್ಟಿರುತ್ತೇನೆ.

೫ ಬಾಕೀ ಉಳಿದ ಯಾವತ್ತೂ ನನ್ನ ಸ್ಥಾವರ ಜಂಗಮ ಆಸ್ತಿಗಳನ್ನು ನನ್ನ ಮಗನಾದ ನೀಲಪ್ಪಗೆ ಕೊಟ್ಟಿರುತ್ತೇನೆ. ಅಂತಾ ಬುದ್ಧಿ ಜಾಗ್ರತೆಯಿಂದ ಮತ್ತು ಒಳ್ಳೇ ತಿಳವಳಿಕೆಯಿಂದ ಬರೆದುಕೊಟ್ಟ ಮೃತ್ಯು ಪತ್ರ ತಾರೀಖು ೧೫–೩–೧೯೨೪ನೇ ಇಸ್ವಿ.

ಸಹಿ—ರಾಚಪ್ಪಾ ಸಿದ್ಧರಾಮಪ್ಪಾ ಪಾಟೀಲ

ಸಾಕ್ಷಿಗಳು

೧. ಗುರಪ್ಪಾ ಚಿಂತಪ್ಪಾ ಉಳ್ಳಾಗಡ್ಡಿ

೨. ರುದ್ರಪ್ಪಾ ಸಂಗಪ್ಪಾ ಅತ್ತೀಗೇರಿ

# ೯ನೆಯ ಪ್ರಕರಣ

## ದತ್ತಕವು

ದತ್ತಕವು ಹಿಂದೂ ಧರ್ಮಶಾಸ್ತ್ರದಲ್ಲಿಯೇ ವಿಹಿತವಾಗಿರುವದು. ಮಹಮ್ಮದಿ ಧರ್ಮಶಾಸ್ತ್ರದಲ್ಲಿಯೂ ಇತರ ಧರ್ಮಶಾಸ್ತ್ರದಲ್ಲಿಯೂ ದತ್ತಕವು ವಿಧಿಸಲ್ಪಟ್ಟಿರುವದಿಲ್ಲ.

### ದತ್ತಕದ ಉದ್ದೇಶವೆಂದರೆ:—

೧. ಯಾವನಾದರೊಬ್ಬ ಪುತ್ರಹೀನನಾದವನಿಗೆ ಪರಲೋಕದಲ್ಲಿ ಸದ್ಗತಿಯಾಗಬೇಕೆಂದು, ಅವನು ತನ್ನ ಪಿತೃಗಳಿಗೆ ಕೊಡತಕ್ಕ ಋಣದಿಂದ ಮಗನ ದ್ವಾರದಿಂದ ಮುಕ್ತನಾಗಬೇಕೆಂದು, ಪಿಂಡಾದಿ ಕ್ರಿಯೆಗಳನ್ನು ಸಾಗಿಸುವನೆಂದು ದತ್ತಕವು ಮಾಡಲ್ಪಟ್ಟಿರುತ್ತದೆ. ಇದು ಧಾರ್ಮಿಕ ಉದ್ದೇಶವಾಯಿತು.

೨. ಯಾವನಾದರೊಬ್ಬ ಪುತ್ರಹೀನನಾದವನಿಗೆ ವಾರಸದಾರನು ದೊರಿಯಬೇಕೆಂದು ಮತ್ತು ಇವನ ಮುಖಾಂತರವಾಗಿ ಪುತ್ರಹೀನನಾದವನ ಹೆಸರು ನಡೆಯಬೇಕೆಂದು ದತ್ತಕವು ಮಾಡಲ್ಪಟ್ಟಿರುತ್ತದೆ. ಇದು ಆರ್ಥಿಕ ಉದ್ದೇಶವಾಯಿತು.

### ದತ್ತಕಕ್ಕೆ ಅವಶ್ಯವಾದ ಸಂಗತಿಗಳು

೧. **ದತ್ತಕ ತೆಗೆದುಕೊಳ್ಳುವವನು ಕಾಯದೆಯಿಂದ ಯೋಗ್ಯನಿರಬೇಕು.** ಪ್ರಬುದ್ಧನಾದ ಪುತ್ರಹೀನನಾದ ಅಥವಾ ಮೃತಪುತ್ರನಾದ ಪ್ರತಿಯೊಬ್ಬ ಹಿಂದೂ ಪುರುಷನು ದತ್ತಕ ತೆಗೆದುಕೊಳ್ಳಲಿಕ್ಕೆ ಕಾಯದೆಯಿಂದ ಯೋಗ್ಯನಿರುವನು. ಕಾರಣ ಇಂಥವನು ದತ್ತಕ ತೆಗೆದುಕೊಳ್ಳಬಹುದು.

ಪುತ್ರ ಶಬ್ದದಲ್ಲಿ, ಪುತ್ರ, ಪೌತ್ರ, ಪ್ರಪೌತ್ರನ ಸಮಾವೇಶವಾಗುತ್ತದೆ. ಆದುದರಿಂದ ಮಗ, ಮೊಮ್ಮಗ ಅಥವಾ ಮರಿಮಗನು ಯಾವನಿಗೆ ಇರುವನೋ, ಅವನು ದತ್ತಕ ತೆಗೆದುಕೊಳ್ಳಲಾಗದು.

ಯಾವಳೊಬ್ಬ ಹಿಂದೂ ಸ್ತ್ರೀಯು ಆಕೆಯ ಗಂಡನು ವಿದ್ಯಮಾನ ಇರುವವರೆಗೆ ಅವನ ಸಮ್ಮತಿಯು ವಿನಹ ದತ್ತಕ ತೆಗೆದುಕೊಳ್ಳಲಾಗಳು. ಪ್ರತಿಯೊಬ್ಬ ಹಿಂದೂ ವಿಧವೆಯು ಕೆಲವು ಪ್ರಸಕ್ತಿಗಳನ್ನು ಹೊರತು ಪಡಿಸಿ ದತ್ತಕ ತೆಗೆದುಕೊಳ್ಳಬಹುದು.

೨. **ದತ್ತಕ ಕೊಡುವವನು ಕಾಯದೆಯಿಂದ ಯೋಗ್ಯನಾಗಿರಬೇಕು.** ದತ್ತಕ ಕೊಡುವ ಮಗನ ತಂದೆಯು ಅಥವಾ ತಾಯಿಯು ದತ್ತಕ ಕೊಡುವ

ದಕ್ಕೆ ಕಾಯದೆಯಿಂದ ಯೋಗ್ಯರಾಗಿರುವ ಕಾರಣ ಅವರು ಅಥವಾ ಅವರ ಪೈಕಿ ಯಾರಾದರೊಬ್ಬರು ದತ್ತಕ ಕೊಡಬಹುದು.

೩. ದತ್ತಕ ಕೊಡುವ ಮಗನು ದತ್ತಕ ತೆಗೆದುಕೊಳ್ಳುವದಕ್ಕೆ ಕಾಯದೆಯಿಂದ ಯೋಗ್ಯನಿರಬೇಕು. ದತ್ತಕ ಕೊಡುವ ಮಗನು ಸ್ವಜಾತಿಯವನಿದ್ದರೆ ಮತ್ತು ದತ್ತಕ ಕೊಡುವ ಮಗನ ಜನಕ ತಾಯಿಯನ್ನು ಕೌಮಾರಾವಸ್ಥೆಯಲ್ಲಿ ದತ್ತಕ ತಂದೆಯು ಮದುವೆ ಮಾಡಿಕೊಳ್ಳಲಿಕ್ಕೆ ಬರುವಂತೆ ಇದ್ದರೆ ಅಂಥವನು ದತ್ತಕ ತೆಗೆದುಕೊಳ್ಳಲಿಕ್ಕೆ ಕಾಯದೆಯಿಂದ ಯೋಗ್ಯನಿರುತ್ತಾನೆ. ಕಾರಣ ಅಂಥವನಿಗೆ ದತ್ತಕ ತೆಗೆದುಕೊಳ್ಳಬಹುದು. ಮಗಳ ಮತ್ತು ಅಕ್ಕ ತಂಗಿಯರ ಮತ್ತು ಅಬಚಿಯ ಮಕ್ಕಳಿಗೆ ದತ್ತಕ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲ.

೪. ದಾನ ಪ್ರತಿಗ್ರಹ ವಿಧಾನದಿಂದ ದತ್ತಕವು ಪೂರ್ಣವಾಗುವದು. ಪ್ರತಿಯೊಂದು ದತ್ತಕಕ್ಕೆ ದತ್ತಕ ಮಗನಿಗೆ ಕೊಡುವ ಕೃತಿಯನ್ನು ಹಾಗೂ ದತ್ತಕ ಮಗನಿಗೆ ತೆಗೆದುಕೊಳ್ಳುವ ಅಥವಾ ಸ್ವೀಕರಿಸುವ ಕೃತಿಯನ್ನು ಆಗುವದು ಅತ್ಯಾವಶ್ಯವಿದೆ. ಈ ವಿಧಾನವನ್ನು ಆಗದಿದ್ದರೆ ಆ ದತ್ತಕವು ಪೂರ್ಣವೆಂದು ಎಣಿಸಲಾಗದು. ದತ್ತಹೋಮವನ್ನು ಮಾಡಬೇಕು. ಕಾಯದೆಯ ದೃಷ್ಟಿಯಿಂದ ದತ್ತಕಕ್ಕೆ ದತ್ತಕ ಪತ್ರವನ್ನು ಮಾಡಿಸುವ ಅಗತ್ಯವಿಲ್ಲ. ದತ್ತಕ ಪತ್ರವನ್ನು ಮಾಡಿದ್ದರೂ ಮೇಲೆ ಹೇಳಿದಂತೆ ದಾನಪ್ರತಿಗ್ರಹ ವಿಧಾನವನ್ನು ಅಂದರೆ ಕೊಡು ತೆಗೆದುಕೊಳ್ಳುವ ವಿಧಾನವನ್ನು ಮಾಡದಿದ್ದರೆ ಆ ದತ್ತಕವು ಪೂರ್ಣವೆಂದು ಅಥವಾ ಸಶಾಸ್ತ್ರವೆಂದು ತಿಳಿಯಲಾಗದು. ಕಾರಣ ದಾನಪ್ರತಿಗ್ರಹ ವಿಧಾನವನ್ನು ಅಂದರೆ ದತ್ತಕ ಮಗನಿಗೆ ಕೊಡುತೆಗೆದುಕೊಳ್ಳುವ ವಿಧಾನವನ್ನು ಮಾಡುವದು ಅವಶ್ಯವಿದೆಂದು ಖಂಡಿತ; ಅದನ್ನು ಮಾಡದಿದ್ದರೆ ಆ ದತ್ತಕವು ಅಶಾಸ್ತ್ರವಿರುವದು ಅಥವಾ ಬೇಕಾಯದೇಶೀರ ಇರುವದು.

## ದತ್ತಕಪತ್ರವು

ಚಿರಂಜೀವ ರಾಜಶ್ರೀ ನಾರಾಯಣ ದತ್ತಕತಂದಿ ಲಿಂಗೋ ಕುಲಕರ್ಣಿ ವಯಸು ೧೭ ಜಾತಿ ಬ್ರಾಹ್ಮಣ ಉದ್ಯೋಗ ಸಾಲೆಕಲಿಯುವದು ಸಾಕೀನ ಗದಗ ಅಪ್ರಾಯಸ್ಥ ಅವನ ತರ್ಫೆನಿಂದ ಅವನ ಖಾಸ ತಂದಿಯಾದ ರಂಗೋ ರಾಮಚಂದ್ರ ಜೋಶಿ ವಯಸು ೬೫ ಜಾತಿ ಬ್ರಾಹ್ಮಣ ಉದ್ಯೋಗ ವ್ಯವಹಾರ ಸಾಕೀನ ಗದಗ ಇವರಿಗೆ—

**ದತ್ತಕಪತ್ರ ಬೇಸ್ಕಿ**—ಶಾರದಾಬಾಯಿ ಭ್ರತಾರ ಲಿಂಗೋ ಕುಲಕರ್ಣಿ ವಯಸು ೨೦ ಜಾತಿ ಬ್ರಾಹ್ಮಣ ಉದ್ಯೋಗ ಮನೆಕೆಲಸ ಸಾಕೀನ ಗವಗ ನಾನು ಬರೆದುಕೊಡುವ ದತ್ತಕಪತ್ರ ಏನೆಂದರೆ—ನಾನು ಲಿಂಗೋ ಲಕ್ಷ್ಮಣ ಕುಲಕರ್ಣಿ ಇವನ ವಿಧವೆಯಾಗಿರುತ್ತೇನೆ. ಸದರೀ ಲಿಂಗೋ ಲಕ್ಷ್ಮಣ ಇವನು ಪುತ್ರಸಂತಾ ವಿಲ್ಲದೆ ಈಗ ಅಜಮಾಸ ೪ ವರ್ಷಗಳ ಹಿಂದೆ ಮೃತಪಟ್ಟನು. ಸದರಿ ಅವನು ಮತ್ತು ಅವನ ಅಣ್ಣತಮ್ಮಂದಿರು ವಿಭಕ್ತಯಾಗಿ (ಅಂದರೆ ಬೇರೆ ಬೇರೆಯಾಗಿ) ಇರುತ್ತಿದ್ದರು. ಸದರಿ ಲಿಂಗೋ ಲಕ್ಷ್ಮಣ ಇವನ ವಂಶಾಭಿವೃದ್ಧಿಯಾಗಬೇಕೆಂ ತಲೂ ಅವನಿಗೆ ಸದ್ಗತಿ ದೊರೆಯಬೇಕೆಂತಲೂ ನಾನು ನಿನಗೆ ದತ್ತಕ ತೆಗೆದುಕೊ ಳ್ಳಬೇಕೆಂಬುವ ನನ್ನ ಉದ್ದೇಶವನ್ನು ನಿನ್ನ ಖಾಸ ತಂದಿಯಾದ ರಂಗೋ ರಾಮ ಚಂದ್ರ ಜೋಶಿ ಇವನಿಗೆ ವ್ಯಕ್ತಪಡಿಸಿ ಅವನಿಗೆ ನಿನ್ನನ್ನು ದತ್ತಕ ಕೊಡಲಿಕ್ಕೆ ನಾನು ಬೇಡಿದ್ದೇನು. ಸದರಿ ಆವನು ನಿನಗೆ ದತ್ತಕ ಕೊಡಲಿಕ್ಕೆ ಕಬೂಲ ಆದನು. ಆ ಪ್ರಕಾರ ನಾನು ಮೇಲೆ ಕಾಣಿಸಿದ ಉದ್ದೇಶದಿಂದ ನನ್ನ ಗಂಡನ ವತಿಯಿಂದ ತಾರೀಖು ೩೦ – ೪ – ೧೯೨೨ನೇ ಇಸ್ವಿ ದಿವಸ ಶಾಸ್ತ್ರವಿಧಾನೋಕ್ತ ರೀತಿ ಯಿಂದ ನಿನಗೆ ದತ್ತಕಮಾಡಿಕೊಂಡಿದ್ದೇನೆ. ಅಂದಿನಿಂದ ಮುಂದೆ ನೀನು ಸದರಿ ಲಿಂಗೋ ಲಕ್ಷ್ಮಣ ಇವನ ದತ್ತಕಮಗನಂತೆ ವರ್ತಿಸಬೇಕು ಮತ್ತು ಸದರೀ ಅವನ ಸ್ಥಿರಚರಾಸ್ತಿಗೆ ನೀನೇ ಮಾಲಕನಾಗಿರುತ್ತೀದಿ. ಆದರೆ ಸದರಿ ಅವನ ಯಾವತ್ತೂ ಸ್ಥಿರಚರಾಸ್ತಿಯನ್ನು ನನ್ನ ಜೀವಮಾನ ಇರುವ ವರೆಗೆ ನನ್ನ ಸ್ವಾಧೀ ನವಲ್ಲಿರತಕ್ಕದ್ದು. ಅದರ ವಹಿವಾಟ ಮತ್ತು ಉಪಭೋಗವನ್ನು ನಾನೆ ಮಾಡತ ಕ್ಕದ್ದು ಎಂದು ನನ್ನ ಮತ್ತು ನಿನ್ನ ವತಿಯಿಂದ ನಿನ್ನ ಖಾಸ ತಂದಿಯಾದ ರಂಗೊ ರಾಮಚಂದ್ರ ಜೋಶಿ ಇವರ ನಡುವೆ ಬಾಯಿಮಾತಿನಿಂದ ಕರಾರು ಆಗಿದೆ. ನನ್ನ ಪಶ್ಚಾತ ನೀನು ಸದರಿ ಆಸ್ತಿಯ ಕಬಜೆಯನ್ನು ಪಡಕೊಂಡು ಆದರ ಉಪ ಭೋಗ ಮತ್ತು ವಹಿವಾಟ ಮಾಲಕಿ ನಾತೆಯಿಂದ ಮಾಡಬೇಕು. ಅಂತ ಆತ್ಮಸಂ ತೋಷದಿಂದಲೂ ಬುದ್ಧಿಜಾಗ್ರತೆಯಿಂದಲೂ ಬರೆದುಕೊಟ್ಟ ದತ್ತಕಪತ್ರವು. ತಾರೀಖು ೩೦–೪–೧೯೨೨ನೇ ಇಸ್ವಿ.

ದಸ್ತೂರ ದತ್ತೋ ವಾಮನ ದೇಸಾಯಿ.

ಸಹಿ. ಶಾರದಾಬಾಯಿ ಭ್ರತಾರ ಲಿಂಗೋ ಕುಲಕರ್ಣಿ.

ಸಾಕ್ಷಿಗಳು

೧ ರಂಗನಗೌಡಾ ತಂಬದಮನಿ. ೨ ರಂಗರಾವ ವೆಂಕಟೇಶ ಕುಲಕರ್ಣಿ.

ಈ ದತ್ತಕಪತ್ರದಲ್ಲಿ ಕಂಡ ದತ್ತಕದ ಸಂಬಂಧಿ ಸ್ವಲ್ಪ ವಿವೇಚನ ಮಾಡು ವದು ಅವಶ್ಯವಿದೆ.

(೧) ಇದು ಹಿಂದು ವಿಧವೆಯು ಮಾಡಿಕೊಂಡಂಥ ದತ್ತಕವು. ಹಿಂದು ವಿಧವೆಯು ಯಾರ ದಸೆಯಿಂದ ದತ್ತಕ ತೆಗೆದುಕೊಳ್ಳಬಹುದು ? ತನ್ನ ಗಂಡನ ದಸೆಯಿಂದ ಮಾತ್ರ ಆಕೆಯು ದತ್ತಕ ತೆಗೆದುಕೊಳ್ಳಬಹುದು.

(೨) ಯಾವ ಪ್ರಸಕ್ತಿಯಲ್ಲಿ ಹಿಂದು ವಿಧವೆಯು ದತ್ತಕ ತೆಗೆದುಕೊಳ್ಳ ಬಹುದು ?

(ಅ) ಆಕಿಯ ಗಂಡನಿಗೆ ಯಾವದೇ ಪುತ್ರಸಂತಾನ ಇಲ್ಲದಾಗ್ಗೆ ಮತ್ತು,

(ಬ) ಆಕಿಯ ಗಂಡನು ಯಾವನೊಬ್ಬನಿಗೂ ದತ್ತಕ ತೆಗೆದುಕೊಳ್ಳಲಿಲ್ಲ ದಾಗ್ಗೆ ಅಥವಾ ಅವನು ದತ್ತಕ ತೆಗೆದುಕೊಂಡ ಮಗನು ತೀರಿಕೊಂಡಾಗ್ಗೆ ಮತ್ತು,

(ಕ) ಆಕೆಯ ಗಂಡನು ಆಕಿಗೆ ದತ್ತಕ ತೆಗೆದುಕೊಳ್ಳಲಿಕ್ಕೆ ಉಘಡ ವಾಗಿ ಅಥವಾ ಗರ್ಭಿತ ರೀತಿಯಿಂದ ನಿಷೇಧಿಸಲ್ಪಡದಿದ್ದಾಗ್ಗೆ ಮತ್ತು;

(ಡ) ಆಕಿಯ ಗಂಡನು ತಾನು ಮೃತವಾಗುವ ಪೂರ್ವದಲ್ಲಿ ತನ್ನ ಅಣ್ಣ ತಮ್ಮಂದಿರಿಂದ ಅಥವಾ ದಾಯಾದಿಗಳಿಂದ ವಿಭಕ್ತ ಅಥವಾ ಬೇರೆ ಆದಾಗ್ಗೆ,

ಹಿಂದು ವಿಧವೆಯು ದತ್ತಕ ತೆಗೆದುಕೊಳ್ಳಬಹುದು. ಅಂದಮೇಲೆ ಹಿಂದು ವಿಧವೆಯ ಗಂಡನು ತನ್ನ ಅಣ್ಣ ತಮ್ಮಂದಿರಿಂದ ಅಥವಾ ದಾಯಾದಿಗಳಿಂದ ವಿಭಕ್ತ ಅಥವಾ ಬೇರೆ ಆಗಿದೆ ಅವಿಭಕ್ತತನದಲ್ಲಿಯೇ ತೀರಿಕೊಂಡರೆ ಆಕಿಗೆ ದತ್ತಕ ತೆಗೆದುಕೊಳ್ಳುವ ಹಕ್ಕು ಇರುವದಿಲ್ಲ.

(ಇ) ಒಬ್ಬಳಿಗಿಂತ ಹೆಚ್ಚು ವಿಧವೆಯರು ಇದ್ದಲ್ಲಿ ಹಿರೇ ವಿಧವೆಯಳಿಗೆ ದತ್ತಕ ತೆಗೆದುಕೊಳ್ಳುವ ಹಕ್ಕು ಇರುವದು. ಆಕಿಯು ಚಿಕ್ಕ ವಿಧವೆಯ ಯಾ ವಿಧವೆಯರ ಸಮ್ಮತಿಯನ್ನು ಪಡಕೊಳ್ಳದೆ ದತ್ತಕ ತೆಗೆದುಕೊಳ್ಳಬಹುದು; ಆಕಿಗೆ ಚಿಕ್ಕ ವಿಧವೆಯ ಯಾ ವಿಧವೆಯರ ಸಮ್ಮತಿ ಪಡಕೊಳ್ಳುವ ಅಗತ್ಯವಿಲ್ಲ. ಹಿರೇ ವಿಧವೆಯರ ಸಮ್ಮತಿಯಿಂದ ಮಾತ್ರ ಚಿಕ್ಕ ವಿಧವೆಯು ದತ್ತಕ ತೆಗೆದುಕೊಳ್ಳ

ಬಹುದು. ಆದರೆ ಈ ರೀತಿ ಸಮ್ಮತಿಯನ್ನು ಪಡಕೊಳ್ಳದೆ ಆಕೆಯು ದತ್ತಕ ತೆಗೆದುಕೊಳ್ಳಲಾಗದು.

[ಈ ವಿವೇಚನದ ಮೇಲಿಂದ ಈ ದತ್ತದಪತ್ರದಲ್ಲಿ "ಪುತ್ರಸಂತಾನವಿಲ್ಲದೆ" "ಅವನು ಮತ್ತು ಅವನ ಅಣ್ಣ ತಮ್ಮಂದಿರು ವಿಭಕ್ತರಾಗಿ" ಎಂದು ವಿಧಾನಗಳು ಯೇಕೆ ಮಾಡಿರುತ್ತವೆಂಬದು ಸ್ಪಷ್ಟಾಗುವದು.

ದತ್ತಕಪತ್ರಕ್ಕೆ ೨೦ ರೂಪಾಯಿ ಬೆಲೆಯ ಸ್ಟಾಂಪ ಬೇಕಾಗುವದು.

—[ ಸಂಪೂರ್ಣ ]—